# ಡು. ನಿಂ. ಬೆಳಗಲಿಯವರ ಕಾದಂಬರಿಗಳು ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು

**ವಾಯ್. ಎಂ. ಭಜಂತ್ರಿ**

ಎಂ.ಎ., ಡಿಪ್.ಇನ್ ಬಸವಸ್ಟಡೀಸ್

ಕನ್ನಡ ಉಪನ್ಯಾಸಕರು
ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ
ನರಗುಂದ ಜಿ. ಗದಗ

ಮಾರ್ಗದರ್ಶಕರು

**ಡಾ. ಎಫ್. ಟಿ. ಹಳ್ಳಿಕೇರಿ**

ಎಂ.ಎ., ಪಿಎಚ್.ಡಿ.

ಪ್ರವಾಚಕರು
ಹಸ್ತಪ್ರತಿಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ







ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

೨೦೦೨

# ದು. ನಿಂ. ಬೆಳಗಲಿಯವರ ಕಾದಂಬರಿಗಳು ಒಂದು ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು
**ವಾಯ್. ಎಂ. ಭಜಂತ್ರಿ**
ಎಂ.ಎ., ಡಿಪ್.ಇನ್ ಬಸವ ಸ್ಟಡೀಸ್
ಕನ್ನಡ ಉಪನ್ಯಾಸಕರು
ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ
ನರಗುಂದ ಜಿ. ಗದಗ

ಮಾರ್ಗದರ್ಶಕರು
**ಡಾ. ಎಫ್. ಟಿ. ಹಳ್ಳಿಕೇರಿ**
ಎಂ.ಎ., ಪಿಎಚ್.ಡಿ.
ಪ್ರವಾಚಕರು
ಹಸ್ತಪ್ರತಿಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ





ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬



೨೦೦೨

# ಪ್ರಮಾಣ ಪತ್ರ

" **ದು. ನಿಂ. ಬೆಳಗಲಿಯವರ ಕಾದಂಬರಿಗಳು : ಒಂದು ಅಧ್ಯಯನ** " ಎಂಬ ಈ ಮಹಾಪ್ರಬಂಧವನ್ನು ಪಿಎಚ್. ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಾದರಪಡಿಸಲು **ಶ್ರೀ ವಾಯ್. ಎಂ. ಭಜಂತ್ರಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಅಧ್ಯಯನದ ಯಾವುದೇ ಭಾಗವನ್ನು ಇದುವರೆಗೆ ಯಾವುದೇ ಪದವಿಗೆ ಅವರು ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.



ದಿನಾಂಕ : 6-09-09
ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಮಾರ್ಗದರ್ಶಕರು

(ಡಾ. ಎಫ್. ಟಿ. ಹಳ್ಳಿಕೇರಿ)

# ಘೋಷಣಾ ಪತ್ರ

" **ದು. ನಿಂ. ಬೆಳಗಲಿಯವರ ಕಾದಂಬರಿಗಳು : ಒಂದು ಅಧ್ಯಯನ** " ಎಂಬ ಈ ಮಹಾಪ್ರಬಂಧವನ್ನು **ಡಾ. ಎಫ್. ಟಿ. ಹಳ್ಳಿಕೇರಿ** ಅವರ ಮಾರ್ಗದರ್ಶನದಲ್ಲಿ ಪಿಎಚ್. ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ಸಿದ್ಧಪಡಿಸಿದ್ದೇನೆ. ಇದು ನನ್ನ ಮೂಲ ಸಂಶೋಧನಾ ಮಹಾಪ್ರಬಂಧವಾಗಿದ್ದು, ಈ ಅಧ್ಯಯನದ ಯಾವುದೇ ಭಾಗವನ್ನು ಇದುವರೆಗೆ ಯಾವುದೇ ಪದವಿಗೆ ಇಡಿಯಾಗಿ ಇಲ್ಲವೆ ಬಿಡಿಯಾಗಿ ಯಾರೂ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತೇನೆ.

ದಿನಾಂಕ : ೬ - ೨ - ೨೦೦೨
ಕನ್ನಡ ವಿಶ್ವವಿದ್ಯಾಲಯ. ಹಂಪಿ
ವಿದ್ಯಾರಣ್ಯ

ಸಂಶೋಧಕರು
(ವಾಯ್. ಎಂ. ಭಜಂತ್ರಿ)

# ನಿವೇದನೆ

ಕಾದಂಬರಿ ನನ್ನ ನೆಚ್ಚಿನ ಕ್ಷೇತ್ರ. ಕಳೆದ ಹತ್ತು ವರ್ಷಗಳಿಂದ ವಿದ್ಯಾರ್ಥಿಗಳಿಗೆ ಅನೇಕ ವೈವಿಧ್ಯಮಯ ಕಾದಂಬರಿಗಳನ್ನು ಬೋಧಿಸುತ್ತ ಬಂದ ನನಗೆ ಸಹಜವಾಗಿಯೇ ಆ ಕ್ಷೇತ್ರ ಇನ್ನೂ ಹೆಚ್ಚಿನ ಆಸಕ್ತಿ ಹುಟ್ಟಿಸಿತು. ಮಾಧ್ಯಮಿಕ ಶಾಲಾ ಶಿಕ್ಷಕರಾಗಿದ್ದುಕೊಂಡು ಅಗಾಧವಾದ ಸಾಹಿತ್ಯಿಕ ಸೇವೆ ಸಲ್ಲಿಸಿದ ಕೆಲವೇ ಕೆಲವರಲ್ಲಿ ದು. ನಿಂ. ಬೆಳಗಲಿಯವರೂ ಪ್ರಮುಖರು. ಹೀಗಾಗಿ ಅವರ ಕಾದಂಬರಿಗಳ ಬಗ್ಗೆ ನನಗೆ ಮೊದಲಿನಿಂದಲೂ ಕುತೂಹಲದ ಆಸಕ್ತಿ. 'ಜನಪರ' ನಿಲುವಿನ ಅವರ ಕಾದಂಬರಿಗಳು ನನ್ನನ್ನು ಅನೇಕಸಲ ಚಿಂತನೆಗೀಡು ಮಾಡಿದ್ದವು. ಅವರ ಕಾದಂಬರಿಗಳನ್ನೇ ಕುರಿತು ಪಿಎಚ್.ಡಿ. ಮಾಡಬೇಕೆಂಬ ಯೋಚನೆ ಹೊಳೆಯಿತು. ಈ ವಿಚಾರವನ್ನು ಹಂಪಿ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದಲ್ಲಿ ಪ್ರವಾಚಕರಾದ ಡಾ. ಎಫ್. ಟಿ. ಹಳ್ಳಿಕೇರಿಯವರ ಮುಂದಿಟ್ಟಾಗ, ಅವರು ತುಂಬ ಸಂತೋಷದಿಂದಲೇ ಮಾರ್ಗದರ್ಶಕರಾಗಲು ಒಪ್ಪಿಕೊಂಡರು. ಪ್ರತಿಫಲವಾಗಿ, 'ದು. ನಿಂ. ಬೆಳಗಲಿಯವರ ಕಾದಂಬರಿಗಳು; ಒಂದು ಅಧ್ಯಯನ" ಎಂಬ ವಿಷಯವನ್ನು ಆಯ್ದುಕೊಂಡು ಪಿಎಚ್.ಡಿ. ಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಪ್ರವೇಶ ಪಡೆದೆ. ಪ್ರವೇಶ ದೊರೆತ ಮೇಲೆ ಬೆಳಗಲಿಯವರನ್ನು ಕಂಡು ವಿಷಯವನ್ನು ಪ್ರಸ್ತಾಪಿಸಿದಾಗ, ತುಂಬ ಸಂತೋಷಗೊಂಡರಲ್ಲದೆ, ಅನೇಕ ಮೌಲಿಕ ವಿಚಾರಗಳನ್ನು ತಿಳಿಸುವುದರೊಂದಿಗೆ ತಮ್ಮ ಗ್ರಂಥಭಾಂಡಾರದಿಂದ ಅನೇಕ ಪುಸ್ತಕಗಳನ್ನೂ ಕೊಟ್ಟರು. ಅವರು ಇಂದು ನಮ್ಮ ಮಧ್ಯದಲ್ಲಿಲ್ಲವಾದರೂ ಅವರ ಪ್ರೀತಿ-ಆದರಗಳಿಗೆ ನಾನು ಸದಾ ಋಣಿ.

ಡಾ. ಎಫ್. ಟಿ. ಹಳ್ಳಿಕೇರಿಯವರು ತುಂಬ ಮೌಲಿಕವಾದ ಮಾರ್ಗದರ್ಶನ ನೀಡಿದ್ದಾರೆ. ಅವರ ಶಿಸ್ತು-ಸಂಯಮ, ಪರಿಶ್ರಮದ ಅಧ್ಯಯನ ನನಗೆ ಹೊಸ ದಿಕ್ಕನ್ನು ತೋರಿದವು. ಪ್ರೀತಿ ಹಾಗೂ ಒತ್ತಾಯದಿಂದಲೇ ನನ್ನಿಂದ ಈ ಮಹಾಪ್ರಬಂಧದ ಕೆಲಸ ಮಾಡಿಸಿದ ಅವರಿಗೆ ನಾನು ಕೃತಜ್ಞ. ಈ ನಿಟ್ಟಿನಲ್ಲಿ ಆತ್ಮೀಯರಾದ ಡಾ. ರವೀಂದ್ರ, ಡಾ. ವೀರೇಶ ಬಡಿಗೇರ ಅವರ ಸಹಕಾರವನ್ನೂ ನೆನೆಯದಿರಲಾರೆ.

ನನ್ನ ಬದುಕು-ಬರಹಗಳೆರಡರಲ್ಲಿಯೂ ಹೊಸ ಬೆಳಕನ್ನು ನೀಡಿದ ನನ್ನ ವಿದ್ಯಾಗುರುಗಳಾದ ಡಾ. ಎಂ. ಎಂ. ಕಲಬುರ್ಗಿ, ದಿ. ಡಾ. ಎಸ್. ಎಸ್. ಕೋತಿನ, ಡಾ. ವ್ಹಿ. ಬಿ. ರಾಜೂರ, ಡಾ. ಬಿ. ಆರ್. ಹಿರೇಮಠ ಹಾಗೂ ಕನ್ನಡ ಅಧ್ಯಯನ ಪೀಠ ಕ. ವಿ. ವಿ. ಧಾರವಾಡದ ಸಮಸ್ತ ಗುರುವೃಂದಕ್ಕೆ ನಾನು ಸದಾ ಉಪಕೃತ.

ನನ್ನ ಅಧ್ಯಯನ ತೀವ್ರಗತಿಯಲ್ಲಿ ಸಾಗಿದಂತೆ. ನನಗೆ ಅನೇಕ ಪುಸ್ತಕಗಳ ಅವಶ್ಯಕತೆ ಬಿತ್ತು. ಬೆಳಗಲಿಯವರ ಚಿರಂಜೀವಿಯವರಾದ ಶ್ರೀ ಮಧುಕೇಶ್ವರ ಬೆಳಗಲಿ ಅವರನ್ನು ಕಾಣಲು ಬನಪಟ್ಟಿಗೆ ಹೋದಾಗಲೊಮ್ಮೆ ತುಂಬ ಪ್ರೀತಿ-ಆದರದಿಂದಲೇ ನನ್ನನ್ನು ಕಂಡು. ತಮ್ಮಲ್ಲಿರುವ ಪುಸ್ತಕ-ಭಾವಚಿತ್ರಗಳನ್ನು ಹಾಗೂ ಅನೇಕ ಮಾಹಿತಿಗಳನ್ನು ನೀಡಿ ಸಹಕರಿಸಿದ್ದಾರೆ. ದೂರವಾಣಿ ಮುಖಾಂತರವೂ ಸಾಕಷ್ಟು ಚರ್ಚಿಸಿದ್ದಾರಲ್ಲದೆ. ತಮ್ಮ ಮನೆತನದ ಸರಿಯಾದ ಮಾಹಿತಿ ನೀಡಿದ್ದಾರೆ. ಅವರಿಗೆ ಅನಂತ ಅಭಿನಂದನೆಗಳು. ಕೆಲವು ಪುಸ್ತಕಗಳು ನನಗೆ ಸಕಾಲಕ್ಕೆ ದೊರೆಯದೆ ಚಿಂತಿತನಾದಾಗ ಪ್ರೊ. ಮಾಟೊಳ್ಳಿಯವರು ತಮ್ಮಲ್ಲಿದ್ದ ಪುಸ್ತಕ ಕೊಟ್ಟು ಸಹಕರಿಸಿದ್ದಾರೆ. ಅವರಿಗೂ ನನ್ನ ಆತ್ಮೀಯ ವಂದನೆಗಳು.

ನಾನು ಶ್ರೀ ಸಿದ್ದೇಶ್ವರ ಸರಕಾರಿ ಪ್ರಥಮದರ್ಜೆ ಮಹಾವಿದ್ಯಾಲಯ. ನರಗುಂದ ಇಲ್ಲಿ ಉಪನ್ಯಾಸಕ ವೃತ್ತಿಯಲ್ಲಿದ್ದವ. ಈ ಮಹಾವಿದ್ಯಾಲಯದ ಪ್ರಾಚಾರ್ಯರಾದ ಸಹೃದಯಿ ಪ್ರೊ. ಎಸ್. ಬಿ. ಕುಷ್ಟಗಿಯವರು ಹಾಗೂ ಮಹಾವಿದ್ಯಾಲಯದ ಆಯ್ಕೆಶ್ರೇಣಿ ಗ್ರಂಥಪಾಲಕರಾದ ಶ್ರೀ ಜಿ. ಎನ್. ಸಾಲಿಯವರು ನನ್ನ ಪಿಎಚ್.ಡಿ. ಅಧ್ಯಯನಕ್ಕೆ ಬೇಕಾದ ಅನೇಕ ಪುಸ್ತಕಗಳನ್ನು ನೀಡಿ ಅಧ್ಯಯನದುದ್ದಕ್ಕೂ ಸಹಾಯ-ಸಹಕಾರ ನೀಡಿದ್ದಾರೆ. ವಿಭಾಗ ಮುಖ್ಯಸ್ಥರಾದ ಪ್ರೊ. ಬಿ. ಎಸ್. ಹಣಜಿಯವರು ಅನೇಕ ಸಲಹೆ-ಸೂಚನೆಗಳನ್ನು ನೀಡಿ ನನ್ನಲ್ಲಿ ಹುರುಪು ತುಂಬಿದ್ದಾರೆ. ನನಗೆ ಆತ್ಮೀಯರೂ. ಇತಿಹಾಸ ಉಪನ್ಯಾಸಕರೂ ಆದ ಡಾ. ಬಿ. ಎನ್. ಅಕ್ಕಿಯವರು ಸಾಕಷ್ಟು ಸಹಕಾರ ನೀಡಿದ್ದಾರೆ. ಅಲ್ಲದೆ ಮಹಾವಿದ್ಯಾಲಯದ ಸಮಸ್ತ ಬೋಧಕ-ಬೋಧಕೇತರ ಸಿಬ್ಬಂದಿಯವರು ಅನೇಕ ರೀತಿಯಲ್ಲಿ ಸಹಕರಿಸಿದ್ದಾರೆ. ಇವರಿಗೆಲ್ಲ ನನ್ನ ತುಂಬುಹೃದಯದ ನೆನಕೆಗಳು.

ನನ್ನ ಇಂದಿನ ಬೆಳವಣಿಗೆಯ ರೂವಾರಿ ನನ್ನವ್ವ. ಕಡುಬಡತನದಲ್ಲಿಯೂ ನನ್ನ ಓದಿಗೆ ಯಾವ ಕೊರತೆಯನ್ನೂ ಮಾಡದೆ ಈವರೆಗೆ ಓದಿಸಿದ್ದಲ್ಲದೆ. ನಾನು ಪಿಎಚ್.ಡಿ. ಮಾಡಬೇಕೆಂಬುದೂ ಅವಳ ಬಲವಾದ ಆಸೆಯಾಗಿತ್ತು. ಅವಳ ಆಸೆ ಇದೀಗ ಕೈಗೂಡುತ್ತಿರುವುದಕ್ಕೆ ನನಗೆ ತುಂಬ ಸಂತೋಷವಾಗುತ್ತಿದೆ. ಪೂಜ್ಯರಾದ ತಂದೆ-ತಾಯಿಯವರ. ಅಣ್ಣಂದಿರ-ಅತ್ತಿಗೆಯವರ. ಸಹೋದರಿಯರ ಪ್ರೀತಿ-ಪ್ರೋತ್ಸಾಹಗಳಿಗೆ ನಾನು ಎಂದೆಂದಿಗೂ ಚಿರಋಣಿ. ನನ್ನ ಪ್ರತಿಭೆಯನ್ನು ಸದಾ ಪುರಸ್ಕರಿಸುತ್ತ-ಪ್ರೋತ್ಸಾಹಿಸುತ್ತ ಬಂದ ಅಕ್ಕನವರಾದ ಶ್ರೀಮತಿ ರುಕ್ಮಿಣಿ. ಮಾವನವರಾದ ಶ್ರೀ ಮಹಾದೇವ ಅವರಿಗೆ ಅಭಿನಂದನೆಗಳು.

ಮಡದಿ ಸುಜಾತಾ. ಮುದ್ದು ಮಕ್ಕಳಾದ ಚಂದ್ರು. ಅಭಿಷೇಕ. ಅಮಿತ ಅವರು ಪಿಎಚ್.ಡಿ. ಅಧ್ಯಯನದುದ್ದಕ್ಕೂ ನೀಡಿದ ಸಹಕಾರ ತುಂಬ ಹಿರಿದು. ಅವರ ನೆರವನ್ನು ತುಂಬ ಕೃತಜ್ಞತೆಯಿಂದ ನೆನೆಯುವೆ. ಆತ್ಮೀಯ ಬಂಧುಗಳಾದ ಡಾ. ಸುರೇಶ ಭಜಂತ್ರಿ ಹಾಗೂ ಡಾ. (ಶ್ರೀಮತಿ) ಉಮಾ ಅವರ ಸಹಾಯ-ಸಹಕಾರ ಸಾಕಷ್ಟಿದೆ. ಅವರ ಸಹಕಾರಕ್ಕೆ ಕೃತಜ್ಞ.

ಹಲವಾರು ರೀತಿಯಲ್ಲಿ ನೆರವಾದ ಸ್ನೇಹಿತರನ್ನು ನಾನು ನೆನೆಯಲೇಬೇಕು. ಶ್ರೀ ವಾಯ್. ಎಲ್. ಕೌಜಲಗಿ. ಶ್ರೀ ಕೆಂಪಣ್ಣ ಕೌಜಲಗಿ. ಶ್ರೀ ಮಹಾಲಿಂಗ ಸಾಯನ್ನವರ. ಶ್ರೀ ನಾಗರಾಜ ಸವತಿಕಾರ. ಶ್ರೀ ಅಪ್ಪಯ್ಯ ದೊಡಮನಿ. ಶ್ರೀ ಸಿಂಗರಾಜ ದೊಡಮನಿ. ಶ್ರೀ ಶಿವಪುತ್ರ ಮಾದರ ಇವರಿಗೆಲ್ಲ ನಾನು ಋಣಿ. ವಿದ್ಯಾರ್ಥಿಗಳೇ ನನ್ನ ವೃತ್ತಿಜೀವನದ ನೈಜ ಬಂಧುಗಳು. ನನ್ನೀ ಅಧ್ಯಯನದುದ್ದಕ್ಕೂ ಹಲವು ರೀತಿಯಲ್ಲಿ ನೆರವಾದ ವಿದ್ಯಾರ್ಥಿಗಳಾದ ಶ್ರೀ ಜಿ. ಬಿ. ಧೂಪದ. ಶ್ರೀ ಬಿ. ವಾಯ್. ಹಲಕುರ್ಕಿ. ಶ್ರೀ ಎಸ್. ಪಿ. ಪೂಜಾರ ಹಾಗೂ ಸಮಸ್ತ ವಿದ್ಯಾರ್ಥಿವೃಂದಕ್ಕೆ ಹೃದಯಾರೆ ಅಭಿನಂದಿಸುವೆ.

" ದು. ನಿಂ. ಬೆಳಗಲಿಯವರ ಕಾದಂಬರಿಗಳು: ಒಂದು ಅಧ್ಯಯನ " ವೆಂಬ ವಿಮರ್ಶಾತ್ಮಕ ಅಧ್ಯಯನವು ನನ್ನ ಪ್ರಾಮಾಣಿಕ ಪ್ರಯತ್ನ. ಆದರೆ ಈ ಅಧ್ಯಯನವೇ ಅಂತಿಮವೆಂದು ಹೇಳುವ ಹುಚ್ಚು ಹೆಮ್ಮೆ ನನಗಿಲ್ಲ. ಯಾಕೆಂದರೆ. ವಿಮರ್ಶೆಯೆಂಬುದು ನಿರಂತರ ಪ್ರಕ್ರಿಯೆ. ಆದ್ದರಿಂದ ಆಗಾಗ ಬರುವ ವಿಮರ್ಶೆ-ಮರುವಿಮರ್ಶೆಗಳನ್ನು ತುಂಬು ಹೃದಯದಿಂದ ಸ್ವೀಕರಿಸುವೆ.

ತುಂಬ ಕಾಳಜಿಯಿಂದ ಅಂದವಾಗಿ ಅಕ್ಷರ ಜೋಡಣೆ ಮಾಡಿದ ಧಾರವಾಡದ ಮನೋಹರ ಮುದ್ರಣಾಲಯದ ಒಡೆಯರಾದ ಶ್ರೀ ರವೀಂದ್ರ ಆಕಳವಾಡಿ ಹಾಗೂ ಅವರ ಸಿಬ್ಬಂದಿ ವರ್ಗದವರನ್ನು ಅಭಿನಂದಿಸುವೆ.

ಪ್ರಸ್ತುತ ಅಧ್ಯಯನದಲ್ಲಿ ನೆರವಾದ ಎಲ್ಲರಿಗೂ ಮತ್ತೊಮ್ಮೆ ವಂದನೆಗಳು-ಅಭಿನಂದನೆಗಳು.

**ವಾಯ್. ಎಂ. ಭಜಂತ್ರಿ**

ಕನ್ನಡ ಉಪನ್ಯಾಸಕರು

ಸರಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ

ನರಗುಂದ ಜಿ. : ಗದಗ

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯ ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದಾಗಿ ತನ್ನ ಮೈ-ಮನಸ್ಸುಗಳೆರಡರಲ್ಲಿಯೂ ಮತ್ತಷ್ಟು ವೈವಿಧ್ಯಮಯಗೊಳಿಸಿಕೊಂಡು ಹೊಸ ಮನ್ವಂತರವನ್ನೇ ತೆರೆದಿದೆ. ಸಮೃದ್ಧವಾದ ಜೀವನಾನುಭವ. ಪ್ರಗತಿಪರವಾದ ಆಶಯಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡು ಬೆಳೆದ 'ಕಾದಂಬರಿ' ಜಾಗತಿಕ ಅಭಿವ್ಯಕ್ತಿ ಮಾಧ್ಯಮ. ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ 'ಕಾದಂಬರಿ' ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಯುರೋಪಿಯನ್ ಕಾದಂಬರಿ ಪ್ರಕಾರಕ್ಕೆ ನಾಲ್ಕುನೂರು ವರ್ಷಗಳ ಇತಿಹಾಸವಿದ್ದರೆ ಕನ್ನಡ ಕಾದಂಬರಿಗೆ ನೂರು ವರ್ಷ ತುಂಬಿದೆ. ವಾಸ್ತವವಾದ ಮತ್ತು ರಮ್ಯವಾದದ ನೆಲೆಯಲ್ಲಿ ಹುಟ್ಟಿ ಬಂದ ಕನ್ನಡ ಕಾದಂಬರಿ ಹೊಸಗನ್ನಡದ ಪ್ರಮುಖ ಸಾಹಿತ್ಯ ರೂಪವಾಗಿದೆ.

ಭಾರತೀಯ ಸಂದರ್ಭದಲ್ಲಿ ಕನ್ನಡ ಕಾದಂಬರಿಯ ಸ್ವರೂಪವನ್ನು ವಿವೇಚಿಸಿದಾಗ. ಅದರ ಎರಡು ಮುಖ್ಯವಾದ ಲಕ್ಷಣಗಳು ನಮಗೆ ಸಹಜಗೋಚರವಾಗುತ್ತವೆ. ಮೊದಲನೆಯದು. ಪರಿವರ್ತನೆಯ ಪ್ರಕ್ರಿಯೆಯಲ್ಲಿ ಅದು ತೋರುವ ಬಲವಾದ ಆಸ್ಥೆ. ಕಳೆದ ಒಂದು ಶತಮಾನದ ಕನ್ನಡ ಕಾದಂಬರಿ ನಡೆದು ಬಂದ ದಾರಿಯನ್ನು ಅವಲೋಕಿಸಿದರೆ ಈ ಪ್ರಕ್ರಿಯೆ ಹಲವಾರು ಆಯಾಮಗಳಲ್ಲಿ ಅಂದರೆ. ರಾಜಕೀಯ. ಸಾಮಾಜಿಕ. ಸಾಂಸ್ಕೃತಿಕ. ಕೌಟುಂಬಿಕ ಹಾಗೂ ವೈಯಕ್ತಿಕ ನೆಲೆಯಲ್ಲಿ ಗೋಚರವಾಗುತ್ತವೆ. ಎರಡನೇ ಲಕ್ಷಣವೆಂದರೆ. ಕನ್ನಡ ಕಾದಂಬರಿಯ ಮೂಲಕ ನಡೆದ ಸಾಂಸ್ಕೃತಿಕ ಸಂವಾದ. ಭಾರತೀಯ ಕಾದಂಬರಿಕಾರರು: ಕನ್ನಡ ಕಾದಂಬರಿಕಾರರು ಕೇವಲ ಅನುಕರಣಶೀಲರಾಗಿಲ್ಲ. ಕಾದಂಬರಿಯ ರೂಪದಲ್ಲಿ ಅವರು ಪ್ರಕೃತಿ - ಸಂಸ್ಕೃತಿಗಳ ಸಂಬಂಧದ ಸಂವಾದವನ್ನೇ ಸಾಹಿತ್ಯದಲ್ಲಿ ನಡೆಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸ್ಥಾನ ಪಡೆದಿರುವ ಕಾದಂಬರಿ. ಸಾಹಿತ್ಯದ ಇತರ ಪ್ರಕಾರಗಳಿಗಿಂತ ಹೆಚ್ಚು ಜನಪ್ರಿಯವಾಗಿದೆ: ತನ್ನ ಈ ಜನಪ್ರಿಯತೆಗೆ ಅದರ ವೈವಿಧ್ಯತೆಯೇ ಕಾರಣ. ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಉತ್ತರ ಕರ್ನಾಟಕದ ಉತ್ತರ ಗಡಿಯ ಸಾಹಿತಿಗಳ ಕೊಡುಗೆ ಗಮನಾರ್ಹವಾದುದು. ಮಿರ್ಜಿ ಅಣ್ಣಾರಾಯರು. ರಾವಬಹಾದ್ದೂರ. ಬಸವರಾಜ ಕಟ್ಟೀಮನಿ. ಕೃಷ್ಣಮೂರ್ತಿ ಪುರಾಣಿಕ. ಸತ್ಯಕಾಮ

ಮೊದಲಾದವರ ಕೊಡುಗೆ ಅತ್ಯಮೂಲ್ಯವಾಗಿದೆ. ಇವರ ನಂತರದ ಪೀಳಿಗೆಯ ಹಾಗೂ ಇವರ ಪರಂಪರೆಯನ್ನು ಮುಂದುವರಿಸಿದ ಡು. ನಿಂ ಬೆಳಗಲಿಯವರದು ಈ ಕ್ಷೇತ್ರದ ಗಟ್ಟಿ ಹೆಸರು.

ಬೆಳಗಲಿಯವರು ಕಥೆಗಾರರಾಗಿ ಸಾಹಿತ್ಯಲೋಕಕ್ಕೆ ಕಾಲಿರಿಸಿ. ಕಾದಂಬರಿಕಾರರಾಗಿ ಬೆಳೆದವರು. ಸಾಹಿತ್ಯದ ಬಹುತೇಕ ಪ್ರಕಾರಗಳಲ್ಲಿ ಕೃಷಿ ಮಾಡಿದ ಬೆಳಗಲಿಯವರು ಪ್ರಮುಖವಾಗಿ ಕಥೆ - ಕಾದಂಬರಿಕಾರರು. ಉತ್ತರ ಕರ್ನಾಟಕದ ಭಾವ - ಭಾಷೆಗಳ. ಸಾಮಾಜಿಕ ತುಡಿತಗಳಿಗೆ ಸ್ಪಂದಿಸಿದ ಕೆಲವೇ ಕೆಲವು ಲೇಖಕರಲ್ಲಿ ಬೆಳಗಲಿಯವರು ಪ್ರಮುಖರು. ಬೆಳಗಲಿಯವರು ಬೇರೆ ಭಾಷೆಯ ಸೊಗಡನ್ನೂ ಕನ್ನಡಕ್ಕೆ ತಂದಿದ್ದಾರೆ. ಮರಾಠಿ ಭಾಷೆಯ ಉತ್ಕೃಷ್ಟ ಆತ್ಮಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಪ್ರಸ್ತುತ ಭಾರತೀಯ ಸನ್ನಿವೇಶದಲ್ಲಿ ಗ್ರಾಮೀಣ ಅನುಭವವನ್ನು ಜೀವಾಳವಾಗಿಸುವ ಹೊಸ ಆಯಾಮವನ್ನು ಕಾದಂಬರಿ ಪ್ರಪಂಚದಲ್ಲಿ ತಂದಿರುವ ಧೀಮಂತ ಕಾದಂಬರಿಕಾರರು. ಕಥೆಗಾರರಾಗಿ. ಕಾದಂಬರಿಕಾರರಾಗಿ. ಅನುವಾದಕರಾಗಿ ಅವರು ಉತ್ಕೃಷ್ಟ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಸುಮಾರು ನಾಲ್ಕು ದಶಕಗಳಿಗೂ ಮೀರಿ ಸೃಜನಶೀಲತೆಯ ತಮ್ಮ ಅನುಭವಗಳನ್ನು ತೆರೆದಿಟ್ಟಿದ್ದಾರೆ. ಆದರೆ ಅವರ ಕಾದಂಬರಿಗಳ ಕುರಿತಾದ ಚರ್ಚೆ. ವಿಶ್ಲೇಷಣೆ. ವಿಮರ್ಶೆ. ಅಧ್ಯಯನಗಳು ವ್ಯಾಪಕ ಹಾಗೂ ತೃಪ್ತಿಕರವಾಗಿಲ್ಲದಿರುವುದು ಕಂಡು ಬರುತ್ತದೆ. ಅವರ ಅಭಿನಂದನ ಗ್ರಂಥವಾದ 'ಬೆಳಗಲಿ'ಯಲ್ಲಿ ಅವರ ಸಮಗ್ರ ಕೃತಿಗಳ ಅವಲೋಕನವಿದೆಯಾದರೂ ಅದು ತನ್ನ ಇತಿಮಿತಿಯ ಆಧೀನವಾಗಿರುವುದರಿಂದ ವ್ಯಾಪಕವಾದ ಅಧ್ಯಯನ ಅಲ್ಲಿಲ್ಲ. ಅದನ್ನು ಬಿಟ್ಟರೆ 'ದೇವದಾಸಿ'. ಅವಲೋಕನವೊಂದನ್ನು ಅಥಣಿ ವಿಮೋಚನಾ ಸಂಸ್ಥೆಯವರು ನಡೆಸಿದ್ದಾರೆಯಷ್ಟೇ. ಇವಿಷ್ಟು ಬಿಟ್ಟರೆ. ಬೆಳಗಲಿಯವರ ಕಾದಂಬರಿಗಳ ಸಮಗ್ರವಾದ. ಸಮರ್ಪಕವಾದ. ಸಂಪೂರ್ಣವಾದ ಅಧ್ಯಯನವಾಗಿಲ್ಲ. ಬೆಳಗಲಿಯವರು ಕಾದಂಬರಿ ಕ್ಷೇತ್ರಕ್ಕೆ ವೈಶಿಷ್ಟ್ಯಪೂರ್ಣವಾದ ಕೊಡುಗೆ ಕೊಟ್ಟಿರುವುದನ್ನು ಇತ್ತೀಚಿನ ದಿನಗಳಲ್ಲಿ ಸಾಹಿತ್ಯಲೋಕ ಗುರುತಿಸಿದೆ. ಸಲ್ಲಬೇಕಾದ ಗೌರವಸಾನ ಏನಕೇನ ಕಾರಣಗಳಿಗಾಗಿ ಸಲ್ಲದೆ ಇರುವುದನು ಗಮನಿಸಿ. ಮುಂದಾದರೂ ನ್ಯಾಯೋಚಿತವಾದ ರೀತಿಯಲ್ಲಿ ಅವರ ಬದುಕು - ಬರಹಗಳಿಗೆ ಮನ್ನಣೆ ಸಿಗಬಲ್ಲ ನಂಬಿಕೆಯ ಗಟ್ಟಿತನ ಅವರ ಕಾದಂಬರಿಗಳಲ್ಲಿಯೇ ಇರುವುದನ್ನು ಹೆಮ್ಮೆಯಿಂದ ಹೇಳಬಹುದು. ಈ ಹಿನ್ನೆಲೆಯಲ್ಲಿ ಅವರ ಕಾದಂಬರಿಗಳನ್ನು ಸಮಗ್ರವಾದ ಅಧ್ಯಯನಕ್ಕೊಳಪಡಿಸುವ ದೃಷ್ಟಿಯಿಂದ "ಡು. ನಿಂ. ಬೆಳಗಲಿಯವರ ಕಾದಂಬರಿಗಳು; ಒಂದು ಅಧ್ಯಯನ" ಎಂಬ ವಿಷಯವನ್ನು ಆಯ್ದುಕೊಂಡು ಇಲ್ಲಿ ವಿವೇಚನೆ - ವಿಮರ್ಶೆ ನಡೆಸಲಾಗಿದೆ.

**ಅಧ್ಯಯನದ ಉದ್ದೇಶ :**

ಡು. ನಿಂ. ಬೆಳಗಲಿಯವರು ಉತ್ತರ ಕರ್ನಾಟಕದ ಶ್ರೇಷ್ಠ 'ಜನಪರ' ಕಾದಂಬರಿಕಾರರು. ಅವರ ಕಾದಂಬರಿಗಳು ಮಾನವ ಸಂಬಂಧಗಳ ಅನ್ವೇಷಣೆ ಹಾಗೂ ನಿರೂಪಣೆಯನ್ನು ತುಂಬ ಕಾಳಜಿಯಿಂದ ಮಾಡಿವೆ. ಅವರ ಪ್ರತಿಯೊಂದು ಕಾದಂಬರಿಯನ್ನು ವಿಮರ್ಶಾತ್ಮಕವಾಗಿ. ವಿಶ್ಲೇಷಣಾತ್ಮಕವಾಗಿ

ಅಧ್ಯಯನಮಾಡಲಾಗುತ್ತದೆ. ಈ ಕಾರಣಕ್ಕಾಗಿ ಬೆಳಗಲಿಯವರ ಒಟ್ಟು ಕಾದಂಬರಿಗಳನ್ನು ಅವಲೋಕಿಸಿ ಏಳು ಅಧ್ಯಾಯಗಳಲ್ಲಿ ವರ್ಗೀಕರಣ ಮಾಡಿಕೊಂಡು ಅಧ್ಯಯನ ಮಾಡಲಾಗುವುದು.

ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎಂಬ ಮೊದಲ ಅಧ್ಯಾಯದಲ್ಲಿ ಎಲೆಮರೆಯ ಕಾಯಿಯಂತೆ ಸದ್ದಿಲ್ಲದೆ ಸಾಧನೆಗೈದ ಅವರ ಕಾದಂಬರಿಗಳನ್ನು ಪೂರ್ಣದೃಷ್ಟಿಯ ಅಧ್ಯಯನಕ್ಕೊಳಪಡಿಸುವ ಉದ್ದೇಶವನ್ನು ಹೇಳುತ್ತ ನನ್ನ ಅಧ್ಯಯನಕ್ಕಿರುವ ಇತಿ ಮಿತಿಗಳನ್ನು ಸೂಚಿಸಲಾಗಿದೆ.

ಕನ್ನಡದಲ್ಲಿ ಕಾದಂಬರಿ ಸಾಹಿತ್ಯದ ಹುಟ್ಟು - ಬೆಳವಣಿಗೆ ಹಾಗೂ ಅದರ ಮಹತ್ವವನ್ನು ಅವಲೋಕಿಸುತ್ತ ಅದರ ಗೊತ್ತು ಗುರಿಗಳ ಸಮೀಕ್ಷೆಯನ್ನು ಎರಡನೇ ಅಧ್ಯಾಯದಲ್ಲಿ ನಡೆಸಲಾಗಿದೆ. ಮೂಲತಃ ಬೆಳಗಲಿಯವರು ಶಿಕ್ಷಕರಾದುದರಿಂದ ಅವರಿಗಿರುವ ಸಾಹಿತಿಗಳ - ಸಾಹಿತ್ಯದ ಅಂಟು - ನಂಟನ್ನು ಹೇಳುತ್ತ ಸಾಹಿತ್ಯರಚನೆಗೆ ಪ್ರೇರಕವಾದ ಕೌಟುಂಬಿಕ - ಸಾಮಾಜಿಕ ಅಂಶಗಳನ್ನು ಗುರುತಿಸುತ್ತ. ಅವರಲ್ಲಿರುವ ಸಾಮಾಜಿಕ ಕಳಕಳಿಯನ್ನು ಚರ್ಚಿಸುತ್ತ ಅವರ ಸೃಜನಶೀಲ ಬರವಣಿಗೆಯ ಹಿಂದಿರುವ ಸಾಹಿತ್ಯಿಕ - ಸಾಮಾಜಿಕ ಪ್ರೇರಣೆಗಳನ್ನು " ಸಾಹಿತ್ಯಿಕ - ಸಾಮಾಜಿಕ ಹಿನ್ನೆಲೆ "ಯಲ್ಲಿ ವಿವೇಚಿಸಲಾಗುವುದು.

ಈ ಮಹಾಪ್ರಬಂಧದ ಮೂರನೆಯ ಅಧ್ಯಾಯವೇ " ಬೆಳಗಲಿಯವರ ಜೀವನ ". ಇದರಲ್ಲಿ ಬೆಳಗಲಿಯವರ ಜನನ. ಬಾಲ್ಯ. ವಿದ್ಯಾಭ್ಯಾಸ. ಹಾಗೂ ತಂದೆ - ತಾಯಿಗಳ ವಿಶೇಷ ಗುಣಗಳನ್ನು ಇವರು ತಮ್ಮಲ್ಲಿ ಅಳವಡಿಸಿಕೊಂಡ ಪರಿಯನ್ನು ವಿವರಿಸುತ್ತ. ತಮ್ಮ ದಾಂಪತ್ಯ ಜೀವನದಲ್ಲಿ ಉಂಡ ಸುಖ - ದುಃಖ. ನೋವು - ನಲಿವು. ಕಂಡ ಏಳು - ಬೀಳುಗಳನ್ನು ವಿವರಿಸಲಾಗುತ್ತದೆ. ಸಂಸಾರಿಯಾಗಿ. ಸಾಹಿತಿಯಾಗಿ. ಒಂದಿಷ್ಟು ಸಂಚಾರಿಯಾಗಿ ಬೆಳಗಲಿಯವರು ಗೈದ ಸಾಧನೆ - ಸಿದ್ಧಿಗಳನ್ನು ವಿವೇಚಿಸಲಾಗುತ್ತದೆ. ವೃತ್ತಿಯಿಂದ ಶಿಕ್ಷಕರಾದ ಬೆಳಗಲಿಯವರು ಪ್ರವೃತ್ತಿಯಿಂದ ಸಾಹಿತಿಗಳು. ಈ ವೃತ್ತಿ - ಪ್ರವೃತ್ತಿಗಳೆರಡರಲ್ಲಿಯೂ ತಮ್ಮನ್ನು ತಾವು ಸಂಪೂರ್ಣವಾಗಿ. ಸಮರ್ಥವಾಗಿ ತೊಡಗಿಸಿಕೊಂಡ ವ್ಯಕ್ತಿತ್ವದ ವಿವಿಧ ಸ್ತರಗಳನ್ನು ವಿವರಿಸಲಾಗುತ್ತದೆ. ನುಡಿದಂತೆ ನಡೆದು. ನಡೆದಷ್ಟು ಪಡೆಯದಿದ್ದರೂ ಸಂತೃಪ್ತಿಯಿಂದಲೇ ಸದಾ ಹಸನ್ಮುಖಿಯಾಗಿಯೇ ಇರುತ್ತಿದ್ದ ಅವರ ವ್ಯಕ್ತಿತ್ವದ ಪರಿಚಯವನ್ನು ಮಾಡುತ್ತ ಅವರ ಸಮಗ್ರ ಜೀವನವನ್ನು ವಿವರಿಸಲಾಗುವುದು.

" ಬೆಳಗಲಿಯವರ ಕಾದಂಬರಿಗಳು ". ಇದು ನಾಲ್ಕನೇ ಅಧ್ಯಾಯವಾಗಿದ್ದು. ಪ್ರಸ್ತುತ ಮಹಾಪ್ರಬಂಧದ ಕೇಂದ್ರಬಿಂದುವಾಗಿದೆ. ಅವರ ಕಾದಂಬರಿಗಳ ವ್ಯವಸ್ಥಿತವಾದ ಅಧ್ಯಯನದ ಸಲುವಾಗಿ ಅವುಗಳ ವಸ್ತು - ಭಾಷೆಗಳ ಹಿನ್ನೆಲೆಯಲ್ಲಿ ಪ್ರಮುಖವಾಗಿ ಈ ಕೆಳಗಿನಂತೆ ವರ್ಗೀಕರಣ ಮಾಡಲಾಗಿದೆ.

೧) ಕೌಟುಂಬಿಕ ಕಾದಂಬರಿಗಳು

೨) ಸಾಮಾಜಿಕ ಕಾದಂಬರಿಗಳು

೩) ಪ್ರಾದೇಶಿಕ ಕಾದಂಬರಿಗಳು

೪) ಅನುವಾದಿತ ಕಾದಂಬರಿಗಳು

ಬೆಳಗಲಿಯವರ ಬಹುತೇಕ ಕಾದಂಬರಿಗಳು ಸಾಮಾಜಿಕವೇ ಆಗಿವೆ. ಆದರೂ ಅವುಗಳ ವಸ್ತು - ಭಾಷೆಗಳ ಸೂಕ್ಷ್ಮಗ್ರಹಿಕೆಯ ಅವಲೋಕನದ ಆಧಾರದ ಮೇಲೆ ವರ್ಗೀಕರಣ ಮಾಡಿದ ನಂತರ ಅವುಗಳನ್ನು ಸಮಗ್ರವಾಗಿ ಅವಲೋಕಿಸಿ ವಿವರಣಾತ್ಮಕ. ವಿಶ್ಲೇಷಣಾತ್ಮಕ ವಿಮರ್ಶೆಗೆ ಒಳಪಡಿಸಿ ಅಧ್ಯಯನ ಮಾಡಲಾಗುವುದು. ಕೌಟುಂಬಿಕ ನೆಲೆಯಲ್ಲಿ ಮೂಡಿಬಂದ ಬೆಳಗಲಿಯವರ ಕಾದಂಬರಿಗಳನ್ನು ಒಂದೆಡೆ ವರ್ಗೀಕರಣ ಮಾಡಿಕೊಂಡು. ಕುಟುಂಬಸ್ತರದಲ್ಲಿಯೇ ತಮ್ಮ ವೈಬಿಚ್ಚಿಕೊಂಡ ಅವುಗಳ ವಿವೇಚನೆ ಮಾಡಿದ ನಂತರ. ಅವರ ಸಾಮಾಜಿಕ ಕಾದಂಬರಿಗಳನ್ನು ಅಧ್ಯಯನಕ್ಕೊಳಪಡಿಸಿ. ಅವರ " ಜನಪರ " ನಿಲುವುಗಳನ್ನು ಪ್ರಸ್ತುತ ಸಂದರ್ಭದಲ್ಲಿ ವಿವೇಚಿಸಲಾಗುವುದು.

ಬೆಳಗಲಿಯವರು " ಸಾಮಾಜಿಕ - ಪ್ರಾದೇಶಿಕ " ನೆಲೆಯಲ್ಲಿ ಉನ್ನತ ಕಾದಂಬರಿಕಾರರೆಂಬುದನ್ನು ಈ ಅಧ್ಯಾಯದಲ್ಲಿ ನಿರೂಪಿಸಲು ಆಧಾರಗಳ ಮೂಲಕ ಪ್ರಯತ್ನಿಸಲಾಗುವುದು. ಸಾಮಾಜಿಕ ಸಮಸ್ಯೆಗಳಿಗೆ ಪ್ರಾದೇಶಿಕ ನೆಲೆಯನ್ನು ಒದಗಿಸಿ. ಅವುಗಳ ಆಳವಾದ ಕಾರಣಗಳನ್ನು ಹೆಕ್ಕುತ್ತ. ಅವುಗಳಿಗೆ ಸಮಂಜಸವಾದ. ಸಮರ್ಪಕವಾದ ಪರಿಹಾರಗಳನ್ನು ಸೂಚಿಸಿದ ಅವರ ಕಾದಂಬರಿಗಳ ನೆಲೆ. ಬೆಲೆಯನ್ನು ಇಲ್ಲಿ ಗುರುತಿಸಲಾಗುವುದು. ಉತ್ತರ ಕರ್ನಾಟಕದ ಜೀವಂತ ಭಾಷೆಯನ್ನು ಅಕೃತಕವಾಗಿ. ಅಷ್ಟೇ ಸಹಜ - ಸರಳವಾಗಿ ತಮ್ಮ ಕಾದಂಬರಿಗಳಲ್ಲಿ ಬಳಸಿದ ಬಗ್ಗೆ ವಿಶ್ಲೇಷಣೆ ಮಾಡಲಾಗುವುದು. ಬೆಳಗಲಿಯವರ ಕಾದಂಬರಿಗಳ ವಸ್ತು - ಭಾಷೆಯ ಸಮಗ್ರವಾದ ಅಧ್ಯಯನವೇ ಈ ಅಧ್ಯಾಯದ ಪ್ರಮುಖ ಗುರಿಯಾಗಿದೆ.

ಅಧ್ಯಾಯ ಐದು " ಬೆಳಗಲಿಯವರ ಕಾದಂಬರಿಗಳ ಶೈಲಿ ಮತ್ತು ತಂತ್ರ" ವನ್ನು ಕುರಿತದ್ದಾಗಿದೆ. ಶೈಲಿಯ ವ್ಯಾಖ್ಯೆ. ಸ್ವರೂಪಗಳನ್ನು ವಿವರಿಸುತ್ತ. ಅವರ ಕಾದಂಬರಿಗಳಲ್ಲಿನ ನೇರನುಡಿ. ಸಂದರ್ಭೋಚಿತವಾದ ಭಾಷೆಯ ಬಳಕೆ. ಉನ್ನತ ಸನ್ನಿವೇಶಗಳ ರಚನೆ. ಸಂಭಾಷಣಾ ಸ್ವಾರಸ್ಯ ಅಲ್ಲದೆ. ಕಾದಂಬರಿಗಳಲ್ಲಿನ ಅನೇಕ ವಿನೋದ ಪ್ರಸಂಗಗಳನ್ನು ವಿವರಿಸಿ - ವಿವೇಚಿಸಿ ಅವುಗಳ ಸಾರ್ಥಕತೆಯನ್ನು ಗುರುತಿಸಲಾಗುವುದು. ಬೆಳಗಲಿಯವರ ಇನ್ನೊಂದು ಬಹುಮುಖ್ಯ ಶೈಲಿಯೆಂದರೆ. ತಮ್ಮ ಕಾದಂಬರಿಗಳಲ್ಲಿ ವಿಪುಲವಾದ ಅಷ್ಟೇ ಸಮರ್ಪಕವಾದ ಸಹಜ - ಸರಳ - ಅಕೃತಕ ಜನಸಾಮಾನ್ಯರ ವ್ಯಾವಹಾರಿಕ ಭಾಷೆಯಿಂದಲೇ ಆಯ್ದುಕೊಂಡು ಬಳಸಿದ ಉಪಮೆ - ರೂಪಕಗಳನ್ನು ಚರ್ಚಿಸುತ್ತ. ಕಾದಂಬರಿಗಳಲ್ಲಿ ಬಳಸಲಾದ ಕವನದ ತುಣುಕುಗಳನ್ನು. ವಚನಗಳನ್ನು. ಜನಪದ ಹಾಡುಗಳನ್ನು ಹಾಗೂ ಬೈಲಾಟದ ಪದಗಳನ್ನು ವಿಶ್ಲೇಷಿಸುತ್ತ. ಅವರ ಬರವಣಿಗೆಯ ಶೈಲಿಯನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಇದೇ ಅಧ್ಯಾಯದಲ್ಲಿ ಆಧುನಿಕ ವಿಮರ್ಶೆಯ ನೆಲೆಯಲ್ಲಿ ಅವರ ಕಾದಂಬರಿಗಳನ್ನು ವಿವೇಚಿಸುತ್ತ ನಿರೂಪಣಾವಿಧಾನ. ಅವರು ಬಳಸಿದ ಸಂಕೇತ - ಪ್ರತಿಮೆಗಳ ಔಚಿತ್ಯ ಹಾಗೂ ಸಮರ್ಪಕತೆ. ಸ್ಮರಣ ತಂತ್ರಗಳನ್ನು ವಿಶ್ಲೇಷಿಸಲಾಗುವುದು. ಸುಂದರ - ಸರಳ - ಸಹಜ -ಸಮರ್ಥ ಅಭಿವ್ಯಕ್ತಿಗಾಗಿ

ಕಾದಂಬರಿಪರಿಕರಗಳನ್ನು ಅವರು ದುಡಿಸಿಕೊಂಡ ಕ್ರಮ - ಪರಿಕ್ರಮವನ್ನು ಹಾಗೂ ಅದರ ಸಾರ್ಥಕ ನೆಲೆ - ಬೆಲೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುತ್ತದೆ.

ಅಧ್ಯಾಯ ಆರರಲ್ಲಿ " ಬೆಳಗಲಿಯವರ ಇತರ ಸಾಹಿತ್ಯದ ಒಟ್ಟು ನೋಟವಿದೆ. " ಅಂದರೆ. ಅವರ ಕಾದಂಬರಿಯೇತರ ಸಾಹಿತ್ಯದ ವಿಹಂಗಮ ನೋಟವೇ ಹೊರತು ಅಧ್ಯಯನವಲ್ಲ. ಅವರ ಕಾದಂಬರಿಗಳ ಸಮಗ್ರ ಅಧ್ಯಯನದ ನಂತರ ಒಟ್ಟು ಸಾಹಿತ್ಯಿಕ ಕೊಡುಗೆ ಕುರಿತಾದ ಒಂದು ವಿಹಂಗಮ ನೋಟದ ಸಮೀಕ್ಷೆ ನಡೆಸುವುದು ಸಾಂದರ್ಭಿಕ ಅವಶ್ಯವೆಂದರಿತು. ಇಲ್ಲಿ ಬೆಳಗಲಿಯವರ ಒಟ್ಟು ಸಾಹಿತ್ಯದ ಸ್ಥೂಲ ಪರಿಚಯವನ್ನು ಮಾಡಿಕೊಡಲಾಗುವುದು. ಹೀಗೆ ಮಾಡುವುದರಿಂದ ಅವರ ಅಧ್ಯಯನಕ್ಕೊಂದು ಪರಿಪೂರ್ಣತೆ ಪ್ರಾಪ್ತವಾಗಲು ಸಾಧ್ಯ. ಹಾಗಾಗಿ ಅವರ ಸಣ್ಣಕಥೆಗಳು. ನಗೆಬರಹಗಳು. ಮಕ್ಕಳ ಸಾಹಿತ್ಯ. ಅನುವಾದ. ಜೀವನ ಚರಿತ್ರೆ ಹೀಗೆ ಒಟ್ಟು ಅವರ ಬರವಣಿಗೆಯ ವೈವಿಧ್ಯಮಯ ಮಗ್ಗುಲಗಳನ್ನು ಪರಿಚಯಿಸಿಕೊಡಲಾಗುವುದು.

ಕೊನೆಯಲ್ಲಿ " ಸಮಾರೋಪ " ಇದು ಅಧ್ಯಯನದ ಫಲಶ್ರುತಿ ಭಾಗವಾಗಿದೆ. ಒಟ್ಟು ಮಹಾಪ್ರಬಂಧದ ಗುಣಾತ್ಮಕ ಅಂಶಗಳನ್ನು ಗುರುತಿಸುವುದರೊಂದಿಗೆ ಬೆಳಗಲಿಯವರ ಬದುಕು - ಬರಹದ ವೈಶಿಷ್ಟ್ಯಗಳನ್ನು ವಿವರಿಸುತ್ತ ಕಾದಂಬರಿ ಸಾಹಿತ್ಯಕ್ಕೆ ಅವರ ವಿಶೇಷ ಕೊಡುಗೆ ಹಾಗೂ ಅವರ ವೈವಿಧ್ಯಮಯ ವ್ಯಕ್ತಿತ್ವವನ್ನು ಪರಿಚಯಿಸಲಾಗುವುದು.

**ಅಧ್ಯಯನದ ವ್ಯಾಪ್ತಿ :**

ಈ ಮಹಾಪ್ರಬಂಧವು ಬೆಳಗಲಿಯವರ ಕಾದಂಬರಿಗಳ ಸಮಗ್ರ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದೆ. ಬೆಳಗಲಿಯವರು ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಸೃಷ್ಟಿಸಿಕೊಂಡಿದ್ದಾರೆ. ಕಥೆ - ಕಾದಂಬರಿಕಾರರೆಂದೇ ವಿಮರ್ಶಕರು ಇವರನ್ನು ಗುರುತಿಸಿದ್ದಾರೆ. ಆದರೂ ವಿನೋದ ಸಾಹಿತ್ಯ. ಅನುವಾದ ಸಾಹಿತ್ಯ. ಜೀವನ ಚರಿತ್ರೆ. ಮಕ್ಕಳ ಸಾಹಿತ್ಯ. ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೃಷಿಗೈದು. ಕಳೆದ ನಾಲ್ಕು ದಶಕಗಳಿಗೂ ಮಿಕ್ಕ ಇವರ ಸಾಹಿತ್ಯಿಕ ಸೇವೆಯಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಅವರ ವೈವಿಧ್ಯಮಯವಾದ ಸೃಜನಶೀಲ ಕೊಡುಗೆಯಲ್ಲಿ ಕಾದಂಬರಿಗಳು ಗಮನಾರ್ಹವಾದವುಗಳು. ಅವರ ಕಾದಂಬರಿಯೇತರ ಸಾಹಿತ್ಯವನ್ನು ಸಮೀಕ್ಷೆಯ ವಿಹಂಗಮ ಅವಲೋಕನದ ಮುಖಾಂತರ ಪರಿಚಯಿಸಿಕೊಡಲಾಗಿದೆ.

## ಅಧ್ಯಾಯ : ಎರಡು

# ಸಾಹಿತ್ಯಿಕ - ಸಾಮಾಜಿಕ ಹಿನ್ನೆಲೆ

"ಪದ್ಯಂ ವದ್ಯಂ; ಗದ್ಯಂ ಹೃದ್ಯಂ. ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು"[೧] ಎಂಬ ಮುದ್ದಣ್ಣನ ಮಾತಿನಂತೆ ಗದ್ಯ ಸಾಹಿತ್ಯ ಹೃದ್ಯವಾದುದೇ ಸರಿ; ಅದರಲ್ಲಿಯೂ ಕಾದಂಬರಿ ಸಾಹಿತ್ಯ ಕನ್ನಡದಲ್ಲಷ್ಟೇ ಅಲ್ಲದೆ ಉಳಿದೆಲ್ಲ ಭಾಷೆಗಳಲ್ಲಿಯೂ ಅತ್ಯಂತ ಜನಪ್ರಿಯವಾದ ಸಾಹಿತ್ಯಪ್ರಕಾರ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಾದಂಬರಿಯೇ ವೈಚಾರಿಕ ಅಭಿವ್ಯಕ್ತಿಗೆ ಹೆಚ್ಚು ಅನುಕೂಲಕರ ಮಾಧ್ಯಮ. ಒಂದು ರೀತಿಯಲ್ಲಿ ಜನಪದ ಸಾಹಿತ್ಯದಂತೆ ಸಾಮಾನ್ಯ ಜನರ ಆಶೋತ್ತರಗಳನ್ನು. ಅಭಿರುಚಿಗಳನ್ನು. ಸಂಸ್ಕೃತಿಯ ಮಟ್ಟವನ್ನು ಹೇಳಬಲ್ಲ ಸಮಕಾಲೀನ ಜೀವನಕ್ಕೆ ತುಂಬ ಯೋಗ್ಯ ರೂಪ. ಈ ಹಿನ್ನೆಲೆಯಲ್ಲಿ ಡಿ. ಎಚ್. ಲಾರೆನ್ಸ್ ಅವರ " The novel is the one bright book of life " ಎಂಬ ಮಾತು ಸಮಂಜಸವಾದುದಾಗಿದೆ.

"ಯುರೋಪಿನಲ್ಲಿ ೧೮ನೇ ಶತಮಾನದ ಕೈಗಾರಿಕಾ ಕ್ರಾಂತಿಯ ಕಾಲಾವಧಿಯಲ್ಲಿ ದೊಡ್ಡ - ದೊಡ್ಡ ಮುದ್ರಣ ಯಂತ್ರಗಳು ನಿರ್ಮಿಸಲ್ಪಟ್ಟಾಗ ಅವುಗಳಲ್ಲಿ ಮುದ್ರಿಸಲು ಹೆಚ್ಚು ಪುಟಗಳ ಹಸ್ತಪ್ರತಿಗಳು ಬೇಕಾದವು. ಆಗ ರೂಪಗೊಂಡುದೇ ಕಾದಂಬರಿ"[೨] ಅಂದರೆ ಇದರ ಚರಿತ್ರೆ ಕೇವಲ ಎರಡುನೂರು ವರ್ಷಗಳ ಹಿಂದಿನದು ಮಾತ್ರ. ಆದರೆ ಕಾವ್ಯ- ನಾಟಕ - ಸಣ್ಣಕಥೆಗಳಂತೆ ಕಾದಂಬರಿಯೂ ಸಾಹಿತ್ಯ ಪ್ರಕಾರವಾಗಿ ಬೆಳೆದಿರುವುದಲ್ಲದೆ ಜನಪ್ರಿಯತೆಯನ್ನೂ ಗಳಿಸಿದೆ. ಸಾಹಿತ್ಯದ ಯಾವುದೇ ಪ್ರಕಾರಕ್ಕೆ ತನ್ನದೇ ಆದ ಚರಿತ್ರೆಯಿರುವಂತೆ ಕಾದಂಬರಿ ಸಾಹಿತ್ಯಕ್ಕೂ ಕೂಡ ಒಂದು ಚರಿತ್ರೆಯಿದೆ.

### ಪದ ನಿಷ್ಪತ್ತಿ :

ಇಂಗ್ಲೀಷ ಭಾಷೆಯಲ್ಲಿ 'ನಾವೆಲ್' ಎಂಬುದು 'ನೋವಸ್' ಎಂಬ ಲ್ಯಾಟಿನ್ ಪದದಿಂದ ಬಂದಿದೆ. 'ನೋವಸ್' ಎಂದರೆ 'ಹೊಸದು' ಎಂದರ್ಥ. 'Fiction' ಎಂಬುದು ಇಂಗ್ಲೀಷಿನ 'ನಾವೆಲ್' ಎಂಬ ಪದಕ್ಕಿರುವ ಅದೇ ಅರ್ಥದ ಮತ್ತೊಂದು ಪರ್ಯಾಯ ಪದ. ಭಾರತೀಯ ಭಾಷೆಗಳಲ್ಲಿ 'Novel' ಎಂಬುದಕ್ಕೆ

---

೧. ಮುದ್ದಣ : ರಾಮಾಶ್ವಮೇಧ. ಪುಟ ೫

೨. ಜ್ಞಾನಗಂಗೋತ್ರಿ (ಕಿರಿಯರ ವಿಶ್ವಕೋಶ) ಸಂಪುಟ ೫ (ಕಲೆ ಸಾಹಿತ್ಯ). ಪುಟ ೧೭೩

ಅನೇಕ ಸಂವಾದಿ ಪದಗಳಿವೆ. ಒಂದಿಯಲ್ಲಿ 'ಉಪನ್ಯಾಸ'ವೆಂದರೆ, 'ನಾವೆಲ್' ಎಂಬುದು ತಮಿಳು ಭಾಷೆಯಲ್ಲಿ, ಅದೇ ರೀತಿ ಮರಾಠಿ - ಗುಜರಾತಿ - ಕನ್ನಡ ಭಾಷೆಗಳಲ್ಲಿ 'ಕಾದಂಬರಿ' ಎಂದೇ ಕರೆಯುತ್ತಾರೆ. ಕನ್ನಡದಲ್ಲಿ 'Novel' ಎಂಬುದಕ್ಕೆ ಸಮಾನಾರ್ಥದ 'ಕಾದಂಬರಿ' ಎಂಬುದನ್ನೇನೋ ಬಳಸುತ್ತೇವೆ ಸರಿ. ಆದರೆ 'Novel' ನ್ನು ಒಳಗೊಂಡ 'Fiction' ಪದಕ್ಕೆ ತತ್ಸಮ 'ಕಲ್ಪನೆ'ಯಂಥ ಪದವಿನ್ನೂ ಬಳಕೆಗೆ ಬರಬೇಕಾಗಿದೆ.

ಕನ್ನಡದಲ್ಲಿ 'ಕಾದಂಬರಿ' ಎಂಬ ಹೆಸರು ಬಂದದ್ದು ಬಾಣನ ಸಂಸ್ಕೃತ ಕೃತಿ 'ಕಾದಂಬರಿ'ಯಿಂದಲೇ ಎಂಬುದು ಅನೇಕರ ಅಭಿಪ್ರಾಯ. ಬಾಣನ ಆ ಕೃತಿಯಲ್ಲಿ 'ಕಾದಂಬರಿ' ಎಂಬ ಹೆಸರಿನ ನಾಯಿಕೆಯಿದ್ದು, ಬಾಣನ ಕಾದಂಬರಿಯಲ್ಲಿ ನಾವೆಲ್‌ದ ಲಕ್ಷಣಗಳಿರುವುದರಿಂದ, ಇದೇ ಹೆಸರಿನಿಂದ 'ನಾವೆಲ್' ಪ್ರಕಾರಕ್ಕೆ ಕನ್ನಡದಲ್ಲಿ ಸಂವಾದಿ ಪದ 'ಕಾದಂಬರಿ' ಎಂದು ಕರೆದಿರಬಹುದೆಂಬ ಗ್ರಹಿಕೆ. ಕನ್ನಡಕ್ಕಿಂತ ಪೂರ್ವದಲ್ಲಿ ಮರಾಠಿ ಭಾಷೆಯಲ್ಲಿ ಕಾದಂಬರಿ ಸಾಹಿತ್ಯಪ್ರಕಾರಕ್ಕೆ 'ಕಾದಂಬರಿ' ಎಂದು ಕರೆದದ್ದುಂಟು. ಕ್ರಿ. ಶ. ೧೮೨೭ ರಲ್ಲಿ ಮುಂಬಯಿ ಸರಕಾರ ಪ್ರಕಟಿಸಿದ 'ಮರಾಠಿ ಭಾಷೆ ಚಾ ಕೋಶ' ಎಂಬ ಮರಾಠಿ ಭಾಷೆಯ ಕೋಶದಲ್ಲಿ ಕಾದಂಬರಿಗೆ 'ಕಲ್ಪಿತಕಥೆ' ಎಂಬರ್ಥವನ್ನು ಕೊಡಲಾಗಿದೆ. ಮುಂದೆ ೧೮೫೪ ರ ಅಕ್ಟೋಬರ ಸಂಚಿಕೆಯಲ್ಲಿ 'ಚಂದ್ರಿಕಾ' ಎಂಬ ಪತ್ರಿಕೆಯು 'ನೀತಿಪರ ಕಾದಂಬರಿ' ಎಂಬ ಶಿರೋನಾಮೆಯಿಂದ ಒಂದು ಧಾರಾವಾಹಿಯಾಗಿ ಪ್ರಕಟಗೊಂಡಿತು. ಕನ್ನಡದಲ್ಲಿ ತಮ್ಮ ಕಲ್ಪಿತ ಕೃತಿಗೆ 'ಕಾದಂಬರಿ' ಎಂದು ಪ್ರಪ್ರಥಮ ಬಾರಿಗೆ ಕರೆದವರೆಂದರೆ ಲಕ್ಷ್ಮಣ ಭೀಮರಾವ್ ಗದಗಕರ. ಕ್ರಿ. ಶ. ೧೮೯೨ ರಲ್ಲಿ ರಚಿಸಿದ 'ಸೂರ್ಯಕಾಂತ' ಕೃತಿಗೆ ಇವರು 'ಕನ್ನಡ ಹೊಸಕಾದಂಬರಿ' ಎಂದು ಕರೆದುಕೊಂಡಿದ್ದಾರೆ. ಅವರೇ ಪೀಠಿಕಾಭಾಗದಲ್ಲಿ "ಜನರಲ್ಲಿ ಓದುವ ಅಭಿರುಚಿ ಹುಟ್ಟದ ಹೊರತು ಯಾವ ಭಾಷೆಯೂ ಉತ್ತಮ ಸ್ಥಿತಿಯಲ್ಲಿ ಬರಲಾರದು. ಇಂಥ ಅಭಿರುಚಿಯನ್ನು ಹುಟ್ಟಿಸಬೇಕಾದರೆ, ಕಾದಂಬರಿ, ಇತಿಹಾಸ, ನಾಟಕ ಮೊದಲಾದ ಸಾಮಾಗ್ರಿಗಳು ಅವಶ್ಯವಾಗಿ ಬೇಕಾಗುತ್ತವೆ. ಈ ಕೊರತೆಯನ್ನು ನೀಗಿಸಲೆಂದೇ ಈ ಚಿಕ್ಕ ಕಾದಂಬರಿಯನ್ನು ಬರೆದಿದ್ದೇನೆ"[೩] ಎಂದು ಹೇಳಿದ್ದಾರೆ.

## ವ್ಯಾಖ್ಯೆ :

'ಕಾದಂಬರಿ'ಯನ್ನು ಸುಲಭವ್ಯಾಖ್ಯೆಗಳಲ್ಲಿ ಹಿಡಿದಿಡುವುದು ಕಷ್ಟಸಾಧ್ಯವಾದ ಕೆಲಸ. ಈ ಪ್ರಯತ್ನದಲ್ಲಿ "ಕಾದಂಬರಿಯೆಂದರೇನೆಂಬುದನ್ನು ವಿವರಿಸಬಹುದೇ ಹೊರತು ಕಾದಂಬರಿಗೊಂದು ವ್ಯಾಖ್ಯೆ ಕೊಡುವುದು ಅಸಾಧ್ಯ. ಕೊಟ್ಟರೆ ಅದು ಅಸಮರ್ಪಕ".[೪] ಎಂದೆನ್ನುವ ಮಾತು ಕಾದಂಬರಿಯ ಸಹಜ ಸಂಕೀರ್ಣತೆಯನ್ನು ಪ್ರತಿಬಿಂಬಿಸುತ್ತದೆ. ಕಾದಂಬರಿಯೆಂಬುದು ದೀರ್ಘಾಲೋಚನೆಗೈಯುವುದೂ ಅಲ್ಲ, ವ್ಯಾಖ್ಯೆಯೂ ಅಲ್ಲ, ವಿವರಣೆಯೂ ಅಲ್ಲ. ಅದೊಂದು ವ್ಯಾವಹಾರಿಕ ಸಾಹಿತ್ಯರೂಪ. ಕಾದಂಬರಿಯನ್ನು ವ್ಯಾಖ್ಯಾನಿಸುತ್ತಾ–

---

೩. ದು. ನಿಂ. ಬೆಳಗಲಿ : ಕನ್ನಡದಲ್ಲಿ ಕಾದಂಬರಿ ಸಾಹಿತ್ಯ (ಕ.ವಿ.ವಿ. ಧಾರವಾಡ). ಪುಟ ೭

೪. ಪಿ. ವ್ಹಿ. ಶಾಸ್ತ್ರಿ(ಅನು) : ಇ. ಎಂ. ಫಾಸ್ಟರ : ಸಾಹಿತ್ಯದ ಪ್ರಕಾರಗಳು. ಪುಟ ೩೦

"ಕಾದಂಬರಿ ಜೀವನದ ಏಕೈಕ ಉಜ್ವಲ ಪುಸ್ತಕ"[೫] ಎಂದು ಹೇಳಿದ್ದು ಕಾದಂಬರಿಯೆಂಬುದು ಜೀವನದ ಪ್ರತಿಬಿಂಬವೆಂಬುದಕ್ಕೆ ಸಾಕ್ಷಿ. ಕಾದಂಬರಿ "ಕರತಲ ರಂಗಭೂಮಿ"[೬] ಎಂಬುದನ್ನೇ ಕುವೆಂಪು ಅವರು "ಕಾದಂಬರಿ ಕರತಲ ರಂಗಭೂಮಿ"[೭] ಎಂದು ಕರೆದಿದ್ದಾರೆ. It (ie novel) is a new art form. It did not exist, except in very rudimentary form, before that modern civilization which began with the renaissance."[೮] ಎಂದು ರಾಲ್ಫ ಫಾಕ್ಸರವರು ಹೇಳಿದರೆ. ಟ್ರಿಲಿಂಗರ ಅಭಿಪ್ರಾಯದಲ್ಲಿ ಕಾದಂಬರಿಯೆಂಬುದು "ನೈತಿಕ ಕಲ್ಪಕತೆಯ ನಮ್ಮ ಕಾಲದ ಅತ್ಯಂತ ಪ್ರಭಾವಿ ಮಾಧ್ಯಮ"[೯] ವಾಗಿದೆ. ಕಾದಂಬರಿಯ ಗಾತ್ರಕ್ಕೆ ಹೆಚ್ಚು ಗಮನಹರಿಸಿದ ಎಂ ಅಬೆಲ್ ಕೇವಲ್ಲಿಯವರು– "ಒಂದಷ್ಟು ಉದ್ದವಾದ ಗದ್ಯಾತ್ಮಕ ಲಘು ಸಾಹಿತ್ಯ"[೧೦] ಎಂದು ವ್ಯಾಖ್ಯೆ ನೀಡುತ್ತ. ಕಾದಂಬರಿ ಸ್ವರೂಪ ಲಕ್ಷಣ. ವಸ್ತು-ವೈವಿಧ್ಯಗಳ ಬಗ್ಗೆ ಗಮನವೀಯಲೇ ಇಲ್ಲ.

"೫೦.೦೦೦ ಶಬ್ದಗಳಿಗಿಂತ ಕಡಿಮೆಯಿಲ್ಲದ ಯಾವುದೇ ಗದ್ಯಾತ್ಮಕ ಲಘುಸಾಹಿತ್ಯವನ್ನು ನಾನು ಕಾದಂಬರಿಯೆಂದು ಕರೆಯುತ್ತೇನೆ"[೧೧] ಎಂದು ಹೇಳಿ. ೫೦.೦೦೦ ಶಬ್ದಗಳಿಂದೊಡಗೂಡಿದ ನೀಳ್ಗತೆ ಕೂಡ ಕಾದಂಬರಿಯಾಗಬಹುದಲ್ಲವೇ ? ಎಂಬಂತಹ ಸಹಜಪ್ರಶ್ನೆಯನ್ನೇ ಎತ್ತುತ್ತಾರೆ. ಒಟ್ಟಿನಲ್ಲಿ ಕಾದಂಬರಿಯನ್ನು ಅತಿವ್ಯಾಪ್ತಿ - ಅವ್ಯಾಪ್ತಿಗೆ ಒಳಪಡದಂತೆ ಒಂದು ವ್ಯಾಖ್ಯೆಯಲ್ಲಿ ಹಿಡಿದಿಡುವುದು ಕಷ್ಟಕರಸಂಗತಿ.

ಕಾದಂಬರಿಯ ವ್ಯಾಪ್ತಿ ಬಹುವಿಸ್ತಾರವಾದುದು. ಈಗಂತೂ ಅದು ಕನ್ನಡದಲ್ಲಿ ರಭಸದ ಪ್ರವಾಹದಂತೆ ಧುಮುಕುತ್ತಿದೆ. ಆದ್ದರಿಂದ ಕಾದಂಬರಿಕಾರ ತುಂಬ ಪ್ರಜ್ಞೆಯಿಂದ ತಾನು ರಚಿಸಹೊರಟ ವಸ್ತುವಿನ ಬಗ್ಗೆ ಸಾಕಷ್ಟು ಯೋಚಿಸಬೇಕು. ಯಾಕೆಂದರೆ ಇದು ಕಾದಂಬರಿಯ ಜೀವಾಳ. ವಸ್ತುವಿಗೆ ತಕ್ಕ ತಾಂತ್ರಿಕ ಅವಕಾಶಗಳು ಇಲ್ಲದಿದ್ದರೆ ಅದು ತನ್ನ ಸಂಪೂರ್ಣ ಅರ್ಥವನ್ನು ಬಿಟ್ಟುಕೊಡುವುದಿಲ್ಲ. ಈ ನಿಟ್ಟಿನಲ್ಲಿ 'ನಿರೂಪಣಾದೃಷ್ಟಿಕೋನ' (Point of view) ದ ಸಮಸ್ಯೆ ತುಂಬ ಮಹತ್ವದ್ದು. ಅಂದರೆ ಕಾದಂಬರಿಯ ಘಟನೆ, ಪಾತ್ರಗಳನ್ನು ಕಾಣುವ ಕಣ್ಣು ಮತ್ತು ನಿರೂಪಿಸುವ ದೃಷ್ಟಿಕೋನ. "ಕಾದಂಬರಿಯ ರಚನಾಕೌಶಲ್ಯದಲ್ಲಿ ನಿರೂಪಣಾ ವಿಧಾನ ತೊಡಕಿನ ಪ್ರಶ್ನೆಯಲ್ಲ. ದೃಷ್ಟಿಕೋನದ ಪ್ರಶ್ನೆಯನ್ನು ಅವಲಂಬಿಸಿದೆ"[೧೨] ಎನ್ನುತ್ತಾರೆ ಹೆನ್ರಿ ಜೇಮ್ಸ್. ಅವರ ಪ್ರಕಾರ ದೃಷ್ಟಿಕೋನವೆಂದರೆ "ಕತೆಗಾರ ತನ್ನ ಕತೆಯೊಂದಿಗೆ ಹೊಂದಿರುವ

---

೫. Heineman : Why the novel matters in phoenib? London, P. 535

೬. ಸಿಪಿಕೆ(ಅನು). ಮರಿಯನ್ ಕ್ರಾಫರ್ಡ್. ವಿಲಿಯಂ ಹೆನ್ರಿ ಹಡ್ಸನ್ : ಸಾಹಿತ್ಯ ಪ್ರವೇಶ. ಪುಟ ೧೨೯

೭. ಹಾಮಾನಾ : ಕುವೆಂಪು ಸಂಕೀರ್ಣ. ಪುಟ ೧೪೪

೮. Ralph Fox : The novel and the people, P. 72

೯. The Liberal Imagination, Mercery book, London, P. 222

೧೦. ಪಿ. ವ್ಹಿ. ಶಾಸ್ತ್ರಿ(ಅನು). ಎಂ. ಅಬೆಲ್ ಕೇವಲ್ಲಿ : ಸಾಹಿತ್ಯ ಪ್ರಕಾರಗಳು. ಪುಟ ೩೩

೧೧. ಪಿ. ವ್ಹಿ. ಶಾಸ್ತ್ರಿ(ಅನು). ಇ. ಎಂ. ಫಾಸ್ಟರ : ಸಾಹಿತ್ಯ ಪ್ರಕಾರಗಳು. ಪುಟ ೩೮

೧೨. Henry James, (ed R.P. Backmurcharles scribner's) : The Art of Novel, 1934

ಸಂಬಂಧ"[೧೩]. ಈ ಸಂಬಂಧ ಮುಖ್ಯವಾಗಿ ಎರಡು ರೀತಿಯದ್ದು. ಮೊದಲನೆಯದು. ಲೇಖಕನೇ ನೇರವಾಗಿ ಕಥೆಯನ್ನು ಹೊರಗಿನಿಂದ ಹೇಳಬಹುದು. ಕಾದಂಬರಿಯ ವಸ್ತು. ಪಾತ್ರ. ಘಟನೆಗಳೆಲ್ಲ ಅವನ ಸೃಷ್ಟಿಯೇ. ಆದ್ದರಿಂದ ಅವೆಲ್ಲವುಗಳ ಸಂಪೂರ್ಣ ಜ್ಞಾನದಿಂದ ಅವನು ಬರೆಯುತ್ತಾನೆ. ಸರ್ವಾಂತರ್ಯಾಮಿಯಾಗಿ ಒಂದು ಬಗೆಯ ಸರ್ವಸಾಕ್ಷಿ ಪ್ರಜ್ಞೆಯಿಂದ ಕಥೆಯನ್ನು ನಿರೂಪಿಸುತ್ತಾನೆ. ಇದು ಕಾದಂಬರಿಯ ರಾಜಮಾರ್ಗ. ನಾವು ಓದುವ ಬಹುಪಾಲು ಕಾದಂಬರಿಗಳೆಲ್ಲ ಇದೇ ರೀತಿಯವು. ವಸ್ತುವಿನ ಹರವು. ವೈವಿಧ್ಯ ವಿಸ್ತಾರವಿದ್ದಾಗ ಈ ಬಗೆಯ ನಿರೂಪಣೆ ಅನಿವಾರ್ಯ. ಎರಡನೆಯದಾಗಿ. ಲೇಖಕ ಕಥೆಯನ್ನು ಯಾವುದಾದರೂ ಒಂದು ಪಾತ್ರದ ದೃಷ್ಟಿಕೋನದ ಮೂಲಕ ಒಳಗಿನಿಂದ ಆತ್ಮಕಥನದ ರೀತಿಯಲ್ಲಿ ನಿರೂಪಿಸಬಹುದು. ವೈಯಕ್ತಿಕ ಸಮಸ್ಯೆ. ಆಧ್ಯಾತ್ಮಿಕ. ನೈತಿಕ ಘರ್ಷಣೆ. ತಪ್ಪೊಪ್ಪಿಗೆ. ಆತ್ಮಶೋಧನೆಗಳಂಥ ವಿಷಯಗಳಿಗೆ ಈ ವಿಧಾನ ಹೆಚ್ಚು ಸೂಕ್ತವಾದುದು. ಪಾತ್ರಗಳು ತಮ್ಮ ಅನುಭವಗಳನ್ನು ತಾವೇ ಹೇಳಿಕೊಳ್ಳುವುದರಿಂದ ಅನುಭವಕ್ಕೊಂದು ವೈಯಕ್ತಿಕ ತೀವ್ರತೆ. ಸಾಮೀಪ್ಯ. ಪ್ರಾಮಾಣಿಕತೆ ಬರುವುದರಲ್ಲಿ ಯಾವ ಸಂಶಯವೂ ಇಲ್ಲ. ಆಧುನಿಕ ಸಂವೇದನೆಯ ಯಾತನೆ. ಏಕಾಕಿತನ. ಅನಾಥಪ್ರಜ್ಞೆಗಳಿಗೆ ಈ ತಂತ್ರ ಸಂವಾದಿ.

ಕಾದಂಬರಿಯ ರಚನೆಗೆ ಈ ಮೇಲೆ ತಿಳಿಸಿದ ಮಾರ್ಗಗಳಿವೇ ಎಂದೇನೂ ಅಲ್ಲ. ಇವೆರಡೂ ವಿಧಾನಗಳು ಬೇರೆ ಬೇರೆ ಹೊಂದಾಣಿಕೆಯಿಂದ ಅಗತ್ಯಕ್ಕೆ ತಕ್ಕಂತೆ ಅನೇಕ ವಿಧಾನಗಳನ್ನು ಹುಟ್ಟಿಸಿಕೊಳ್ಳಬಹುದು. ಇಲ್ಲಿ ಮುಖ್ಯವಾದುದು ಸರ್ವಸಾಕ್ಷಿತ್ವ ಮತ್ತು ಸೀಮಿತದೃಷ್ಟಿಕೋನಗಳ ಮಿಶ್ರಣ. ಲೇಖಕ ತಾನೇ ಕಥೆ ಹೇಳುತ್ತಿದ್ದರೂ. ತನ್ನ ಸರ್ವಸಾಕ್ಷಿತ್ವ ಸರ್ವಾಂತರ್ಯಾಮಿಯ ಸ್ಥಾನವನ್ನು ಬಿಟ್ಟುಕೊಟ್ಟು. ಯುಕ್ತವಾದ ಪಾತ್ರವೊಂದನ್ನು ಆಯ್ದುಕೊಂಡು ಅದನ್ನೇ ಕೇಂದ್ರಪ್ರಜ್ಞೆಯನ್ನಾಗಿ ಬಳಸಿಕೊಳ್ಳಬಹುದು. ಅಂದರೆ ಕಥೆ ಆ ಒಂದು ಪಾತ್ರದ ಕಣ್ಣು - ಕಿವಿ - ಬುದ್ಧಿ - ಭಾವಗಳಿಗೆ ಕಂಡ ರೀತಿಯಲ್ಲಿ ನಿರೂಪಿತವಾಗುತ್ತದೆ. ಇದರಲ್ಲಿ ಲೇಖಕ ತನ್ನ ವ್ಯಕ್ತಿತ್ವ (Personality) ವನ್ನು ಕಳೆದುಕೊಂಡು ನಾಟಕದಲ್ಲಿಯ ಹಾಗೆ ಪಾತ್ರವನ್ನು ಬೆಳೆಸುವುದು. ಇಂಥಲ್ಲಿ ಲೇಖಕನ ಟೀಕೆ - ಟಿಪ್ಪಣಿಗಳಿಗೆ ಅವಕಾಶವಿರಲಾರದು. ಪಾತ್ರದ ಬಗೆಗಿನ ವಿಮರ್ಶೆಯೂ ಇರುವುದಿಲ್ಲ. ಎಲ್ಲವೂ ಕೇಂದ್ರಪ್ರಜ್ಞೆಯ ಪಾತ್ರ ಮಾಡಿಕೊಳ್ಳುವ ಅರ್ಥಕ್ಕೆ ಸೀಮಿತವಾಗಿರುತ್ತದೆ. ಲೇಖಕನ ಒಟ್ಟು ನಿಲುವು ಇಡೀ ಕಾದಂಬರಿಯ ಬಂಧದ ಮೂಲಕ ಮಾತ್ರವೇ ಪ್ರಕಟವಾಗುತ್ತದೆ. ನಿರೂಪಣಾ ವಿಧಾನವನ್ನು ಆಯಾ ಕಾದಂಬರಿಯ ವಸ್ತುವಿನ ಸಂದರ್ಭದಲ್ಲಿಯೇ ನಿರ್ಣಯಿಸಬೇಕಾಗುತ್ತದೆ. ಅದರಂತೆ ವಸ್ತುವಿನ ಬೆಳವಣಿಗೆ. ಶೋಧನೆ. ಮೌಲ್ಯವಿವೇಚನೆಗಳೆಲ್ಲ ತಂತ್ರದ ಜೊತೆಗೆ ತೊಡಕು - ತೊಡಕಾಗಿ ಹೆಣೆದುಕೊಂಡಿರುವುದರಿಂದ. ಕಾದಂಬರಿಯ ಸ್ವರೂಪವನ್ನು ಅವಲೋಕಿಸಿವಾಗ. ಕಾದಂಬರಿಯ ಪರಿಕರಗಳಾದ ವಸ್ತು (Matter) – ಇದುವೇ ' Plot ', ಪಾತ್ರಗಳು (Characters) ಸಂಭಾಷಣೆ. ತಂತ್ರ - ಶೈಲಿಗಳನ್ನು ಕುರಿತಾದ ಚರ್ಚೆಯೂ ಕಾದಂಬರಿ ಮೀಮಾಂಸೆಯಲ್ಲಿ ಮಹತ್ವದ ಹೆಜ್ಜೆಯೇ ಸರಿ.

---

೧೩. Jonathan Cape : The Craft of Fiction; London, 1954, P. 25

ಕಾದಂಬರಿಯ ವಸ್ತು ವೈವಿಧ್ಯಮಯವಾದುದು. ಸಾಮಾಜಿಕ ಸಮಸ್ಯೆಗಳು. ರಾಜಕೀಯ ಸಿದ್ಧಾಂತಗಳು. ನೈತಿಕ ಅಥವಾ ತಾತ್ವಿಕ ಪ್ರತಿಪಾದನೆಗಳು. ವ್ಯಕ್ತಿ - ವ್ಯಕ್ತಿಗಳು. ವ್ಯಕ್ತಿ - ಸಮಾಜದ. ವ್ಯಕ್ತಿ - ದೈವದ ಸಂಬಂಧ - ಸೆಣಸಾಟಗಳು ಇವೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಕಾದಂಬರಿಯ ವಸ್ತುವಿನಲ್ಲಿ ಬಂದು ಹೋಗುವಂಥವುಗಳೇ. " ವಿಶೇಷವಾಗಿ ಕಾದಂಬರಿ ತನ್ನ ಪ್ರಗತಿಯಲ್ಲಿ ಸಾವಿರಾರು ಸಾಮಾನ್ಯ ಮಾನವೀಯ ಭಾವನೆಗಳನ್ನು ಪ್ರೇರಿಸಿದೆ. ಇಂಥ ಸಂದರ್ಭದಲ್ಲಿ ಕಲೆಯನ್ನು ಎಳೆದು ತರುವುದು ಕಾಣುತ್ತದೆ. ಈಗ ಕಾದಂಬರಿ ಒಂದು ಕಲಾಕೃತಿ ಎಂದು ಹೇಳುವ. ಹಾಗೆಂದೇ ಅದನ್ನು ಬೆಲೆಗಟ್ಟುವ ಒಬ್ಬ ವಿಮರ್ಶಕನೂ ಇಲ್ಲ"[೧೪] ಎಂಬ ವೂಲ್ಫರವರ ಮಾತು ತುಂಬ ಸಮಂಜಸವೆನಿಸುತ್ತದೆ. ಸಾಮಾನ್ಯವಾಗಿ ಕಾದಂಬರಿಕಾರರೆಲ್ಲ ಕಾದಂಬರಿಯ ಸ್ವತಂತ್ರ ಸಡಿಲರೂಪದ ಪರವಾಗಿಯೇ ಇದ್ದಾರೆ. ಇವರಿಗೆಲ್ಲ ಟಾಲ್‌ಸ್ಟಾಯ್‌ನ ' War and peace ' ಕಾದಂಬರಿಯ ಶಿಥಿಲ ಶಿಲ್ಪವೇ ಆದರ್ಶವಾಗಿದೆ.

ಒಟ್ಟಿನಲ್ಲಿ ಕಾದಂಬರಿ ಮುಖ್ಯವಾಗಿ ಬದುಕಿನಲ್ಲಿ ನಿತ್ಯ ನಮ್ಮ ಅನುಭವದ ಕಕ್ಷೆಯಲ್ಲಿ ಬಂದುಹೋಗುವ ಜನರನ್ನು. ಸನ್ನಿವೇಶಗಳನ್ನು ಚಿತ್ರಿಸುತ್ತದೆ. ಹಾಗೆ ಚಿತ್ರಿಸುವಾಗ ಆ ಜನರ ಹಾಗೂ ಸನ್ನಿವೇಶಗಳ ಭಾವನಾತ್ಮಕ ಹಾಗೂ ನೈತಿಕ ಬಿಕ್ಕಟ್ಟುಗಳ ಮೇಲೆ ಒತ್ತುಕೊಡುತ್ತದೆ. ಯಾಕೆಂದರೆ ಎಲ್ಲ ಸಾಹಿತ್ಯದ ಹಿರಿಮೆಯೂ ಇಂಥ ಮಹತ್ವದ ಹಾಗೂ ಜಟಿಲವಾದ ಬಿಕ್ಕಟ್ಟುಗಳಿಗೆ ಗೌರವಯುತವಾದ ಪರಿಹಾರ ದೊರಕಿಸುವ, ಇಲ್ಲವೆ ದೊರಕಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುವ. ಅಥವಾ ಅಂಥ ಬಿಕ್ಕಟ್ಟುಗಳ ಅಪರಿಹಾರವನ್ನು ಸೂಚಿಸುವ ಸಾಹಸದಲ್ಲಿದೆ. ಕಾದಂಬರಿಯ ವಸ್ತುವನ್ನು ಹಾಗೂ ಆ ಕಾದಂಬರಿಯ ಹಿರಿಮೆಯನ್ನು ನಿರ್ಧರಿಸುವ ಉತ್ತಮ ಮಾನದಂಡವೇ ವೈಚಾರಿಕತೆ.

" ತಂತ್ರವೆಂದರೆ ಹೆಚ್ಚು ಕಡಿಮೆ ಎಲ್ಲವೂ ಆಗಿದೆ "[೧೫] ಎಂಬ ಶೋರರ್ ಅವರ ಮಾತುಗಳು ಕಾದಂಬರಿಯ ತಂತ್ರದ ವ್ಯಾಪ್ತಿ - ಪರಿವ್ಯಾಪ್ತಿಯನ್ನು ಅಭಿವ್ಯಕ್ತಿಸುತ್ತದೆ. ವಸ್ತು ಹಾಗೂ ಧೋರಣೆಗಳಿಂದ ತಂತ್ರವನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಯಾಕೆಂದರೆ. ಕಾದಂಬರಿಯ ವಸ್ತುವಿನ ಉನ್ನತಿಕೆಯನ್ನು ನಿರ್ಧರಿಸುವುದೇ ತಂತ್ರ. ಇದಕ್ಕೂ ಮುಂದೆ ಹೋಗಿ ಶೋರರ್ ವಸ್ತು ಮತ್ತು ತಂತ್ರ ಎರಡೂ ಒಂದೇ ಎಂಬ ಅಭಿಪ್ರಾಯಕ್ಕೆ ಬರುತ್ತಾನೆ. ಮಹತ್ವದ ವಸ್ತುವಿದ್ದೂ. ಅದರ ಸಾಧ್ಯತೆಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಾರದೆ ಕೃತಿ ಸೋಲುತ್ತದೆ. ಇದಕ್ಕೂ ಹೆಚ್ಚಾಗಿ ವಸ್ತುವಿನಲ್ಲಿ ಅಡಕವಾದ ಮೌಲ್ಯಗಳನ್ನು ಬೆಲೆಗಟ್ಟಿ. ಅವುಗಳ ಬಗ್ಗೆ ತನ್ನ ಬೆಲೆಯನ್ನು -ಧೋರಣೆಗಳನ್ನು ಪ್ರಕಟಿಸುವ ಅನುಕೂಲವನ್ನು ಲೇಖಕ ತಂತ್ರದ ಮೂಲಕವೇ ಸಾಧಿಸಿಕೊಳ್ಳಬೇಕಾಗುತ್ತದೆ. ಅಂದರೆ. ವಸ್ತುವಿನ ಪೂರ್ಣ ಅಭಿವ್ಯಕ್ತಿ ತಂತ್ರವೇ ಎಂದಾಗುತ್ತದೆ. ಆದ್ದರಿಂದ ತಂತ್ರ ಭಾಷೆಯ ಬಳಕೆಯನ್ನು ಒಳಗೊಳ್ಳುತ್ತದೆ.

---

೧೪. The Art of Fiction in the Moment and other essays. The Hogarth Press, London, 1949, P. 93

೧೫. The Art of Fiction in the Moment and other essays. The Hogarth Press, London, 1949, P. 93

ಪಾತ್ರಗಳು (Characters) ಕಾದಂಬರಿಯ ಬಹುಮುಖ್ಯ ಪರಿಕರ. ವಸ್ತು - ಭಾಷೆ - ಪಾತ್ರಗಳು ಕಾದಂಬರಿಯ ಅವಿಭಾಜ್ಯ ಅಂಗಗಳು. ಒಂದರ್ಥದಲ್ಲಿ ಕಾದಂಬರಿಯ ಜೀವ - ಜೀವಾಳವಿದ್ದಂತೆ. ಸಾವಯವ ಸಂವಿಧಾನವುಳ್ಳ ಕಾದಂಬರಿ ಎಷ್ಟೇ ಉಪಕಥೆಗಳನ್ನು ಹೊಂದಿದ್ದರೂ, ಅದರ ಭಾವನಾತ್ಮಕ ಅಥವಾ ನೈತಿಕ ಬಿಕ್ಕಟ್ಟು ಒಂದೇ ಆಗಿರುತ್ತದೆ. ಈ ಬಿಕ್ಕಟ್ಟಿನಿಂದ ಮುಕ್ತಿ ಪಡೆಯುವ ವಿಧಾನದಲ್ಲೇ ಸಮಸ್ಯೆಗೆ ಸಂಬಂಧಿಸಿದ ಮುಖ್ಯ ಪಾತ್ರಗಳೆಲ್ಲ ತಮ್ಮ ವೈಯಕ್ತಿಕತೆಯನ್ನು ಮೆರೆಯುತ್ತವೆ. " ಪಾತ್ರಗಳು ತಮ್ಮ ವ್ಯಕ್ತಿತ್ವ, ವಯಸ್ಸು ಅನುಭವಗಳಿಗೆ ತಕ್ಕಂತೆ ಬೆಳೆಯಬೇಕು. ಅವು ಕಥೆಯ ಅಗತ್ಯಕ್ಕನುಗುಣವಾಗಿ ಬೆಳವಣಿಗೆ ಹೊಂದಬೇಕು. ಪ್ರತಿಪಾತ್ರದ ದೃಷ್ಟಿ ಕಥೆಯ ಉದ್ದೇಶದ ಕಡೆಗೇ ಇರಬೇಕು ".[೧೬] ಲೇಖಕ ಪಾತ್ರಗಳನ್ನು ತನ್ನ ಆಧೀನದಲ್ಲಿರಿಸಿಕೊಳ್ಳಬಾರದು. ಅದಕ್ಕೆಂದೇ " ಪಾತ್ರಗಳು ತಮ್ಮ ವೈಶಿಷ್ಟ್ಯಗಳನ್ನು ಕಾಯ್ದುಕೊಳ್ಳಬೇಕು. ಅವರ ಕ್ರಿಯೆಗಳು ಸ್ವಭಾವಜನ್ಯವಾಗಿರಬೇಕು. ಇಂಥವನು ಹೀಗೆ ಮಾಡಲಾರನೆಂದು ಓದುಗರು ಹೇಳಕೂಡದು. ಇಂಥವನು ಹೀಗೆ ಮಾಡಿಯಾನು ಎಂದು ನಾನು ನಿರೀಕ್ಷಿಸಿದ್ದೆ ಅನ್ನಬೇಕು ಓದುಗ ".[೧೭] ಎಂದಿರುವ ಸಾಮರ್ಸೆಟ್ ಮಾಮ್‌ರ ಮಾತುಗಳು ಪಾತ್ರಗಳನ್ನು (Characters) ಕುರಿತಾದ ಉತ್ತಮ ಪ್ರತಿಕ್ರಿಯೆಗಳಾಗಿವೆ.

ಈವರೆಗೆ ಚರ್ಚಿಸಲಾದ ಕಾದಂಬರಿಯ ಸ್ವರೂಪವನ್ನು ಸಂಗ್ರಹರೂಪದಲ್ಲಿ, ಅದರ ಲಕ್ಷಣಗಳನ್ನು ಈ ಕೆಳಗಿನಂತೆ ಹಿಡಿದಿಡಬಹುದು.[೧೮]

೧. ಕಾದಂಬರಿ ಕಲ್ಪನೆಯ ಒಂದು ಮಹತ್ವಪೂರ್ಣವಾದ ಆವಿಷ್ಕಾರವಾದ್ದರಿಂದ, ಕಲ್ಪನೆಯ ಉದ್ದೇಶಗಳಾದ ಪರಿಷ್ಕಾರ ಮತ್ತು ಸಂಜ್ಞಾನ ಅದರ ಧ್ಯೇಯಗಳಾಗಿವೆ.

೨. ಆದರ್ಶ ಮತ್ತು ವಸ್ತುಗಳ ವಿಶಿಷ್ಟ ಸಂಯೋಗದಲ್ಲಿ ಕಾದಂಬರಿ ಹುಟ್ಟಿಕೊಳ್ಳುತ್ತದೆ. ಆದರೆ ಕಾದಂಬರಿ ವಾಸ್ತವದ ಅನುಕರಣೆಯಲ್ಲ. ಅದಕ್ಕಿಂತ ಭಿನ್ನವಾದ ರಚನೆ. ಅದನ್ನು ಒಂದು ವ್ಯವಸ್ಥಿತವಾದ ಮಾದರಿಯೆಂದು ನೋಡಬೇಕೇ ಹೊರತು ಅನುಕೃತಿಯೆಂದಲ್ಲ.

೩. ಕಾದಂಬರಿಯ ಗಮನ ಐತಿಹಾಸಿಕ - ವರ್ತಮಾನದತ್ತ ಇರುವುದರಿಂದ ಅದು ಆದರ್ಶಭೂತದಲ್ಲಿಯೇ ನಂಬಿಗೆಯನ್ನಿಟ್ಟ ಮಹಾಕಾವ್ಯದಿಂದ ಭಿನ್ನ.

೪. ಕಾದಂಬರಿ ಮಾನವನ ಮನಸ್ಸು ಮತ್ತು ಅವನಿರುವ ಜಗತ್ತು ಇವುಗಳ ಪರಸ್ಪರ ಸಂಬಂಧದ ಪರಿಣಾಮವಾದುದರಿಂದ ವಾಸ್ತವ ಮತ್ತು ಆದರ್ಶ - ಇವುಗಳ ಕ್ರಿಯೆ - ಪ್ರತಿಕ್ರಿಯೆ ಅದರ ಜೀವಾಳವಾಗಿರುತ್ತದೆ. ಒಂದು ಕೃತಿಯ ವೈಯಕ್ತಿಕತೆ ಅದು ವಾಸ್ತವ ಮತ್ತು ಆದರ್ಶಗಳ ಬಗ್ಗೆ ಹೊಂದಿದ ತಿಳಿವಳಿಕೆ ಮತ್ತು ಈ ತಿಳಿವಳಿಕೆ ಅಭಿವ್ಯಕ್ತಿ ಹೊಂದುವ ರೀತಿ ಇವುಗಳನ್ನು ಅವಲಂಬಿಸಿದೆ.

---

೧೬. ಜೆ. ಪಿ. ದೊಡಮನಿ : ಶರಣರ ಕುರಿತ ಕನ್ನಡ ಕಾದಂಬರಿಗಳು; ಪುಟ ೧೪

೧೭. ಪಿ. ವ್ಹಿ. ಶಾಸ್ತ್ರಿ(ಅನು), ಸಾಮರ್ಸೆಟ್ ಮಾಮ್ : ಸಾಹಿತ್ಯದ ಪ್ರಕಾರಗಳು. ಪುಟ ೪೯

೧೮. ಜಿ. ಎಸ್. ಆಮೂರ : ಕನ್ನಡ ಕಥನ ಸಾಹಿತ್ಯ : ಕಾದಂಬರಿ. ಪುಟ ೧೫

೫. ಬದುಕಿನ ಅರ್ಥವನ್ನು ಪ್ರಕಟಗೊಳಿಸುವ ಮೂಲಕ ಕಾದಂಬರಿ ಸಾಮಾಜಿಕ ಅವಶ್ಯಕತೆಗಾಗಿ ಬಂದರೂ ಅದು ಇರುವಿಕೆಯಿಂದ ಓದುಗನನ್ನು ಬೇರ್ಪಡಿಸುವ ಮೂಲಕ ಅವನಿಗೆ ಪರಕೀಯತೆಯ ಅನುಭವವನ್ನು ತಂದುಕೊಡುತ್ತದೆ. ತನ್ನ ಕಲಾತ್ಮಕತೆಯನ್ನು ತಾನೇ ಎತ್ತಿ ತೋರಿಸುವುದು ಕಾದಂಬರಿಯ ಲಕ್ಷ್ಯ ಲಕ್ಷಣಗಳಲ್ಲೊಂದು.

೬. ಸೃಜನಶೀಲತೆ ಮತ್ತು ಮೌಲ್ಯಾನ್ವೇಷಣೆಗಳು ಕಾದಂಬರಿಯ ರೀತಿಯನ್ನು ನಿರ್ಧರಿಸುತ್ತವೆ. ಸೂಕ್ಷ್ಮಾತ್ಮಕ ವೈಚಾರಿಕತೆ ಅದರ ಇನ್ನೊಂದು ಬಹುಮುಖ್ಯ ಲಕ್ಷಣ.

೭. ಕಾದಂಬರಿಯ ಯಾವುದಾದರೊಂದು ಪರಿಕರ ಅದಷ್ಟೇ ಮುಖ್ಯವೆಂದು ಹೇಳಲಾಗದು. ಇಲ್ಲಿ ಪರಸ್ಪರ ಅವಿನಾಭಾವ ಸಂಬಂಧ ಹೊಂದಿವೆ.

೮. ಕಾದಂಬರಿಯ ವಿಮರ್ಶೆ ಅದರ ವಿಶಿಷ್ಟ ಸ್ವರೂಪದ ಅರಿವಿನಿಂದ ಕೂಡಿರಬೇಕು. ಇಲ್ಲದೆ ಹೋದರೆ ಅದರ ಯಾವುದೊಂದು ಅಂಗದ ಬಗ್ಗೆ ಅವಾಸ್ತವ ಗಮನಕೊಡುವ ಮೂಲಕ ಅದು ಕೃತಿಯ ಬಗ್ಗೆ ಅಸತ್ಯ ಅಥವಾ ಅಪೂರ್ಣ ತಿಳಿವಳಿಕೆಗೆ ಕಾರಣವಾಗುತ್ತದೆ.

ಕನ್ನಡ ಕಾದಂಬರಿಯ ಮೂಲಸ್ವರೂಪದ ಬಹುಮುಖ್ಯ ಲಕ್ಷಣವೆಂದರೆ ಪರಿವರ್ತನೆಯ ಪ್ರಕ್ರಿಯೆಯಲ್ಲಿ ಗಾಢವಾಗಿ ತೊಡಗಿಸಿಕೊಳ್ಳುವಿಕೆ. ತನ್ನ ಪ್ರಾರಂಭದಿಂದಲೂ ಅದು ಪರಿವರ್ತನೆಯ ಎರಡು ಆಯಾಮಗಳಲ್ಲಿ ಅಂದರೆ ವ್ಯಕ್ತಿ ಹಾಗೂ ಸಮಾಜಗಳೆರಡರಲ್ಲೂ. ನಡೆದ ಪರಸ್ಪರ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಲೇ ಬಂದಿದೆ. ನವೋದಯ ಕಾಲದಲ್ಲಿ ಅದರ ಒತ್ತು ಪರಿಸರದ ಮೇಲಿದ್ದರೆ. ನವ್ಯಕಾಲದಲ್ಲಿ ಅದು ಪ್ರಜ್ಞೆಯತ್ತ ತಿರುಗಿತು. ಆದರೆ ಕನ್ನಡ ಕಾದಂಬರಿ. ಪ್ರಜ್ಞೆ-ಪರಿಸರಗಳ ಅನ್ಯೋನ್ಯತೆಯನ್ನು ಎಂದೂ ಅಲಕ್ಷಿಸಿಲ್ಲ. ತನ್ನ ಬೆಳವಣಿಗೆಯ ಎಲ್ಲ ಸ್ತರಗಳಲ್ಲಿಯೂ ಅದರೆದುರು ಪಾಶ್ಚಾತ್ಯ ಮಾದರಿಗಳಿದ್ದರೂ ಅದು ಪ್ರಕೃತಿಗಳನ್ನು ಸೃಷ್ಟಿಸುವುದರಲ್ಲಿ ತೃಪ್ತಿಪಡಲಿಲ್ಲ. ನವ್ಯರ ಕೆಲ ಕಾದಂಬರಿಗಳು ಮಾತ್ರ ಈ ಮಾತಿಗೆ ಅಪವಾದವೆನಿಸಿವೆ. ಕಳೆದ ನೂರು ವರ್ಷಗಳಲ್ಲಿ ಭಾರತದಲ್ಲಿ ನಡೆದ ಅತ್ಯಂತ ವ್ಯಾಪಕವಾದ ಪ್ರಕ್ರಿಯೆಯೆಂದರೆ ಆಧುನೀಕರಣದ ಪ್ರಕ್ರಿಯೆ. ಈ ಪ್ರಕ್ರಿಯೆ ರಾಜಕೀಯ. ಆರ್ಥಿಕ. ಸಾಮಾಜಿಕ. ಸಾಂಸ್ಕೃತಿಕವಲ್ಲದೆ ವೈಯಕ್ತಿಕ ಆಯಾಮಗಳು ಕನ್ನಡ ಕಾದಂಬರಿಯಲ್ಲಿ ತನ್ನೆಲ್ಲ ಸಂಕೀರ್ಣತೆಯೊಂದಿಗೆ ಮೂಡಿಬಂದಿವೆ. ಇದು ಭಾರತೀಯ ಎಲ್ಲ ಭಾಷೆಗಳಲ್ಲಿ ಏಕರೂಪವಾಗಿಲ್ಲ. "ಸ್ವಾತಂತ್ರ್ಯೋತ್ತರ ಹಿಂದೀ ಕಾದಬಂರಿ ವಾಸ್ತವವಾದಕ್ಕಿಂತ ಹೆಚ್ಚಾಗಿ ನವ - ರಮ್ಯವಾದದಿಂದಲೇ ಪ್ರಭಾವಿತವಾಗಿದೆಯೆಂದು ನಾಮರಸಿಂಗ್"[೧೯] ಅಭಿಪ್ರಾಯಪಟ್ಟರೆ. ಮರಾಠಿ ಸಾಹಿತ್ಯದಲ್ಲಿ ಯಮುನಾ ಪರ್ಯಟನದಿಂದ ಪ್ರಾರಂಭವಾದ ವಾಸ್ತವವಾದ. ಅವಾಸ್ತವ ಕಾದಂಬರಿಗಳ ಪ್ರಾಬಲ್ಯದಿಂದ ಗುಪ್ತವಾದದ್ದು ೧೯೬೦ ರ ಸುಮಾರಿಗೆ ಪುನಃ ತನ್ನ ಶಕ್ತಿಯನ್ನು ಪಡೆದುಕೊಂಡಿತು ಎಂದು ಬಾಲಚಂದ್ರ ನೇವಾಡೆ[೨೦] ಹೇಳುತ್ತಾರೆ. ಎಂ. ಎಸ್. ಪತಿಯವರ ಅಭಿಪ್ರಾಯದಲ್ಲಿ. ಓರಿಯಾ

---

೧೯. Indian Literature Since Independence, Sahitya Academi, New Delhi; 1973, P. 81

೨೦. ಮರಾಠಿ ಕಾದಂಬರಿ: ಪ್ರೇರಣಾ ವ-ಸ್ವರೂಪ 'ಅನುಷ್ಟುಬ್' ಸಪ್ಟಂಬರ್-ಅಕ್ಟೋಬರ. ೧೯೮೦. ಪುಟ ೫೦

ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿ ಅಭಿವ್ಯಕ್ತಿಗೊಳಿಸಿದ ಆಧುನಿಕತೆಯ ಅನುಭವ ತೀರ ತೆಳುವಾದುದು. ಓರಿಯಾ ಲೇಖಕರಲ್ಲಿ ಭವಿಷ್ಯದ ದರ್ಶನವಾಗಲಿ. ಸಂಪ್ರದಾಯದ ಬಗ್ಗೆ ಸೃಜನಶೀಲವಾದ ಶ್ರದ್ಧೆಯಾಗಲಿ ಇರದೇ ಹೋದುದು ಇದಕ್ಕೆ ಕಾರಣವೆಂದು ಪತಿಯವರು ಅಭಿಪ್ರಾಯಪಡುತ್ತಾರೆ.[೨೧]

**ಕನ್ನಡದಲ್ಲಿ ಕಾದಂಬರಿಯ ಬೆಳವಣಿಗೆ :**

ಕಾದಂಬರಿ. ಸಣ್ಣಕಥೆ. ಪಾಶ್ಚಾತ್ಯ ಸಾಹಿತ್ಯದಿಂದ ಕನ್ನಡಕ್ಕೆ ಬಂದವು ಎಂದು ಹೇಳುವಷ್ಟರಮಟ್ಟಿಗೆ ಇಂಗ್ಲೀಷಿನಿಂದ ಪ್ರಭಾವಿತಗೊಂಡಿವೆ. ಆದರೆ. ಇಂಗ್ಲೀಷ ಸಾಹಿತ್ಯದ ಪ್ರಭಾವ ಬೀಳುವ ಮೊದಲೇ 'ಕಾದಂಬರಿ' ಎನ್ನಬಹುದಾದ ಮೂರು ಕೃತಿಗಳು ರಚಿತವಾದವು ಎಂದು ಕವಿಚರಿತೆಕಾರರು ಹೇಳುತ್ತಾರೆ.[೨೨] ಯಾದವನ 'ಕಲಾವತೀ ಪರಿಣಯ' (ಕ್ರಿ. ಶ. ಸುಮಾರು ೧೮೧೫). ಮುಮ್ಮಡಿ ಕೃಷ್ಣರಾಜರ 'ಸೌಗಂಧಿಕಾ ಪರಿಣಯ' (ಕ್ರಿ. ಶ. ಸುಮಾರು ೧೮೨೧) ಮತ್ತು ಕೆಂಪುನಾರಾಯಣನ 'ಮುದ್ರಾಮಂಜೂಷ' (ಕ್ರಿ. ಶ. ಸುಮಾರು ೧೮೨೩). ಮೊದಲೆರಡು ಅದ್ಭುತ ರಮ್ಯಕಥೆಗಳಾದಂತೆಯೇ. ಮಾಟಮಂತ್ರಗಳ ಪ್ರವೇಶವೂ ಉಂಟು. 'ಕಲಾವತೀ ಪರಿಣಯ'ದಲ್ಲಿ ಒಳ್ಳೆಯ ಕಥಾನಕವಿದೆ: ಪಾತ್ರಗಳ ನಿರೂಪಣೆಯಲ್ಲಿ ಸಹಜತೆಯೂ ಇದೆ. 'ಸೌಗಂಧಿಕಾ ಪರಿಣಯ'ದ ಭಾಷೆ ಹೊಸಗನ್ನಡಕ್ಕೆ ಹತ್ತಿರವಿದೆ. 'ಮುದ್ರಾಮಂಜೂಷ' ಸಂಸ್ಕೃತದ 'ಮುದ್ರಾರಾಕ್ಷಸ' ನಾಟಕದ ಆಧಾರದ ಮೇಲೆ ರಚಿತವಾದುದು. ೧೮೭೫ ರಲ್ಲಿ ರಚಿತವಾದ ಗಂಗಾಧರ ಮಡಿವಾಳೇಶ್ವರ ತುರಮರಿಯವರ 'ಬಾಣ' ಕಾದಂಬರಿ ಶೈಲಿಗೆ ತೀರ ಹತ್ತಿರವಾದುದು.

ಕ್ರಿ. ಶ. ಸುಮಾರು ೧೮೮೫ ರಲ್ಲಿ ಬಿ. ವೆಂಕಟಾಚಾರ್ಯರು ಬಂಗಾಲಿ ಕಾದಂಬರಿ 'ದುರ್ಗೇಶನಂದಿನಿ'ಯನ್ನು ಕನ್ನಡಕ್ಕೆ ಅನುವಾದಿಸಿದಾಗ ಅವರು 'ನಾವೆಲ್' ಎಂಬ ಇಂಗ್ಲೀಷ ಪದವನ್ನೇ ಕನ್ನಡಕ್ಕೂ ಇರಿಸಿದರು. ಇದನ್ನೇ ಕುರಿತು ತಮ್ಮ ಪುಸ್ತಕದ ಪ್ರಸ್ತಾವನೆಯಲ್ಲಿ " A novel in the sense, it is understood in English is no familiar to the canarese speaking public "[೨೩] ಎಂದಿದ್ದಾರೆ. ಇದೇ ವೇಳೆಗೆ ಮೈಸೂರು ಪ್ರದೇಶದಲ್ಲಿ 'ಕಾದಂಬರಿ'ಯನ್ನು 'ನಾವೆಲ್' ಎಂದೇ ಕರೆಯುತ್ತಿದ್ದರು. ೧೯೨೦ ರ ವರೆಗೆ ಈ ಪ್ರದೇಶದಲ್ಲಿ ಈ ಪದ ಬಳಕೆಯಲ್ಲಿರಲೇ ಇಲ್ಲ. ಆದರೆ ಈಗ ಕರ್ನಾಟಕದಾದ್ಯಂತ 'ಕಾದಂಬರಿ' ಎಂಬುದು ಜನಪ್ರಿಯ ಪದವಷ್ಟೇ ಅಲ್ಲದೆ ಜನಪ್ರಿಯ ಸಾಹಿತ್ಯ ಪ್ರಕಾರವೂ ಕೂಡ.

ಕಾದಂಬರಿ ಸಾಹಿತ್ಯವನ್ನು ಅದರ ಬೆಳವಣಿಗೆ. ಕಾಲಮಾನ ಹಾಗೂ ಅದರ ವ್ಯಾಪಕತೆಯನ್ನು ಆಧರಿಸಿ ಪ್ರಮುಖವಾಗಿ ಮೂರು ಹಂತಗಳಲ್ಲಿ ಗುರುತಿಸಬಹುದು.

---

೨೧. M. S. Pati : The Situations of the Oria novel, The Literary Criteria xxi, 1&2: 1986, P. 37

೨೨. ಎಲ್. ಎಸ್. ಶೇಷಗಿರಿರಾವ್ : ಹೊಸಗನ್ನಡ ಸಾಹಿತ್ಯ. ಪುಟ ೧೧೩

೨೩. ದು. ನಿಂ. ಬೆಳಗಲಿ : ಕನ್ನಡದಲ್ಲಿ ಕಾದಂಬರಿ ಸಾಹಿತ್ಯ. ಪುಟ ೮

## ಆರಂಭ ಕಾಲ :

ಹೊಸಗನ್ನಡದಲ್ಲಿ ಕಾವ್ಯಕ್ಕಿಂತ ಮೊದಲೇ ಕಾದಬಂರಿ ಕಾಣಿಸಿಕೊಂಡಿತೆನ್ನಬಹುದು. ಇದು ಚರಿತ್ರಾದೃಷ್ಟಿಯಿಂದ ತುಂಬ ಗಹನವಾದ ವಿಚಾರ. "೧೮೭೫ ರಿಂದ ೧೯೩೦ ರ ವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯಕಾಲವೆಂದು ಗುರುತಿಸಲಾಗಿದೆ".[೨೪] ಈ ಅವಧಿಯಲ್ಲಿ ವಿಶಾಲವಾದ ಕಾದಂಬರಿ ಸಾಹಿತ್ಯ ಕನ್ನಡಕ್ಕೆ ಹರಿದುಬಂದುದಷ್ಟೇ ಅಲ್ಲದೆ. ಈ ಘಟನೆಯ ಹಿಂದಿನ ಬಹುಮುಖ್ಯ ಪ್ರೇರಣೆ ಇಂಗ್ಲೀಷ ಶಿಕ್ಷಣದಿಂದ ನೇರವಾಗಿ ಬಂಗಾಲಿ ಹಾಗೂ ಮರಾಠಿಗಳಂಥ ಭಾರತೀಯ ಭಾಷೆಗಳಿಂದ ಹರಿದು ಬಂದ ಪಾಶ್ಚಾತ್ಯ ಪ್ರಭಾವವೆಂಬುದು ಸಾಹಿತ್ಯ- ಚರಿತ್ರೆಯಲ್ಲಿ ಅನೇಕ ಸಲ ದಾಖಲಾದ ಮಾತು. ವಿಪುಲವಾದ ಈ ಅವಧಿಯ ಕಾದಂಬರಿಗಳನ್ನು ಭಾಷಾಂತರ ಕಾದಂಬರಿ ಯುಗ. ಸ್ವತಂತ್ರ ಕಾದಂಬರಿ ಯುಗವೆಂದು ವಿಭಜಿಸಿ ಅವಲೋಕಿಸಿದರೆ ಹೆಚ್ಚು ಔಚಿತ್ಯಪೂರ್ಣವೆನಿಸುತ್ತದೆ.

ಕ್ರಿ. ಶ. ಸುಮಾರು ೧೮೩೦ ರಿಂದ ಇಂಗ್ಲೀಷ ಶಿಕ್ಷಣಕ್ರಮವು ನಾಡಿನಲ್ಲಿ ಜಾರಿಯಾಗತೊಡಗಿತು. ಇದರ ಪರಿಣಾಮವಾಗಿ ಕನ್ನಡದಲ್ಲಿ ಶೇಕ್ಸಪಿಯರನ ನಾಟಕಗಳು ಅನುವಾದಗೊಂಡವೇ ಹೊರತು. ಕನ್ನಡಕ್ಕೆ ಅನುವಾದ ಕಾದಂಬರಿಗಳು ಬಂದದ್ದು ಬಂಗಾಲಿ. ಮರಾಠಿ ಹಾಗೂ ತೆಲುಗಿನಿಂದಲೇ. ಆದರೆ ಜಾನ್ ಬನ್ಯನ್‌ನ "The Pilgrims Progress" ಎಂಬುದು ೧೮೪೭ ರಲ್ಲಿ ಕನ್ನಡದ 'ಯಾತ್ರಿಕನ ಸಂಚಾರ'ವನ್ನಾಗಿ ಮಂಗಳೂರಿನ ಬಾಸೆಲ್ ಮಿಶನ್‌ನಲ್ಲಿ ಧರ್ಮಪ್ರಚಾರಕರಾಗಿದ್ದ ಜಿ. ವೀಗಲ್‌ರು ಮೊದಲ ಭಾಗವಾಗಿ ಅನುವಾದಿಸಿದರೆ, ಇದರದೇ ಎರಡನೇ ಭಾಗವು ಕ್ರಿ. ಶ. ೧೮೪೯ ರಲ್ಲಿ ಬಂದಿತು. ಹೊಸಗನ್ನಡದ ಪ್ರಥಮ ಭಾಷಾಂತರ ಕಾದಂಬರಿಯೆಂದರೆ ಎಸ್. ವಿ. ಕೃಷ್ಣಸ್ವಾಮಿ ಅಯ್ಯಂಗಾರ್‌ರು ೧೮೫೭ ರಲ್ಲಿ ಡೇನಿಯಲ್ ಡೇಪೋನನ 'ರಾಬಿನ್‌ಸನ್ ಕ್ರೂಸೋ' ಎಂಬುದನ್ನು ಅನುವಾದಿಸಿದ್ದು. ಖಚಿತವಾದ ಕಾದಂಬರಿ ಸ್ವರೂಪವನ್ನು ಹೊತ್ತು ಬಂಗಾಲಿಯಿಂದ ಅನುವಾದಗೊಂಡ ಕೃತಿಯೆಂದರೆ. ಸುಮಾರು ೧೮೮೫ ರಲ್ಲಿ ಬಿ. ವೆಂಕಟಾಚಾರ್ಯರು ಅನುವಾದಿಸಿದ ಬಂಕಿಮಚಂದ್ರ ಚಟರ್ಜಿಯವರ 'ದುರ್ಗೇಶನಂದಿನಿ'ಯೆಂಬುದು.

## ಭಾಷಾಂತರ ಕಾದಂಬರಿ ಯುಗ :

ಇಂಗ್ಲೀಷ ಭಾಷೆಯು ಶಿಕ್ಷಣ. ಸಾಹಿತ್ಯ. ಕನ್ನಡ ಕಾದಂಬರಿಯ ಮೇಲೆ ಸಾಕಷ್ಟು ಪ್ರಭಾವ ಬೀರಿದೆಯೆಂಬುದಕ್ಕೆ ಎರಡು ಮಾತಿಲ್ಲ. ಕನ್ನಡ ಕಾದಂಬರಿ ಕ್ಷೇತ್ರ ತನ್ನ ಮೈ- ಮನಸ್ಸುಗಳನ್ನು ಬಿಚ್ಚಿಕೊಳ್ಳುವುದು ಭಾಷಾಂತರ ಪ್ರಕ್ರಿಯೆಯಿಂದಲೇ. ಒಂದು ದೃಷ್ಟಿಯಲ್ಲಿ ಇಂಗ್ಲೀಷ ಪ್ರೇರಣೆಯಾದರೆ. ದೇಶೀಭಾಷೆಗಳಾದ ಮರಾಠಿ - ಬಂಗಾಲಿಗಳು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಮರೆಯಲಾರದ ಪ್ರೇರಣೆಗಳು. ಆದರೆ ಈ ಪ್ರಭಾವ ಪ್ರೇರಣೆಯ ಸ್ವರೂಪ ಮಾತ್ರ ಇನ್ನೂ ಸ್ಪಷ್ಟವಾಗಿಲ್ಲ. ಕಾರಣ ಇದು ಸಾಹಿತ್ಯಕ್ಕಷ್ಟೇ ಅಲ್ಲದೆ ರಾಜಕೀಯ ಹಾಗೂ ಸಾಂಸ್ಕೃತಿಕ ಮುಖಾಮುಖಿಯ ಸಮಸ್ಯೆಯೂ ಆಗಿದೆ. ಬಿ. ವೆಂಕಟಾಚಾರ್ಯರು ವಂಗ

---

೨೪. ಜಿ. ಎಸ್. ಆಮೂರ : ಕನ್ನಡ ಕಥನಸಾಹಿತ್ಯ : ಕಾದಂಬರಿ. ಪುಟ ೧೯

ಕಾದಂಬರಿಗಳನ್ನು ಭಾಷಾಂತರಿಸುವುದರ ಮುಖಾಂತರ ಕನ್ನಡಕ್ಕೆ ಕಾದಂಬರಿಗಳನ್ನು ಪರಿಚಯ ಮಾಡಿಕೊಟ್ಟರು. ಬಂಕಿಮಚಂದ್ರ ಚಟರ್ಜಿಯವರ 'ದುರ್ಗೇಶನಂದಿನಿ'. 'ಆನಂದಮಠ'. 'ದೇವಿಚೌದುರಾಣಿ'. 'ವಿಷವೃಕ್ಷ'. 'ರಜನಿ'. 'ಇಂದಿರಾ' –ಗಳಂಥ ವೈವಿಧ್ಯಮಯ ಕಾದಂಬರಿಗಳನ್ನು ಭಾಷಾಂತರಿಸುತ್ತ. ಕನ್ನಡಕ್ಕೆ ಸುಮಾರು ೫೦ ಕ್ಕೂ ಹೆಚ್ಚು ಕಾದಂಬರಿಗಳನ್ನು ನೀಡಿ ಕಾದಂಬರಿಕ್ಷೇತ್ರದ ಆಳ - ಅಗಲವನ್ನು ವಿಸ್ತಾರಗೊಳಿಸಿದರು. ಇವರ ಕಾದಂಬರಿಗಳು ಕನ್ನಡ ಕಾದಂಬರಿ ಕ್ಷೇತ್ರದ ಮೇಲೆ ತೀವ್ರತರ ಪ್ರಭಾವ ಬೀರಿದವು.

ಈ ಅವಧಿಯಲ್ಲಿ ಗಳಗನಾಥರ ಹೆಸರು ಚಿರಸ್ಥಾಯಿಯಾದುದು. ಮರಾಠಿ ಭಾಷೆಯ ಆಪ್ಟೆಯವರ ಅನೇಕ ಕಾದಂಬರಿಗಳನ್ನು ಕನ್ನಡಕ್ಕೆ ಭಾಷಾಂತರಿಸಿ - ರೂಪಾಂತರಿಸಿದರು. ಆಪ್ಟೆಯವರ 'ಗಡ ಆಲಾ ಪಣ ಸಿಂಹ ಗೇಲಾ'ವನ್ನು 'ಕಮಲ ಕುವರಿ'. ಯಾಗಿಸಿದರೆ. ನೇತಾಜಿ ಪಾಲಕರ ಮರಾಠರ ಅಭ್ಯುದಯ 'ಛತ್ರಪತಿ' ಎಂಬ ಇನ್ನೂ ಅನೇಕ ಕಾದಂಬರಿಗಳನ್ನು ಭಾಷಾಂತರಿಸಿದರು. ಇವರು ಒಟ್ಟು ಸುಮಾರು ೨೦ ಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿರುವುದಲ್ಲದೆ. ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಖಚಿತತೆಯನ್ನು ಒದಗಿಸಿಕೊಟ್ಟ ದಿಗ್ಗಜರು. "ಕ್ರಿ. ಶ. ಸುಮಾರು ೧೮೯೯ ರಷ್ಟೊತ್ತಿಗೆ ಬೆನಗಲ್ ರಾಮರಾಯರು ತೆಲುಗಿನ ವೀರೇಶಲಿಂಗಂ ಪಂತಲು ಅವರ ವೈವಿಧ್ಯಕಥೆಗಳಾದ 'ರಾಜಶೇಖರ ಚರಿತ್ರೆ'. 'ಸತ್ಯವತಿ ಚರಿತ್ರೆ' 'ಸತ್ಯರಾಜಾ ಪೂರ್ವದೇಶಯಾತ್ರೆಗಳು' –ಎಂಬವುಗಳನ್ನು ಕನ್ನಡಕ್ಕೆ ಭಾಷಾಂತರಿಸಿದರು. ಗೋಡೆ ಜೀವಣರಾಯರು ಜಾನ್‌ಸನ್‌ನ ಕಾದಂಬರಿ 'ರಾಸೆಲಾಸ್' ವನ್ನು ಕನ್ನಡಿಸಿದರು".[೨೫] ಇಷ್ಟೇ ಅಲ್ಲದೆ "ಮೇರಿ ಕೊರೆಲಿಯ 'ದಿ ಟ್ರಷರ್ ಆಫ್ ಹೆವನ್' ಎಂಬುದನ್ನು 'ನಿಷ್ಕಾಮ ಪ್ರೇಮ' ವನ್ನಾಗಿ ಕನ್ನಡಿಸಿದರು".[೨೬] ಇಂಗ್ಲೀಷ ಶಿಕ್ಷಣವನ್ನು ಪಡೆದು ಪಾಶ್ಚಾತ್ಯರ ಸಂಪರ್ಕದಲ್ಲಿ ಬಂದ ಎಂ. ಎಸ್. ಪುಟ್ಟಣ್ಣ ಪ್ರಜ್ಞಾಪೂರಕವಾಗಿಯೇ 'ಪಾಶ್ಚಾತ್ಯ ಕೀಟಗಳು' ಮತ್ತು 'ಪ್ರಾಗ್ದೇಶಿಯ ಕ್ರಿಮಿ' ಗಳಿಂದ ಹುಟ್ಟಿದ ಪರಕೀಯ ಸಂಸ್ಕೃತಿಯ ದುಷ್ಪರಿಣಾಮಗಳನ್ನು ವಿರೋಧಿಸಿದರೆ. ಇದರ ನೇರ ಅನುಭವದ ಕೊರತೆಯಿಂದ ಗಳಗನಾಥರು ಸ್ವಸಂಸ್ಕೃತಿಯ ಸಮರ್ಥನೆಗೆ ತೊಡಗಿದರೆಂದೇ ಹೇಳಬಹುದು. ಒಟ್ಟಿನಲ್ಲಿ ಈ ಕಾಲಾವಧಿಯ ಲೇಖಕರು ಎದುರಿಸಬೇಕಾದ ಸಮಸ್ಯೆಗಳನ್ನು ಮುರುಘಾರಾಧ್ಯರು (ಶೃಂಗಾರ ಚಾತುರ್ಯೋಲ್ಲಾಸಿನಿಯ ಕರ್ತೃ) ಚೆನ್ನಾಗಿ ಗುರುತಿಸಿದರು.

## ಸ್ವತಂತ್ರ ಕಾದಂಬರಿ ಯುಗ :

ಕನ್ನಡದಲ್ಲಿ ಮೊಟ್ಟ ಮೊದಲ ಸ್ವತಂತ್ರ ಕಾದಂಬರಿ ೧೮೯೯ ರಲ್ಲಿ ಪ್ರಕಟಗೊಂಡ ಗುಳವಾಡಿ ವೆಂಕಟರಾಯರ 'ಇಂದಿರಾಬಾಯಿ' ಎಂದು ಹೇಳುವುದುಂಟು. ೧೮೯೨ ರಲ್ಲಿ ಪ್ರಕಟವಾದ ಲಕ್ಷ್ಮಣರಾವ್ ಗದಗಕರ ಅವರ 'ಸೂರ್ಯಕಾಂತ' ಕನ್ನಡದ ಮೊದಲ ಐತಿಹಾಸಿಕ ಕಾದಂಬರಿ. ವೆಂಕಟಸುಬ್ಬರಾವ್ ಅವರ 'ಕೇಸರಿ ವಿಲಾಸ' (ಕ್ರಿ. ಶ. ೧೮೯೫) ಪ್ರಥಮ ಕಾದಂಬರಿಯೆಂದು ಗೋವಿಂದ ಪೈಗಳ ಅಭಿಪ್ರಾಯ. ಎಂ.

---

೨೫. ಕೆ. ಎಸ್. ಕೃಷ್ಣಮೂರ್ತಿ : ಕನ್ನಡ ವಿಶ್ವಕೋಶ. ಸಂಪುಟ ೩. ಪುಟ ೭೧೨

೨೬. ಕೆ. ಎಸ್. ಕೃಷ್ಣಮೂರ್ತಿ : ಕನ್ನಡ ವಿಶ್ವಕೋಶ. ಸಂಪುಟ ೩. ಪುಟ ೭೧೩

ವೆಂಕಟಕೃಷ್ಣಯ್ಯನವರ ‘ಚೋರಗ್ರಹಣತಂತ್ರ’ ಕನ್ನಡದ ಪ್ರಥಮ ಸ್ವತಂತ್ರ ಪತ್ತೇದಾರಿ ಕಾದಂಬರಿ. ಇದು ೧೮೯೭ ರಲ್ಲಿ ರಚನೆಯಾಗಿದೆ. ಹೀಗೆ ಸಾಮಾಜಿಕ. ಪತ್ತೇದಾರಿ. ಐತಿಹಾಸಿಕ ಕಾದಂಬರಿಗಳು ಸ್ವತಂತ್ರವಾಗಿ ಕನ್ನಡದಲ್ಲಿ ರಚನೆಯಾಗುತ್ತಿದ್ದಂತೆ ಈ ಕ್ಷೇತ್ರ ಗಟ್ಟಿಗೊಳ್ಳತೊಡಗಿತು. ‘ಕೇಸರಿವಿಲಾಸ’ ಹಾಗೂ ‘ಶೃಂಗಾರ ಚಾತುರ್ಯೋಲ್ಲಾಸಿನಿ’ಗಳು ಪ್ರಥಮ ಸ್ವತಂತ್ರ ಕಾದಂಬರಿಗಳೆಂದು ಅನೇಕರು ಕರೆದರೂ ಕೂಡ ೧೮೯೨ ರಲ್ಲಿ ರಚನೆಯಾದ ಲಕ್ಷ್ಮಣರಾವ್ ಭೀ. ಗದಗಕರ ಅವರ ‘ಸೂರ್ಯಕಾಂತ’ವೇ ಮೊದಲ ಪ್ರಥಮ ಕಾದಂಬರಿಯೆಂದು ಸ್ವೀಕರಿಸಬಹುದು. ಆದರೆ ಇದು ಅರ್ಧ ಸಾಮಾಜಿಕ. ಇನ್ನರ್ಧ ಐತಿಹಾಸಿಕ ನೆಲೆಯಲ್ಲಿ ಮೂಡಿ ಬಂದಿದೆ. ಇದರಲ್ಲಿ ವಿಶೇಷ ಗುಣಗಳೇನೂ ಇಲ್ಲದಿದ್ದರೂ ತಿಳಿಯಾದ ಹೊಸಗನ್ನಡದಲ್ಲಿ ಬಂದ ಸ್ವತಂತ್ರ ಕೃತಿಯಲ್ಲದೆ. ಪ್ರಥಮ ‘ಕಾದಂಬರಿ’ ಎಂದು ಕರೆಯಿಸಿಕೊಂಡ ಕೃತಿಯಾಗಿದೆ.

ಅನುವಾದ. ಸ್ವತಂತ್ರ ದಿಕ್ಕಿನಲ್ಲಿ ಕಾದಂಬರಿ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಳ್ಳುವುದರೊಂದಿಗೆ. ವಾಸ್ತವ ಮಾರ್ಗದತ್ತ ಮೈಯನ್ನು ನಿಚ್ಚಳವಾಗಿ ಬಿಚ್ಚಿಕೊಳ್ಳಲು ಪ್ರಾರಂಭಿಸಿತು. ಇವುಗಳಲ್ಲಿ ಆಧುನಿಕತೆ ತಲೆಹಾಕಿತು. ವಾಸ್ತವಿಕತೆಯನ್ನೇ ಕಾದಂಬರಿಗೆ ಆಧಾರವಾಗಿಟ್ಟುಕೊಂಡು ಮೊದಲು ಕಾದಂಬರಿ ರಚಿಸಿದವರೆಂದರೆ. ಎಂ. ಎಸ್. ಪುಟ್ಟಣ್ಣನವರು. ಇವರ ಮೊದಲ ಕಾದಂಬರಿ ‘ಮಾಡಿದ್ದುಣ್ಣೋ ಮಹಾರಾಯ’ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ನಡೆದ ಹಲವು ಸಂಗತಿಗಳ ಆಧಾರದ ಮೇಲೆ ರಚನೆಯಾದ ಈ ಕಾದಂಬರಿಯ ಹೆಸರೇ ಸೂಚಿಸುವಂತೆ ಕೆಟ್ಟದ್ದನ್ನು ಮಾಡಿದವರಿಗೆ ಕೆಟ್ಟದ್ದು. ಒಳ್ಳೆಯದನ್ನು ಮಾಡಿದವರಿಗೆ ಒಳ್ಳೆಯದು ಆಗುವುದೆಂಬ ನಂಬಿಕೆ ತುಂಬಿಕೊಂಡಿದೆ. ಕಾರಂತರ ‘ದೇವದೂತರು’ (ಕ್ರಿ. ಶ. ೧೯೨೮)ದಿಂದ ಕುವೆಂಪುರವರ ‘ಕಾನೂರು ಸುಬ್ಬಮ್ಮ ಹೆಗ್ಗಡತಿ’ (ಕ್ರಿ. ಶ. ೧೯೩೬) ಯವರೆಗೆ ಈ ವಾಸ್ತವ ಮಾರ್ಗದ ಜಾಡನ್ನು ಗುರುತಿಸಬಹುದು. ಈ ನಿಟ್ಟಿನಲ್ಲಿ ಅ. ನ. ಕೃ. ಗಮನಾರ್ಹ ಕಾದಂಬರಿಕಾರರು.

ಕಾವ್ಯದಲ್ಲಿ ಬೇಂದ್ರೆ - ಕುವೆಂಪು ಅವರ ಪ್ರಭಾವದಂತೆ ಕಾದಂಬರಿಕ್ಷೇತ್ರದಲ್ಲಿ ಕಾರಂತ - ಅ. ನ. ಕೃ. ಪ್ರಭಾವ ತುಂಬ ಹಿರಿದಾದುದು. ಕಾರಂತರು ಈವರೆಗೆ ಸುಮಾರು ೪೦ ಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿದ್ದಾರೆ. ಇವರ ಕಾದಂಬರಿಗಳು ಜೀವನಮೌಲ್ಯಕ್ಕೆ ಸಮೀಪವಾದವುಗಳು. ಸರ್ವಕಾಲೀನ ಬದುಕಿಗೆ ಸ್ಪಂದಿಸಿದ ಕಾದಂಬರಿಕಾರರು. ‘ಮರಳಿ ಮಣ್ಣಿಗೆ’. ‘ಅಳಿದ ಮೇಲೆ’. ಯಂಥ ವಾಸ್ತವ ಕಾದಂಬರಿಗಳು. ಈ ಕ್ಷೇತ್ರದ ಶಾಶ್ವತ ಕೃತಿಗಳೆಂದೇ ಹೇಳಬೇಕು. ಕ್ರಿ. ಶ. ೧೯೩೨ ರಲ್ಲಿ ದೇವುಡು ಅವರ ‘ಅಂತರಂಗ’. ಕ್ರಿ. ಶ. ೧೯೩೩ ರಲ್ಲಿ ರಚನೆಯಾದ ಕೃಷ್ಣಶರ್ಮರ ‘ಸುದರ್ಶನ’. ರಂ. ಶ್ರೀ. ಮುಗಳಿಯವರ ‘ಬಾಳುರಿ’. ಶ್ರೀರಂಗರ ‘ವಿಶ್ವಾಮಿತ್ರನ ಸೃಷ್ಟಿ’. ವಿ. ಕೃ. ಗೋಕಾಕರ ‘ಇಜ್ಜೋಡು’ ಮುಂದೆ ಇದೇ ವಿಸ್ತೃತಗೊಂಡು ‘ಸಮರಸವೇ ಜೀವನ’ ಎಂದಾಗಿದೆ. ಜಿ. ಬಿ. ಜೋಶಿಯವರ ‘ಧರ್ಮಸೆರೆ’ ಗಳು ನಂತರದಲ್ಲಿ ಪ್ರಕಟಗೊಂಡವು.

ನವೋದಯ ಯುಗದಲ್ಲಿ ಕೆ. ವಿ. ಪುಟ್ಟಪ್ಪನವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಒಂದು ಮಹಾನ್ ಕೃತಿ. ಮಲೆನಾಡಿನ ಪ್ರಾದೇಶಿಕ ನೆಲೆಯಲ್ಲಿ ಮೂಡಿಬಂದ ಇದು ಮಲೆನಾಡಿನ ಚರಾಚರ ಸೃಷ್ಟಿಗೆ ಹಿಡಿದ ಕನ್ನಡಿ. ಪ್ರಕೃತಿ - ಪ್ರೇಮ - ಸಾಂಸ್ಕೃತಿಕ ನೆಲೆ. ಪರಿಪೂರ್ಣ ಜೀವನದೃಷ್ಟಿಯನ್ನು ಹೊತ್ತ ಈ ಕೃತಿ ಕನ್ನಡದ ಮಹಾಕಾದಂಬರಿ. ಇದು "ಸಂಸ್ಕೃತಿಯ ವಿಕಾಸದಲ್ಲಿ ಪ್ರಭಾವಿಯಾಗಿ. ಚಿತ್ರಿಸುವ ಮೂಲಕ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ತನ್ನ ಪ್ರಾದೇಶಿಕ ಇತಿ - ಮಿತಿಗಳನ್ನು ಮೀರಿ ಸಾರ್ವತ್ರಿಕತೆಯನ್ನು ಸಾಧಿಸುತ್ತದೆ".[೨೭]

## ಕಾದಂಬರಿಯ ಪ್ರೌಢಯುಗ :

ಕ್ರಿ. ಶ. ಸುಮಾರು ೧೯೪೦ - ೧೯೫೦ ರ ಕಾಲಾವಧಿಯ ಪ್ರಗತಿಶೀಲ ಚಳುವಳಿಯನ್ನು ಸಾಮಾನ್ಯವಾಗಿ 'ಕಾದಂಬರಿಯುಗ'ವೆಂತಲೂ. 'ಕಾದಂಬರಿಯ ಪ್ರೌಢಯುಗ'ವೆಂತಲೂ. 'ಕಾದಂಬರಿಯ ಸುವರ್ಣ ಕಾಲ'ವೆಂತಲೂ ಕರೆಯಬಹುದು. ಈ ಕಾಲಾವಧಿನಲ್ಲಿ ಸಣ್ಣಕಥೆ. ಕಾದಂಬರಿಕ್ಷೇತ್ರ ತನ್ನ ಮೈ - ಮನಸ್ಸುಗಳನ್ನು ನಿಚ್ಚಳವಾಗಿ ಬಿಚ್ಚಿಕೊಂಡು ಪ್ರೌಢಪರಂಪರೆಯತ್ತ ದಾಪುಗಾಲು ಹಾಕಿತು. ಶೋಷಣೆರಹಿತ ಚಲನಶೀಲ ಸರ್ವಸಮಾನತೆಯ ಕನಸ್ಸನ್ನು ಜೀವಂತವಿರಿಸಿಕೊಂಡು. ಅದನ್ನೇ ಉಸಿರಾಡುತ್ತ ಬಂದ ಪ್ರಗತಿಶೀಲ ಯುಗದಲ್ಲಿ ಕಾದಂಬರಿಕಾರರು ಒಂದೆಡೆಯಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟ ಮತ್ತು ಅಲ್ಲಿನ ರಾಜಕೀಯ ಪ್ರಕ್ಷುಬ್ಧತೆಯನ್ನು ಕುರಿತು ರಚಿಸಿದರು. ಶಿವರಾಂ ಕಾರಂತರ 'ಔದಾರ್ಯದ ಉರುಳಲ್ಲಿ' ಶ್ರೀರಂಗರ 'ಪುರುಷಾರ್ಥ' ಬಸವರಾಜ ಕಟ್ಟೀಮನಿಯವರ 'ಸ್ವಾತಂತ್ರ್ಯದೆಡೆಗೆ'. ಹಾಗೂ 'ಮಾಡಿಮಡಿದವರು'. ಮಿರ್ಜಿ ಅಣ್ಣಾರಾಯರ 'ಪ್ರತಿಸರಕಾರ'. ತ.ರಾ.ಸು. ಅವರ 'ರಕ್ತತರ್ಪಣ' ನಿರಂಜನರ 'ಚಿರಸ್ಮರಣೆ' ಇವೆಲ್ಲ ಸ್ವಾತಂತ್ರ್ಯನಿಷ್ಠೆ. ರಾಜಕೀಯ ವಿಪ್ಲವಗಳ ಸಂಘರ್ಷದ ಸಹಜ ನಿರೂಪಣೆಗಳಾಗಿವೆ! ಸಾಮಾಜಿಕ ವಾಸ್ತವದ ನೆಲೆಯಲ್ಲಿ ಮೂಡಿಬಂದ ಈ ಪಂಥದ ಕಾದಂಬರಿಗಳು ಕಾರ್ಮಿಕರ ಶೋಷಣೆಯಲ್ಲದೆ ಬಡವ - ಬಗ್ಗರ - ಅನಾಥರ ಶೋಷಣೆಯ ಬೇರುಗಳನ್ನೇ ಕತ್ತರಿಸುವ ಪ್ರಯೋಗ ನಡೆಸಿದವು. ಈ ನಿಟ್ಟಿನಲ್ಲಿ "ಬಸವರಾಜ ಕಟ್ಟೀಮನಿಯವರು ಪ್ರಗತಿಶೀಲ ಸಾಹಿತ್ಯದಲ್ಲಿ ಮುಳುಗಿ ಎದ್ದವರು"[೨೮] ಎಂದೆನ್ನುವಂತೆ ಪ್ರಗತಿಶೀಲಯುಗದಲ್ಲಿ ಬಸವರಾಜ ಕಟ್ಟೀಮನಿಯವರದು ಬಹುದೊಡ್ಡ ಹೆಸರು. ಇವರು ಸುಮಾರು ೪೦ ಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿದ್ದು. 'ಜನಿವಾರ - ಶಿವದಾರ'. 'ಜ್ವಾಲಾಮುಖಿಯ ಮೇಲೆ'. 'ಮೋಹದಬಲೆಯಲ್ಲಿ'. 'ಬೀದಿಯಲ್ಲಿ ಬಿದ್ದವಳು'. 'ಜರತಾರಿ ಜಗದ್ಗುರು'. ಮುಂತಾದವುಗಳ ರಚನೆಯೊಂದಿಗೆ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಮಾಡಿದವರು. ವರ್ಣ - ವರ್ಗಭೇದಗಳನ್ನು ಕಿತ್ತೆಸೆಯಲು ಪ್ರಾಮಾಣಿಕ ಪ್ರಯತ್ನವನ್ನೇ ನಡೆಸಿದವರು. ಕಾದಂಬರಿ ಕ್ಷೇತ್ರದಲ್ಲಿ ಒಂದು ಪರಂಪರೆಯನ್ನೇ ನಿರ್ಮಿಸಿದವರೆಂದರೆ ಅ. ನ. ಕೃ. ರವರು. ಸುಮಾರು ೧೦೦ ಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಕಾದಂಬರಿಗಳನ್ನು

---

೨೭. ಜಿ. ಎಸ್. ಆಮೂರ : ಅರ್ಥಲೋಕ. ಪುಟ ೨೭

೨೮. ಬಿ. ಸಿ. ಸಾದರ : ಬಸವರಾಜ ಕಟ್ಟೀಮನಿ ಕಾದಂಬರಿಗಳು. ಪುಟ ೭

ರಚಿಸಿದ ಅ. ನ. ಕೃ. ಪ್ರಗತಿಶೀಲ ಚಳುವಳಿಯ ನಾಯಕರಾಗಿ ಹಲವು ವಾದ - ವಿವಾದಗಳ ಕೇಂದ್ರವಾಗಿ ಮೆರೆದವರು. "ಕುಟುಂಬ ಜೀವನ. ಗ್ರಾಮ ಜೀವನ. ನಗರ ಜೀವನ. ವೇಶ್ಯಾವಾಟಿಕೆಯ ಜೀವನ. ಕಾರ್ಮಿಕ ಜೀವನ. ಅಸ್ಪೃಶ್ಯತೆ. ಕಾಮ ಎಲ್ಲವನ್ನೂ ಕಾದಂಬರಿಯ ಪರಿಧಿಯಲ್ಲಿ ತರಲು ಪ್ರಯತ್ನಿಸಿದರು. ಮಡಿ - ಮೈಲಿಗೆ. ಶೀಲ - ಅಶ್ಲೀಲಗಳ ಸಂಕೋಚವಿಲ್ಲದೆ ಎಲ್ಲ ಅನುಭವಗಳನ್ನು ಬಳಸಿಕೊಳ್ಳಲು ಪ್ರಯತ್ನಿಸಿದರು" [೨೯] ಆದರೂ ಅ. ನ. ಕೃ. ರವರು 'ಪ್ರತ್ಯೇಕ ವಾಚಕವರ್ಗ' ವನ್ನೇ ಸೃಷ್ಟಿಸಿದರೆಂಬ ವಿಮರ್ಶಕರ ಮಾತಿಗೆ ತುತ್ತಾಗಬೇಕಾಯಿತು. ಅದೇನೇ ಇದ್ದರೂ ಸರಳ - ಸುಂದರಶೈಲಿ. ಕಥನಕೌಶಲ್ಯ. ಸಂಭಾಷಣಾ ಚಾತುರ್ಯಗಳನ್ನು ಮೆಚ್ಚಲೇಬೇಕು. 'ಉದಯರಾಗ'. 'ಸಂಧ್ಯಾರಾಗ'. 'ನಟಸಾರ್ವಭೌಮ'. 'ಶನಿಸಂತಾನ'. 'ಕನ್ನಡಮ್ಮನ ಗುಡಿಯಲ್ಲಿ'. 'ಸಂಜೆಗತ್ತಲು'. 'ಗೃಹಲಕ್ಷ್ಮಿ'. 'ರುಕ್ಮಿಣಿ'. 'ಮಂಗಳಸೂತ್ರ'. 'ಗಾಜಿನ ಮನೆ' —ಈ ಮೊದಲಾದವುಗಳು ಇವರ ಪ್ರಖ್ಯಾತ ಕಾದಂಬರಿಗಳು.

ಪ್ರಗತಿಶೀಲ ಲೇಖಕರಲ್ಲಿ ತರಾಸು. ನಿರಂಜನರ ಹೆಸರುಗಳು ವಿಶೇಷ ಸ್ಮರಣೀಯ. ತರಾಸು ಅವರ 'ರಕ್ತತರ್ಪಣ'. 'ಮಸಣದ ಹೂ'. 'ಪುರುಷಾವತಾರ'. 'ಮುಂಜಾವಿನಿಂದ ಮುಂಜಾವು' ಗಳು ವಿಶೇಷ ಕಾಣಿಕೆಗಳು. ನಿರಂಜನರ 'ಚಿರಸ್ಮರಣೆ'. 'ರಂಗಮ್ಮನ ವಠಾರ'. 'ದೂರದ ನಕ್ಷತ್ರ'. 'ಬನಶಂಕರಿ ವಿಮೋಚನೆ' ಗಳು ಚಿಂತನೀಯ ಕಾದಂಬರಿಗಳು.

ಇತ್ತೀಚಿನ ದಶಕಗಳಲ್ಲಿ ಸ್ತ್ರೀ ಸ್ವಾತಂತ್ರ್ಯ ಹೆಚ್ಚು ಪ್ರಸ್ತುತವಾಗುತ್ತಿದೆ. ಆದ್ದರಿಂದ ಈ ಕಡೆ ಗಮನಹರಿಸಿ ಅವಲೋಕಿಸದಿದ್ದರೆ ನಮ್ಮ ದೃಷ್ಟಿ ಕ್ಷೀಣವೆನಿಸದಿರದು. ಕಾದಂಬರಿ ನಿರ್ಮಾಣದಲ್ಲಿ ತ್ರಿವೇಣಿ. ಎಂ. ಕೆ. ಇಂದಿರಾ. ಉಷಾನವರತ್ನರಾವ್. ಸರೋಜಮ್ಮ. ಅನುಪಮಾ ನಿರಂಜನ. ಎಚ್. ಎಸ್. ಪಾರ್ವತಿ, ಕೆ. ಶಾಂತಲಾ ಈ ಮೊದಲಾದವರದು ಪ್ರಮುಖ ಹೆಸರುಗಳು. ತ್ರಿವೇಣಿಯವರ 'ಶರಪಂಜರ'. 'ಹಣ್ಣೆಲೆ ಚಿಗುರಿದಾಗ'. 'ಬೆಕ್ಕಿನ ಕಣ್ಣು'. ಎಂ. ಕೆ. ಇಂದಿರಾರ 'ಫಣಿಯಮ್ಮ'. ಅನುಪಮಾ ನಿರಂಜನರ 'ಬಂಧನ'. 'ಬೇಟೆ' —ಈ ಮೊದಲಾದ ಕಾದಂಬರಿಗಳು ಸ್ತ್ರೀ ಕಾದಂಬರಿಕಾರ್ತಿಯರ ಪ್ರತಿಭೆಗೆ ನಿದರ್ಶನಗಳಾಗಿವೆ.

ಕಾದಂಬರಿ ಕ್ಷೇತ್ರದ ಬೆಳವಣಿಗೆಯ ಅವಲೋಕನ ಕ್ರಮದಲ್ಲಿ ಮಾಸ್ತಿ. ಭೈರಪ್ಪನವರನ್ನು ಸ್ಮರಿಸಲೇಬೇಕು. ಮಾಸ್ತಿಯವರ 'ಚಿಕವೀರರಾಜೇಂದ್ರ'. 'ಚನ್ನಬಸವನಾಯಕ' ಗಳು ಐತಿಹಾಸಿಕ ಶ್ರೇಷ್ಠ ಕಾದಂಬರಿಗಳಾದರೆ. ಭೈರಪ್ಪನವರದು ಸಂಕೀರ್ಣ ಬದುಕನ್ನು ಬಿಚ್ಚಿತೋರಿಸುವ ಸಂಕೀರ್ಣ ಕೃತಿಗಳೆನ್ನಬಹುದು. 'ವಂಶವೃಕ್ಷ'. 'ನೆಲೆ'. 'ತಂತು', 'ನಿರಾಕರಣೆ'. 'ಪರ್ವ'. 'ಗ್ರಹಣ'. 'ನಾಯಿನೆರಳು'. 'ಮತದಾನ'. 'ದಾಟು' —ಮುಂತಾದವುಗಳು ಇವರ ಪ್ರಸಿದ್ಧ ಕಾದಂಬರಿಗಳು.

---

೨೯. ಎಲ್. ಎಸ್. ಶೇಷಗಿರಿರಾವ್ : ಹೊಸಗನ್ನಡ ಸಾಹಿತ್ಯ. ಪುಟ ೧೧೬

## ನವ್ಯ ಕಾದಂಬರಿ ಯುಗ :

"ಕನ್ನಡದಲ್ಲಿ 'ನವ್ಯಕಾವ್ಯ'. 'ನವ್ಯಕಥೆ'ಗಳಂತೆ 'ನವ್ಯಕಾದಂಬರಿ' ಎಂದು ಕರೆಯಬಹುದಾದಂತಹ ಸಾಹಿತ್ಯಪ್ರಕಾರ ಇನ್ನೂ ನಿರ್ಮಾಣವಾಗಿಲ್ಲ"[೩೦] ಪರಂಪರಾಗತ ಕಾದಂಬರಿಗಿಂತ ಅನೇಕ ಅಂಶಗಳಲ್ಲಿ ಭಿನ್ನವಾದ ಕಾದಂಬರಿಗಳು ಇತ್ತೀಚೆಗೆ ಪ್ರಕಟವಾಗುತ್ತಿವೆಯಾದರೂ ಅದೇ ಒಂದು ಪ್ರಕಾರವಾಗುವಷ್ಟು ವಿಪುಲವಾಗಿ ರಚನೆಯಾಗಿಲ್ಲ.

ಕೇವಲ ಸಾಮಾಜಿಕ ಸಮಸ್ಯೆಗಳಿಗೆ ಮಾತ್ರ ಅಂಟಿಕೊಂಡ ಪ್ರಗತಿಶೀಲಸಾಹಿತ್ಯಕ್ಕೆ ಪ್ರತಿಯಾಗಿ ಹುಟ್ಟಿಕೊಂಡು ಸ್ವಚಿಂತನೆ - ಸ್ವಸಮಸ್ಯೆಗಳತ್ತ ಬೆಳಕು ಬೀರುವ ಪ್ರಯತ್ನ ನಡೆಸಲು ಹಾಗೂ ಪ್ರಗತಿಶೀಲ ಧೋರಣೆಗಳನ್ನು ಪ್ರತಿಭಟಿಸಲಾಗದೇ ನವ್ಯ ಕಾಲಿರಿಸಿತು. ನವ್ಯಕ್ಕೆ ಪಾಶ್ಚಾತ್ಯರ ಪ್ರಭಾವವೇ ಮೂಲಬೇರಾಯಿತು. "ಕ್ರಿ. ಶ. ಸುಮಾರು ೧೯೩೪ ರಷ್ಟು ಹಿಂದೆಯೇ ಪ್ರಕಟವಾದ ಶ್ರೀರಂಗರ 'ವಿಶ್ವಾಮಿತ್ರನ ಸೃಷ್ಟಿ'ಯೇ ಕನ್ನಡದ ಪ್ರಥಮ ನವ್ಯ ಕಾದಂಬರಿ ಎಂದು ಹೇಳಬಹುದು.[೩೧] ಎಂಬ ಮಾತು ಆ ಕಾದಂಬರಿಯ ಹೊಸತನ - ಬರವಣಿಗೆಯ ಸರಸತನದ ಮೇಲೆ ಕೇಂದ್ರೀಕೃತಗೊಂಡಿದೆ. ಕ್ರಿ. ಶ. ೧೯೬೪ ರಲ್ಲಿ ಪ್ರಕಟಗೊಂಡ ಚಿತ್ತಾಲರ 'ಮೂರುದಾರಿಗಳು'. ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' (೧೯೬೫). ಅವರದೇ 'ಭಾರತೀಪುರ'. ಪೂರ್ಣಚಂದ್ರ ತೇಜಸ್ವಿಯವರ 'ಸ್ವರೂಪ' (೧೯೬೬). ಎ. ಕೆ. ರಾಮಾನುಜರ ಅನುವಾದಿತ ಕಾದಂಬರಿ 'ಹಳದಿಮೀನು' (೧೯೬೬). ಪಿ. ಲಂಕೇಶರ 'ಬಿರುಕು' (೧೯೬೭). ಶ್ರೀಕೃಷ್ಣ ಆಲನಹಳ್ಳಿಯವರ 'ಕಾಡು' (೧೯೭೧) ಮುಂತಾದವುಗಳು ನವ್ಯಧೋರಣೆಯ ಪ್ರಮುಖ ಕೃತಿಗಳು.

"ನವ್ಯ ಕಾದಂಬರಿಕಾರರು ಆತ್ಮನಿಷ್ಠರು. ಅದೇ ರೀತಿಯ ಮೌಲ್ಯಗಳನ್ನು ಸ್ವೀಕರಿಸುವುದರ ಮೂಲಕ ಸಂಸ್ಕೃತಿಯ ಸ್ವರೂಪವನ್ನೇ ಬದಲಿಸಲು ಪ್ರಯತ್ನಿಸುತ್ತಾರೆ".[೩೨] ಈ ಯುಗದ ಕಾದಂಬರಿಗಳ ನಾಯಕರ ಬಹುಮುಖ್ಯ ಸಮಸ್ಯೆಯೆಂದರೆ. ಕೇವಲ ವೈಯಕ್ತಿಕ. ತಾನೂ ನಡೆಯದೆ ಇತರರ ಮಾರ್ಗದರ್ಶನದತ್ತಲೂ ನಡೆಯದೆ ಅಂತರಪಿಶಾಚಿಯಂತೆ ದುರ್ಬಲನಾಗಿ ಜೋತಾಡುವವ. "ಸದ್ಯಕ್ಕಂತೂ ಕನ್ನಡದ ನವ್ಯ ಕಾದಂಬರಿ ಇನ್ನೂ ಪ್ರಾರಂಭದ ಪ್ರಯೋಗಾವಸ್ಥೆಯಲ್ಲಿದೆಯೆಂದು ಹೇಳಬಹುದು".[೩೩] ಆದರೂ ಈ ಯುಗದಲ್ಲಿನ ಪ್ರಬುದ್ಧತೆ. ಭಾಷಾ ಪ್ರಯೋಗ. ಕೌಶಲ್ಯ. ವೈಜ್ಞಾನಿಕ ನಿರೂಪಣೆಗಳನ್ನು ನಾವು ಮೆಚ್ಚಲೇಬೇಕು. ಪ್ರಕಟಗೊಂಡಿರುವ ಕೆಲವೇ ಕಾದಂಬರಿಗಳು ಕನ್ನಡ ಕಾದಂಬರಿಯ ಬೆಳವಣಿಗೆಯಲ್ಲಿ ಹೊಸದಿಕ್ಕನ್ನು ತೋರಿಸುವಷ್ಟು ಮಹತ್ವದವಾಗಿವೆ.

---

೩೦. ಗಿರಡ್ಡಿ ಗೋವಿಂದರಾಜ : ಕಾದಂಬರಿಯ ವಸ್ತು ಮತ್ತು ತಂತ್ರ. ಪುಟ ೧೪೭

೩೧. ಗಿರಡ್ಡಿ ಗೋವಿಂದರಾಜ : ಕಾದಂಬರಿಯ ವಸ್ತು ಮತ್ತು ತಂತ್ರ. ಪುಟ ೧೪೮

೩೨. ಜಿ. ಎಸ್. ಆಮೂರ : ಅರ್ಥಲೋಕ. ಪುಟ ೧೨

೩೩. ಗಿರಡ್ಡಿ ಗೋವಿಂದರಾಜ : ಕಾದಂಬರಿಯ ವಸ್ತು ಮತ್ತು ತಂತ್ರ. ಪುಟ ೧೪೮

**ದಲಿತ - ಬಂಡಾಯ ಯುಗದ ಕಾದಂಬರಿಗಳು :**

'ಮಳೆ ನಿಂತರೂ ಮಳೆ ಹನಿ ನಿಲ್ಲದು' –ಎಂಬಂತೆ ಆಯಾಯ ಯುಗದ ಪ್ರೇರಣೆ ದೋರಣೆಗಳು. ರೂಪ (Form) ಏನೇ ಆದರೂ ಸಹ 'ಕಾದಂಬರಿ ಸಾಹಿತ್ಯ' ಬೆಳೆಯುತ್ತಲೇ ಬಂದಿದೆ. ದಲಿತನ ನೋವು - ನಲಿವುಗಳನ್ನು ದಲಿತನು ಮಾತ್ರ ಹೇಳಬಲ್ಲನೆಂಬ ವಾದದಲ್ಲಿ ಮೈವೆತ್ತುದು ದಲಿತ ಸಾಹಿತ್ಯ. ಆದರೆ ಈ ಹಿನ್ನೆಲೆಯಲ್ಲಿ ಸಾಹಿತ್ಯವೆಂಬುದು ಸಂವೇದನಾ ಸ್ವರೂಪದ್ದು ಎಂಬುದನ್ನು ನೆನೆಪಿಸಿಕೊಂಡರೆ ಸಾಕು. ದೇವನೂರು ಮಹಾದೇವರ 'ಒಡಲಾಳ'. 'ಕುಸುಮಬಾಲೆ'. ಅರವಿಂದ ಮಾಲಗತ್ತಿಯವರ 'ಕಾರ್ಯ'. ಚೆನ್ನಣ್ಣ ವಾಲಿಕಾರ ಅವರ 'ಹುಲಿಗೆಮ್ಮ' ಮೊದಲಾದವುಗಳು ದಲಿತಯುಗದ ಪ್ರಮುಖ ಕಾದಂಬರಿಗಳಾದರೆ. ಬಂಡಾಯವೆಂಬುದು ಸಮಾಜದ ಅವ್ಯವಸ್ಥೆಗೊಡ್ಡುವ ಪ್ರತಿಭಟನೆಯಾಗಿದೆ. ಕನ್ನಡ ಸಾಹಿತ್ಯದಲ್ಲಿ ಬಂಡಾಯ ಧೋರಣೆಯೆಂಬುದು ಪಂಪನಿಂದಲೂ ಬೆಳೆದು ಬಂದಿದ್ದರೂ. ಅದೊಂದು ಸಾಹಿತ್ಯಪ್ರಕಾರವೆಂಬಷ್ಟರಮಟ್ಟಿಗೆ ಗುರುತಿಸಿದ್ದು ತೀರ ಇತ್ತೀಚೆಗೆ. ಈ ಪಂಥದ ಪ್ರಮುಖರೆಂದರೆ. ಕುಂ. ವೀರಭದ್ರಪ್ಪ (ಕಪ್ಪು ಪಕ್ಷಿಗಳು). ಬರಗೂರು ರಾಮಚಂದ್ರಪ್ಪ (ಸೂತ್ರ). ವ್ಯಾಸರಾಯ ಬಲ್ಲಾಳ (ಬಂಡಾಯ). ಮುಂತಾದವರ ಕೃತಿಗಳು ಬಂಡಾಯ ಯುಗದ ಪ್ರಮುಖ ಕಾದಂಬರಿಗಳು. ಬೆಳವಣಿಗೆಯ ದೃಷ್ಟಿಯಿಂದ ಕಾವ್ಯದಷ್ಟು ಸಂಖ್ಯೆ ಸತ್ವಗಳೆರಡರಲ್ಲಿಯೂ ಹಿಂದೇಟು ಹಾಕದ ಈ ಕಾದಂಬರಿಗಳು ಸ್ಮರಣೀಯ ಕೃತಿಗಳು. ಒಟ್ಟಿನಲ್ಲಿ "ವಿವಿಧ ವರ್ಣ - ವರ್ಗ - ಉದ್ಯೋಗಗಳಿಂದ ಬಂದ ದಲಿತ ಬಂಡಾಯ ಲೇಖಕರು ಸಮಾಜ ವ್ಯವಸ್ಥೆಯಲ್ಲಿನ ಶೋಷಣೆ. ಅನ್ಯಾಯ. ಅಧರ್ಮ. ಅತ್ಯಾಚಾರ. ಹಿಂಸೆಗಳಿಗೆ ತಮ್ಮದೇ ಆದ ಅನುಭವದ ಅಭಿವ್ಯಕ್ತಿ ಕೊಡುತ್ತ ಬಂದಿದ್ದಾರೆ".[೩೪]

ಕನ್ನಡದ ಇಂದಿನ ಹಲವು ಕಾದಂಬರಿಗಳು ಭಾರತೀಯ ಇತರ ಸಾಹಿತ್ಯಸೃಷ್ಟಿಗೆ ಯಾವ ದೃಷ್ಟಿಯಿಂದಲೂ ಕಡಿಮೆಯೆನಿಸದೆ. ಸಮತೂಕವನ್ನೇ ಕಾಯ್ದುಕೊಂಡು ಬಂದಿವೆ. ಅನೇಕ ಭಾಷೆಗಳಿಗೆ ಅನುವಾದಗೊಂಡಿರುವುದೇ ಇದಕ್ಕೆ ಸಾಕ್ಷಿ. ನಿರಂಜನರ 'ವಿಮೋಚನೆ'ಯನ್ನಿಲ್ಲಿ ನಿದರ್ಶನಕ್ಕಾಗಿ ಕೊಡಬಹುದು. ಇದು ರಷಿಯನ್ ಭಾಷೆಯಲ್ಲಿ ಮದಾಷೋ ಅವರಿಂದ 'ಪೋರ್' ಎಂಬುದಾಗಿ ಅನುವಾದಗೊಂಡಿದೆ. "ಒಳ್ಳೆಯ ಕೃತಿಗಳನ್ನು ಇನ್ನಿತರ ಭಾರತೀಯ ಭಾಷೆಗಳಿಗೆ ಅನುವಾದಿಸಿ ಪ್ರಕಟಿಸುವ ಕಾರ್ಯವನ್ನು ಕನ್ನಡಿಗರು ನಿಯೋಜಿಸಿದರೆ ಹೆಚ್ಚು ಕ್ಷೇಮ"[೩೫] ಎಂಬ ಮಾತು ಕನ್ನಡ ಕಾದಂಬರಿಸಾಹಿತ್ಯ ಬೆಳವಣಿಗೆಯ ಭವಿಷ್ಯವಾಣಿ.

**ಕಾದಂಬರಿ ವರ್ಗೀಕರಣ :**

ವಸ್ತುನಿಷ್ಠ ಹಾಗೂ ವೈಜ್ಞಾನಿಕ ಅಧ್ಯಯನಕ್ಕಾಗಿ ಕಾದಂಬರಿಗಳ ವರ್ಗೀಕರಣ ಹೆಚ್ಚು ಪ್ರಸ್ತುತ. ಹೀಗೆ ವರ್ಗೀಕರಣ ಮಾಡುವಾಗ ಕಾದಂಬರಿಗಳ ರಚನಾತ್ಮಕ ಸೃಷ್ಟಿ. ಕಾಲಮಾನದ ದೃಷ್ಟಿ. ಶೈಲಿ-ತಂತ್ರ. ಭಾಷಾದೃಷ್ಟಿ

---

೩೪. ಜೆ. ಪಿ. ದೊಡಮನಿ : ಶರಣರ ಕುರಿತ ಕನ್ನಡ ಕಾದಂಬರಿಗಳು. ಪುಟ ೩೭

೩೫. ದು. ನಿಂ. ಬೆಳಗಲಿ : ಕನ್ನಡದಲ್ಲಿ ಕಾದಂಬರಿ ಸಾಹಿತ್ಯ. ಪುಟ ೮೭

ಅವು ಸಾಧಿಸುವ ಉದ್ದೇಶ ಈ ಮೊದಲಾದ ಅಂಶಗಳು ಅಳತೆಗೋಲುಗಳಾಗುತ್ತವೆ. ವಿದ್ವಾಂಸರನೇಕರು ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ತಂತಮ್ಮ ವಿಭಜನೆಗಳನ್ನು ಮುಂದಿಟ್ಟಿದ್ದಾರೆ.

ವಿಲಿಯಂ ಹೆನ್ರಿ ಹಡ್ಸನ್‌ರು ಕಾದಂಬರಿಯ ರಚನೆಯನ್ನು ಆಧರಿಸಿ ಎರಡು ರೀತಿಯಲ್ಲಿ ವರ್ಗೀಕರಿಸಿದ್ದಾರೆ.[೩೬]

೧. ಶಿಥಿಲಸಂವಿಧಾನ ಕಾದಂಬರಿ

೨. ಸಾವಯವ ಸಂವಿಧಾನ ಕಾದಂಬರಿ.

ರಚನಾ ದೃಷ್ಟಿಯನ್ನೇ ಆಧಾರವಾಗಿರಿಸಿಕೊಂಡ ಎಡ್ವಿನ್ ಮಾರ್ ಅವರು ಕಾದಂಬರಿಯನ್ನು ಪ್ರಮುಖವಾಗಿ ನಾಲ್ಕು ವಿಧದಲ್ಲಿ ವರ್ಗೀಕರಣ ಮಾಡಿದ್ದಾರೆ.[೩೭]

೧. ಘಟನಾ ಪ್ರಧಾನ ಕಾದಂಬರಿಗಳು : ಹೆಸರೇ ಸೂಚಿಸುವಂತೆ ಈ ವರ್ಗದ ಕಾದಂಬರಿಗಳಲ್ಲಿ ಘಟನೆಗಳೇ ಪ್ರಮುಖ. ಇಲ್ಲಿ ಪಾತ್ರಗಳು ಘಟನೆಗಳ ಕೈಗೊಂಬೆಗಳಷ್ಟೇ.

೨. ಪಾತ್ರಪ್ರಧಾನ ಕಾದಂಬರಿಗಳು : ಇಲ್ಲಿ ಪಾತ್ರಗಳೇ ಮುಖ್ಯ. ಘಟನೆಗಳನ್ನು ಇವೇ ಹುಟ್ಟುಹಾಕುತ್ತವೆ. ತಮ್ಮ ಅಂತರಂಗದ ಶೋಧವನ್ನು ಕಾಣುವ ಈ ಪಾತ್ರಗಳು ತಮಗಿಷ್ಟದಂತೆ ಘಟನೆಗಳನ್ನು ಹಿಂದು ಮುಂದು ಮಾಡುತ್ತವೆ.

೩. ನಾಟಕೀಯ ಕಾದಂಬರಿಗಳು : ಸಂಭಾಷಣಾ ಪ್ರಧಾನ ನಾಟಕಗಳಂತೆ. ಈ ವರ್ಗದ ಕಾದಂಬರಿಗಳಲ್ಲಿ ಸಂಭಾಷಣೆಗೇ ಹೆಚ್ಚಿನ ಪ್ರಾಶಸ್ತ್ಯ. ಇಲ್ಲಿ ಲೇಖಕನೇ ಹೆಚ್ಚು ಮುತುವರ್ಜಿ ವಹಿಸಿ ಅಲ್ಲಲ್ಲಿ ಪ್ರವೇಶಪಡೆದು ಪಾತ್ರಪರಿಚಯ ನಡೆಸಿದರೂ ಪಾತ್ರಗಳೇ ತಮ್ಮನ್ನು ತಾವು ತಿಳಿಸಿಕೊಡುತ್ತವೆ.

೪. ಬೃಹತ್ ಕಾದಂಬರಿಗಳು : ಸಂಕೀರ್ಣ ಸ್ವರೂಪದ ಈ ಕಾದಂಬರಿಗಳಲ್ಲಿ ಆಕಸ್ಮಿಕಗಳಿಗೇ ಹೆಚ್ಚಿನ ಕಾಲಾವಕಾಶ. ವಿಪರ್ಯಾಸ. ಅಸಂಬದ್ಧತೆ. ವೈಚಿತ್ರ್ಯಗಳೇ ಈ ವರ್ಗದ ಕಾದಂಬರಿಗಳ ವೈಶಿಷ್ಟ್ಯ.

ವಸ್ತುವಿನ ದೃಷ್ಟಿಯಿಂದ ಕಾದಂಬರಿಯನ್ನು ಹೀಗೆ ವರ್ಗೀಕರಣ ಮಾಡಬಹುದು.[೩೮]

೧. ವಿಚಿತ್ರ ಕಾದಂಬರಿಗಳು : ಇವುಗಳಿಗೆ ವಾಸ್ತವಿಕತೆಯಿರದು. ರಮ್ಯ - ರಂಜನೆಯ. ಅದ್ಭುತಕಥೆಯನ್ನು ಹೊಂದಿದ್ದು. ಹೆಚ್ಚಾನುಹೆಚ್ಚು ಕಾಲ್ಪನಿಕ ನೆಲೆಯಲ್ಲಿ ಇವು ಮೂಡಿಬಂದಿರುತ್ತವೆ.

೨. ಸಾಹಸಮಯ ಕಾದಂಬರಿಗಳು : ಇಲ್ಲಿ ಹೆಚ್ಚು ಸಾಹಸಕ್ಕೆ ಆಸ್ಪದವಿದ್ದು. ಅವುಗಳ ಸುಂದರ ಅಭಿವ್ಯಕ್ತಿಯಲ್ಲಿಯೇ ಈ ವರ್ಗದ ಕಾದಂಬರಿಗಳು ತಮ್ಮ ಅಸ್ತಿತ್ವವನ್ನು ಮೆರೆಯುತ್ತವೆ. ಸಾಹಸವೆಂಬುದು ಮನುಷ್ಯ ಯಾವಾಗಲೂ ತೋರಿಸಲು ಇಷ್ಟಪಡುವ ಸುಂದರ ಅಭಿವ್ಯಕ್ತಿ.

---

೩೬. ಸಿಪಿಕೆ(ಅನು). ವಿಲಿಯಂ ಹೆನ್ರಿ ಹಡ್ಸನ್ : ಸಾಹಿತ್ಯ ಪ್ರವೇಶ. ಪುಟ ೧೪೨.

೩೭. ಪಿ. ವ್ಹಿ. ಶಾಸ್ತ್ರಿ(ಅನು). ಎಡ್ವಿನ್ ಮಾರ್ : ಸಾಹಿತ್ಯ ಪ್ರಕಾರಗಳು. ಪುಟ ೬೩

೩೮. ಎಲ್. ಎಸ್. ಶೇಷಗಿರಿರಾವ್ : ಕನ್ನಡ ವಿಶ್ವಕೋಶ. ಸಂಪುಟ ೪. ಪುಟ ೪೬೬

೩. ನೈಜ ಕಾದಂಬರಿಗಳು : ಈ ವರ್ಗದ ಕಾದಂಬರಿಗಳಲ್ಲಿ ಹೆಚ್ಚಾಗಿ ವಾಸ್ತವತೆಯೇ ಪ್ರಸ್ತುತವಾಗಿದ್ದು ದೈನಂದಿನ ಬದುಕೇ ಇದರ ಜೀವಾಳ.

ಘಟನೆ - ಕಾಲಮಾನದ ದೃಷ್ಟಿಯಿಂದ ಕಾದಂಬರಿಗಳನ್ನು[೩೯] –

೧. ಚಾರಿತ್ರಿಕ ಕಾದಂಬರಿಗಳು : ನಡೆದುಹೋದ ಘಟನೆಗಳ ಆಧಾರದ ಮೇಲೆ ರಚಿತವಾದವುಗಳು. ಕಾದಂಬರಿಕಾರನ ಪೂರ್ಣ ದೃಷ್ಟಿಯ ಮೂಸೆಯಲ್ಲಿ ರಚನೆಗೊಂಡಿರುತ್ತವೆ.

೨. ಕಾಲ್ಪನಿಕ ಕಾದಂಬರಿಗಳು : ಇವು ಕೇವಲ ಕಾದಂಬರಿಕಾರನ ಕಲ್ಪನಾ ಕೂಸುಗಳು. ಸತ್ಯಕ್ಕೆ ದೂರವಾದವುಗಳೆಂದು ಹೇಳಬಹುದು.

–ಎರಡು ರೀತಿಯಲ್ಲಿ ವರ್ಗೀಕರಿಸಬಹುದಾಗಿದೆ.

ಕಾದಂಬರಿಯ ಶೈಲಿ - ತಂತ್ರಗಳನ್ನು ಆಧರಿಸಿ[೪೦] –

೧. ನಾಟಕೀಯ

೨. ದೃಶ್ಯಾವಳಿ

೩. ಜೀವನ ವೃತ್ತಾಂತ

೪. ಆತ್ಮವೃತ್ತಾಂತ –ಗಳೆಂದು ವರ್ಗೀಕರಿಸಬಹುದು.

ಕಾದಂಬರಿ ಸಾಧಿಸುವ ಉದ್ದೇಶದ ದೃಷ್ಟಿಯನ್ನು ಆಧರಿಸಿ[೪೧] –

೧. ಅನ್ವರ್ಥ ಪ್ರಧಾನ ಕಾದಂಬರಿ
೨. ಗ್ರಾಂಥಿಕ ಕಾದಂಬರಿ
೩. ಪರಿಣಾಮ ವಿಧಾನ
೪. ಪ್ರಜ್ಞಾಪ್ರವಾಹದ ಕಾದಂಬರಿ
೫. ಪರಿಣಾಮ ವಿಧಾನ ಕಾದಂಬರಿ
೬. ಸಾಮಾಜಿಕ ಕಾದಂಬರಿ
೭. ನೆಲದ ಕಾದಂಬರಿ (Novel of the Soil)
೮. ಭಾವಾತಿರೇಕದ ಕಾದಂಬರಿ
೯. ಥೀಸಿಸ್ ನಾವೆಲ್
೧೦. ಪತ್ತೇದಾರಿ ಕಾದಂಬರಿ – ಎಂದು ವರ್ಗೀಕರಣ ಮಾಡಬಹುದು.

---

೩೯. ಎಲ್. ಎಸ್. ಶೇಷಗಿರಿರಾವ್ : ಕನ್ನಡ ವಿಶ್ವಕೋಶ. ಸಂಪುಟ ೪. ಪುಟ ೪೬೬

೪೦. ಎಲ್. ಎಸ್. ಶೇಷಗಿರಿರಾವ್ : ಕನ್ನಡ ವಿಶ್ವಕೋಶ. ಸಂಪುಟ ೪. ಪುಟ ೪೬೭

೪೧. ಎಲ್. ಎಸ್. ಶೇಷಗಿರಿರಾವ್ : ಕನ್ನಡ ವಿಶ್ವಕೋಶ. ಸಂಪುಟ ೪. ಪುಟ ೪೬೭

ಇಷ್ಟೇ ಅಲ್ಲದೆ. ವಿಪುಲವಾದ ಈ ಕಾದಂಬರಿ ರಾಶಿಯನ್ನು ಅಧ್ಯಯನದ ಅನುಕೂಲತೆಗೆಂದು ಸಾಮಾನ್ಯವಾಗಿ ಸಾಮಾಜಿಕ. ಪೌರಾಣಿಕ. ರಾಜಕೀಯ. ಕಾಲ್ಪನಿಕ. ಪ್ರಾದೇಶಿಕ. ಐತಿಹಾಸಿಕಗಳೆಂದೂ ವರ್ಗೀಕರಣ ಮಾಡಬಹುದು. ಇಂದಿನ ಪ್ರಸ್ತುತತೆಯಲ್ಲಿ ಸಾಮಾಜಿಕ ಕಾದಂಬರಿಗಳಿಗೇ ಸಿಂಹಪಾಲು. ಉಳಿದೆಲ್ಲ ವರ್ಗದ ಜನಪ್ರಿಯತೆಯನ್ನು ಗಳಿಸಿರುವುದು ಐತಿಹಾಸಿಕ ಸತ್ಯಸಂಗತಿ. ಹೊಸಗನ್ನಡದ ಎಲ್ಲ ಸಾಹಿತ್ಯಿಕ ಘಟ್ಟಗಳಲ್ಲಿ ಬೆಳೆದು ಬಂದ ಸಾಮಾಜಿಕ ಕಾದಂಬರಿಗಳು ಆಯಾಕಾಲದ ನಿರೂಪಣೆಯಲ್ಲಿ ವ್ಯತ್ಯಾಸವನ್ನು ಕಂಡರೂ ಸಹ ಸಮಾಜವೇ ಚಿಂತನೀಯ ವಿಷಯವಾಗಿದೆ.

**ಸಾಮಾಜಿಕ ಹಿನ್ನೆಲೆ :**

ಲೇಖಕನಿಗೆ ತಾನು ಬದುಕುತ್ತಿರುವ ಸಮಾಜದ ಬಗ್ಗೆ ಸದಾಕಾಲ ಕೃತಜ್ಞತಾ ಭಾವವೇ ಇರುತ್ತದೆ. ಸಮಾಜದ ಪ್ರತಿಯೊಂದು ಆಗು - ಹೋಗುಗಳನ್ನು ಆತ ಸದಾ ತೆರೆದ ಹೃದಯದಿಂದ ಸ್ವೀಕರಿಸಿ - ಅನುಭವಿಸಿ - ಅಭಿವ್ಯಕ್ತಿಸಲು ಪ್ರಯತ್ನಿಸುತ್ತಿರುತ್ತಾನೆ. ಚಿತ್ರಕಲೆ. ಸಂಗೀತ. ನೃತ್ಯ. ಸಾಹಿತ್ಯ –ಈ ಮೊದಲಾದ ಮಾಧ್ಯಮಗಳಲ್ಲಿ ತನ್ನ ಅನುಭವವನ್ನು ಅಭಿವ್ಯಕ್ತ ಮಾಡುತ್ತಿರುತ್ತಾನೆ. ಬರವಣಿಗೆಯ ಮುಖಾಂತರ ಸಮಾಜದೊಂದಿಗೆ ಸ್ಪಂದಿಸುವ ವ್ಯಕ್ತಿಯೇ ಸಾಹಿತಿ - ಲೇಖಕ. ಈತ ಹೆಚ್ಚು ಸ್ಪಂದನಾಶೀಲ ವ್ಯಕ್ತಿ. ತಾನು ಕಂಡುಂಡ ಅನೇಕ ಘಟನೆಗಳಿಗೆ ಪ್ರತಿಕ್ರಿಯಿಸುತ್ತಲೇ ಬರುತ್ತಾನೆ. ಸಾಹಿತ್ಯ ಕೇವಲ ಮನರಂಜನೆಗಾಗಿ ಎಂದು ಹೇಳುವವರಿದ್ದಾರೆ. ಆದರೆ ಅದು ಕ್ರಾಂತಿಯ ಸಾಧನವಾಗಬೇಕು. ಮನುಷ್ಯನ ಹೃದಯದ ವೈಶಿಷ್ಟ್ಯ-ವೈಚಿತ್ರ್ಯಗಳನ್ನು ತೋರಿಸಿಕೊಡಬೇಕು - ಕೊಡುತ್ತಿವೆ. ಅದಕ್ಕೆಂದೇ ಸಾಹಿತ್ಯದ ಹೊಸ ಹೊಸ ಪ್ರಕಾರಗಳು ಕಾಣಿಸಿವೆ: ಬೆಳೆದಿವೆ. ಯಾವ ಸಾಹಿತಿಯೇ ಆಗಲಿ ಇತರರನ್ನು ಮೆಚ್ಚಿಸಲು ಬರೆದಾಗ ಅವನ ಆ ಕೃತಿ ಅಪ್ರಾಮಾಣಿಕವಾಗುತ್ತದೆ. ತನ್ನ ಅನುಭವ. ತನ್ನ ನಾಡಿಗಳಲ್ಲಿ ಮಿಡಿಯುವ ಜೀವನ ಪ್ರತಿಕ್ರಿಯೆ. ಇವಕ್ಕಷ್ಟೇ ಸಾಹಿತ್ಯಕೃತಿಯಲ್ಲಿ ಪ್ರಾಮಾಣಿಕತೆ. ಆದರೆ ಅವನ ಅನುಭವದಲ್ಲಿ ತನ್ನ ಹೊರಜಗತ್ತಿನ ಅರಿವು ಸೇರಿರಬೇಕಾಗುತ್ತದೆ: ಅವನ ಜೀವನದಲ್ಲಿ. ಪ್ರತಿಕ್ರಿಯೆಯಲ್ಲಿ. ಉಸಿರಾಟದಲ್ಲಿ ತನ್ನ ಒಂಟಿತನ - ಸಮುದಾಯದ ಸದಸ್ಯತ್ವ ಎರಡು ಶ್ವಾಸಕೋಶಗಳಿದ್ದಂತೆ. ಸಾವಿನ ವಿಷಯ ಆಲೋಚಿಸಿದಾಗ. ಆಳವಾದ ನೋವನ್ನು ಅನುಭವಿಸುವಾಗ. ವ್ಯಕ್ತಿ ಒಂಟಿ: ಬಾಳಿನ ಕೆಲವು ಅನುಭವಗಳನ್ನೂ. ಸಾವನ್ನೂ ವ್ಯಕ್ತಿ ಒಂಟಿಯಾಗಿಯೇ ಎದುರಿಸಬೇಕಾಗುತ್ತದೆ. ಮನುಷ್ಯ ಬಾಳಿನ ಈ ಮುಖವೂ ಸಾಹಿತ್ಯವನ್ನು ಬಯಸುತ್ತದೆ. ಸಮಷ್ಟಿ ಜೀವನದ ಮುಖವೂ ಸಾಹಿತ್ಯವನ್ನು ಬಯಸುತ್ತದೆ. ಎರಡನ್ನೂ ಸಂಗಮಗೊಳಿಸಿದ ಸಾಹಿತ್ಯವಿಂದು ಬರುತ್ತಿದೆ - ಬಂದಿದೆ. ಆದರೆ ಎಲ್ಲ ಕಡೆಯ ಗಾಳಿ. ಬೆಳಕು. ಸತ್ವಗಳನ್ನು ಬಳಸಿಕೊಂಡರೂ ಇಲ್ಲಿ ಬರೆಯುವ ಸಾಹಿತಿ ಇಲ್ಲಿಯ ಸಾಹಿತಿಯಾಗಬೇಕು. ಇಲ್ಲಿಯ ಆವರಣಗಳಿಗೆ. ಇಲ್ಲಿನ ಅಗತ್ಯಗಳಿಗೆ. ನೋವು ಹಂಬಲಗಳಿಗೆ ಸ್ಪಂದಿಸಬೇಕು. ದಿನ - ದಿನಕ್ಕೆ ಜೀವನ ದಿಗ್ಭ್ರಮೆಗೊಳಿಸುವಂತೆ ಸಂಕೀರ್ಣವಾಗುತ್ತಿರುವಾಗ ಅನುಭವದ ಮೂಲಕ ಬಾಳನ್ನು ಸ್ಪಷ್ಟವಾಗಿ ಗ್ರಹಿಸಲು ಸಾಧ್ಯಮಾಡುವ ಯಾವುದೇ ಕವಿ-ಲೇಖಕನೇ ಆಗಲಿ ಆತ ಸದಾ ಚಿಂತನೀಯ ವ್ಯಕ್ತಿ.

ಬೆಳಗಲಿಯವರದು ಮಧ್ಯಮವರ್ಗದ ಕುಟುಂಬ. ಈ ಕುಟುಂಬದ ಪ್ರತಿಯೊಂದು ಘಟನೆಗಳಿಗೂ ಬೆಳಗಲಿಯವರು ಸ್ಪಂದಿಸುತ್ತಿದ್ದರು. ತಾವಿರುವ ಊರೂ ಕೂಡ ಮಧ್ಯಮ ವರ್ಗದ ಜನರಿಂದ ಕೂಡಿದ್ದಾಗಿತ್ತು. ಹೀಗಿರುವುದರಿಂದ ಇವರಿಗೆ ಬಡವರನ್ನು. ಅಸಹಾಯಕರನ್ನು ಕಂಡರೆ ಎಲ್ಲಿಲ್ಲದ ಪ್ರೀತಿ - ಅನುಕಂಪ. ಅದಕ್ಕೆಂದೇ ತಮ್ಮ ಕೃತಿಗಳುದ್ದಕ್ಕೂ ಬಡವರ. ಸಾಮಾನ್ಯಜನರ ಪರವಾಗಿದ್ದುದೇ ಕಂಡುಬರುತ್ತದೆ. ತಮ್ಮ ತಾಯಿಯ ನೋವಿನ ಅನೇಕ ಪ್ರಸಂಗಗಳು ಇವರನ್ನು ಮತ್ತಷ್ಟು ಸಂವೇದನಾಶೀಲರನ್ನಾಗಿಸಿವೆ.

" Literature is not an escape from life but an escape into life "[೪೨] ಎಂಬ ಮಾತು ಸಾಹಿತ್ಯ- ಸಮಾಜ ಇವೆರಡರ ಗಾಢಸಂಬಂಧಕ್ಕೆ ಪ್ರತೀಕ. ಬೆಳಗಲಿಯವರು ಚಿಕ್ಕಂದಿನಿಂದಲೇ ಕಲೆ - ಸಾಹಿತ್ಯ ಹಾಗೂ ಸಾಮಾಜಿಕ ಕಳಕಳಿಯನ್ನು ಹೊಂದಿದವರು. ಇವರ ಅಜ್ಜ - ಅಜ್ಜಿಯರು ಹೇಳಿದ ಅನೇಕ ಕಥೆಗಳು. ವಿನೋದಪ್ರಸಂಗಗಳು. ನೈತಿಕ ಮಾತುಗಳು. ಇವರ ಸಾಹಿತ್ಯಾಸಕ್ತಿಗೆ ಪೋಷಣೆ ನೀಡಿದವು. ಸರಳರೂ - ಸಜ್ಜನರೂ - ಮೃದುಹೃದಯಿಗಳೂ - ಸಂವೇದನಾಶೀಲರೂ ಆಗಿ ಬೆಳೆಯುತ್ತ ಬಂದ ಬೆಳಗಲಿಯವರಿಗೆ ಬನಹಟ್ಟಿಯ ಪರಿಸರ ಹೆಚ್ಚು ಚಿಂತೆಗೀಡು ಮಾಡಿತು. ಅಲ್ಲಿನ ನೇಕಾರರು. ಅವರ ಬಡತನ. ಸಮಸ್ಯೆಗಳು. ಕೌಟುಂಬಿಕ ಬವಣೆಗಳು. ಒಂದು ರೀತಿಯಲ್ಲಿ ಬೆಳಗಲಿಯವರ ಚಿಂತನಾ ಪರಿಧಿಯನ್ನು ಹೆಚ್ಚಿಸಿತು. ಇದಲ್ಲದೆ. ಬನಹಟ್ಟಿ - ರಬಕವಿ. ಯಲ್ಲಟ್ಟಿ. ಮುಧೋಳ. ಮಹಾಲಿಂಗಪುರ. ಜಮಖಂಡಿ ಸುತ್ತಮುತ್ತಲಿನ ಸಾಮಾಜಿಕ ವ್ಯವಸ್ಥೆ. ಅಲ್ಲಿನ ದಾರಿದ್ರ್ಯ. ವೇಶ್ಯಾವಾಟಿಕೆ. ಅವರ ಬರ್ಬರ ಬದುಕು. ಕೂಲಿಕಾರ್ಮಿಕರು. ಮಧ್ಯಮವರ್ಗದವರ ಬದುಕಿನ ಅರೆಕೊರೆ - ಅವ್ಯವಸ್ಥೆಗಳು ಇವರ ಅಂತರಂಗದ ಕಾಳಜಿಯನ್ನು ಕೆಣಕಿತು. ಇವರಿಗಿರುವ ಈ ಚಿಂತೆ. ಚಿಂತನೆಯಾದಾಗ ಅನಿವಾರ್ಯವಾಗಿ ಅಭಿವ್ಯಕ್ತಿಯ ಮಾರ್ಗತುಳಿದರು. ಪ್ರಾರಂಭದಲ್ಲಿ ಕಥೆಗಾರರಾಗಿ ಅಭಿವ್ಯಕ್ತಿಸುತ್ತ. ಅನಂತರದ ದಿನಗಳಲ್ಲಿ ಕಾದಂಬರಿಯೇ ಹೆಚ್ಚು ಸೂಕ್ತವೆಂದರಿತು ಅದನ್ನೇ ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಆಯ್ದುಕೊಂಡರು. ಪ್ರಸ್ತುತ ಸನ್ನಿವೇಶದಲ್ಲಿ ಗ್ರಾಮೀಣ ಅನುಭವವನ್ನು ಜೀವಾಳವಾಗಿಸುವ ಹೊಸ ಆಯಾಮವನ್ನು ಕಾದಂಬರಿಲೋಕದಲ್ಲಿ ತಂದಿರುವ ದು. ನಿಂ. ಬೆಳಗಲಿಯವರು ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ದಿಟ್ಟ ಹೆಜ್ಜೆಯನ್ನೇ ಇಟ್ಟಿದ್ದಾರೆ.

ಐನಾಪೂರ ಹೈಸ್ಕೂಲಿನ ಮುಖ್ಯಾಧ್ಯಾಪಕರಾಗಿದ್ದ ಡಿ. ಜಿ. ಎಂ. ದೇಶಪಾಂಡೆಯವರ ಪ್ರೀತಿ - ಪ್ರೋತ್ಸಾಹಗಳು. ಬಸವರಾಜ ಕಟ್ಟೀಮನಿಯವರ ಸಲಹೆ - ಸೂಚನೆ - ಮಾರ್ಗದರ್ಶನ. ಅವರ ವ್ಯಕ್ತಿತ್ವದ ಪ್ರಭಾವ. ಅವರು ಹುಟ್ಟುಹಾಕಿದ ಪ್ರಗತಿಶೀಲಪಂಥದ ಸದಸ್ಯತ್ವ. (ಸದಸ್ಯರಾಗಿದ್ದರೂ ಬೆಳಗಲಿಯವರ ಕೃತಿಗಳು ಆ ಪಂಥಕ್ಕೆ ಜೋತುಬೀಳದಿರುವುದು ವಿಪರ್ಯಾಸ ಸಂಗತಿ). ಅದಲ್ಲದೆ ಮಿರ್ಜಿ ಅಣ್ಣಾರಾಯರ ಪರಿಚಯ. ಜೊತೆಗೆ ಸತ್ಯಕಾಮರೊಂದಿಗೆ ಒಡನಾಟ - ಇವುಗಳೆಲ್ಲ ಬೆಳಗಲಿಯವರಿಗೆ ಸಾಹಿತ್ಯಾಸಕ್ತಿ ಬೆಳೆಸುವುದರೊಂದಿಗೆ ಸಾಮಾಜಿಕ ಚಿಂತನೆಗೊಳಪಡಿಸಿತು.

---

೪೨. ಎಲ್. ಎಸ್. ಶೇಷಗಿರಿರಾವ್ : ಕಾದಂಬರಿ - ಸಾಮಾನ್ಯ ಮನುಷ್ಯ. ಪುಟ ೧೪೪

ಹಳ್ಳಿಯೂ ಅಲ್ಲದ. ಪಟ್ಟಣವೂ ಅಲ್ಲದ. ಮಧ್ಯಮವರ್ಗದ ಮಧ್ಯಮಜನಾಂಗವೇ ಹೆಚ್ಚಾಗಿರುವ. ನೇಕಾರಿಕೆಯನ್ನೇ ತಮ್ಮ ಬಾಳಿನ ಬುತ್ತಿಯನ್ನಾಗಿರಿಸಿಕೊಂಡು. ಶ್ರೀಮಂತರಲ್ಲಿ ತಮ್ಮ ಬದುಕನ್ನೇ ನೇಯುತ್ತಿರುವ ಬಡಕುಟುಂಬಗಳು ಮೃದುಹೃದಯದ ಬೆಳಗಲಿಯವರ ಮೇಲೆ ಹೆಚ್ಚು ಪರಿಣಾಮ ಬೀರಿದುವು. ಆದ್ದರಿಂದಲೇ ಭಾರತದ ಗ್ರಾಮೀಣ ಸಮಸ್ಯೆಗಳನ್ನೇ ತಮ್ಮ ಕಾದಂಬರಿಗಳಿಗೆ ವಸ್ತುವಾಗಿರಿಸಿಕೊಂಡು. ಭಾರತದ ಅಭಿವೃದ್ಧಿಯ ಚಿಂತಕರೂ ಆಗಿದ್ದಾರೆ. ಗ್ರಾಮಭಾರತದ ಗಾಂಧೀಜಿಯವರ ಕನಸು ನನಸಾಗದಿರುವುದಕ್ಕೆ ಕಾರಣಗಳನ್ನು ಶೋಧಿಸಿದ್ದಾರೆ. ಮೂಲಭೂತವಾಗಿ ಬದಲಾವಣೆಯ ಗಾಳಿ ಸ್ವಾತಂತ್ರ್ಯೋತ್ತರ ಭಾರತದ ಗ್ರಾಮಗಳಲ್ಲಿ ಬೀಸಿಲ್ಲ. ನಾವು ನಿರೀಕ್ಷಿಸಿದ ಪ್ರಮಾಣದಲ್ಲಿ ಪ್ರಗತಿಯನ್ನು ಸಾಧಿಸಿಲ್ಲ. ಕ್ಷುದ್ರ ರಾಜಕಾರಣಿಗಳು ಜನತೆಯನ್ನು ಶೋಷಿಸುತ್ತಲೇ ಬಂದಿದ್ದಾರೆ. ಜನತೆಯ ನೋವುಗಳಿಗೆ ಸ್ಪಂದಿಸದೆ ತಮ್ಮ ಸ್ವಾರ್ಥವನ್ನೇ ಸಾಧಿಸುತ್ತ ಬಂದಿದ್ದಾರೆ. ಮುಗ್ಧ ಜನತೆಯ ಮೂಢನಂಬಿಕೆ. ಅನಕ್ಷರತೆ. ಅಜ್ಞಾನವನ್ನು. ಜನತೆಯ ಮುಗ್ಧತೆಯನ್ನು ತಮ್ಮ ಸ್ವಾರ್ಥದ ಕಲ್ಯಾಣಕ್ಕೆ ಬಳಸಿಕೊಂಡು ಗ್ರಾಮೀಣ ಜನರನ್ನು ಬದಲಾವಣೆಯ ಪ್ರಗತಿಯ ಹಾದಿಯಿಂದ ಹಿಂದೆ ತಳ್ಳುತ್ತಿರುವುದನ್ನು ಸ್ಫಟಿಕಸ್ಪಷ್ಟವಾಗಿ ತಮ್ಮ ಕಾದಂಬರಿಗಳಲ್ಲಿ ಬೆಳಗಲಿಯವರು ಹೇಳಿದ್ದಾರೆ.

ಬೆಳಗಲಿಯವರ ಕಥಾಕೌಶಲ್ಯಕ್ಕೆ ಸಸಿನೆಟ್ಟು ನೀರುಣಿಸಿ ಬೆಳೆಸಿದವರು ಅವರ ತಾಯಿಯೆಂದೇ ಹೇಳಬಹುದು. ವಿಶಿಷ್ಟವಾದ ಅನೇಕ ಕಥೆಗಳನ್ನು. ತನ್ನ ದಣಿವೆಯನ್ನೂ ಮರೆತು ಹೇಳುತ್ತಿದ್ದಳು. ಒಂದರ್ಥದಲ್ಲಿ ಬೆಳಗಲಿಯವರ ತಾಯಿ ಜನಪದ ಕತೆಗಳ ಭಂಡಾರವೇ ಆಗಿದ್ದಳು. ಅಂದು ಅವರು ಹೇಳಿದ 'ರಾಜಕುಮಾರಿ ಮತ್ತು ನಾಲ್ವರು ಕಳ್ಳರು' ಎಂಬ ಕತೆಯನ್ನೇ ಸಂಗ್ರಹಿಸಿ ಬೆಳಗಲಿಯವರು 'ಕರ್ಮವೀರ' ಪತ್ರಿಕೆಯಲ್ಲಿ ಪ್ರಕಟಗೊಳಿಸಿದರು. ಕತೆಗಳನ್ನಷ್ಟೇ ಅಲ್ಲದೆ. ಹಾಸ್ಯ - ವಿನೋದ ಪ್ರಸಂಗಗಳನ್ನು ಹೇಳುತ್ತಿದ್ದಳಂತೆ. ''ನನ್ನ ಕಥಾರಚನೆಗೆ ಅವ್ವ ಹೇಳುತ್ತಿದ್ದ ಕತೆಗಳು ಹದಮಾಡಿದ ನೆಲವೂ ಕಾರಣವಾಗಿದೆ''[೪೩] ಎಂದೆನ್ನುವ ಬೆಳಗಲಿಯವರ ಮಾತಿನಲ್ಲಿ ಇವರ ಇಂದಿನ ಸಾಹಿತ್ಯಕೃಷಿಗೆ ಅಂದಿನ ಅವರ ಕೌಟುಂಬಿಕ ನೆಲೆಯೂ ಅಲ್ಪಮಟ್ಟಿಗೆ ಕಾರಣವೆಂಬುದನ್ನು ಎತ್ತಿತೋರಿಸುತ್ತದೆ.

---

೪೩. ದು. ನಿಂ. ಬೆಳಗಲಿ : ಜಿ. ಎಸ್. ಕಾಪಸೆ(ಸಂ.) : 'ಬೆಳಗಲಿ' ಅಭಿನಂದನ ಗ್ರಂಥ. ಪುಟ ೨೮೪

## ಅಧ್ಯಾಯ : ಮೂರು

# ಬೆಳಗಲಿಯವರ ಜೀವನ

**ಬೆಳಗಲಿಯವರ ಮನೆತನ, ಪೂರ್ವಜರು :**

ಬೆಳಗಲಿಯವರ ಪೂರ್ವಜರು ಬಳ್ಳಾರಿ ಜಿಲ್ಲೆಯ ಉಜ್ಜಯಿನಿಯ. ನೆಲದುರ್ಗದ ಗೌಡಮನೆತನದವರು. ಬಡತನ. ಬರಗಾಲ. ಕದನಗಳಿಂದಾಗಿ ಅಲ್ಲಿಂದ ಬೆಳಗಾಂವಿ ಜಿಲ್ಲೆಯ ಅಥಣಿ ತಾಲೂಕಿನ ಐನಾಪುರಕ್ಕೆ ವಲಸೆ ಬಂದರು. ಹೀಗೆ ವಲಸೆ ಬಂದವರು ಐನಾಪುರ ಗ್ರಾಮದಲ್ಲಿಯೇ ಕೃಷಿಕಾರ್ಮಿಕರಾಗಿ ಉಪಜೀವಿಸಲು ಪ್ರಾರಂಭಿಸಿದರು. 'ಒಕ್ಕಲಿಗ' ಪಂಚಮಸಾಲಿಯವರಾದ ಇವರ ಪೂರ್ವಿಕರು ಹಿಂದೆ ಗೌಡರಾಗಿದ್ದವರು. ಇವರ ಪೂರ್ವಿಕರು ಯಾವಾಗ ಉಜ್ಜಯಿನಿಯಿಂದ ಐನಾಪುರಕ್ಕೆ ವಲಸೆ ಬಂದರೆಂಬುದು ಖಚಿತವಿಲ್ಲ. ಉಪಜೀವನಕ್ಕೆ ಇಲ್ಲಿಯೂ ತೊಂದರೆಯಾದಾಗ ಐನಾಪುರ ಗ್ರಾಮವನ್ನೂ ಬಿಟ್ಟು ಬೆಳಗಲಿಯವರ ಪೂರ್ವಿಕರಲ್ಲೊಬ್ಬನಾದ ಸಿಂಗಪ್ಪ ಕೂಲಿ - ನಾಲಿ ಮಾಡಿಯಾದರೂ ಬದುಕಬೇಕೆಂಬ ಛಲದಿಂದ ತನ್ನ ಹೆಂಡತಿ ಮಕ್ಕಳೊಂದಿಗೆ ಬನಹಟ್ಟಿಗೆ ಬಂದು ಸೇರಿದ. "ಐನಾಪುರ ಬಿಟ್ಟು ಬನಹಟ್ಟಿಗೆ ಬಂದ ಸಂಕೇತವೆಂದರೆ. ನಮ್ಮ ನಂದೇಶ್ವರ ಹೊಲಗಳ ದಾಖಲೆಯಲ್ಲಿ ನಮ್ಮ ಅಡ್ಡಹೆಸರು ಇನ್ನೂ 'ಐನಾಪುರ' ಎಂದೇ ಇದೆ".[೧] ಎಂದೆನ್ನುವ ದು. ನಿಂ. ಬೆಳಗಲಿಯವರ ಮಾತೇ ಸಿಂಗಪ್ಪ ಐನಾಪುರ ಬಿಟ್ಟು ಬನಹಟ್ಟಿಗೆ ಬಂದುದನ್ನು ಖಚಿತಪಡಿಸುತ್ತದೆ.

ಪೆಂಡಾರಿಯವರ ಸ್ನೇಹಜೀವಿಯಾದ ಸಿಂಗಪ್ಪ ಒಂದು ದಿನ ಐನಾಪುರ ಬಿಟ್ಟು ಬನಹಟ್ಟಿಗೆ ಚಕ್ಕಡಿಯಲ್ಲಿ ಬರುತ್ತಿದ್ದ. ದಾರಿಮಧ್ಯದಲ್ಲಿ ಬುತ್ತಿತಿಂದು ವಿಶ್ರಾಂತಿಗೆಂದು ಮರದ ನೆರಳಲ್ಲಿ ಕುಳಿತಿರುವಾಗ ಗೋಣಿಚೀಲದಲ್ಲಿ ಬೆಳ್ಳಿನಾಣ್ಯಗಳನ್ನು ತುಂಬಿರಿಸಿದ್ದು ಸಿಕ್ಕಿತು. ಅದನ್ನೊಯ್ದು ಪೆಂಡಾರಿಯವರಲ್ಲಿಟ್ಟು ಅಲ್ಪದಿನದ ನಂತರ ಮರಳಿ ಪಡೆದ. ಎಂಥ ಸ್ನೇಹ ವಿಶ್ವಾಸ ಅಂದಿನ ಕಾಲದ್ದು !

**ಬಾಳೇಬೂದಿ - ಬೆಳಗಲಿ :**

ದು. ನಿಂ. ಬೆಳಗಲಿಯವರ ಪೂರ್ವಜರನ್ನು 'ಬಾಳೇಬೂದಿ' ಎಂದು ಕರೆಯುತ್ತಿದ್ದರು. ಇದು ಅವರು ಮಾಡುತ್ತಿದ್ದ ವೃತ್ತಿಯನ್ನಾಧರಿಸಿ ಬಂದ ಹೆಸರು. ಐನಾಪುರದಿಂದ ಬನಹಟ್ಟಿಗೆ ಬೆಳಗಲಿಯವರ ಪೂರ್ವಿಕರು

---

೧. ದು. ನಿಂ. ಬೆಳಗಲಿ. ಜಿ. ಎಸ್. ಕಾಪಸೆ(ಸಂ.) : 'ಬೆಳಗಲಿ' ಅಭಿನಂದನ ಗ್ರಂಥ : ಪುಟ ೨೭೪

ಬಂದಾಗ ಉಪಜೀವನಕ್ಕೆ ಯಾವ ಉದ್ಯೋಗ ಮಾಡಬೇಕೆಂದು ತೋಚದೆ ಬಾಳೆಯ ಒಣ ದಿಂಡು ಸುಟ್ಟು ಅದರಿಂದ ಕಪ್ಪು ಬಣ್ಣವನ್ನು ತಯಾರಿಸುತ್ತಿದ್ದರು. ಬಾಳೇಬೂದಿಯ ಬಣ್ಣ ತಯಾರಿಸುತ್ತಿದ್ದ ಇವರಿಗೆ ಜನರೆಲ್ಲ ಈ ಉದ್ಯೋಗವನ್ನೇ ಆಧರಿಸಿ 'ಬಾಳೇಬೂದಿ' ಎಂದೇ ಕರೆಯುತ್ತಿದ್ದರು. ನಂತರ ಇವರ ಪೂರ್ವಿಕರು 'ಬೆಳಗಲಿ' ಎಂದು ಪರಿವರ್ತಿಸಿಕೊಂಡರು. ಈ ವೃತ್ತಿಯಿಂದ ಹಾನಿಯಾಗುತ್ತಿದ್ದರೂ ಕೂಡ ಲಾಭವೆಂದೇ ಹೇಳುತ್ತ. ಹಿಂದೆ ದಾರಿಮಧ್ಯದಲ್ಲಿ ಸಿಕ್ಕ ಬೆಳ್ಳಿನಾಣ್ಯಗಳನ್ನೇ ಉಪಭೋಗಿಸುತ್ತ. ಅವುಗಳನ್ನೇ ವ್ಯವಹಾರದಲ್ಲಿ ತೊಡಗಿಸಿ ಹೊಲ - ಮನೆಗಳನ್ನು ಮಾಡಿಕೊಂಡರು. ಆದರೆ ಊರವರೆಲ್ಲ ಇವರು ತಮ್ಮ ಉದ್ಯೋಗದಿಂದಲೇ ಆಸ್ತಿ ಮಾಡಿಕೊಂಡರೆಂದು ಊಹಿಸುತ್ತಿದ್ದುದೊಂದು ವಿಪರ್ಯಾಸ ಸಂಗತಿ.

ಬೆಳಗಲಿಯವರ ಅಜ್ಜ ಶಿವಲಿಂಗಪ್ಪ ಮೂರು - ನಾಲ್ಕು ಊರುಗಳಿಗೆ ಹಿರಿಯ ಮನುಷ್ಯನಾಗಿದ್ದನು. ತನ್ನ ಒಕ್ಕಲುತನದೊಂದಿಗೆ ಹಿರಿತನವನ್ನೂ ಮಾಡುತ್ತಿದ್ದನು. ಅಜ್ಜಿಯ ಹೆಸರು ಶಿವಲಿಂಗವ್ವ. ಗಂಡ-ಹೆಂಡಿರ ಹೆಸರು ಒಂದೇ ಇದ್ದರೆ. ಅವರು ಜೊಲ್ಲು ಸುರಿಸುವ ಮಕ್ಕಳಿಗೆ ವಿಭೂತಿ ತಿನ್ನಿಸಿದರೆ ಜೊಲ್ಲು ಸುರಿಸುವದನ್ನು ನಿಲ್ಲಿಸುತ್ತವೆಯೆಂಬ ವಾಡಿಕೆಯಿದೆ. ಹೀಗಾಗಿ ಪ್ರತಿನಿತ್ಯ ಇವರ ಮನೆಯ ಮುಂದೆ ಜೊಲ್ಲುಸುರಿಸುವ ಮಕ್ಕಳ ತಾಯಂದಿರ ದಂಡೇ ನಿಲ್ಲುತ್ತಿತ್ತು. ಶಿವಲಿಂಗವ್ವನಿಗೆ ಚೋಳಿನ ಕಡಿತಕ್ಕೆ ಔಷಧಿಯೂ ಗೊತ್ತಿದ್ದು. ಹಗಲಿರುಳೆನ್ನದೆ ಚೇಳು ಕಡಿದವರಿಗೆ ಔಷಧಿ ಹಾಕುತ್ತಿದ್ದ ಶಿವಲಿಂಗವ್ವ ಗ್ರಾಮೀಣ ಪರಿಸರದಲ್ಲಿ ಅಂದು ಅಚ್ಚುಮೆಚ್ಚಿನವಳಾಗಿದ್ದಳು. ಇವರದು ಸಾಂಪ್ರದಾಯಿಕ ಔದಾರ್ಯದ ಅನುಕಂಪಶೀಲವಾದಿ ಮನೆತನ.

**ಜನನ : ತಂದೆ - ತಾಯಿ :**

ಬೆಳಗಲಿಯವರು ಹುಟ್ಟಿದ್ದು ೩೦-೩-೧೯೩೧ ರಂದು. ಇವರ ತಂದೆ ನಿಂಗಪ್ಪ. ತಾಯಿ ಚೆನ್ನವ್ವ. ಅಥಣಿ ತಾಲೂಕಿನ ಐನಾಪುರ ಗ್ರಾಮ ಇವರ ತಾಯಿಯ ತವರೂರು. ಐನಾಪುರದೊಂದಿಗೆ ಬೆಳಗಲಿಯವರ ಮನೆತನದ ಸಂಬಂಧ ಅನೇಕ ತಲೆಮಾರುಗಳಿಂದ ಅಂಟಿಕೊಂಡೇ ಬಂದದ್ದು. ಚೆನ್ನವ್ವನ ತಂದೆ ಸಾತನಿಂಗಪ್ಪ ಪಾರಶೆಟ್ಟಿ. ತಾಯಿ ಶಿವಬಾಯಿ. ಅಕ್ಕ ಕಲ್ಲವ್ವ. ಇವರ ತಂದೆಗೆ ಗಂಡು ಸಂತಾನವಿಲ್ಲದ್ದರಿಂದ ಸಾತನಿಂಗಪ್ಪನ ಹೊಲ-ಮನೆಗಳು ಹೆಣ್ಣುಮಕ್ಕಳಿಗೇ ಹಂಚಿಕೆಯಾದಾಗ ಬೆಳಗಲಿಯವರ ತಂದೆಗೂ ಪಾಲುದೊರೆತು. ಬನಹಟ್ಟಿ. ಐನಾಪುರಗಳೆರಡರ ಜಮೀನಿನ ಭಾರ ಹೊರಬೇಕಾಯಿತು.

ಚೆನ್ನವ್ವನಿಗೆ ಬೇಗ ಮಕ್ಕಳಲಾಗಲೇ ಇಲ್ಲ. ಅದಕ್ಕಾಗಿ ಅತ್ತೆ ಶಿವಲಿಂಗವ್ವನ ಬಿರುನುಡಿಗಳನ್ನು ನುಂಗಿ ಬದುಕಬೇಕಾಯಿತು. 'ಬಂಜೆ' ಎಂಬ ಶಬುದ ಹೊತ್ತು ಬದುಕುವಾಗ ಗಂಡ ನಿಂಗಪ್ಪನಿಗೆ ಇನ್ನೊಂದು ಮದುವೆ ಮಾಡುವ ವಿಚಾರಗಳೂ ಕಿವಿಗೆ ಬಿದ್ದಾಗ (ನಿಂಗಪ್ಪ ಅದಕ್ಕೊಪ್ಪದಿದ್ದುದು ಬೇರೆ ಸಂಗತಿ) ಬದುಕು ಬೇಸರವೆನಿಸಿ ಆತ್ಮಹತ್ಯೆ ಮಾಡಿಕೊಳ್ಳಲು ಅನೇಕ ಸಲ ಪ್ರಯತ್ನಿಸಿದಳು. ಆದರೆ ಹೆಣ್ಣುಮಕ್ಕಳಿಗೆ ತಾಳ್ಮೆ - ಕಷ್ಟಸಹಿಷ್ಣುತೆಗಳು

ಭಾರತೀಯ ಸಂಪ್ರದಾಯವಲ್ಲಿ ಅನಿವಾರ್ಯ. ಈ ಅನಿವಾರ್ಯವಾದ ಗುಣಗಳೆಲ್ಲ ಚೆನ್ನವ್ವನಲ್ಲಿದ್ದುದರಿಂದ ಬಾಳಿ - ಬದುಕಿ ಸಾರ್ಥಕ್ಯವನ್ನು ಪಡೆದಳು. ಚೊಚ್ಚಿಲು ಬಸುರಿಯಾದ ಚೆನ್ನವ್ವನಿಗೆ ದಿನ ತುಂಬಿದಾಗ ಅವಳನ್ನು ಆರೈಕೆಗಾಗಿ ತವರುಮನೆಗೆ ಖುಷಿಯಿಂದ ಕಳಿಸದೆ. ಶಿವಲಿಂಗವ್ವ ಕಾಲ್ನಡಿಗೆಯಲ್ಲಿಯೇ ಉಟ್ಟಬಟ್ಟೆಯ ಮೇಲೆ ಕಳಿಸಿಕೊಟ್ಟದ್ದು. ದಾರಿ ಮಧ್ಯದಲ್ಲಿ ಕುಳ್ಳೊಳ್ಳಿ ದಂಪತಿಗಳು ಆರೈಕೆ ಮಾಡಿದ್ದು. ಶಿವಲಿಂಗಪ್ಪನಾಗಲಿ. ನಿಂಗಪ್ಪನಾಗಲಿ. ಇದಕ್ಕೆ ಯಾವುದೇ ಪ್ರತಿಕ್ರಿಯೆ ತೋರದಿರುವುದನ್ನು ನೋಡಿದರೆ ವಿಚಿತ್ರವೆನಿಸುತ್ತದೆ.

ಚೆನ್ನವ್ವ ಮೊದಲು ಹಡೆದದ್ದು ಹೆಣ್ಣುಮಗು. ಅವಳೇ ಬೆಳಗಲಿಯವರ ಹಿರಿಯಕ್ಕ ತಂಗೆವ್ವ. ಆ ನಂತರ ಮತ್ತೊಂದು ಹೆಣ್ಣುಮಗು ಬಂಗಾರೆವ್ವ. ಬಂಗಾರೆವ್ವನ ಬೆನ್ನಹಿಂದೆ ಗಂಗವ್ವ - ಅವ್ವಕ್ಕ ಹುಟ್ಟಿದರು. ಹೀಗೆ ಸತತ ನಾಲ್ಕು ಹೆಣ್ಣುಮಕ್ಕಳಿಗೆ ಜನ್ಮಕೊಟ್ಟ ಚೆನ್ನವ್ವನಿಗೆ ಅತ್ತೆಯ ಕಾಟ ಮತ್ತಷ್ಟು ಜಾಸ್ತಿಯಾಯಿತು. ಮನೆತನಕ್ಕೆ ಗಂಡುಸಂತಾನದ ಅವಶ್ಯಕತೆಯನ್ನು ಮುಂದಿಟ್ಟು ಮಗನಿಗೆ ಮತ್ತೊಂದು ಮದುವೆ ಮಾಡಲು ಶಿವಲಿಂಗವ್ವ ಮುಂದಾದಳು. ಆದರೆ ಅದು ಫಲಿಸಲಿಲ್ಲ. ಅತ್ತೆಯ ತಿರಸ್ಕಾರ ಜೀವಹಿಂಡಿದರೆ ಮಾವನ ಪ್ರೀತಿ - ವಾತ್ಸಲ್ಯ ಚೆನ್ನವ್ವನಿಗೆ ಜೀವಹನಿಯಾಯಿತು.

ಚೆನ್ನವ್ವನಿಗೆ ಐದನೆಯ ಬಾರಿಗೆ ಗರ್ಭಸಿಂತಾಗ. ಬನಹಟ್ಟಿಗೆ ಒಂದು ಸಲ ಅರಭಾವಿಮಠದ ದುರದುಂಡೇಶ್ವರ ಸ್ವಾಮಿಗಳು ಬಂದಿದ್ದರು. ಅವರನ್ನು ತಮ್ಮ ಮನೆಗೆ ಆಮಂತ್ರಿಸಿದ ಶಿವಲಿಂಗಪ್ಪ ಸ್ವಾಮಿಗಳ ಪಾದಪೂಜೆ ಸಲ್ಲಿಸಿ ಕಾಣಿಕೆ ನೀಡುತ್ತಾ " ಅಪ್ಪಾ ನಮ್ದು ಎಲ್ಲ ಚಲೋ ಐತ್ರಿ ಮೂರ ಊರಿಗೆ ಉತ್ಪನ್ನ. ಏನೂ ಕಮ್ಮೀ ಇಲ್ರಿ. ಆದರ ಮನೀಗಿ ಒಂದ ಗಂಡ ಇಲ್ರೀ.... ಅದ ಒಂದ ಕಮ್ಮೀ ಐತ್ರಿ...."[೨] ಎಂದು ತನ್ನ ಮನೆತನದ ಕೊರತೆಯೊಂದನ್ನು ನಿವೇದಿಸಿಕೊಂಡಾಗ ಸ್ವಾಮಿಗಳು ಚೆನ್ನವ್ವನನ್ನು ಆಶೀರ್ವದಿಸುತ್ತ ತೆಂಗಿನಕಾಯಿಯೊಂದನ್ನು ಉಡಿಯಲ್ಲಿ ಹಾಕಿ 'ಗಂಡಾಯ್ತು ಹೋಗು' ಎಂದರು. ಬೆಳಗಲಿಯವರು ಅರಭಾಂವಿಮಠದ ದುರದುಂಡೀಶ್ವರ ಸ್ವಾಮಿಗಳ ವರಪ್ರಸಾದದಿಂದ ಹುಟ್ಟಿದುದರಿಂದ ಇವರಿಗೆ 'ದುಂಡಪ್ಪನೆಂದು' ನಾಮಕರಣ ಮಾಡಿದರು. ಪ್ರೀತಿಯಿಂದ ದುಂಡಪ್ಪನೆಂದು ಕರೆದರೆ. ದಾಖಲೆಗಳಲ್ಲಿ ದುರದುಂಡೀಶ್ವರ ಎಂದಿದೆ. ನಾಲ್ಕು ಹೆಣ್ಣುಮಕ್ಕಳ ಮೇಲೆ ಒಬ್ಬ ಗಂಡುಮಗು ಜನಿಸಿದರೆ ಅವರು ಕೀರ್ತಿವಂತರಾಗುತ್ತಾರೆಂಬುದನ್ನು ಇಂದಿನ ವೈಜ್ಞಾನಿಕಯುಗದಲ್ಲೂ ಅನೇಕರು ನಂಬುತ್ತಾರೆ. ಬೆಳಗಲಿಯವರು ಹುಟ್ಟಿದ್ದು ಹೀಗೆಯೇ. ತಾಯಿ ಇದನ್ನು ಪದೆ ಪದೆ ಇವರಿಗೆ ನೆನಪಿಸಿಕೊಡುತ್ತಿದ್ದಳಂತೆ. ಒಟ್ಟಿನಲ್ಲಿ 'ದುಂಡಪ್ಪ'ನ ಜನನದಿಂದ ಇವರ ಮನೆತನದಲ್ಲಿ ಹೊಸವಾತಾವರಣವೇ ನಿರ್ಮಾಣಗೊಂಡಿತು.

ದುಂಡಪ್ಪ ಹುಟ್ಟುವುದಕ್ಕಿಂತ ಮುಂಚೆಯೇ ಸೋದರತ್ತೆಯರಾದ ತುಕ್ಕವ್ವ. ಗಂಗವ್ವ ಪ್ಲೇಗಿನಲ್ಲಿ ತೀರಿಕೊಂಡಿದ್ದರು. ತುಕ್ಕವ್ವನ ಅನಾಥಮಗ ಕಾಡಪ್ಪನನ್ನು ಬೆಳಗಲಿಯವರ ತಾಯಿ ತಮ್ಮಲ್ಲಿಯೇ ಕರೆದುಕೊಂಡು

---

೨. ದು. ನಿಂ. ಬೆಳಗಲಿ. ಜಿ. ಎಸ್. ಕಾಪಸೆ(ಸಂ.) : 'ಬೆಳಗಲಿ' ಅಭಿನಂದನ ಗ್ರಂಥ : ಪುಟ ೨೭೮



ದು. ನಿಂ. ಬೆಳಗಲಿ

ಒಂದು ಮಗನಂತೆಯೇ ಸಾಕಿದರು. ಆದರೆ ಉಡಾಳನಾದ ಆತನಿಗೆ ತನ್ನ ಹಿರಿಯ ಮಗಳು ತಂಗೆವ್ವನನ್ನು ಕೊಡುವುದೆಂದಾಗ ಸಹಜವಾಗಿಯೇ ವಿರೋಧಿಸಿದಳು. ಆದರೆ ಅವಳ ವಿರೋಧ ಲೆಕ್ಕಕ್ಕಿಲ್ಲದ್ದು. ನಂತರದಲ್ಲೊಂದು ಹೆಣ್ಣು ಮಗುವನ್ನು ಹೆತ್ತ ಚೆನ್ನವ್ವ. ಅವಳಿಗೂ ದುಂಡವ್ವನೆಂದೇ ಹೆಸರಿಟ್ಟರು. ಇದಕ್ಕೂ ದುರದುಂಡೀಶ್ವರ ಸ್ವಾಮಿಗಳವರ ಮೇಲಣ ಭಕ್ತಿಯೇ ಕಾರಣ.

ಬೆಳಗಲಿಯವರ ಅಜ್ಜ - ಅಜ್ಜಿ. ತಂದೆ - ತಾಯಿಯರಿಗೆ ದುರದುಂಡೀಶ್ವರನ ಮೇಲಿರುವ ಭಕ್ತಿಯಂತೆಯೇ ಚಿಂಚಲಿಯ ಮಾಯವ್ವನ ಮೇಲೂ ಇತ್ತು. ಭಾರತಹುಣ್ಣಿಮೆಗೆ ಹೋದಾಗಲೊಮ್ಮೆ 'ಉಟಗಿ' ಉಡುವ ಪದ್ಧತಿ ಮೊದಲಿನಿಂದಲೂ ಬಂದಿತ್ತು. ಹುಟಿಗೆ. ಹುಟ್ಟಿಗೆ. ಉಟುಗೆ. ಉಟ್ಟಗಿ. ಉಟಗಿ – ಎಂದು ವಿವಿಧ ಹೆಸರುಗಳಿಂದ ಕರೆಯುವ ಈ ಸಂಪ್ರದಾಯ ಬೆಳಗಾಂವಿ. ಬಿಜಾಪುರ. ಬಾಗಲಕೋಟ. ಧಾರವಾಡ. ಗದಗ ಜಿಲ್ಲೆಗಳಲ್ಲಿ ಇಂದಿಗೂ ಜಾರಿಯಲ್ಲಿದೆ. ಬೆಳಗಲಿಯವರ ಕುಲದೇವರೆಂದರೆ. ಗುಡ್ಡದ ಎಲ್ಲಮ್ಮ. ಅಲ್ಲಿಗೂ ಪ್ರತಿವರ್ಷ ಹೋಗುತ್ತಿದ್ದರು. ಒಟ್ಟಿನಲ್ಲಿ ಬೆಳಗಲಿಯವರದು ಸಂಪ್ರದಾಯಸ್ಥ ತುಂಬುಕುಟುಂಬವಾಗಿದ್ದು. ದೇವರು - ದಿಂಡರು. ಸಂಪ್ರದಾಯ - ಆಚರಣೆಗಳ ಮೇಲೆ ಸಾಕಷ್ಟು ನಂಬಿಕೆಯಿಟ್ಟು ಬದುಕುವ ಇವರಿಗೆ ಉಂಡುಟ್ಟು ಸುಖವಾಗಿರುವಷ್ಟು ಆಸ್ತಿಯೂ ಇತ್ತು.

ಸ್ವಾಭಿಮಾನಿಯೂ. ಒಂದಿಷ್ಟು ಸಿಟ್ಟಿನ ಸ್ವಭಾವದವರಾದ ಸಿಂಗಪ್ಪ ತಮ್ಮ ತಂದೆಗೆ ವಯಸ್ಸಾಗುತ್ತ ಬಂದಂತೆ ಮನೆತನದ ಸಂಪೂರ್ಣ ಜವಾಬ್ದಾರಿಯನ್ನು ತಾನೇ ಹೊತ್ತುಕೊಂಡನು. ಐನಾಪುರ - ನಂದೀಶ್ವರ ಎರಡೂ ಗ್ರಾಮಗಳ ಒಕ್ಕಲುತನ ನೋಡಿಕೊಳ್ಳುತ್ತಿದ್ದ ಈತ ಹೈನಿಗಾಗಿ ಉತ್ತಮ ಎಮ್ಮೆಗಳನ್ನೂ ದುಡಿಮೆಗಾಗಿ ಆನೆಯಂಥ ಎತ್ತುಗಳನ್ನೂ ಸಾಕಿದ್ದನು. ದನಕರುಗಳಿಗೆ ಬೇಕಾಗುವ ಹುಲ್ಲು - ಕಣಿಕೆ - ಹೊಟ್ಟುಗಳಿಗೆ ಅನೇಕ ಸಲ ಪರದಾಡಿದ್ದೂ ಉಂಟು.

**ಬೆಳಗಲಿಯವರ ಬಾಲ್ಯ :**

ದುಂಡಪ್ಪ ಬೇಡಿಬಯಸಿ ಪಡೆದ ಮಗ. ಮನೆತನಕ್ಕೆ ಒಬ್ಬನೇ ಗಂಡುಸಂತತಿ. ಇವರ ಮುತ್ತಜ್ಜ ಸಿಂಗಪ್ಪ. ಅಜ್ಜ ಶಿವಲಿಂಗಪ್ಪ. ತಂದೆ ಸಿಂಗಪ್ಪ. ದುಂಡಪ್ಪ. ಬೆಳಗಲಿಯವರ ಮನೆತನಕ್ಕೆ ಒಬ್ಬೊಬ್ಬರೇ ಗಂಡುಮಕ್ಕಳು. ಒಬ್ಬನೇ ಗಂಡುಮಗನಾದ ದುಂಡಪ್ಪನ ಮೇಲೆ ಅವರ ತಾಯಿಯ ಆಳವಾದ ಪ್ರೀತಿ ವಾತ್ಸಲ್ಯ. ಹೊಲ ಮನೆಗಳ. ದನಕರುಗಳ ಎಡೆಬಿಡದ ಕೆಲಸಗಳ ಮಧ್ಯದಲ್ಲೂ ಮಗನದೇ ಚಿಂತೆ. ಬೆಳ್ಳಿಗ್ಗೆ ಹಿಂಡಿದ ಹಾಲು. ಅನಂತರ ನ್ಯಾಹರಿ. ಊಟ. ಮನೆಯಲ್ಲಿದ್ದರೆ ಓಗೆ. ಹೊಲಕ್ಕೆ ಹೋಗುವದಿದ್ದರೆ ಎಲ್ಲೆಲ್ಲಿ ಯಾವ ಮಾಡಿನಲ್ಲಿ. ಕಪಾಟಿನಲ್ಲಿ. ನೆಲುವಿನ. ಮೇಲೆ ಪದಾರ್ಥಗಳಿದ್ದ ಬಗ್ಗೆ ಹೇಳುವುದು. ಅಕ್ಕಂದಿರಿಗೆ ತಮ್ಮನನ್ನು ಚೆನ್ನಾಗಿ ನೋಡುವಂತೆ ತಾಕೀತು ಮಾಡುತ್ತಿದ್ದಳು. ದುಂಡಪ್ಪ ಚಿಕ್ಕವನಿದ್ದಾಗ ಅಕ್ಕ ಅವ್ವಕ್ಕನ ಜೊತೆ ಅನೇಕ ಸಲ ಮಸಾರಿಹೊಲಗಳಿಗೆ ಎಮ್ಮೆ ಬಿಟ್ಟುಕೊಂಡು ಹೋಗುತ್ತಿದ್ದುದುಂಟು. ಹೊಲಗಳಲ್ಲಿ ಸೇಂಗಾ. ಅಕ್ಕಡಿಕಾಳುಗಳಾದ ಅಲಸಂದಿ. ಹೆಸರುಗಳಿದ್ದರಂತೂ

ತೀರಿಹೋಯಿತು. ಅವುಗಳನ್ನು ತಿನ್ನುತ್ತ ಸಜ್ಜೆದಂಟಿನ ಮೇಲೆರಗುತ್ತಿದ್ದ ಜೋರಂಗಿಗಳನ್ನು ಓಡಿಯುತ್ತ ಕುಣಿದು ಕುಪ್ಪಳಿಸುತ್ತ ಹೊಲದ ಮೂಲೆ ಮೂಲೆಗೂ ಓಡಾಡುತ್ತಿದ್ದನು. ಮನೆಯಲ್ಲಿ ಹಾಲು - ಹೈನಿಗೆ ಕೊರತೆಯಿರಲಿಲ್ಲ. ಇವರ ಮನೆಯಲ್ಲಿ ಯಾವಾಗಲೂ ಹಿಂಡುವ ಎಮ್ಮೆಗಳ ದಂಡೇ ಇರುತ್ತಿತ್ತು. ಇವರ ತಾಯಿ ಬೆಳಿಗ್ಗೆ ಎದ್ದು 'ಹೆಂಡಿಕಸ' ಮಾಡಿ ಎಮ್ಮೆಗಳಿಗೆ ನುಚ್ಚು - ನುರಗು ತಿನ್ನಿಸಿ. ಅವುಗಳನ್ನು ಹಿಂಡಿಕೊಳ್ಳುವಾಗ ಪಕ್ಕದಲ್ಲಿಯೇ ದುಂಡಪ್ಪನನ್ನು ಕೂಡಿಸಿಕೊಂಡು ಗ್ಲಾಸು ತುಂಬ ಬಿಸಿನೊರೆಹಾಲನ್ನು ಕೊಡುತ್ತಿದ್ದಳು. ನೊರೆಹಾಲಿನ ರುಚಿ ಇಂದಿನ ಮಕ್ಕಳು ಕನಸಿನಲ್ಲಿಯೂ ಕಾಣದಿರುವುದೊಂದು ವಿಪರ್ಯಾಸ ಸಂಗತಿ. ಒಕ್ಕಲುತನದ ಮನೆಯಲ್ಲಿ ಅಕ್ಕಂದಿರ ಅಕ್ಕರೆಯಲ್ಲಿ. ತಾಯಿಯ ಪ್ರೀತಿಯ ಮಡಿಲಲ್ಲಿ. ತಂದೆಯ ನಿಯಮಬದ್ಧ ಬದುಕಿನ ಮಾದರಿಯಲ್ಲಿ ದುಂಡಪ್ಪನ ಬಾಲ್ಯ ತುಂಬ ಸಂತೋಷದಾಯಕವಾಗಿಯೇ ಕಳೆಯಿತು.

## ವಿಶಿಷ್ಟ ವ್ಯಕ್ತಿತ್ವದ ತಾಯಿ :

'ತಾಯಿ' ಎಂಬ ಪದ ಪ್ರತಿಯೊಬ್ಬರ ಬದುಕಿನಲ್ಲೂ ಆಪ್ಯಾಯಮಾನವಾದುದೇ ಸರಿ. ತಾಯಿಯ ಪ್ರೀತಿ - ವಾತ್ಸಲ್ಯಗಳಿಗೆ ಬೆಲೆಗಟ್ಟಲಾಗದು. ತಾಯಿ ಮೊಲೆಹಾಲನ್ನು ಹೊಟ್ಟೆಗೆ ನೀಡಿದರೆ. ಅದರೊಂದಿಗೆ ಸಂಸ್ಕೃತಿಯನ್ನು ಭಾವೀ ಬದುಕಿಗಾಗಿ ಉಣಬಡಿಸುತ್ತಾಳೆ. ಅದಕ್ಕಂದೇ 'ಕೆಟ್ಟ ಮಕ್ಕಳಿರಬಹುದು. ಆದರೆ ಕೆಟ್ಟ ತಾಯಂದಿರಿರಲು ಸಾಧ್ಯವಿಲ್ಲ' ವೆಂಬ ಮಾತು ಸಟೆಯಲ್ಲ ದಿಟ. 'ತಾಯಿಯೇ ಮೊದಲಗುರು' ಎಂಬ ಮಾತೂ ಅರ್ಥಪೂರ್ಣವಾದುದು. ದುಂಡಪ್ಪನ ವ್ಯಕ್ತಿತ್ವದ ಮೇಲೆ ಅವರ ತಾಯಿಯ ಪ್ರಭಾವ ತುಂಬ ಹಿರಿದು. ತಂದೆ ಸಿಟ್ಟಿನ ಸ್ವಭಾವದವರು. ಅನೇಕ ಸಲ ದುಂಡಪ್ಪನ ಹಟಮಾರಿತನಕ್ಕೆ ಛಡಿಏಟು ಕೊಟ್ಟಿದ್ದೂ ಉಂಟು. ಅತ್ತಿದ್ದೂ ಉಂಟು: ಅದಕ್ಕೆ ತಾಯಿಯೇ ಸಮಾಧಾನಿಸುತ್ತಿದ್ದಳು. ಬೆಳಗಲಿಯವರು ದೊಡ್ಡವರಾದ ಮೇಲೂ ಅವರ ತಂದೆ ಅನೇಕ ಸಲ ವ್ಯಥೆಯಾಗುವಂತೆ ಮಾತನಾಡಿದ್ದುಂಟು. ಆಗಲೂ ತಾಯಿ 'ತಮ್ಮಾ ಅವ್ನ* ಸ್ವಭಾವ ಹಾಂಗ! ಅದಕೇನ ಮಾಡುದೈತಿ ? ಸಂಭಾಳಿಸಿಕೊಂಡು ಹೋಗಬೇಕು....' ಎಂದು ಹೇಳುತ್ತಿದ್ದಳು. ತಾಯಿಯ ತಾಳ್ಮೆ. ಕಷ್ಟಸಹಿಷ್ಣುತೆ. ಸತತ ಪರಿಶ್ರಮ. ಹೊಂದಾಣಿಕೆ ಮನೋಭಾವದೊಂದಿಗೆ ಮಕ್ಕಳ ಆರೈಕೆಯಲ್ಲಿನ ವಿಶೇಷ ಆಶಕ್ತಿ. ಇವುಗಳೊಂದಿಗೆ ನೈಸರ್ಗಿಕ ಪ್ರತಿಭಾವಂತಳು.

ದುಂಡಪ್ಪನನ್ನು ಮಗ್ಗುಲಲ್ಲಿಯೇ ಮಲಗಿಸಿಕೊಂಡು ಅನೇಕ ಕತೆ - ವಿನೋದ ಪ್ರಸಂಗಗಳನ್ನು. ನೈತಿಕ ವಿಚಾರಗಳನ್ನು. ಬದುಕಿನ ರೀತಿ - ನೀತಿಗಳನ್ನು ಹೇಳುತ್ತ. ಅಂಗೈಯಲ್ಲಿಟ್ಟಿಕೊಂಡು ಆರೈಕೆ ಮಾಡುತ್ತಿದ್ದಂತೆಯೇ ಜ್ಞಾನದಂಗೈಯಲ್ಲಿ ಪೋಷಣೆ ಮಾಡುತ್ತಿದ್ದುದು ಅವರ ವ್ಯಕ್ತಿತ್ವಕ್ಕೊಂದು ನಿದರ್ಶನ. ಅನಕ್ಷರಸ್ಥಳಾದರೂ ಮಗನ ಸಾಹಿತ್ಯಾಸಕ್ತಿಗೆ ಅಕ್ಷರಸ್ಥರಿಗಿಂತಲೂ ಹೆಚ್ಚಿಗೆ ಕಾರಣೀಭೂತಳಾದಳು. ಒಟ್ಟಿನಲ್ಲಿ ಬೆಳಗಲಿಯವರಿಗೆ ಆಕೆಯೊಬ್ಬ 'ಆದರ್ಶ ತಾಯಿ' ಯಾಗಿದ್ದಳು.

---

* ಗಂಡನನ್ನು ಬಹುವಚನದಿಂದ ಕರೆಯುವ ಸಂಸ್ಕಾರವಿಲ್ಲದ. ಏಕವಚನದಲ್ಲಿ ಕರೆಯಲಾಗದೆ. ಸ್ತ್ರೀಲಿಂಗ ಏಕ ವಚನದಲ್ಲಿ ಕರೆಯುವ ವಾಡಿಕೆ ರಬಕವಿ. ಬನಹಟ್ಟಿ ಕಡೆಗೆ ಅಂದು ಕರೆಯುವ ರೂಢಿಯಿತ್ತು. ಇದು ಬೇರೆಡೆ ವಿಚಿತ್ರವೆನ್ನಿಸಲೂ ಬಹುದು.




**ಬೆಳಗಲಿಯವರ ಶಿಕ್ಷಣ :**

'ಮನೆಯೇ ಮೊದಲ ಪಾಠಶಾಲೆ; ತಾಯಿಯೇ ಪ್ರಥಮ ಗುರು' ಎಂಬ ಮಾತು ಬೆಳಗಲಿಯವರ ಶೈಕ್ಷಣಿಕ ಜೀವನವನ್ನು ಅವಲೋಕಿಸುವಾಗ ಅವಶ್ಯವಾಗಿ ನೆನಪಿಸಿಕೊಳ್ಳಬೇಕಾದ ಸಂಗತಿ. ಇವರು ತಾಯಿಯಿಂದ ಕಲಿತದ್ದು ಸಾಕಷ್ಟಿದೆ. ಬಾಲ್ಯದಿಂದಲೂ ದುಂಡಪ್ಪನಿಗೆ ಕಲಿಯುವುದರಲ್ಲಿ ತುಂಬ ಆಸಕ್ತಿ. ಇವರ ಪ್ರಾಥಮಿಕ ಶಿಕ್ಷಣ ಆರಂಭವಾದದ್ದು ಬನಹಟ್ಟಿಯಲ್ಲಿ. ಬನಹಟ್ಟಿ ಅಂದಿನಿಂದಲೂ ನೇಕಾರಿಕೆಗೆ ಪ್ರಸಿದ್ಧವಾದ ದೊಡ್ಡ ಗ್ರಾಮ. ಮರಾಠಿ ಆಳರಸರ ಪ್ರಭಾವದಿಂದ ಕನ್ನಡ - ಮರಾಠಿ ಸಮ್ಮಿಶ್ರಣವು ಮಾಧ್ಯಮವಾಗಿತ್ತು. ಕನ್ನಡ ಓದು - ಬರಹದ ಜೊತೆಗೆ ಮರಾಠಿಯನ್ನು ಮೋಡಿ ಲಿಪಿಯಲ್ಲಿ ಕಲಿಸಲಾಗುತ್ತಿತ್ತು. ಬನಹಟ್ಟಿಯ ಸೀರೆ ವ್ಯಾಪಾರವು ಹೆಚ್ಚು ಮಹಾರಾಷ್ಟ್ರದೊಂದಿಗಿರುವುದರಿಂದ ಮರಾಠಿ ಮತ್ತಷ್ಟು ಮಹತ್ವ ಪಡೆದಿರುವದರಲ್ಲಿ ಆಶ್ಚರ್ಯವೇನಿಲ್ಲ. ಇದಕ್ಕಾಗಿಯೇ ಚಿಕ್ಕೋಡಿ ತಮ್ಮಣ್ಣಪ್ಪನವರು ಹೋರಾಟವನ್ನೇ ಮಾಡಿದ್ದನ್ನಿಲ್ಲಿ ನೆನಪಿಸಿಕೊಳ್ಳಬಹುದು. 'ಸಣ್ಣಬಿನ್ನಯತ್ತೆ' ಮತ್ತು 'ದೊಡ್ಡಬಿನ್ನಯತ್ತೆ' (ಇಂದು ಎಲ್.ಕೆ.ಜಿ.. ಯು.ಕೆ.ಜಿ.ಗಳಿದ್ದಂತೆ)ಗಳು ಮುಗಿದು 'ಒಂದನೆಯತ್ತೆ'ಗೆ ಬರುವ ವ್ಯವಸ್ಥೆಯಿದ್ದ ಆ ಕಾಲದಲ್ಲಿ ಶಿಕ್ಷಕರ ಕೊರತೆಯಿಂದಾಗಿ ಮರಾಠಿ ಶಿಕ್ಷಕರೇ ತಪ್ಪು - ತಪ್ಪಾಗಿ ಕನ್ನಡ ಕಲಿಸುತ್ತಿದ್ದ ಕಾಲದಲ್ಲಿ ದುಂಡಪ್ಪನ ಶೈಕ್ಷಣಿಕ ಜೀವನ ಪ್ರಾರಂಭವಾಯಿತು.

'ಪೆನ್ನು ಕನಸಿನ ಮಾತಾಗಿದ್ದ ಅಂದು' ಪಾಟೀ ಬಳಪಾಯೀ'ಗಳೇ ಬರವಣಿಗೆಯ ಪ್ರಮುಖ ಸಾಧನಗಳಾಗಿದ್ದವು. ವಿಶೇಷ ಬರವಣಿಗೆಗಳಿದ್ದ ಸಂದರ್ಭದಲ್ಲಿ ಮಾತ್ರ ಮಸೀದೌತಿಯಲ್ಲಿ ಅದ್ದಿ ಬರೆಯುವ. ತುದಿಗೆ ನಿಬ್ ಇದ್ದ ಲೆಕ್ಕಣಿಕೆ. ಅಂದಿನ ವೇಷ - ಭೂಷಣದಲ್ಲಿ ಒಂದಿಷ್ಟು ಫ್ಯಾಶನ್ ಅಂದರೆ. ಅರ್ಧ ಚೊಣ್ಣ - ಅರ್ಧ

* ಇವರೇ ದು. ನಿಂ. ಬೆಳಗಲಿಯವರು

ತೋಳಿನ ಅಂಗಿ. ಪ್ರಾಥಮಿಕ ಶಾಲೆಗಳಿಗೂ ಧೋತರ ಉಟ್ಟುಕೊಂಡು ಬರುವ ವಿದ್ಯಾರ್ಥಿಗಳೂ ಇದ್ದರು. ಇಸ್ತ್ರೀ ಗೊತ್ತಿರದ ಅಂದು ಸೋಪಹಚ್ಚಿ ಬಟ್ಟೆ ತೊಳೆದರೆ ಅದೇ ದೊಡ್ಡ ಚೈನಿ. ಇಸ್ತ್ರೀ ಇರದ 'ಉರುಟು' ಬಟ್ಟೆಗಳ ಮುಂಭಾಗ ಕಪ್ಪಾಗಲು ಇವರ ಮೂಗೇ ಕಾರಣವಾಗಿತ್ತು.

ಕಲಿಯಬೇಕು - ಓದಬೇಕು - ಜಾಣನಾಗಬೇಕು ಎಂಬೆಲ್ಲ ಹಂಬಲಗಳನ್ನು ಹೊತ್ತು ಪ್ರಾಥಮಿಕ ನಾಲ್ಕನೆಯ ವರ್ಗ ಪಾಸುಮಾಡಿಕೊಂಡು ಎಸ್. ಆರ್. ಎ. ಹೈಸ್ಕೂಲಿನ ಒಂದನೇ ವರ್ಗಕ್ಕೆ ಹೋದರೆ ಅಲ್ಲಿ ನಿರಾಶೆಯೇ ಕಾದಿತ್ತು. ಇವರು ಹೈಸ್ಕೂಲು ಸೇರಿದ ಸಂದರ್ಭದಲ್ಲಿ ಶಿಕ್ಷಣದ ವ್ಯವಸ್ಥೆ ಸರಿಯಾಗಿರಲಿಲ್ಲ. ಅಲ್ಲದೆ ಪದವೀಧರ ಶಿಕ್ಷಕರಿಲ್ಲದೆ ಅನೇಕರ ಬೋಧನೆ ಸಪ್ಪೆಯಾಗಿತ್ತು. ಆದರೆ ಆರ್. ಎಸ್. ಹುಲಗಬಾಳಿಯವರಂಥ ಪ್ರತಿಭಾವಂತ ಶಿಕ್ಷಕರ ಸಂಪರ್ಕ ಕೊನೆವರೆಗೂ ಬಾರದಿರುವುದು ಇವರ ದುರ್ದೈವವೇ ಸರಿ. ಇದೇ ವೇಳೆಗೆ ದೇಶದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ಬಿಸಿ ಬನಹಟ್ಟಿಗೂ ಮುಟ್ಟಿತ್ತು. ರಾಮ್ ಮೋರೆಯವರು ಸೇವಾದಲ ಕಟ್ಟಿ. ಆವೇಶ ಪೂರ್ಣವಾಗಿ ರಾಷ್ಟ್ರಗೀತೆ ಹಾಡುತ್ತಿರುವುದನ್ನು ಕೇಳಿ ದುಂಡಪ್ಪನಿಗೆ ಆ ವಯಸ್ಸಿನಲ್ಲೂ ರೋಮಾಂಚನವಾಗುತ್ತಿತ್ತು. ಅಲ್ಲದೆ ದೇಶ - ಭಾಷೆಗಳ ಬಗ್ಗೆ ಒಲವು ಮೂಡಿತು.

ದುಂಡಪ್ಪ ನಾಲ್ಕನೆಯ ವರ್ಗಕ್ಕೆ (ಇಂದಿನ ಎಂಟನೆಯ ವರ್ಗ) ಬರುವಷ್ಟೊತ್ತಿಗಾಗಲೇ ಓದುವ ಹವ್ಯಾಸ ಬೆಳೆಸಿಕೊಂಡಿದ್ದನು. ಈ ಹವ್ಯಾಸಕ್ಕೆ ಜೀವ ತುಂಬುವಂತೆ ಅದೇ ಕಾಲಕ್ಕೆ ಭುಜೇಂದ್ರ ಮಹೀಷವಾಡಿ ಹಾಗೂ ಬ. ಗಿ. ಯಲ್ಲಟ್ಟಿಯವರು ಗೌರವ ಶಿಕ್ಷಕರಾಗಿ ಕಲಿಸಲು ಬಂದರು. ಮಹೀಷವಾಡಿಯವರು ಕೊಟ್ಟ ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ದುಂಡಪ್ಪನ ಮೇಲೆ ತುಂಬ ಪ್ರಭಾವ ಬೀರಿತು. ಅನಂತರ ಕಾರಂತರ 'ಮರಳಿ ಮಣ್ಣಿಗೆ'. ಬಳಿಕ ಅ. ನ. ಕೃ. ತ. ರಾ. ಸು. ಬಸವರಾಜ ಕಟ್ಟೀಮನಿಯವರ ಕಾದಂಬರಿಗಳನ್ನು ಓದುತ್ತ ಹೋದಂತೆ ಓದುವ ಹಂಬಲ ಹೆಚ್ಚಾಗುತ್ತಲೇ ಹೋಯಿತು. ಆಟೋಟಗಳಲ್ಲಿ ನಿರಾಸಕ್ತನಾದ ದುಂಡಪ್ಪ ಸಾಹಿತ್ಯಾಸಕ್ತಿಯನ್ನು ಸಹಜವಾಗಿಯೇ ಒಗ್ಗಿಸಿಕೊಂಡಿದ್ದನು. ಇದೇ ಸಂದರ್ಭದಲ್ಲಿ ಬೇಂದ್ರೆಯವರ. " ಹಕ್ಕಿ ಹಾರುತಿದೆ ನೋಡಿದಿರಾ " ಎಂಬುದನ್ನು ಅನುಕರಿಸಿ " ವೃತ್ತಪತ್ರಿಕೆ ಹಾರುತಿದೆ ನೋಡಿದಿರಾ " ಎಂಬೊಂದು ಕವಿತೆಯನ್ನು ರಚಿಸಿ. ಸಾಹಿತ್ಯದಲ್ಲಿ ಅಭಿರುಚಿಯಿಲ್ಲದ ಶಿಕ್ಷಕರೊಬ್ಬರಿಗೆ ತೋರಿಸಿದಾಗ 'ಹಾಂ ಹೋಗು' ಎಂದಷ್ಟೇ ಹೇಳಿ ದುಂಡಪ್ಪನನ್ನು ನಿರಾಶಗೊಳಿಸಿದ್ದೂ ಉಂಟು.

**ಐನಾಪುರದ ಶಾಲೆ :**

ಕ್ರಿ. ಶ. ೧೯೨೪ ರಲ್ಲಿ ಸ್ಥಾಪನೆಗೊಂಡ ಐನಾಪುರದ ಹೈಸ್ಕೂಲು ತುಂಬ ಹೆಸರುವಾಸಿಯಾದುದು. ಮುಂಬಯಿ ಪ್ರಾಂತ್ಯದಲ್ಲಿಯೇ ಪ್ರಥಮ ಗ್ರಾಮೀಣ ಹೈಸ್ಕೂಲು ಎಂಬ ಹೆಗ್ಗಳಿಕೆಗೆ ಪಾತ್ರವಾದ ಈ ಹೈಸ್ಕೂಲಿನಲ್ಲಿ ಕಲಿಯುವ ಯೋಗ ದುಂಡಪ್ಪನಿಗೆ ದೊರೆತದ್ದು. ಆತ ಆರನೆಯ ವರ್ಗಕ್ಕೆ (ಈಗಿನ ಹತ್ತನೆಯ ವರ್ಗ). ಇಲ್ಲಿಗೆ ಬಂದು ಸೇರಿದಾಗ ಸಂಸ್ಕೃತ. ಬೀಜಗಣಿತ. ಭೂಮಿತಿ. ಭೌತಶಾಸ್ತ್ರ. ರಸಾಯನಶಾಸ್ತ್ರಗಳು

ದುಂಡಪ್ಪನಿಗೆ ಕಬ್ಬಿಣದ ಕಡಲೆಗಳಾದರೆ. ಅಲ್ಲಿಯೇ ಮುಖ್ಯೋಪಾಧ್ಯಾಯರಾದ ಜಿ. ಎಂ. ದೇಶಪಾಂಡೆ ಗುರುಗಳನ್ನು ಪಡೆದದ್ದು ಅವರ ಯೋಗವೇ ಸರಿ. ವಿವಿಧ ಕಾಲೇಜುಗಳಲ್ಲಿ ಓದುತ್ತಿದ್ದ ಸ್ಥಳೀಯ ವಿದ್ಯಾರ್ಥಿಗಳ ಒಡನಾಟ ಅವರೊಂದಿಗೆ ಕನ್ನಡ ನಿಯತಕಾಲಿಕೆಯೊಂದರ ಯೋಜನೆ ಹಾಕಿ. ಕತೆಯೊಂದನ್ನು ಬರೆದುದಲ್ಲದೆ ಡಾ. ಮುತಾಲಿಕ ಅವರಿಂದ ಮೆಚ್ಚುಗೆ ಪಡೆದುದು ಇದೇ ಹೈಸ್ಕೂಲಿನಲ್ಲಿದ್ದಾಗಲೇ. ಇಷ್ಟೊತ್ತಿಗಾಗಲೇ ಮಿರ್ಜಿ ಅಣ್ಣಾರಾಯರ 'ನಿಸರ್ಗ'. 'ರಾಜಪುರುಷ'ಗಳಂಥ ಉನ್ನತ - ಬೃಹತ್ಗಾತ್ರದ ಪುಸ್ತಕಗಳನ್ನು ಓದುತ್ತಿದ್ದುದನ್ನು ಕಂಡ ನಿಂಗಪ್ಪ ಒಂದು ಸಲ ಮಗನನ್ನು ವಿಚಾರಿಸಿದಾಗ ತಡವರಿಸುತ್ತ ಅವೆಲ್ಲ ಸಾಲೀ ಪುಸ್ತಕವೆಂದೇ ದುಂಡಪ್ಪ ಉತ್ತರಿಸಿದ್ದನು. ಅಷ್ಟಕ್ಕೆ ಬಿಡದ ನಿಂಗಪ್ಪ "ಮಗನs. ಸಾಲೀಪುಸ್ತಕ ಇಷ್ಟು ದೊಡ್ಡ ಇರ್ತಾವೇನ? ಸಾಲೀ ಪುಸ್ತಕ ಬಿಟ್ಟ ಬ್ಯಾರೇ ಓದಿ ನಾಪಾಸ ಆಗ್ತಿಯೇನ ನೋಡ"[೩] ಎಂದು ಬೈದರಂತೆ. ಇದನ್ನೇ ಅನುಮೋದಿಸುವಂತೆ ತಾಯಿಯೂ ಕೂಡ "ತಮ್ಮಾ. ಭಾಳ ಓದಬಾರ್ದು. ಭಾಳ ಓದಿದರ ತಲೀ ಕೆಡತೈತಂತ ಹೇಳತಾರು"[೪] ಎಂದು ಹೆಚ್ಚು ಓದಿದರೆ ತಲೆ ಕೆಡುತ್ತದೆಂಬ ಹಳ್ಳಿಗರ ನಂಬಿಕೆಯನ್ನೇ ಮುಂದಿಟ್ಟು ತನ್ನ ಕಾಳಜಿ - ಕಳಕಳಿಯನ್ನು ವ್ಯಕ್ತಪಡಿಸಿದ್ದಳು. ಎಸ್. ಎಸ್. ಸಿ. ಗೆ ಬರುವಷ್ಟೊತ್ತಿಗೆ ಒಂದಿಷ್ಟು ಕವಿತೆ - ಕತೆಗಳನ್ನು ಬರೆದರೂ ಅವಾವೂ ಪ್ರಕಟಣೆಯಾಗಿರಲಿಲ್ಲ. ಆದರೂ ಸ್ನೇಹಿತರೆಲ್ಲ ದುಂಡಪ್ಪನನ್ನು 'ಲೇಖಕ'ನೆಂದೇ ಕರೆಯುತ್ತಿದ್ದರು. ಒಂದರ್ಥದಲ್ಲಿ ಹಳ್ಳಿಯಲ್ಲಿ ಕೊಳ್ಳಿಬೆಳಕಿನಂತಿದ್ದ ದುಂಡಪ್ಪ.

**ಮೆಚ್ಚಿನ ಗುರು ಜಿ. ಎಂ. ದೇಶಪಾಂಡೆ :**

ಸ್ವಾತಂತ್ರ್ಯ ಹೋರಾಟಗಾರರೂ. ಶಿಕ್ಷಣತಜ್ಞರೂ. ಸಾಮಾಜಿಕ ಕಾರ್ಯಕರ್ತರೂ. ತುಂಬಾ ಓದಿದವರೂ ಆದ ಜಿ. ಎಂ. ದೇಶಪಾಂಡೆಯವರಂಥ ಗುರುಗಳು ದೊರೆತುದು ದುಂಡಪ್ಪನ ಯೋಗಾ - ಯೋಗವೆಂದೇ ಹೇಳಬಹುದು. ಸ್ವತಃ ವಿಶ್ವಕೋಶದಂತಿದ್ದ ದೇಶಪಾಂಡೆಯವರ ಬೋಧನೆ ವೈಶಿಷ್ಟ್ಯಪೂರ್ಣವಾಗಿತ್ತು. ವಿದ್ಯಾರ್ಥಿಗಳಿಗೆ ಇವರನ್ನು ಕಂಡರೆ ತುಂಬ ಭಯ - ಭಕ್ತಿ. ಅದರಲ್ಲಿಯೂ ದುಂಡಪ್ಪನಿಗೆ ಇನ್ನೂ ಹೆಚ್ಚು. ಒಂದು ಸಲ ಪಾಠದ ಮಧ್ಯದಲ್ಲಿ 'ಭಾರತದಲ್ಲಿ ಬೇಸಿಗೆಯಲ್ಲಿಯೇ ಮದುವೆಯ ಮುಹೂರ್ತಗಳೇಕೆ ಹೆಚ್ಚಿಗೆ ಇರುತ್ತವೆ?' ಎಂದು ಪ್ರಶ್ನಿಸಿದರು. ವರ್ಗದಲ್ಲಿ ಯಾರೂ ಉತ್ತರಿಸಲಿಲ್ಲ. ಆದರೆ 'ಭಾರತದಲ್ಲಿ ಒಕ್ಕಲುತನ ಹೆಚ್ಚು. ರೈತರಿಗೆ ಬೇಸಿಗೆಯಲ್ಲಿ ಬಿಡುವು' ಎಂದು ದುಂಡಪ್ಪ ಅಳುಕುತ್ತಲೇ ಉತ್ತರಿಸಿದಾಗ 'ಬೊಗಳೋ ಖೋಡಿ ಉತ್ತರ ಬರೋಬರಿ ಅದ....' ಎಂದು ಗದರಿದಾಗ. ಮತ್ತೆ ಅದನ್ನೇ ಗಟ್ಟಿಯಾಗಿ ಹೇಳಿ. ಅಚ್ಚುಮೆಚ್ಚಿನ ವಿದ್ಯಾರ್ಥಿಯಾದುದಲ್ಲದೆ. ಅವರ ಮನೆಯ ಸದಸ್ಯರಲ್ಲೊಬ್ಬನಾದ. ಇದರಿಂದ ದುಂಡಪ್ಪನಿಗೆ ಇನ್ನಷ್ಟು ಲಾಭವಾಯಿತು. ದೇಶಪಾಂಡೆ ಮಾಸ್ತರರು ತಮ್ಮ ಮನೆಗೆ ಕನ್ನಡ - ಮರಾಠಿ - ಇಂಗ್ಲೀಷ ಪತ್ರಿಕೆಗಳನ್ನು ತರಿಸುತ್ತಿದ್ದರು. ಅವುಗಳನ್ನು ಓದುವ ಅವಕಾಶ ಸಹಜವಾಗಿಯೇ ದುಂಡಪ್ಪನಿಗೆ ಸಿಕ್ಕಿತು. ಉತ್ತಮ ಭಾಷಣಕಾರರೂ ಆದ ದೇಶಪಾಂಡೆಯವರು ಅಲ್ಲಲ್ಲಿ ಭಾಷಣಕ್ಕೆ ಹೋಗುವಾಗ

---

೩. ದು. ನಿಂ. ಬೆಳಗಲಿ. ಜಿ. ಎಸ್. ಕಾಪಸೆ(ಸಂ.) : 'ಬೆಳಗಲಿ' ಅಭಿನಂದನ ಗ್ರಂಥ : ಪುಟ ೨೮೯

೪. ದು. ನಿಂ. ಬೆಳಗಲಿ. ಜಿ. ಎಸ್. ಕಾಪಸೆ(ಸಂ.) : 'ಬೆಳಗಲಿ' ಅಭಿನಂದನ ಗ್ರಂಥ : ಪುಟ ೨೮೯

ದುಂಡಪ್ಪನನ್ನು ಕರೆದುಕೊಂಡು ಹೋಗುತ್ತಿದ್ದರು. ಅಲ್ಲದೆ ಇವನಲ್ಲಿಯ ಸಾಹಿತ್ಯಾಸಕ್ತಿಯನ್ನು ಕಂಡು ಖುಷಿಪಡುವುದರೊಂದಿಗೆ. ಪ್ರೋತ್ಸಾಹವನ್ನೂ ನೀಡಿದರು.

**ಮಿರ್ಜಿ ಅಣ್ಣಾರಾಯರ ಪರಿಚಯ :**

೧೯೪೯ - ೫೦ ರ ಸುಮಾರಿಗೆ ಮಿರ್ಜಿ ಅಣ್ಣಾರಾಯರು ವರ್ಗವಾಗಿ ದೊಡ್ಡ ಉಗಾರ ಪ್ರಾಥಮಿಕ ಶಾಲೆಗೆ ಬಂದಿದ್ದರು. ದುಂಡಪ್ಪ ಐನಾಪುರ ಶಾಲೆಯಲ್ಲಿ ಓದುತ್ತಿದ್ದ. ಅವರು ನಿತ್ಯ ಶೇಡಬಾಳದಿಂದ ಕಾಲ್ನಡಿಗೆಯಲ್ಲಿ ಉಗಾರಕ್ಕೆ ಹೋಗಿಬರುತ್ತಿದ್ದರು. ಅವರನ್ನು ಕಾಣಲೆಂದೇ ದುಂಡಪ್ಪ ಸೈಕಲ್ ಹತ್ತಿ ಐನಾಪುರದಿಂದ ಉಗಾರಕ್ಕೆ ಹೋಗಿ ಬಂದ. ಇದು ಕೇವಲ ಪರಿಚಯದ ಭೇಟಿಯಾಗಿತ್ತೇ ಹೊರತು ತನ್ನ ಬರಹಗಳನ್ನು ತೋರಿಸಲಿಲ್ಲ. ಅನಂತರ ಗಾಂಧೀಜಿಯವರ ಹತ್ಯೆಯಿಂದಾಗಿ ಬ್ರಾಹ್ಮಣರನೇಕರನ್ನು ಸುಟ್ಟುಹಾಕಿದರು. ಇದನ್ನೇ ಆಧರಿಸಿ ಬೆಳಗಾವಿಗೆ ಎಸ್. ಎಸ್. ಸಿ. ಪರೀಕ್ಷೆಗೆ ಹೋದಾಗ ಬರೆದು ' ಜಯಹಿಂದ ' ಪತ್ರಿಕೆಯಲ್ಲಿ ಪ್ರಕಟಿಸಿದರು. ಈ ನಡುವೆ ' ಕಾಡುಮಲ್ಲಿಗೆ '. ' ಮಾತ್ಸರ್ಯ 'ಗಳೂ ಪ್ರಕಟಣೆಗೊಂಡು ' ನಾನೊಬ್ಬ ಲೇಖಕ ' ನೆಂಬ ಹೆಮ್ಮೆ ಸಾವಕಾಶವಾಗಿ ದುಂಡಪ್ಪನಲ್ಲಿ ಅಂಕುರಗೊಂಡಿತು. ಪಾಠ - ಪ್ರವಚನದೊಂದಿಗೆ ಸೃಜನಶೀಲ ಬರವಣಿಗೆಯನ್ನು ಮುಂದುವರಿಸಿದ ದುಂಡಪ್ಪ ಎಸ್. ಎಸ್. ಸಿ. ಪರೀಕ್ಷೆಯನ್ನು ಪ್ರಥಮನಾಗಿ ಪಾಸಾಗಿ ಮನೆಯಲ್ಲಿ ಇನ್ನೂ ಹೆಚ್ಚು ಅಚ್ಚು - ಮೆಚ್ಚಾದ. ಮುಂದೆ ಶಿಕ್ಷಕವೃತ್ತಿಯಲ್ಲಿದ್ದುಕೊಂಡೇ ದಕ್ಷಿಣ ಭಾರತ ಹಿಂದಿ ಪ್ರಚಾರಸಭಾ ನಡೆಸುವ ಪರೀಕ್ಷೆಗಳನ್ನು ಮುಗಿಸಿಕೊಂಡರು. ಶೈಕ್ಷಣಿಕವಾಗಿ ಎಸ್. ಎಸ್. ಸಿ. ಪಾಸಾದ ದುಂಡಪ್ಪ ' ದು. ನಿಂ. ' ಆಗಿ ಸಾಹಿತ್ಯಕವಾಗಿ ಉನ್ನತ ಹೆಸರು ಗಳಿಸಿದ್ದು ಬೆಳಗಲಿ ಮನೆತನಕ್ಕೆ ಸಂದ ಗೌರವ.

**ಮಾಸ್ತರಿಕೆ :**

ದೇಶಪಾಂಡೆ ಮಾಸ್ತರರ ಹೇಳಿಕೆಯಂತೆ ಎಸ್. ಎಸ್. ಸಿ. ಮುಗಿದಾಕ್ಷಣ ಬೆಳಗಲಿಯವರು ಮಾಸ್ತರನಾಗುವ ಮುಖಾಂತರ ತಮ್ಮ ವೃತ್ತಿಜೀವನವನ್ನು ಆರಂಭಿಸಿದರು. ಅವರೇ ಹೇಳುವಂತೆ ' ಜಾಹೀರಾತು ಇಲ್ಲ. ಒಂದು ಅರ್ಜಿಯಿಲ್ಲ. ಒಂದು ದಿನ ಶಾಲೆಗೆ ಹೋಗಿ ' ಮಸ್ಟರ ರೋಲ್ 'ಗೆ ಸಹಿ ಮಾಡಿ ' ಮಾಸ್ತರ ' ಎಂಬ ಸಿಕ್ಕಾ ಒತ್ತಿಸಿಕೊಂಡೆನು ' ಅವರೇ ಕಲಿತ ಶಾಲೆಯಲ್ಲಿ ತಿಂಗಳಿಗೆ ೪೦ ರೂ. ಸಂಬಳವೆಂದು ತಿಳಿದಾಗ ಓರಿ ಓರಿ ಓಗ್ಗಿದರು. ತಮ್ಮಲ್ಲಿಯೇ ಎಸ್. ಎಸ್. ಸಿ. ಮುಗಿಸಿದ ವಿದ್ಯಾರ್ಥಿಯೊಬ್ಬ ಅಲ್ಲಿಯೇ ಶಿಕ್ಷಕನಾಗಿ ಬರುವುದು ಅನೇಕರಿಗೆ ಸಹನೆಯಾಗಿರಲಿಲ್ಲ. ಆದರೂ ದೇಶಪಾಂಡೆ ಗುರುಗಳ ಕೃಪಾಕಟಾಕ್ಷವಿದ್ದುದರಿಂದ ಎಲ್ಲರೂ ತೆಪ್ಪಗಿರಬೇಕಾಯಿತು. ಇದೇ ವೇಳೆಗೆ ಬೆಳಗಲಿಯವರ ಅನೇಕ ಕತೆಗಳು ಪತ್ರಿಕೆಗಳಲ್ಲೂ ಪ್ರಕಟಗೊಂಡವು. ' ಮಾವನ ಮನಿಯಾರ್ಡರ್ ' ಎಂಬೊಂದು ವಿನೋದ ಏಕಾಂಕ ಧಾರವಾಡ ಆಕಾಶವಾಣಿಯಲ್ಲಿ ಬಿತ್ತರಗೊಂಡಿತು. ಅದಕ್ಕೆ ಸಂಭಾವನೆ ಕೂಡ ಬಂತು.

## ಮದುವೆ :

ಬೆಳಗಲಿಯವರು ಇನ್ನೂ ವಿದ್ಯಾರ್ಥಿಯಾಗಿದ್ದಾಗಲೇ ಇವರ ಮದುವೆ ಆಲೋಚನೆ ಮಾಡುತ್ತಿದ್ದ ತಂದೆ - ತಾಯಿಗಳು. ಮಾಸ್ತರನಾದ ಮೇಲಂತೂ ಅದನ್ನು ಮುಖ್ಯವೆಂದೇ ಭಾವಿಸಿದರು. ಅನೇಕೆಡೆಗಳಲ್ಲಿ ಸುತ್ತಾಡಿದ ತಂದೆ ಮಹಾರಾಷ್ಟ್ರದ ಮಿರಜ ಸಮೀಪದಲ್ಲಿರುವ ಮಾಲಗಾಂವದಲ್ಲಿ ಬೀಗತನ ಕುದುರಿಸಿದರು. ಅದೂ ಎರಡುಸಾವಿರ ವರದಕ್ಷಿಣೆ ಹಣದೊಂದಿಗೆ. ಅಂದಿನ ಕಾಲದಲ್ಲಿ ಇದೊಂದು ಸುದ್ದಿಯೇ ಆಯಿತು. ನೇಕಾರರ ಮನೆತನಗಳಲ್ಲಿ ತೆರವು ಕೊಟ್ಟು ಮದುವೆಯಾಗುತ್ತಿದ್ದ ಅಂದಿನ ದಿನಗಳಲ್ಲಿ ಇದು ಸುದ್ದಿಯಾದುದರಲ್ಲಿ ಆಶ್ಚರ್ಯವೇನಿಲ್ಲ. ೧೯೫೪ ಜೂನ ೭ ರಂದು ಮಾಲಗಾಂವ ಶಾಂತಮ್ಮನವರೊಂದಿಗೆ ಬೆಳಗಲಿಯವರ ಮದುವೆಯಾಯಿತು. ಕನ್ನಡ ಬರೆಯಲು ಬಾರದ ಪತ್ನಿಯೊಂದಿಗೆ ಪತ್ರವ್ಯವಹಾರ ದುಸ್ತರವೆನಿಸಿತು. ಅದಕ್ಕಾಗಿ ಇವರು ಹೆಂಡತಿಗೆ ಕನ್ನಡ ಬರೆಯಲು ಕಲಿಸುವ ಪಣತೊಟ್ಟರು. ಆದರೆ ಶಾಂತಮ್ಮ ಕಲಿತದ್ದು ಕೇವಲ 'ದು. ನಿಂ. ಬೆಳಗಲಿ' ಎಂದಷ್ಟೇ. ಇಷ್ಟು ಕಲಿತದ್ದೇ ಅವರ ಮಹತ್ತರ ಸಾಧನೆಯಾಗಿತ್ತು. ಆದರೇನಂತೆ ಶಾಂತಮ್ಮನವರ ಮಾತೃಭಾಷೆ ಕನ್ನಡವೇ ಆಗಿದ್ದರಿಂದ ಬದುಕಿನಲ್ಲಿ ಅಡಚಣೆಯೇನಿರಲಿಲ್ಲ. ಪತ್ನಿಗೆ ಕನ್ನಡ ಬರೆಯಲು ಬಾರದೆನ್ನುವ ಕೊರಗನ್ನು ಬಿಟ್ಟು ಹೊಂದಾಣಿಕೆಯ ಬದುಕಿನಲ್ಲಿ ಬೆಳಗಲಿಯವರು ಸುಖ ಕಂಡವರು. ಶಾಂತಮ್ಮ ಕೂಡ ಪತಿಯನ್ನರಿತು ನಡೆಯುವ ಜಾಣೆ. ಹೊಲದಲ್ಲಿ ದುಡಿಯುವ. ಗಟ್ಟಿಗಳು. ಮನೆಯಲ್ಲಿ - ಹೊಲದಲ್ಲಿ ದುಡಿಯುವುದರೊಂದಿಗೆ ಗಂಡ. ಮಾವ. ಅತ್ತೆ ಮೊದಲಾದವರ ಪ್ರೀತಿಗೆ ಪಾತ್ರಳಾದಳು. ಎಂಟು ಮಕ್ಕಳ ತಾಯಿಯಾಗಿ (ಉಳಿದವರೀಗ ನಾಲ್ಕೇ ಜನ) ಮನೆತನವನ್ನು ಸರಳ - ಸರಾಗವಾಗಿ ನಿಭಾಯಿಸಿಕೊಂಡು ಹೋಗುವ ಜಾಣ್ಮೆ ಶಾಂತಮ್ಮನದು.

## ಚೊಚ್ಚಿಲ ಕೃತಿ :

ಜೂನ ೧೯೫೧ ರಿಂದ ಡಿಶೆಂಬರ ೧೯೫೫ ರ ವರೆಗೆ ಸುಮಾರು ೪ ವರ್ಷಗಳವರೆಗೆ ಐನಾಪುರದಲ್ಲಿ ಶಿಕ್ಷಕರಾಗಿ ಸೇವೆಸಲ್ಲಿಸಿದ ಬೆಳಗಲಿಯವರು ಈ ಸೇವಾವಧಿಯಲ್ಲಿಯೇ ಎಸ್. ಟಿ. ಸಿ. ಪರೀಕ್ಷೆ ಪಾಸುಮಾಡಿಕೊಂಡಿದ್ದರು. ಅನಂತರ ೧೯೫೫ ನೇ ಡಿಶೆಂಬರದಲ್ಲಿ ಬನಹಟ್ಟಿಗೆ ಬಂದು ಅಲ್ಲಿನ ಎಸ್. ಆರ್. ಎ. ಹೈಸ್ಕೂಲಿನಲ್ಲಿ ಒಂದಿ ಶಿಕ್ಷಕರಾಗಿ ಸೇವೆಗೆ ಸೇರಿಕೊಂಡರು. ಇದೂ ಕೂಡ ಅವರು ಕಲಿತ ಶಾಲೆಯೇ. ಇಲ್ಲಿ ಅವರಿಗೆ ಪದವೀಧರ ವೇತನ ದೊರೆಯುತ್ತಿತ್ತು.

ಬನಹಟ್ಟಿಗೆ ಮರಳಿ ಬಂದುದರ ಇನ್ನೊಂದು ಅನುಕೂಲವೆಂದರೆ ಇಲ್ಲಿ ತಮ್ಮ ಬರವಣಿಗೆಯನ್ನು ಮತ್ತಷ್ಟು ಚುರುಕುಗೊಳಿಸಲು ಹೆಚ್ಚು ಅವಕಾಶ ಸಿಕ್ಕಿದ್ದು. ಇಷ್ಟೊತ್ತಿಗಾಗಲೇ ಇವರ ಕಥೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದವು. ಕೆಲವಂತೂ ಪ್ರಸಿದ್ಧಿಯನ್ನೇ ಪಡೆದಿದ್ದವು. ಇವರ ಹಂಬಲದಂತೆ ಇವರ ಚೊಚ್ಚಿಲಕೃತಿ ೧೯೫೭ ರಲ್ಲಿ 'ಬೆನ್ನಿಂದಿನ ಕಣ್ಣು' ಹೆಸರಿನಲ್ಲಿ ಬಸವರಾಜ ಕಟ್ಟೀಮನಿಯವರ ಮುನ್ನುಡಿಯೊಂದಿಗೆ ಪ್ರಕಟಣೆಯಾಯಿತು. ಬೆಳಗಲಿಯವರು ತಮ್ಮ ಚೊಚ್ಚಿಲ ಕಥಾಸಂಕಲನಕ್ಕೆಯೇ ಉತ್ತಮ ವಿಮರ್ಶಾ ಪ್ರತಿಕ್ರಿಯೆಯನ್ನು ಪಡೆದರು.

' ಸಮಾಜದ ಪ್ರತಿಯೊಬ್ಬ ವ್ಯಕ್ತಿ ಓದಲೇ ಬೇಕಾದ ಪುಸ್ತಕ....' ವೆಂದು ' ಪ್ರಜಾಮತ ' ದಲ್ಲಿನ ಮತ್ತೂರು ಕೃಷ್ಣಮೂರ್ತಿಯವರ ಮಾತು ಮತ್ತಷ್ಟು ಹುರುಪನ್ನು ತುಂಬಿತು.

**ಕಥೆಯಿಂದ ಕಾದಂಬರಿಗೆ :**

ಸಣ್ಣಕತೆಗಾರರು ಕಾದಂಬರಿಯತ್ತ ಗಮನ ಹರಿಸುವುದು ಸಹಜ. ಬೆಳಗಲಿಯವರ ಸ್ಥಿತಿಯೂ ಹಾಗೇ ಆಯಿತು. ಇವರು ಮೊದಲ ಕಥಾಸಂಕಲನವನ್ನು ಪ್ರಕಟಿಸಿಯಾದ ಮೇಲೆ ೧೯೫೯ ರಲ್ಲಿ ಮತ್ತೊಂದು ಕಥಾಸಂಕಲನವನ್ನು ' ಸಿಟ್ಟ್ಯಾಕೋ ರಾಯಾ ನನ ಮ್ಯಾಲ ' ಎಂಬ ಹೆಸರಿನಿಂದ ಪ್ರಕಟಿಸಿದರು. ಇದಕ್ಕೂ ಉತ್ತಮ ವಿಮರ್ಶೆಯೇ ಬಂದಿತು. ಇದರಿಂದ ಉತ್ತೇಜನಗೊಂಡ ಬೆಳಗಲಿಯವರು ಕಥೆಯಿಂದ ಕಾದಂಬರಿಯತ್ತ ಸರಿದರು. ೧೯೬೦ ರಲ್ಲಿ ಪ್ರಕಟಣೆಯಾದ ' ಮುಳ್ಳು ಮತ್ತು ಮಲ್ಲಿಗೆ ' ಇವರ ಪ್ರಥಮ ಕಾದಂಬರಿ. ಇದು ಗಾತ್ರದಲ್ಲಿ ಕಿರಿದಾದರೂ ಸತ್ವದಲ್ಲಿ ಹಿರಿದು. ಬಂಗಾರಿಯಂಥ ಪಾತ್ರ ನಿರ್ಮಿಸಿದ ಬೆಳಗಲಿಯವರನ್ನು ಅನೇಕರು ಪ್ರಶಂಸಿದರು. ಅಪಕ್ವ ವಯಸ್ಸಿನಲ್ಲಿನ ಬಯಕೆಗಳೇ ' ಪ್ರೇಮ 'ವೆಂದು ಭಾವಿಸುವ ಯುವಕರಿಗೆ ಈ ಕಾದಂಬರಿ ಬುದ್ಧಿಪ್ರಚೋದಕವೂ - ಮಾರ್ಗದರ್ಶಕವೂ ಆಗಿದೆ. ವಿಮರ್ಶಕರು ಬೆಳಗಲಿಯವರನ್ನು ಕತೆಗಾರರಷ್ಟೇ ಅಲ್ಲದೆ. ಕಾದಂಬರಿಕಾರರೂ ಹೌದೆಂದು ಗುರುತಿಸಿದರು. ಇದಾದ ಮೇಲೆ ಎರಡನೆಯ ಕಾದಂಬರಿ ' ಹತ್ತು ಹೆಡೆಯ ಹಾವು ' ಎಂಬುದನ್ನು ಬರೆದರು. ಶೈಕ್ಷಣಿಕ - ಧಾರ್ಮಿಕ ಕ್ಷೇತ್ರದಲ್ಲಿನ ಬೂಟಾಟಿಕೆಗಳನ್ನು ಬಯಲಿಗೆಳೆಯುವ ಈ ಕಾದಂಬರಿ ಬೆಳಗಿನ ಜಾವ ಪ್ರಾರಂಭವಾಗಿ ಮಧ್ಯರಾತ್ರಿಯಷ್ಟೊತ್ತಿಗೆ ಮುಗಿದು ಹೋಗುತ್ತದೆ. ' ನಮ್ಮ ದೃಷ್ಟಿಯಲ್ಲಿ ಬೆಳಗಲಿಯವರು ಖಂಡಿತ ಕಾದಂಬರಿಕಾರರು ಎಂಬಂತಹ ಮನೋಜ್ಞವಾದ ವಿಮರ್ಶೆಗಳು ಇನ್ನಷ್ಟು ಈ ಕಾದಂಬರಿಯ ನಂತರ ಬರತೊಡಗಿದಾಗ ಕಾದಂಬರಿ ಕ್ಷೇತ್ರದ ಬಗ್ಗೆ ಇನ್ನೂ ಹೆಚ್ಚಿನ ಒಲವು ಬೆಳಗಲಿಯವರಿಗೆ ಸಹಜವಾಗಿಯೇ ಮೂಡಿತು.

**ಏಣಗಿ ಬಾಳಪ್ಪನವರ ಒಡನಾಟ :**

ಬೆಳಗಲಿಯವರಿಗಿಂತಲೂ ವಯಸ್ಸಿನಲ್ಲಿ ಹಿರಿಯರಾದ ನಾಟ್ಯಭೂಷಣ ಏಣಗಿಬಾಳಪ್ಪನವರೊಂದಿಗೆ ಪರಿಚಯವಾದುದು ' ಕಲಾವೈಭವ ನಾಟ್ಯಸಂಘ ' ದೊಂದಿಗೆ ಬನಹಟ್ಟಿಗೆ ಬಂದಾಗ. ಇವರು ಎದುರು ಮನೆಯವರಾದ ಬಾಲವತ್ತಿಯವರೊಂದಿಗೆ ತುಂಬ ಸ್ನೇಹಿತರು. ಒಂದೊಮ್ಮೆ ಬೆಳಗಲಿಯವರು ಐನಾಪುರದಲ್ಲಿ ವಿದ್ಯಾರ್ಥಿಯಾಗಿದ್ದಾಗ ಶಾಲೆಯ ಸಹಾಯರ್ಥ ನಾಟಕವಾಡಲು ಬಂದಾಗ ಬೆಳಗಲಿಯವರೇ ಓಡಾಡಿ ಟಿಕೇಟ ಮಾರಿದ್ದುಂಟು. ಅನಂತರ ಕಂಪನಿಯೊಂದಿಗೆ ಮತ್ತೊಮ್ಮೆ ರಬಕವಿ - ಬನಹಟ್ಟಿಗೆ ಬಂದಾಗಲಂತೂ ಇವರ ಸ್ನೇಹ ತುಂಬ ಗಾಢವಾಗಿತ್ತು. ೧೯೭೦ ರಲ್ಲಿ ಹುಬ್ಬಳ್ಳಿಗೆ ಬೆಳಗಲಿಯವರನ್ನು ಕರೆಸಿಕೊಂಡು (ಎಂ. ಬಿ. ಸಿಂಗ್ ಅವರ ಮುಖಾಂತರ) ' ತಮ್ಮ ಆತ್ಮಕಥನ ' ವನ್ನು ಇವರಿಗೇ ನಿರೂಪಿಸಿ ಬರೆಯಲು ಹೇಳಿದ್ದು. ಅದು ಮುಂದೆ ' ಸುಧಾ ' ಪತ್ರಿಕೆಯಲ್ಲಿ ೧೯೭೧ ಮಾರ್ಚ ೧೪ ರಿಂದ ಪ್ರಾರಂಭವಾಗಿ ಸುಮಾರು ೨೧ ಕಂತುಗಳಲ್ಲಿ ಪ್ರಕಟವಾಯಿತಲ್ಲದೆ ಜನಮೆಚ್ಚುಗೆಯನ್ನೂ ಪಡೆಯಿತು. ಗಡಿಭಾಗದಲ್ಲಿ ದಾಖಲೆಯ ನಾಟಕವನ್ನಾಡಿದ

ಬಾಳಪ್ಪನವರು ಎಂದರೆ ಬೆಳಗಲಿಯವರಿಗೆ ಎಲ್ಲಿಲ್ಲದ ಪ್ರೀತಿ. ಇಬ್ಬರಲ್ಲೂ ಪರಸ್ಪರ ಆತ್ಮೀಯತೆ. ಪ್ರೀತಿಯ ಇವರ ಒಡನಾಟದ ದ್ಯೋತಕವಾಗಿಯೇ ಬೆಳಗಲಿಯವರ ಅಭಿನಂದನ ಸಮಿತಿಗೆ ಗೌರವ ಸದಸ್ಯರಾಗಿ ಏಣಗಿ ಬಾಳಪ್ಪನವರು ಮತ್ತಷ್ಟು ಪ್ರೀತಿ - ಸ್ನೇಹವನ್ನು ಮೆರೆದರು.

**ಬೆಂಗಳೂರಿಗೆ ಪ್ರಥಮ ಭೇಟಿ :**

ಕುಡಚಿಯಿಂದ ಬೆಂಗಳೂರು ೭೧೬ ಕಿ. ಮೀ. ದೂರ. ಆ ಕಾಲದಲ್ಲಿ ಅದಕ್ಕೆ ಹನ್ನೆರಡು ರೂಪಾಯಿ ಚಾರ್ಜು. ಮೂವತ್ತು ಪೈಸೆಗೆರಡು ಇಡ್ಲಿ. ಒಂದು ರೂಪಾಯಿಗೆ ಊಟ. ಇದೇನು ಕನಸಲ್ಲ - ಅಂದಿನ ಕಾಲದ ನನಸು. ಇಂಥ ಸಂದರ್ಭದಲ್ಲಿ ಅಂದರೆ. ೧೯೬೨ ರಲ್ಲಿ 'ಹೈಸ್ಕೂಲು ಶಿಕ್ಷಕರಿಗೆ ಏರ್ಪಡಿಸಿದ ನಾಟಕ ತರಬೇತಿ ಕಮ್ಮಟ' ದಲ್ಲಿ ಪಾಲ್ಗೊಳ್ಳಲು ಪ್ರಥಮಬಾರಿಗೆ ಬೆಳಗಲಿಯವರು ಬೆಂಗಳೂರಿಗೆ ಹೋಗಿದ್ದರು. ಶ್ರೀರಂಗರ ನಾಟ್ಯಸಂಘದಾಶ್ರಯದಲ್ಲಿ ನಡೆದ ಈ ಕಮ್ಮಟಕ್ಕೆ ಖ್ಯಾತನಿರ್ದೇಶಕ ಎಂ. ಎಸ್. ಸತ್ಯು. ಅ. ನ. ಕೃ. ನಟಿ ಮಳವಳ್ಳಿ ಸುಂದರಮ್ಮ ಮೊದಲಾದ ಘಟಾನುಘಟಿಗಳು ಉಪನ್ಯಾಸ ನೀಡಿದರು.

**ಮನೆ - ಮಡದಿ - ಮಕ್ಕಳು :**

ಪತ್ನಿ ಶಾಂತಮ್ಮ ಹೆಸರಿಗೆ ತಕ್ಕಂತೆ ಶಾಂತಸ್ವಭಾವದವರು. ಮನೆಯನ್ನು ತೂಕಬದ್ಧವಾಗಿ ನಡೆಸುವ ಜಾಣ್ಮೆಯವರದು. ಮೊದಲಿನಿಂದಲೂ ಬೆಳಗಲಿಯವರು ಕೌಟುಂಬಿಕ ಗುಂಪುಜೀವನದಲ್ಲಿಯೇ ಬೆಳೆದವರು - ಬಾಳಿದವರು. ಸಾಹಿತಿಯಾಗಿ ಒಂದೆಡೆ ಎತ್ತರೆತ್ತರಕ್ಕೇರಿದರೆ. ಕುಟುಂಬದಲ್ಲಿ ಅನೇಕ ನೋವುಗಳನ್ನು ಉಣ್ಣುತ್ತಿದ್ದರು. ಚೊಚ್ಚಿಲಮಗ ಶಿವಲಿಂಗ ಎರಡನೇ ವಯಸ್ಸಿನಲ್ಲಿ ತೀರಿಹೋದುದು. ನಾಲ್ಕನೆಯ ಮಗಳು ಮಹಾದೇವಿ ಅನಾರೋಗ್ಯ ಕಾರಣವಾಗಿ ಅವಿವಾಹಿತಳಾಗಿಯೇ ಉಳಿದುದು. ಕೊನೆಗೆ ಕೈಗೆ ಬಂದ ಪ್ರತಿಭಾವಂತ ಮಗ ಶಿವಪ್ರಸಾದ ಅಪಘಾತದಲ್ಲಿ ಸಾವನ್ನಪ್ಪಿದುದು - ಇವೆಲ್ಲ ಬೆಳಗಲಿಯವರನ್ನು ತೀರ ಸಂಕಟಕ್ಕೀಡುಮಾಡಿದವು. ಹಿರಿಯ ಮಗ ಮೋಹನ ಪಾಲು ಪಡೆದು ಬೇರೆಯಾದರೆ. ಮಧುಕೇಶ್ವರ ಬಿಎಸ್.ಸಿ. ಪದವೀಧರನಾಗಿ ಸ್ವಂತ ಮುದ್ರಣ ಕಲಿತು ಮುದ್ರಣಾಲಯದ ಜವಾಬ್ದಾರಿ ಹೊತ್ತು ಪತ್ನಿ ಸುಧಾಳೊಂದಿಗೆ ಚೆನ್ನಾಗಿ ಬದುಕುತ್ತಿರುವುದೊಂದು ನೆಮ್ಮದಿಯ ಸಂಗತಿ. ಮುದ್ದಾದ ಮೊಮ್ಮಕ್ಕಳೊಂದಿಗೆ ತಮ್ಮ ವಿಶ್ರಾಂತ ಬದುಕನ್ನು ಸವಿಯುತ್ತಿರುವಾಗಲೇ ಶಿವಪ್ರಸಾದನ ಸಾವಿನ ಸಿಡಿಲು ಎರಗಿತು. ಈ ಆಘಾತದಿಂದ ಬೆಳಗಲಿಯವರು ಬಹಳದಿನಗಳವರೆಗೆ ಹೊರಬರಲೇ ಇಲ್ಲ. ಬೆಳಗಲಿಯವರು ನೋವಿನಭಾರವನ್ನೇ ಹೆಚ್ಚಾಗಿ ಹೊತ್ತಿದ್ದರೂ. ಪಡೆದಷ್ಟೇ ನಲಿವಿನಲ್ಲಿ ಆ ಭಾರವನ್ನು ಮರೆಯುತ್ತಿದ್ದರು. ಒಟ್ಟಿನಲ್ಲಿ ನೋವು - ನಲಿವುಗಳ ಸಮ್ಮಿಶ್ರಣವೇ ಇವರ ಕೌಟುಂಬಿಕ ಜೀವನದ ಗುಟ್ಟು.

**ಎಡಬಿಡದ ಅಲೆದಾಟ :**

'ದೇಶ ಸುತ್ತು. ಕೋಶ ಓದು' ಎಂಬುದು ವಿಶಾಲಾರ್ಥದ ಗಾದೆಮಾತು. ಪ್ರವಾಸ ಮಾಡಿ ರಮಣೀಯ ಪ್ರದೇಶಗಳನ್ನು ನೋಡುವುದು ಬೆಳಗಲಿಯವರ ಹವ್ಯಾಸಗಳಲ್ಲೊಂದು. ಇದಕ್ಕಾಗಿ ಅವರೇನು ಕೈಯಿಂದ ದುಡ್ಡು

ಖರ್ಚು ಮಾಡಲಿಲ್ಲ. ಅನೇಕ ಅನುಕೂಲ - ಅವಕಾಶಗಳು ದೊರೆತಾಗ ದೇಶಸಂಚರಿಸಿ ಅನೇಕ ಗಣ್ಯರೊಂದಿಗೆ ಚರ್ಚಿಸಿ ತಮ್ಮ ವಿದ್ವತ್ತನ್ನು ತೋರಿಸಿದರು - ತೆಗೆದುಕೊಂಡೂ ಬಂದರು. ೧೯೮೦ ರಲ್ಲಿ ದೆಹಲಿಯಲ್ಲಿ ಜರುಗಿದ ಅಂತರಾಷ್ಟ್ರೀಯ ಪ್ರೇಮಚಂದ ಶತಮಾನೋತ್ಸವ ಸಮಾರಂಭಕ್ಕೆ ಪ್ರತಿನಿಧಿಯಾಗಿ ಹೋಗಿದ್ದರು. ಅಲ್ಲಿ ಬಂದ ಅನೇಕ ಅಂತರಾಷ್ಟ್ರೀಯ ಖ್ಯಾತಿಯ ಲೇಖಕರಾದ ಡಾ. ಮುಲ್ಕರಾಜ್ ಆನಂದ್. ಡಾ. ಹರಿವಂಶರಾಯ್ ಬಚ್ಚನ್. ಕೈಫೀ ಅಜ್ಮೀ. ಭೀಷ್ಮ ಸಾಹನಿ. ಡಾ. ಸಾಮಾವರ ಸಿಂಗ್. ಡಾ. ಮಹಮ್ಮದ್ ಹಸನ್. ಸೋವಿಯತ್ ಲೇಖಕ ಅನಾತೇಲಿ - ಮೊದಲಾದವರನ್ನು ಕಂಡು ಚರ್ಚಿಸಿದ್ದೊಂದು ವಿಶೇಷ ಅನುಭವ. ಈ ಹಿಂದೆ ೧೯೭೦ ರಲ್ಲಿ ದಿಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹೋಗಿದ್ದರು. ಅದೇ ಸಂದರ್ಭದಲ್ಲಿ ಆಗ್ರಾ. ಮಥುರಾ. ಝಾಂಸಿ ಸುತ್ತಿಕೊಂಡು ದಾರಿಮಧ್ಯದಲ್ಲಿ ಮಧ್ಯಪ್ರದೇಶದ ಅನೇಕೆಡೆಗಳಲ್ಲಿ ವಾಸವಿದ್ದು. ಹಲವಾರು ಊರುಗಳನ್ನು ಸುತ್ತಿ. ಹಲವಾರು ಅನುಭವಗಳನ್ನು ಪಡೆದರು. ಈ ಅನುಭವಗಳೇ ಮುಂದೆ 'ಚಂಬಲ್ ಕಣಿವೆಯಲ್ಲಿ' ಆಯಿತು. ಇದೊಂದು ವಿಶಿಷ್ಟ ಶೈಲಿಯ ಕಾದಂಬರಿ. ಸ್ವತಃ ತಾವೇ ಡಕಾಯಿತರ ಕೈಗೆ ಸಿಕ್ಕಿಬಿದ್ದಂತೆ ನಿರೂಪಣೆಗೈದಿರುವ ಇದರಲ್ಲಿ ಬೆಳಗಲಿಯವರ ಕಥನಕೌಶಲ್ಯ ಮೆಚ್ಚಬೇಕಾದುದು. ೧೯೮೧ ರಲ್ಲಿ ಅಕ್ಟೋಬರ - ನವ್ಹಂಬರ ತಿಂಗಳಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ವತಿಯಿಂದ ಪಂಜಾಬ ಪ್ರವಾಸ ಕೈಗೊಂಡರು. ಅಲ್ಲಿ ಇವರು ಜಲಂಧರ ಆಕಾಶವಾಣಿಯಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಹಿಂದಿಯಲ್ಲಿ ಭಾಷಣ ಮಾಡಿದ್ದಲ್ಲದೆ. ಅಮೃತಸರ ವಿಶ್ವವಿದ್ಯಾಲಯದ ಗುರುನಾನಕ ಪೀಠದಲ್ಲಿ ವಚನಗಳ ಉಪನ್ಯಾಸ ನೀಡಿ. ನಂತರ ನಡೆದ ಚರ್ಚೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಇನ್ನೊಂದು ಮಹತ್ವದ ಸಂಗತಿಯೆಂದರೆ. ಜಲಂಧರದಲ್ಲಿ ನಡೆದ ಪಂಜಾಬಿ ಸಾಹಿತ್ಯ ಸಮ್ಮೇಲನದಲ್ಲಿ ಪಾಕಿಸ್ತಾನದ ಅನೇಕ ಲೇಖಕರ ಜೊತೆ ಸಾಕಷ್ಟು ಸಮಯ ಚರ್ಚಿಸಿದ್ದು. ಆ ಸಮಯದಲ್ಲಿ ಡಾ. ಗುರುದಯಾಲ್ ಫೂಲ್. ಮುಂತಾದ ಅನೇಕ ಶ್ರೇಷ್ಠ ನಾಟಕಕಾರರ ಪರಿಚಯವಾಯಿತು. ಮರುದಿನ ಬೆಳಗಲಿಯವರ ಭಾವಚಿತ್ರದೊಂದಿಗೆ ಇಂಗ್ಲೀಷ ಪತ್ರಿಕೆಗಳು ಹಾಡಿ ಹೊಗಳಿದ್ದವು. ೧೯೮೮ ರಲ್ಲಿ ಆದರ್ಶ ಶಿಕ್ಷಕ ರಾಷ್ಟ್ರಪ್ರಶಸ್ತಿ ಸ್ವೀಕರಿಸಲು ದೆಹಲಿಗೆ ಹೋಗಿದ್ದಲ್ಲದೆ. ಮತ್ತೆ ೧೯೯೨ ರಲ್ಲಿಯೇ ಭೋಪಾಲದ 'ಭಾರತ ಭವನ' ದಲ್ಲಿ ನಡೆದ 'ಕನ್ನಡ - ಮರಾಠಿ' ಮಕ್ಕಳ ಸಾಹಿತ್ಯ ಅನುವಾದ ಕಮ್ಮಟದಲ್ಲಿ ಪಾಲ್ಗೊಳ್ಳಲು ಹೋಗಿದ್ದರು. ಹೀಗೆ ಬೆಳಗಲಿಯವರು ಉತ್ತರ ಭಾರತದ ಬಹುತೇಕ ಕಡೆ ಸಂಚರಿಸಿ. ಅಲ್ಲಿನ ಜನಾಂಗ - ಸಾಂಸ್ಕೃತಿಕ. ಮಹತ್ವಗಳನ್ನೆಲ್ಲ ಪಡೆದು ತಮ್ಮ ಬದುಕು - ಬರಹಗಳೆರಡರಲ್ಲಿಯೂ ಹೊಸಚೈತನ್ಯವನ್ನು ತುಂಬಿಕೊಂಡರು. ದಕ್ಷಿಣ ಭಾರತದ ಮದ್ರಾಸಕ್ಕೆ ೧೯೮೩ ರಲ್ಲಿ ದಕ್ಷಿಣ ಭಾರತದ ಲೇಖಕರ ಕಮ್ಮಟದಲ್ಲಿ ಭಾಗವಹಿಸಲು ಕನ್ನಡದ ಪ್ರತಿನಿಧಿಯಾಗಿ ಹೋಗಿದ್ದರು. ಇವರೊಂದಿಗೆ ಕನ್ನಡದ ಟಿ. ಪಿ. ಅಶೋಕ. ಉದಯವಾಣಿಯ ಈಶ್ವರಯ್ಯ ಕೂಡ ಇದ್ದರು. ಇಲ್ಲಿ ದಕ್ಷಿಣ ಭಾರತದ ಖ್ಯಾತ ಲೇಖಕರಾದ ತೆಲುಗಿನ ಡಿ. ಆಂಜನೇಯಲು. ಜಿ. ಅಪ್ಪಾಜಿರಾವ್. ಮಲೆಯಾಳದ ಎಂ. ಎಂ. ಬಶೀರ್. ಕೇರಳದ ಪವನ್ ಎನ್. ವೇಲಾಯುಧನ್ ತಮಿಳಿನ ಎ. ಸೆಲ್ವರಾಜು. ಪಿ. ಸುಂದರೇಶನ್ ಮೊದಲಾದವರ ಸಾನಿಧ್ಯ ಇವರಿಗೆ ಮುದನೀಡಿತು.

ಮೈಸೂರಿಗೂ ಬೆಳಗಲಿಯವರಿಗೂ ಎಲ್ಲಿಲ್ಲದ ನಂಟು. ಮೊದ - ಮೊದಲು ಪ್ರವಾಸಕ್ಕೆಂದು ಮಕ್ಕಳನ್ನು ಕರೆದೊಯ್ಯುತ್ತಿದ್ದರೆ. ೧೯೭೮ - ೭೯ ರಲ್ಲಿ ಭಾಷಾಡಿಪ್ಲೋಮಾ ತರಬೇತಿ ಪಡೆಯಲು ಸುಮಾರು ಒಂಬತ್ತು ತಿಂಗಳ ಕಾಲ ಅಲ್ಲಿಯೇ ಇದ್ದರು. ಅನಂತರ ಕನ್ನಡ ಗಂಗೋತ್ರಿ ಭಾಗ - ೩ ರ ರಚನೆಯ ಕಾಲಕ್ಕೆ ಆಗಾಗ ಮೈಸೂರಿಗೆ ಹೋಗಿಬರುತ್ತಿದ್ದರು. ಅದೇ ವೇಳೆ ಕರ್ನಾಟಕ ಸರಕಾರದ ಪಠ್ಯರಚನಾ ಸಮಿತಿಯ ಸದಸ್ಯರಾಗಿದ್ದರು.

## ಆದರ್ಶ ಶಿಕ್ಷಕ - ರಾಷ್ಟ್ರ ಪ್ರಶಸ್ತಿ :

' ದು. ನಿಂ. ಬೆಳಗಲಿಯವರ ನಡೆ ಚೆನ್ನ. ನುಡಿ ಚೆನ್ನ. ಅವರ ಸಮಗ್ರ ಬದುಕಿನ ಸ್ವರೂಪವೇ ಚೆನ್ನ' ಎಂಬ ಇಲಕಲ್ ಮಹಾಂತಪ್ಪಗಳವರ ಮಾತು ಔಚಿತ್ಯಪೂರ್ಣವಾದುದು. ಬೆಳಗಲಿಯವರು ಬದುಕಿನಲ್ಲಿ ಸರಳರೂ - ಸಜ್ಜನರೂ - ಮಿತಭಾಷಿಗಳೂ ಆದರ್ಶ ವ್ಯಕ್ತಿಗಳೂ ಆಗಿರುವಂತೆ. ವೃತ್ತಿಯಲ್ಲಿ ಸದಾ ಅಚ್ಚುಕಟ್ಟುತನವನ್ನು. ಶ್ರದ್ಧೆ - ನಿಷ್ಠೆಗಳನ್ನಿಟ್ಟುಕೊಂಡು ದುಡಿದವರು. ಇವರ ಈ ನಿಷ್ಠೆ ಫಲ ನೀಡದೇ ಇರಲಿಲ್ಲ. ಇವರೇನು ಪ್ರಶಸ್ತಿಗಾಗಿ ' ಲಾಭಿ ' ನಡೆಸಿದವರಲ್ಲ. ಆದರೆ ಇವರ ವೃತ್ತಿಗೌರವ ಹಾಗೂ ಸಾಹಿತ್ಯಸೇವೆಯನ್ನು ಗುರುತಿಸಿ ೧೯೮೮ ರಲ್ಲಿ ಭಾರತ ಸರಕಾರ ' ಆದರ್ಶ ಶಿಕ್ಷಕ ' ರಾಷ್ಟ್ರ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ರಾಜ್ಯಪ್ರಶಸ್ತಿ ಸಿಗಬಹುದೆಂದು ಭಾವಿಸಿದ ಬೆಳಗಲಿಯವರಿಗೆ ರಾಷ್ಟ್ರಪ್ರಶಸ್ತಿ ದೊರೆತಾಗ ಅತಿಸಂತೋಷವಾಯಿತು. ಅದಕ್ಕವರು ಅರ್ಹರು ಹೌದು. ಈ ಪ್ರಶಸ್ತಿಯನ್ನು ಅಂದು ಉಪರಾಷ್ಟ್ರಪತಿಗಳಾಗಿದ್ದ ಡಾ. ಶಂಕರ ದಯಾಳ ಶರ್ಮಾ ಅವರಿಂದ ಸ್ವೀಕರಿಸಿದರು.

೧೯೮೯ ರ ಮಾರ್ಚ ೩೦ ರಂದು ದು. ನಿಂ. ಬೆಳಗಲಿಯವರು ಸೇವೆಯಿಂದ ನಿವೃತ್ತಿಯಾದರು. ವೃತ್ತಿಯಿಂದ ನಿವೃತ್ತರಾದರೂ ಪ್ರವೃತ್ತಿಯಿಂದ ನಿವೃತ್ತರಾಗಲಿಲ್ಲ. ಸದಾ ಲವಲವಿಕೆಯಿಂದ ಕೂಡಿದ ಇವರ ವ್ಯಕ್ತಿತ್ವ ತಮ್ಮನ್ನು ತಾವು ಇನ್ನೂ ಹೆಚ್ಚು ಬರವಣಿಗೆಯಲ್ಲಿ ತೊಡಗಿಸಿಕೊಳ್ಳಬೇಕೆಂದು ಯೋಜನೆ ಹಾಕಿದರು. ಒಬ್ಬ ಆದರ್ಶ ಶಿಕ್ಷಕರಾಗಿ ನಿವೃತ್ತರಾದಾಗ ಆತ್ಮಸಂತೃಪ್ತಿ ಅವರಲ್ಲಿತ್ತು. ಶಿಕ್ಷಕರಾಗಿ ಅನೇಕ ಪ್ರತಿಭಾವಂತ ಶಿಷ್ಯವೃಂದವನ್ನೇ ತಯಾರಿಸಿದ ಬೆಳಗಲಿಯವರದು ಸಾರ್ಥಕ ಶಿಕ್ಷಕಸೇವೆ.

## ಮೋಜುಗಾರ ಬೆಳಗಲಿ :

ಬದುಕಿನಲ್ಲಿ ಅನೇಕ ನೋವುಗಳಿರಬಹುದು. ನಗೆಯೇ ನೋವು ಮರೆಸುವ ದಿವ್ಯ ಔಷಧಿ. ನಗೆಯಿಲ್ಲದ ಜೀವನವದು ಬರಡು. ಬೆಳಗಲಿಯವರು ಹಿಂದೆ ವಿದ್ಯಾರ್ಥಿಯಾಗಿದ್ದಾಗಲೂ ಅಷ್ಟೇ ವಿನೋದ ನಾಟಕಗಳಲ್ಲಿಯೇ ಪಾತ್ರ ವಹಿಸುತ್ತಿದ್ದರು. ೧೯೮೮ ರಲ್ಲಿ ಅನೇಕ ವಿನೋದಪ್ರಸಂಗಗಳನ್ನು ಒಂದುಗೂಡಿಸಿ ' ಹೆಂಡತಿ ಮತ್ತು ಟ್ರಾನ್ಸಿಸ್ಟರ್ ' ಎಂಬೊಂದು ಸಂಕಲನವನ್ನೇ ಪ್ರಕಟಿಸಿದರು. ಇವರ ಅನೇಕ ಮೋಜಿನ ಪ್ರಸಂಗಗಳು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಗೊಂಡಿವೆ. ' ಸಾಹಿತಿಗಳ ಸಂಗ ಮೋಜಿನ ಪ್ರಸಂಗ ' ಎಂಬ ಅಂಕಣ ಬರೆದ ಬೆಳಗಲಿಯವರು ಸ್ವತಃ ಮೋಜುಗಾರರಾಗಿದ್ದರು.

**ಬೆಳಗಲಿಯವರ ಕಹಿನೆನಪುಗಳು :**

೧೯೫೭ ರಲ್ಲಿ ಬೆಳಗಲಿಯವರು ತಮ್ಮ ಚೊಚ್ಚಿಲ ಕೃತಿಯನ್ನು ಬಿಡುಗಡೆಗೊಳಿಸುವ ಸಂಭ್ರಮದಲ್ಲಿದ್ದರು. ಆದರೆ ಅವರ ಚೊಚ್ಚಿಲ ಮಗ ಶಿವಲಿಂಗ ತನ್ನ ಎರಡನೇ ವರ್ಷದಲ್ಲಿ ಡಿಫ್ತೀರಿಯಾದಿಂದ ತೀರಿಹೋದಾಗ ಸಂಭ್ರಮದಲ್ಲಿ ಬಿಡುಗಡೆಯಾಗಬೇಕಿದ್ದ 'ಬೆಣ್ಣಿ ಓಂದಿನ ಕಣ್ಣು' ಹಾಗೆಯೇ ಚಲಾವಣೆಯಾಯಿತು. ನಾಲ್ಕನೆಯ ಮಗಳು ಮಹಾದೇವಿ ಅನಾರೋಗ್ಯದಿಂದಾಗಿ ಮದುವೆಯಾಗದೇ ಉಳಿದುದು ಬೆಳಗಲಿಯವರಿಗೆ ತುಂಬ ನೋವನ್ನುಂಟು ಮಾಡಿತು. ಮೋಹನ ಹೆಚ್ಚು ಕಲಿಯದೆ ಮದುವೆಯ ನಂತರ ಪಾಲುಪಡೆದು ಬೇರೆಯಾದುದು ಬೆಳಗಲಿಯವರಿಗೆ ಸಹಿಸದ ನೋವು ನೀಡಿತು. ಇದೆಲ್ಲಕ್ಕಿಂತ ಹೆಚ್ಚಿನ ಆಘಾತ ನೀಡಿದ್ದು ಮಗ ಶಿವಪ್ರಸಾದನ ಸಾವು. ೧೯೯೫ ಸಪ್ಟಂಬರ ೧೭ ರಂದು ಎಂದೂ ಮರೆಯದ ಕಹಿನೆನಪನ್ನು ನೀಡಿದ ದುರ್ದಿನ. ೨೬ ರ ಹರೆಯದ ಪ್ರತಿಭಾವಂತ ಮಗನಂದು ಬಸ್ ಅಪಘಾತದಲ್ಲಿ ಸಾವನ್ನಪ್ಪಿದ್ದ. ಮಹಾಲಿಂಗಪುರದಲ್ಲಿ ಇಂಗ್ಲೀಷ ಉಪನ್ಯಾಸಕನಾಗಿ. ಸುಂದರವಾಗಿ ಕನ್ನಡ - ಇಂಗ್ಲೀಷ ಅಕ್ಷರಗಳನ್ನು ಬರೆಯುವ. ಒಳ್ಳೆಯ ಕ್ರೀಡಾಪಟು. ತಾಯಿಗೆ ಅತೀ ಪ್ರೀತಿಯ ಮಗನಾದ ಶಿವಪ್ರಸಾದ (ಎಲ್ಲ ಮಕ್ಕಳು ತಾಯಿಯನ್ನು 'ಅಕ್ಕ' ಎಂದು ಕರೆದರೆ. ಇವನೇ 'ಅವ್ವ' ಎಂದು ಕರೆಯುತ್ತಿದ್ದ.) ಅಕಾಲ ಮೃತ್ಯುವಿಗೆ ತುತ್ತಾದುದು ಬೆಳಗಲಿಯವರಿಗೆ ಅತೀ ನೋವಿನ ಸಂಗತಿಯಾಗಿತ್ತು. ಈ ನೋವಿನಿಂದ ಅನೇಕ ದಿನಗಳವರೆಗೆ ಇವರು ಚೇತರಿಸಿಕೊಳ್ಳಲೇ ಇಲ್ಲ. ಯಾವ ತಂದೆ ತಾನೆ ಸಹಿಸಲು ಸಾಧ್ಯ ? ಈ ಕೊರಗು ಅವರನ್ನು ಒಂದೆರಡು ವರ್ಷಗಳವರೆಗೆ ಬಿಡಲೇ ಇಲ್ಲ. ಎಂಟು ಮಕ್ಕಳ ತಂದೆಯಾದ ಬೆಳಗಲಿಯವರಿಗೆ ಬದುಕಿನ ಎಲ್ಲ ರೀತಿಯ ನೋವುಗಳ ಅನುಭವವಾಯಿತು. ಅನೇಕ ಆಘಾತಗಳ ಹೊಡೆತಕ್ಕೆ ಬೆಳಗಲಿಯವರು ಹಣ್ಣು - ಹಣ್ಣಾಗಿದ್ದರು. ಆದರೂ ಲವಲವಿಕೆಯಿಂದಿರಲು ಸದಾ ಪ್ರಯತ್ನಿಸುತ್ತಿದ್ದರು. ಇವುಗಳೆಲ್ಲ ಕೌಟುಂಬಿಕ ಕಹಿನೆನಪುಗಳಾದರೆ. ಸಾಹಿತ್ಯಿಕವಾಗಿಯೂ ಅನೇಕ ಸಲ ನೊಂದಿರುವುದುಂಟು. ಅನೇಕಸಲ ಇವರ ಸಾಹಿತ್ಯಿಕ ಪ್ರತಿಭೆಯನ್ನು ಸರಕಾರ ಗುರುತಿಸದೇ ಹೋದಾಗ ಕುಬ್ಜರಾಗದೇ ಮುನ್ನುಗ್ಗಿದರು. ಕೆಲವು ಸಲ ಇವರ ಮುಗ್ಧತೆಯೇ ಇವರಿಗೆ ಮೋಸಮಾಡಿದ್ದೂ ಉಂಟು.

'ಹಡೆದವರು' ಕಾದಂಬರಿಯನ್ನು ಚಲನಚಿತ್ರ ಮಾಡುತ್ತೇವೆಂದು ಖ್ಯಾತನಿರ್ದೇಶಕದ್ವಯರಾದ ದೊರೆ - ಭಗವಾನ್ ಇವರನ್ನು ಮದ್ರಾಸಿಗೆ ಆಹ್ವಾನಿಸಿ ಒಂದು ಸಾವಿರ ರೂಗಳನ್ನು ಮುಂಗಡವಾಗಿ ಕೊಟ್ಟು. 'ಕಾಫಿರೈಟ್' ಬರೆಸಿಕೊಂಡು ಎಷ್ಟೋ ದಿನಗಳಾದರೂ (ಈವರೆಗೂ) ಚಿತ್ರನಿರ್ಮಿಸದೇ ಇದ್ದಾಗ ಬೆಳಗಲಿಯವರಿಗೆ ತುಂಬ ನಿರಾಶೆಯಾಯಿತು. ಅನಂತರದಲ್ಲೊಮ್ಮೆ ಹೊಸದಾಗಿ ಪ್ರಾರಂಭವಾದ 'ಸೂರ್ಯೋದಯ' ದಿನಪತ್ರಿಕೆಗೆ ಕಳಿಸಿದ ಕಿರುಕಾದಂಬರಿಯೊಂದು ಪ್ರಕಟಣೆಯಾಗುವುದಿರಲಿ. ಅದರ ಹಸ್ತಪ್ರತಿ ಕೂಡ ವಾಪಸಾಗದಿದ್ದುದು ನೋವೆನಿಸಿತು. ಅನಂತರ ಅದೇ ಕಿರುಕಾದಂಬರಿ 'ನವನಾಡು' ಪತ್ರಿಕೆಯಲ್ಲಿ ೧೭ ಕಂತುಗಳಾಗಿ ಧಾರಾವಾಹಿರೂಪದಲ್ಲಿ ಪ್ರಕಟವಾಗಿ ಜನಮೆಚ್ಚುಗೆ ಪಡೆದಾಗ ಹುಬ್ಬಳ್ಳಿಯ ಚಲನಚಿತ್ರ ವಿತರಕರೊಬ್ಬರು ಚಿತ್ರ ನಿರ್ಮಿಸುವೆನೆಂದರು. ಆಗ ಬೆಳಗಲಿಯವರು 'ಹಡೆದವರು' ಕೊಟ್ಟು ಕೈಸುಟ್ಟುಕೊಂಡಿದ್ದರಿಂದ ಅವರು ನೇರ ನುಡಿಗಳಲ್ಲಿಯೇ 'ನೀವು ಖಂಡಿತ

ನಿರ್ಮಿಸುತ್ತೇನೆಂದರೆ ಮಾತ್ರ ಕೊಡುವೆ ' ಎಂದು ಹೇಳಿದರು. ಬೆಳಗಲಿಯವರು ತಮ್ಮ ಯಾವುದಾದರೊಂದು ಕಾದಂಬರಿ ಚಲನಚಿತ್ರವಾಗಬೇಕೆಂದು ಆಸೆಯಿಟ್ಟುಕೊಂಡಿದ್ದರು. ಆದರೆ ಅದು ಈಡೇರಲೇ ಇಲ್ಲ. ಇತ್ತೀಚೆಗೆ ಅವರ ಮಗ ಮಧುಕೇಶ್ವರ ಪ್ರಯತ್ನ ನಡೆಸಿದ್ದಾರೆ. ಒಟ್ಟಿನಲ್ಲಿ ಬೆಳಗಲಿಯವರು ಬದುಕಿನಲ್ಲಿ ನಲಿವಿಗಿಂತ ನೋವನ್ನೇ ಹೆಚ್ಚಾಗಿ ಉಂಡಿದ್ದಾರೆ. ಇದ್ದುದರಲ್ಲಿ ಸಮಾಧಾನ - ಸಂತೃಪ್ತಿ ಪಡೆದ ಜೀವ ಅದು.

**ಪ್ರಶಸ್ತಿ - ಗೌರವಗಳು :**

ಬೆಳಗಲಿಯವರು ಎಂದೂ ಪ್ರಶಸ್ತಿಗಳಗಳನ್ನು ಅರಸಿ ಹೋದವರಲ್ಲ. ಅವರ ಸೇವೆಯನ್ನು ಗುರುತಿಸಿದ ಸಮಾಜ - ಸರಕಾರ ಅನೇಕ ಪ್ರಶಸ್ತಿ - ಪುರಸ್ಕಾರಗಳನ್ನು ನೀಡಿ ಗೌರವಿಸಿದೆ. ೧೯೭೬ ರಲ್ಲಿ ಇವರ ' ಬದುಕುವ ಬಯಕೆ ' (ಮಕ್ಕಳ ಕತೆಗಳು)ಗೆ ರಾಷ್ಟ್ರೀಯ ಪ್ರಶಸ್ತಿ (NCERT) ದೊರೆತುದಲ್ಲದೆ. ರಾಷ್ಟ್ರೋತ್ಥಾನ ಪರಿಷತ್ತಿನ ಬಹುಮಾನವೂ ಸಿಕ್ಕಿತು. ೧೯೭೮ ರಲ್ಲಿ ಇವರ ' ಗೌಡರ ಮಗಳು ಗೌರಿ ' (ಕಥಾಸಂಕಲನ)ಗೆ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರಥಮ ಬಹುಮಾನ ಸಿಕ್ಕಿತು. ' ಮುಳ್ಳುದಾರಿಯಲ್ಲಿ ಬಿರಿದ ಹೂಗಳು ' (ಕಥಾಸಂಕಲನ) ಕೃತಿ ಗಂಗಾಧರ ಪ್ರಶಸ್ತಿ ಪಡೆದರೆ ' ಮುತ್ತಿನ ತೆನೆಗಳು ' ವಿಶ್ವಭಾರತಿಸಾಹಿತ್ಯ ಪುರಸ್ಕಾರವನ್ನು ಗಳಿಸಿಕೊಂಡಿತು. ಬೆಳಗಲಿಯವರು ಕತೆಗಾರರಿರುವಂತೆ ಒಬ್ಬ ಸಮರ್ಥ ಕಾದಂಬರಿಕಾರರೂ ಹೌದು. ಇವರ ' ದೇವದಾಸಿ ' ಕಾದಂಬರಿಗೆ ೧೯೯೧ ರಲ್ಲಿ ಶ್ರೀಧರ ಪ್ರಶಸ್ತಿ ದೊರೆತು. ಅದನ್ನು ಖ್ಯಾತಲೇಖಕರಾದ ಶಿವರಾಮ ಕಾರಂತರಿಂದ ಪಡೆದರು. ಅದರೊಂದಿಗೆ ಸರ್ ಎಂ. ವಿಶ್ವೇಶ್ವರಯ್ಯ ಪ್ರಶಸ್ತಿಯನ್ನು ' ದೇವದಾಸಿ ' ಪಡೆಯಿತು. ೧೯೯೨ ರಲ್ಲಿ ರಾಯಚೂರಿನ ತುಕ್ಕಿ ಪ್ರತಿಷ್ಠಾನದ ಪ್ರಶಸ್ತಿ ಇವರ ' ಅಕ್ರಮ ಸಂತಾನ ' (ಮರಾಠಿ ಅನುವಾದ)ಕ್ಕೆ ಲಭಿಸಿತು. ೧೯೯೩ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಇವರ ಸಾಹಿತ್ಯ ಸೇವೆಯನ್ನು ಗುರುತಿಸಿ ಗೌರವಿಸಿತು. ೧೯೯೪ ರಲ್ಲಿ ಇವರ ' ಜಾದೂಪಕ್ಷಿ ' (ಮಕ್ಕಳ ಕತೆಗಳು) ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿಯನ್ನು ಗಳಿಸಿದ್ದಲ್ಲದೆ. ೧೯೯೬ ರಲ್ಲಿ ದೆಹಲಿಯ ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ ಇವರಿಗೆ ಅಂಬೇಡ್ಕರ ಫೆಲೋಶಿಫ್ ನೀಡಿ ಗೌರವಿಸಿತು. ಇಲಕಲ್‌ದ ವಿಜಯಮಹಾಂತೇಶ ಸಂಸ್ಥಾನಮಠ ' ಲಿಂಗವಂತ ಗ್ರಂಥಬಹುಮಾನ ' ವನ್ನು ನೀಡಿ ಗೌರವಿಸಿದೆ.

ಬೆಳಗಲಿಯವರು ನಿವೃತ್ತರಾದ ನಂತರ ಐನಾಪುರ ಗ್ರಾಮದ ಅಭಿಮಾನಿ ನಾಗರಿಕರು ಇವರನ್ನು ಸನ್ಮಾನಿಸಿ ಐದು ಸಾವಿರ ರೂಗಳ ಹಮ್ಮಿಣಿ ಅರ್ಪಿಸಿದರು. ಜನರ ಅಭಿಮಾನದ ಈ ಹಣವನ್ನು ತಮ್ಮ ' ಮುತ್ತಿನ ತೆನೆಗಳು ' ಗೆ ಉಪಯೋಗಿಸಿ ಸಾರ್ಥಕಪಡಿಸಿಕೊಂಡರು. ಇದೇ ವರ್ಷ ಇವರಿಗೆ ಅರವತ್ತು ತುಂಬಿದ ಸಂದರ್ಭದಲ್ಲಿ ಅಭಿಮಾನಿಗಳೆಲ್ಲ ಸೇರಿ. ಅಥಣಿಯ ವಿಮೋಚನಾ ಸಂಘಟನೆಯ ಆಶ್ರಯದಲ್ಲಿ ಷಷ್ಟಬ್ದಿ ಸಮಾರಂಭವನ್ನು ಏರ್ಪಡಿಸಿದರು. ಗದಗದ ತೋಂಟದಾರ್ಯ ಸ್ವಾಮಿಗಳವರು ಬೆಳಗಲಿಯವರನ್ನು ಆ ಅದ್ದೂರಿ ಸಮಾರಂಭದಲ್ಲಿ ಸನ್ಮಾನಿಸುತ್ತ ಶಾಂತಮ್ಮನವರನ್ನು ಬಾಯ್ತುಂಬ ಹೊಗಳಿದರು.

೧೯೯೯ ರಲ್ಲಿ ಇವರ ಅನೇಕ ಅಭಿಮಾನಿ. ಸಹೃದಯರೆಲ್ಲ ಸೇರಿ ಅಭಿನಂದನಾ ಸಮಾರಂಭವೊಂದನ್ನು ಏರ್ಪಡಿಸಿದರು. ಅವರಿಗೆ ' ಬೆಳಗಲಿ ' ಅಭಿನಂದನ ಗ್ರಂಥವೊಂದನ್ನು ಸಮರ್ಪಿಸಿ - ಸತ್ಕರಿಸಿದರು. ಇದರಲ್ಲಿ ಬೆಳಗಲಿಯವರ ' ಬದುಕು - ಬರಹ ' ಗಳ ಮೌಲ್ಯಮಾಪನವಿದೆ. ಇದನ್ನು ಬಿಡುಗಡೆಗೊಳಿಸಿ. ' ಇಳಕಲ್ಲಿನ ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರರು ಸಾಹಿತಿ ದು. ನಿಂ. ಬೆಳಗಲಿಯವರ ಬದುಕು - ಬರಹಗಳಿಗೆ ಸದಾ ಬೆಂಗಾವಲಾಗಿರಲಿ ' ಎಂದು ಹಾರೈಸಿದರು.

ಇವೆಲ್ಲಕ್ಕಿಂತ ಮಿಗಿಲಾದುದು. ೧೯೮೮ ರಲ್ಲಿ ಆದರ್ಶ ಶಿಕ್ಷಕ ರಾಷ್ಟ್ರಪ್ರಶಸ್ತಿ ಪಡೆದದ್ದು. ಇದು ಬೆಳಗಲಿಯವರ ವ್ಯಕ್ತಿತ್ವಕ್ಕೆ ಕಿರೀಟಪ್ರಾಯವಾದುದು. ಬದುಕು - ಬರಹಗಳೆರಡರಲ್ಲಿಯೂ ಆದರ್ಶರಾಗಿದ್ದ ಬೆಳಗಲಿಯವರು ವೃತ್ತಿಯಲ್ಲಿಯೂ ಆದರ್ಶರಾಗಿದ್ದರು. ಅದಕ್ಕೆ ಅರ್ಹಗೌರವವನ್ನೇ ಸರಕಾರ ನೀಡಿತು.

೧೯೯೫ ರಲ್ಲಿ ಮುಧೋಳದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಬೆಳಗಲಿಯವರ ಪಾತ್ರ ತುಂಬಹಿರಿದು. ' ರನ್ನಗನ್ನಡಿ ' ಯ ಪ್ರಧಾನ ಸಂಪಾದಕರಾಗಿ ಕೆಲಸ ನಿರ್ವಹಿಸಿ ಉತ್ತಮ ಹೊತ್ತಿಗೆಯನ್ನೇ ಹೊರತಂದಿದ್ದಾರೆ. ' ಬಿಜಾಪುರ ಜಿಲ್ಲಾದರ್ಶನ ' ಎಂಬೊಂದು ಗ್ರಂಥವನ್ನು ಗೊ. ರು. ಚ. ಅವರ ಅಭಿಪ್ರಾಯದ ಮೇರೆಗೆ ಹೊರತಂದರು.

**ಬೆಳಗಲಿಯವರ ಬಹುಭಾಷಾ ಪ್ರಜ್ಞೆ :**

ಬೆಳಗಲಿಯವರಿಗೆ ಕನ್ನಡದ ಜೊತೆಗೆ ಮರಾಠಿ - ಹಿಂದಿ ಭಾಷೆಗಳೂ ಕೂಡ ಕರಗತ ಭಾಷೆಗಳು. ಒಂದರ್ಥದಲ್ಲಿ ಬೆಳಗಲಿಯವರು ಬಹುಭಾಷಾ ಪ್ರವೀಣರೆಂದೇ ಹೇಳಬಹುದು. ಬೇರೆ - ಬೇರೆ ಭಾಷೆಯ ಸೊಗಡನ್ನು ಕನ್ನಡಕ್ಕೆ ತಂದಿದ್ದಾರೆ. ಸಾಹಿತ್ಯ ರಚನೆಯ ಕಾಲಕ್ಕೆ ದೇಶದ ಉದ್ದಗಲಕ್ಕೂ ಸಂಚರಿಸಿದ ಬೆಳಗಲಿಯವರಿಗೆ ಬಹುಭಾಷಾ ಹಸಿವು ಸಹಜವಾಗಿಯೇ ಇತ್ತು. ಮರಾಠಿಭಾಷೆಯ ಎರಡು ಉತ್ಕೃಷ್ಟ ಕೃತಿಗಳಾದ ' ಅಕ್ಕರಮಾಶಿ '. ' ಗಬಾಳ ' ಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಹೀಗೆ ಅನುವಾದಿಸುವುದರ ಮುಖಾಂತರ ಭಾಷೆಗಳ. ಸಂಸ್ಕೃತಿಗಳ ನಡುವಿನ ಕೊಂಡಿಯಾಗಿದ್ದಾರೆ. ೧೯೮೯ ರಲ್ಲಿ ಕೊಲ್ಲಾಪುರ ಜಿಲ್ಲೆಯ ಆಜರಾದಲ್ಲಿ ನಡೆದ ಮರಾಠಿ ಸಾಹಿತ್ಯ ಸಮ್ಮೇಳನದಲ್ಲಿ ಬೆಳಗಲಿಯವರು ಭಾಗವಹಿಸಿದ್ದರು. ಕನ್ನಡ - ಮರಾಠಿ ವಿದ್ವಾಂಸರಾದ ಡಾ. ಅ. ರಾ. ತೋರೋ ಬೆಳಗಲಿಯವರ ಆತ್ಮೀಯರಾಗಿದ್ದರು.

ಬೆಳಗಲಿಯವರು ವೃತ್ತಿಯಿಂದ ಹಿಂದಿ ಶಿಕ್ಷಕರಾಗಿದ್ದರಿಂದ ಈ ಭಾಷೆ ಅವರಿಗೆ ಸಹಜ ಗಮನ ಸೆಳೆಯಿತು. ಇವರು ದೆಹಲಿಯಲ್ಲಿ ನಡೆದ ಪ್ರೇಮಚಂದರ ಶತಮಾನೋತ್ಸವದಲ್ಲಿ ಭಾಗವಹಿಸಿದ್ದರು. ಉತ್ತರ ಭಾರತದ ಅನೇಕ ಹಿಂದಿ ಕವಿಗಳೊಂದಿಗೆ ಸಂಪರ್ಕವಿರಿಸಿಕೊಂಡಿದ್ದರು. ಅಲ್ಲದೆ ಅಮೃತಸರದಲ್ಲಿ ವಚನಗಳನವಿಶ್ಲೇಷಣೆಮಾಡಿ ವಿವರಿಸಿದ್ದನ್ನು ನೋಡಿದರೆ ಬೆಳಗಲಿಯವರ ಹಿಂದಿ ಭಾಷಾ ಪ್ರಾವೀಣ್ಯತೆ ಅರಿವಾಗದೆ ಇರದು.

**ಬೆಳಗಲಿಯವರ ಕೊನೆಯ ದಿನಗಳು :**

ಬೆಳಗಲಿಯವರು ನಿವೃತ್ತರಾದ ಮೇಲೆ ಬಹಳಷ್ಟು ಬರೆಯಬೇಕೆಂದು ಯೋಜಿಸಿದ್ದರು. ಆದರೆ ' ತಾನೊಂದು ಬಗೆದರೆ ದೈವವೊಂದು ಬಗೆಯಿತು ' ಎಂಬಂತೆ ವಿಧಿ ಶಿವಪ್ರಸಾದನನ್ನು ನುಂಗಿತು. ಇಳಿವಯಸ್ಸಿನಲ್ಲಿ ಇದು ಅವರಿಗೆ ದೊಡ್ಡ ಆಘಾತವೇ ಸರಿ. ಈ ಆಘಾತದಿಂದ ಸ್ವಲ್ಪ ಚೇತರಿಸಿಕೊಳ್ಳುವುದರಲ್ಲಿಯೇ ಅಸ್ತಮಾದ ತೊಂದರೆ ಹೆಚ್ಚಾಯಿತು. ಮೈಯಲ್ಲಿ ಶಕ್ತಿ ಕಡಿಮೆಯಾಗುತ್ತಿದ್ದಂತೆ ಇದು ಹೆಚ್ಚು ಉಲ್ಬಣಗೊಂಡಿತು. ಮೊದಲಿನಿಂದಲೂ ಅಸ್ತಮಾವನ್ನು ನಾನಾ ರೀತಿಯ ದೇಶಿ - ವಿದೇಶೀ ಔಷಧಿಗಳ ಮೂಲಕ ಹಿಡಿತದಲ್ಲಿಟ್ಟಿದ್ದರು. ಆದರೆ ಮನಸ್ಸಿನ ನೋವು - ಚಿಂತೆಗಳಿಂದಾಗಿ ದೇಹ ಕೃಶವಾಗುತ್ತಿದ್ದಂತೆ ಇದರ ನೋವು ಹೆಚ್ಚಾಗತೊಡಗಿತು. ಇಷ್ಟಿದ್ದರೂ ಓದುವ - ಬರೆಯುವ ಹಂಬಲದಲ್ಲಿಯೇ ಇದ್ದರು. ನಿವೃತ್ತಿಯ ನಂತರ ಸ್ವಂತದ್ದೊಂದು ಮುದ್ರಣಾಲಯವನ್ನು ಮಧುಕೇಶ್ವರನಿಗೆ ಹಾಕಿಕೊಟ್ಟು. ಅದರಲ್ಲಿ ತಮ್ಮ ಹಾಗೂ ಉಳಿದವರನೇಕರ ಕೃತಿಗಳನ್ನು ಹೊರತರುತ್ತ ತಮ್ಮ ಅನಾರೋಗ್ಯ - ನೋವನ್ನು ಲೆಕ್ಕಿಸದೆ ಅಕ್ಕರೆಯ ಮೊಮ್ಮಕ್ಕಳೊಂದಿಗೆ ಸಂತೋಷ - ಸಂತೃಪ್ತಿಯಿಂದ ಬದುಕನ್ನು ನಡೆಸುವ ಇವರನ್ನು ಅನೇಕ ಸ್ನೇಹಿತರು ಕಂಡಾಗ ಬೆಳಗಲಿ ' ಬೆಳಗಲಿಯೇ ' ಎಂದು ಉದ್ಗರಿಸುತ್ತಿದ್ದರು.

ಒಂದೆಡೆ ಅವರ ಅಭಿಮಾನಿಗಳೆಲ್ಲ ನೂರುವರ್ಷ ಸುಖವಾಗಿ ಬದುಕಲಿ ಎಂದು ಹರಿಸಿದರೆ. ಇನ್ನೊಂದೆಡೆ ಅವರ ರೋಗ ಉಲ್ಬಣವಾಗುತ್ತಲೇ ಹೊರಟಿತು. ಬೆಳಗಲಿಯವರ ಕೊನೆಯ ದಿನಗಳು ತೀರ ಗಂಭೀರವಾಗಿದ್ದವು. ದಿನಾಂಕ ೩೧-೧೨-೧೯೯೯ ರಂದು ಬೆಳಗಲಿಯವರನ್ನು ಮಿರಜಕ್ಕೆ ಕರೆದೊಯ್ದು ಡಾ. ಚವ್ಹಾಣರ ಹತ್ತಿರ ತೋರಿಸಿ. ರಕ್ತಪರೀಕ್ಷೆ ಮಾಡಿಸಿದಾಗ ಅವರಿಗೆ ಕ್ಯಾನ್ಸರ್ ಇದ್ದು ಅದು ೩ ನೇ ಹಂತದಲ್ಲಿರುವುದು ಗೊತ್ತಾಯಿತು. ಮೊದಲೇ ಅವರು ಅಸ್ತಮಾ ಹಾಗೂ ಎಡಪಾರ್ಶ್ವದಿಂದ ಬಳಲುತ್ತಿದ್ದರು. ಅವುಗಳೊಂದಿಗೆ ಇದೊಂದು ಸೇರ್ಪಡೆಯಾಯಿತು. ದಿನ - ದಿನಕ್ಕೆ ಇವರ ಸ್ಥಿತಿ ಗಂಭೀರವಾಗುತ್ತ ಹೋಯಿತು. ಗುಣವಾಗುವ ಸೂಚನೆಗಳೇ ಕಾಣಲಿಲ್ಲ. ಸಾಲದೆಂಬಂತೆ ಮೂತ್ರಕೋಶವೂ ವಿಫಲವಾಯಿತು. ಜೀವನದಲ್ಲಿ ಯಾವುದೇ ಚಟಗಳಿಗೆ ಅಂಟಿಕೊಂಡಿರದ ಬೆಳಗಲಿಯವರಿಗೆ ಅಸ್ತಮಾ. ಕ್ಯಾನ್ಸರ್. ಪಾರ್ಶ್ವರೋಗ. ಮೂತ್ರಕೋಶದ ವಿಫಲತೆ ಹೀಗೆ ಒಂದರ ಹಿಂದೊಂದರಂತೆ ಅಂಟಿಕೊಂಡು ಅವರ ಜೀವವನ್ನು ಹಿಂಡತೊಡಗಿದವು.

ನಿರುಪಾಯರಾದ ಮನೆಯವರು ದಿನಾಂಕ ೪-೧-೨೦೦೦ ದಂದು ಮರಳಿ ಮನೆಗೆ ಕರೆತಂದರು. ನಂತರದಲ್ಲಿ ಬೆಳಗಲಿಯವರು ತಮ್ಮ ಕೊನೆಯಗಳಿಗೆಗಳನ್ನು ಎಣಿಸತೊಡಗಿದರು. ದಿನಾಂಕ ೭-೧-೨೦೦೦ ದಂದು ಅವರ ಸ್ಥಿತಿ ಚಿಂತಾಜನಕವಾಗಿ ಮಾತೂ ನಿಂತು ಹೋಯಿತು. ದಿನಾಂಕ ೮-೧-೨೦೦೦ ದಂದು ೧-೪೫ ಕ್ಕೆ ಬೆಳಗಲಿಯವರು ತಮ್ಮ ಕೊನೆಯುಸಿರೆಳೆದರು.

## ಅಧ್ಯಾಯ : ನಾಲ್ಕು

# ಬೆಳಗಲಿಯವರ ಕಾದಂಬರಿಗಳು

ಬಹುಮುಖ ವ್ಯಕ್ತಿತ್ವದ ದು. ನಿಂ. ಬೆಳಗಲಿಯವರು ಸಣ್ಣಕಥೆ. ಮಕ್ಕಳಕಥೆ. ನಗೆಬರಹ. ಜೀವನ ಚರಿತ್ರೆ. ಪ್ರಬಂಧ ಸಾಹಿತ್ಯ. ಅನುವಾದ. ಹರಟೆ. ಸಂಪಾದನೆ - ಹೀಗೆ ಹೊಸಗನ್ನಡ ಸಾಹಿತ್ಯದ ಹತ್ತು - ಹಲವು ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಕತೆಗಾರರಾಗಿ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿರಿಸಿದ ಬೆಳಗಲಿಯವರು ಕಾದಂಬರಿಕಾರರಾಗಿ ಬೆಳೆದಿದ್ದಾರೆ. ಕಾವ್ಯವೊಂದನ್ನು ಬಿಟ್ಟು (ಕೆಲವು ಬಿಡಿ ಬಿಡಿ ಕವಿತೆಗಳನ್ನು ಬರೆದರೂ) ಅವರು ರಚಿಸದಿರುವ ಸಾಹಿತ್ಯಪ್ರಕಾರವಿಲ್ಲ. ಪ್ರತ್ಯೇಕ ಅಧ್ಯಯನಕ್ಕೆ ಸಾಮಗ್ರಿಯಾಗಬಲ್ಲ ಸಂಖ್ಯೆ -ಸತ್ವದ ಸಣ್ಣಕಥೆಗಳನ್ನೂ ಬರೆದಿದ್ದಾರೆ. ಸಣ್ಣಕಥೆಗಿಂತಲೂ ಕಾದಂಬರಿ ಬೆಳಗಲಿಯವರ ಪ್ರೀತಿಯ ಸಾಹಿತ್ಯಪ್ರಕಾರವಾಗಿದೆ. ಹೀಗಾಗಿ ಬೆಳಗಲಿಯವರು ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಸೃಷ್ಟಿಸಿದವರು. ಕಾದಂಬರಿ ಪ್ರಕಾರವನ್ನೇ ತಮ್ಮ ಸಾಹಿತ್ಯ ನಿರ್ಮಿತಿಯ ಪ್ರಮುಖ ರೂಪವನ್ನಾಗಿ ಆಯ್ದುಕೊಂಡು ಗ್ರಾಮೀಣ ಬದುಕು. ಅದರಲ್ಲಿಯೂ ಕೆಳವರ್ಗದವರ ಸಮಸ್ಯೆಗಳನ್ನು ಸಮರ್ಥವಾಗಿ ನಿರೂಪಿಸಿ - ಜನಪರ ಕಾದಂಬರಿಗಳನ್ನೇ ನೀಡಿದ್ದಾರೆ. ಗ್ರಾಮೀಣ ಜನಾಂಗದ ವಿವಿಧ ಸ್ತರಗಳ ಸಾಂಸ್ಕೃತಿಕ ಬದುಕನ್ನು ಚಿತ್ರಿಸುವಲ್ಲಿ ಸಫಲರಾಗಿದ್ದಾರೆ. ಗ್ರಾಮಸಂಸ್ಕೃತಿಯನ್ನು ಬಿಡಲಾಗದ. ಪಟ್ಟಣದ ನಾಗರಿಕತೆಗೆ ಹೊಂದಿಕೊಳ್ಳಲಾಗದ ಹೊಯ್ದಾಟದಲ್ಲಿ ಬದುಕನ್ನು ದುರ್ಭರ ಮಾಡಿಕೊಂಡ ತ್ರಿಶಂಕು ಸ್ಥಿತಿಯಲ್ಲಿರುವ ಮನೋವ್ಯಾಪಾರಗಳ ವಿಶ್ಲೇಷಣೆ ಅವರ ಕಾದಂಬರಿಗಳಲ್ಲೆಲ್ಲ ಹಾಸುಹೊಕ್ಕಾಗಿ ಮೂಡಿಬಂದಿದೆ.

ಬೆಳಗಲಿಯವರ ಕೃತಿಗಳಲ್ಲಿ ಬದುಕಿನ ಉಸಿರಾಟವಿದೆ. ಅವರ ಯಾವ ಕೃತಿಯನ್ನು ತೆಗೆದುಕೊಂಡರೂ ಅದರಲ್ಲಿ ಅವರ ಅನುಭವ ಗಟ್ಟಿಗೊಂಡಿದೆ; ಪ್ರಾಮಾಣಿಕ ಪ್ರತಿಪಾದನೆಯಿದೆ. ಬೆಳಗಲಿಯವರು ಒಟ್ಟು ಹದಿನಾರು ಕಾದಂಬರಿಗಳನ್ನು ಬರೆದಿದ್ದಾರೆ. ಈ ಸಂಖ್ಯೆ ಉಳಿದ ಕಾದಂಬರಿಕಾರರಿಗೆ ಹೋಲಿಸಿದರೆ ಅಷ್ಟು ದೊಡ್ಡದೇನಲ್ಲ. ಆದರೆ ಕಾದಂಬರಿಗಳು ವೈವಿಧ್ಯಮಯವಾದ ವಸ್ತು. ಪ್ರಾದೇಶಿಕ ಭಾಷಾಪ್ರೌಢಿಮೆ ಹಾಗೂ ಸಮರ್ಥವಾದ ಶೈಲಿಯಿಂದಾಗಿ ಪ್ರಾಮುಖ್ಯತೆ ಪಡೆದಿವೆ. ೧೯೬೦ ರಿಂದ ೨೦೦೦ ರ ಮಧ್ಯದಲ್ಲಿನ ಸುಮಾರು ನಲವತ್ತು ವರ್ಷಗಳ ಅವಧಿಯಲ್ಲಿ ಅವರು ರಚಿಸಿದ ಒಟ್ಟು ಹದಿನಾರು ಕಾದಂಬರಿಗಳ ಪರಿಚಯ ಹೀಗಿದೆ–

| | ಕಾದಂಬರಿಗಳ ಹೆಸರು | ಮೊದಲ ಪ್ರಕಟಣೆಯ ವರ್ಷ |
|---|---|---|
| ೧. | ಮುಳ್ಳು ಮತ್ತು ಮಲ್ಲಿಗೆ | ೧೯೬೦ |
| ೨. | ಹತ್ತು ಹೆಡೆಯ ಹಾವು | ೧೯೬೦ |
| ೩. | ತಿರುಗಣಿ ಮಡು | ೧೯೭೦ |
| | (ಪರಿಷ್ಕೃತ : ಪ್ರೀತಿಯ ಆ ಮುಖ. ೧೯೮೭) | |
| ೪. | ಹಡೆದವರು | ೧೯೭೨ |
| ೫. | ಬಿಸಿಲು - ಬೆಳದಿಂಗಳು | ೧೯೭೪ |
| | (ಪರಿಷ್ಕೃತ : ಗಂಡಿನ ನೆರಳು. ೧೯೮೫) | |
| ೬. | ದಾಕ್ಷಾಯಿಣಿ | ೧೯೭೪ |
| | (ಪರಿಷ್ಕೃತ : ವಾತ್ಸಲ್ಯಮಯಿ. ೧೯೮೮) | |
| ೭. | ಸೀಮೆಗಳು | ೧೯೭೯ |
| ೮. | ಜೋಗಿಮರಡಿ | ೧೯೮೧ |
| ೯. | ಅಂಧೇರಿನಗರಿ | ೧೯೮೨ |
| ೧೦. | ರಣಹದ್ದುಗಳು - ಖೂನೀಜನ | ೧೯೮೬ |
| | (ಜೋಡಿ ಕಾದಂಬರಿ) | |
| ೧೧. | ಚಂಬಲ್ ಕಣಿವೆಯಲ್ಲಿ | ೧೯೮೯ |
| ೧೨. | ಅಂತಸ್ಸಿನ ಮನೆ | ೧೯೯೧ |
| ೧೩. | ದೇವದಾಸಿ | ೧೯೯೧ |
| ೧೪. | ಮೌನಕ್ರಾಂತಿ | ೧೯೯೨ |
| ೧೫. | ಕಾತ್ರಾಳ ರತ್ನಿಯ ಚಾದಂಗಡಿ | ೧೯೯೮ |
| ೧೬. | ಮಯ್ಯಾದಾಸನ ವಾಡೆ | ೨೦೦೨ |

**ಕಾದಂಬರಿಗಳ ವರ್ಗೀಕರಣ :**

ಅಧ್ಯಯನದ ಅನುಕೂಲತೆಗಾಗಿ. ವಸ್ತುನಿಷ್ಠ ವಿಶ್ಲೇಷಣೆಗಾಗಿ ಬೆಳಗಲಿಯವರ ಕಾದಂಬರಿಗಳನ್ನು ವರ್ಗೀಕರಣ ಮಾಡುವುದು ಉಚಿತ. ಆದರೆ ಇದು ಜಟಿಲವಾದ ಕೆಲಸ. ಯಾಕೆಂದರೆ ಬದುಕು ತುಂಬ ಸಂಕೀರ್ಣವಾದುದು. ಇಂಥ ಸಂಕೀರ್ಣವಾದ ಬದುಕನ್ನು ಗೆರೆಕೊರೆದು ವಿಭಜಿಸಿ ಹೇಳುವುದು ಅಷ್ಟು ಸರಿಯಾದುದಲ್ಲ. ಬದುಕನ್ನೇ ವಸ್ತುವಾಗಿರಿಸಿಕೊಂಡು ಕಾದಂಬರಿಗಳನ್ನು ಬರೆದುದರಿಂದ ಸಾಮಾಜಿಕ. ಕೌಟುಂಬಿಕ. ಪ್ರಾದೇಶಿಕ. ಅನುವಾದಿತಗಳೆಂದು ವರ್ಗೀಕರಣ ಮಾಡಿ ತೋರಿಸುವುದು ಕಷ್ಟಸಾಧ್ಯವೇ ಸರಿ. ಇಂಥ ಜಟಿಲತೆಯ ಮಧ್ಯದಲ್ಲಿಯೂ ವರ್ಗೀಕರಣ ಮಾಡುವುದು ಅನಿವಾರ್ಯ. " The novel tells a story.

That is the fundamental aspect without which it could not exist. That is the highest factor common to all novels "[೧] ಎಂಬ ಮಾತಾಗಲಿ. "ಆಕರ್ಷಕವಾದ ಗದ್ಯರೂಪದಿಂದ ಕೂಡಿದ ಈ ಪ್ರಕಾರದಲ್ಲಿ ಮನಸೆಳೆಯುವ ಮೊದಲ ಅಂಶವೆಂದರೆ. ಅದು ಅವಲಂಬಿಸಿದ ಕಥೆ". ಕಾದಂಬರಿ ಇನ್ನೇನಾಗಲಿ. ಆಗದಿರಲಿ ಕಥೆಯಂತೂ ಆಗಿರುತ್ತದೆ "[೨]. "ಕಾದಂಬರಿಕಾರನ ಮೂಲವಸ್ತು ಜೀವನವೇ "[೩] ಎಂಬಿತ್ಯಾದಿ ಮಾತುಗಳೆಲ್ಲ ಕಾದಂಬರಿಗೆ ವಸ್ತು ಅಥವಾ ಕಥೆ ಬಹಳ ಮುಖ್ಯವೆಂಬುದನ್ನು ಸಾದರಪಡಿಸುತ್ತವೆ. ವಸ್ತುವಿನಷ್ಟೇ ಭಾಷೆಯೂ ಮುಖ್ಯವಾದುದು. ವಸ್ತು ಮತ್ತು ಭಾಷೆಗಳೆರಡು ಕಾದಂಬರಿಯ ಎರಡು ಕಣ್ಣುಗಳಿದ್ದಂತೆ. ಬೆಳಗಲಿಯವರ ಕಾದಂಬರಿಗಳ ಅವಲೋಕನ - ವರ್ಗೀಕರಣದಲ್ಲಿ ವಸ್ತು - ಭಾಷೆಗಳನ್ನು ಒನ್ನೆಲೆಯಾಗಿಟ್ಟುಕೊಂಡು ಪ್ರಮುಖವಾಗಿ ಈ ಕೆಳಗಿನಂತೆ ವರ್ಗೀಕರಣ ಮಾಡಬಹುದಾಗಿದೆ–

೧) ಕೌಟುಂಬಿಕ ಕಾದಂಬರಿಗಳು

೨) ಸಾಮಾಜಿಕ ಕಾದಂಬರಿಗಳು

೩) ಪ್ರಾದೇಶಿಕ ಕಾದಂಬರಿಗಳು

೪) ಅನುವಾದಿತ ಕಾದಂಬರಿಗಳು

## ಕೌಟುಂಬಿಕ ಕಾದಂಬರಿಗಳು

ಕುಟುಂಬ ಸಮಾಜದ ಪ್ರಾಥಮಿಕ ಘಟಕ. ವ್ಯಕ್ತಿಯ ಪ್ರತಿಯೊಂದು ಚಟುವಟಿಕೆಗಳಿಗೆ ಆಶ್ರಯತಾನ. ವ್ಯಕ್ತಿತ್ವ ಬಿಚ್ಚಿಕೊಳ್ಳುವುದು ಇಲ್ಲಿಂದಲೇ. ನಿತ್ಯಪರಿವರ್ತನಶೀಲನಾದ ಮಾನವ ಕುಟುಂಬದಲ್ಲಿ ಅನೇಕ ಸ್ಥಿತ್ಯಂತರಗಳನ್ನು ಕಾಣುತ್ತಾನೆ; ಕಾರಣನೂ ಆಗುತ್ತಾನೆ. ಕುಟುಂಬವೆಂದರೆ. 'ರಕ್ತಸಂಬಂಧ ಹೊಂದಿರುವ ನಿರ್ದಿಷ್ಟ ಲೈಂಗಿಕ ಸಂಬಂಧ ಹೊಂದಿರುವ ವ್ಯವಸ್ಥಿತ ಸಮೂಹವೆಂದಾದರೂ ಜೈವಿಕ ಹಾಗೂ ಮಾನಸಿಕ ಸಂಬಂಧಗಳಿಂದ ನಿರ್ಮಿತವಾದ ಈ ವ್ಯವಸ್ಥೆ ಕೆಲವೊಂದಿಷ್ಟು ಕೌಟುಂಬಿಕ - ಸಾಮಾಜಿಕ ನಿಬಂಧನೆಗಳಿಗೊಳಪಟ್ಟು ಬದುಕನ್ನು ನಡೆಸುತ್ತದೆ. ಪಾಶ್ಚಾತ್ಯ ಶಿಕ್ಷಣ ಹಾಗೂ ಸಂಸ್ಕೃತಿಯ ಸಂಪರ್ಕ - ಸಂಘರ್ಷದಿಂದಾಗಿ ಭಾರತೀಯ ಕೌಟುಂಬಿಕ ವ್ಯವಸ್ಥೆ ಬಾಹ್ಯ - ಆಂತರಿಕ ಅನೇಕ ಬದಲಾವಣೆಗಳನ್ನು ಕಂಡಿದೆ. ಅವಿಭಕ್ತ ಕುಟುಂಬಗಳು ಸಾವಕಾಶವಾಗಿ ನಶಿಸಿಹೋಗಿ ವಿಭಕ್ತಕುಟುಂಬಗಳಾಗಿ ಪರಿವರ್ತನೆಗೊಂಡಿದ್ದು ಅದರ ಪರಿಣಾಮವಾದರೆ. ವ್ಯಕ್ತಿ - ವ್ಯಕ್ತಿಗಳ ಮಧ್ಯದ ಸಂಬಂಧಕ್ಕೂ ಬದಲಾವಣೆಯ ಗಾಳಿ ತಾಗಿತು. ವ್ಯಕ್ತಿ ಅವಿಭಕ್ತ ಕುಟುಂಬದಲ್ಲಿ ಬದುಕುವ ಇಚ್ಛೆಗೆ ಪ್ರತಿರೋಧಿಸಿ ವಿಭಕ್ತ ಕುಟುಂಬದಲ್ಲಿ ಬದುಕುವ ಇಚ್ಛೆಗೆ ಜೋತು ಬೀಳುತ್ತ ತಾನು ಹೆಚ್ಚು ಪ್ರಭಾವಿಯಾಗಿ ಬದುಕುವತ್ತ ಆಲೋಚಿಸತೊಡಗುತ್ತಾನೆ.. ಇಂಥ ಅನೇಕ ಪರಿಣಾಮ - ಪ್ರಮಾಣಗಳ ಮಧ್ಯದಲ್ಲಿ ನಿಂತ ಲೇಖಕ. 'ಒಂದು ಕುಟುಂಬಕ್ಕೆ ಸೀಮಿತವಾದ ಕಥಾಹಂದರದಲ್ಲಿ ಕಾದಂಬರಿ ರಚನೆ'

೧. E. M. Forster : Aspects of the Novel, Page 27

೨. ಎಚ್. ತಿಪ್ಪೇರುದ್ರಸ್ವಾಮಿ : ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ. ಪುಟ ೪೨

೩. ಎಚ್. ತಿಪ್ಪೇರುದ್ರಸ್ವಾಮಿ : ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ. ಪುಟ ೪೨

ಮಾಡಿದರೆ ಅಂಥ ಕಾದಂಬರಿಯನ್ನು 'ಕೌಟುಂಬಿಕ ಕಾದಂಬರಿ' ಯೆಂದು ಪರಿಗಣಿಸಬಹುದು. ಆದರೆ ಇದು ತಂತಿ ಮೇಲೆ ನಡೆದಷ್ಟು ಜಟಿಲವಾದ ಕಾರ್ಯ. ಸಾರ್ವತ್ರಿಕ - ಸಾಮಾಜಿಕ ಏರು - ಪೇರು. ಸಮಸ್ಯೆ - ಪರಿಹಾರಗಳನ್ನು ಚಿಂತಿಸದೆ. ಕೇವಲ ಒಂದೇ ಕುಟುಂಬದ ಪರಿಧಿಯೊಳಗೇ ಕೃತಿ ಜೀವಿಸುತ್ತಿದ್ದರೆ ಅದು ಕೌಟುಂಬಿಕ ಕಾದಂಬರಿ. ಪ್ರಸ್ತುತ ಕುಟುಂಬ ಸಮಾಜದೊಂದಿಗೆ ಹೊಂದಿರುವ ಸಂಬಂಧಗಳು ಇಲ್ಲಿ ಪ್ರಧಾನವೆನಿಸದೆ. ಕೇವಲ ಒಂದು ಕುಟುಂಬದ ಏರು - ಪೇರುಗಳು ಮಾತ್ರ ಸಹಜ ಪ್ರಾಮುಖ್ಯತೆ ಪಡೆದಿರುತ್ತವೆ.

ವ್ಯಕ್ತಿ - ಕುಟುಂಬ - ಸಮಾಜ ಇವುಗಳನ್ನು ಬೇರ್ಪಡಿಸಿ ಅವಲೋಕಿಸುವುದು ತೀರ ದುಸ್ತರ ಸಂಗತಿ. ಅದೇನೇ ಇದ್ದರೂ ಕುಟುಂಬವೊಂದರ ಜೀವನದ ಸಿಹಿ - ಕಹಿ. ಏರು - ಪೇರು. ಏಳು - ಬೀಳು. ಅಣ್ಣತಮ್ಮಂದಿರ ಸ್ವಾರ್ಥ. ದಾಯಾದಿಗಳ ಕದನ. ಮಕ್ಕಳ ಬದುಕು. ಅಸಹಾಯಕತೆಗೆ ಬಲಿಯಾಗುವುದು. ಅತ್ತೆ - ಸೊಸೆಯರ ಸಂಬಂಧ. ಸ್ತ್ರೀಯ ತ್ಯಾಗಮನೋಭಾವ. ದಾಂಪತ್ಯ. ಜೀವನದ ಸರಸ - ವಿರಸಗಳು. ನಿರುದ್ಯೋಗ. ಅನ್ಯಾಯ - ಶೋಷಣೆಗಳಿಗೆ ಬಲಿಯಾಗುವುದು ಈ ಮೊದಲಾದವುಗಳ ಚಿತ್ರಣವೇ ಕೌಟುಂಬಿಕ ಕಾದಂಬರಿಯ ವಸ್ತು.*

### ಅಂತಸ್ತಿನ ಮನೆ (೧೯೯೧) :

ಬೆಳಗಲಿಯವರು ತಮ್ಮ ವಿಶ್ವಕರ್ನಾಟಕ ಸಾಹಿತ್ಯಮಂಟಪದಲ್ಲಿ ೧೯೯೧ ರಲ್ಲಿ ಪ್ರಕಟಿಸಿದ ಮೊದಲ ಕಾದಂಬರಿ. ಮೊದಲು 'ಸೂರ್ಯೋದಯ' ಪತ್ರಿಕೆಗಾಗಿ ಸಿದ್ಧಪಡಿಸಿದ 'ಹಿರಿದೂ ಅಲ್ಲದ ಕಿರಿದೂ ಅಲ್ಲದ' ಈ ಕಾದಂಬರಿ ಆ ಪತ್ರಿಕೆಯಲ್ಲಿ ಪ್ರಕಟವಾಗದೆ. 'ಅಂತಸ್ತಿನ ಮನೆ'. 'ಗೌಡರ ವಾಡೆ'ಯಾಗಿ ದಿನಾಂಕ ೧-೬-೧೯೮೭ ರಿಂದ ಸುಮಾರು ಹದಿನೇಳು ಕಂತುಗಳಲ್ಲಿ 'ನವನಾಡು' ಪತ್ರಿಕೆಯಲ್ಲಿ ಪ್ರಕಟವಾಯಿತು. ಅನಂತರ ಮತ್ತೆ 'ಅಂತಸ್ತಿನ ಮನೆ' ಯಾಗಿ ೯೮ ಪುಟಗಳ ಮಧ್ಯಮಗಾತ್ರದ ಕಾದಂಬರಿಯಾಗಿ ಪ್ರಕಟವಾಯಿತು.

'ಮಹಾಲಿಂಗ. ಬಾಬಾಸಾಹೇಬರಿಬ್ಬರೂ ಅಥಣಿ ಕಾಲೇಜಿನಲ್ಲಿ ಸಹಪಾಠಿಗಳು. ತಂದೆಯ ಅಕಾಲಿಕ ಮರಣದಿಂದಾಗಿ ಅನಿವಾರ್ಯವಾಗಿ ಕಾಲೇಜಿಗೆ ಶರಣುಹೊಡೆದು ಬಾಬಾಸಾಹೇಬ ಹಾವರಗಿ ವಾಡೆಯ ವಾರಸುತನದ ಜವಾಬ್ದಾರಿ ಹೊತ್ತರೆ. ಮಹಾಲಿಂಗ ತತ್ತರಿಸುವ ಬಡತನದಲ್ಲಿಯೂ ಬಾಬಾಸಾಹೇಬನ ಹಾಗೂ ಸೋದರಮಾವನ ಸಹಾಯಹಸ್ತಗಳಿಂದ ತನ್ನ ಓದನ್ನು ಬಿ.ಇಡಿ.ವರೆಗೆ ಮುಂದುವರೆಸಿ - ಮುಗಿಸಿ ಸರಕಾರಿ ಪ್ರೌಢಶಾಲಾ ಶಿಕ್ಷಕನಾಗಿ ಮೊದಲು ಮೊರಬದಲ್ಲಿ ಮೂರು ವರ್ಷ ಸೇವೆಸಲ್ಲಿಸಿ. ಅನಂತರ ಹಾವರಗಿಗೇ ವರ್ಗವಾಗಿ ಬಂದದ್ದು ಯೋಗಾಯೋಗವೇ ಸರಿ; ಇದು ಕಾದಂಬರಿಯ ಕಥಾಪೋಷಕವಾದರೆ. ಅಲ್ಲಿಂದ ಮುಂದೆ ಆತನ ಬದುಕಿನ ಒಂದೊಂದೇ ಎಳೆಗಳು ಬಿಚ್ಚಿಕೊಳ್ಳಲು ಪ್ರಾರಂಭಿಸುತ್ತವೆ. ಹೆತ್ತಮ್ಮನ ಪ್ರೀತಿ - ವಾತ್ಸಲ್ಯಗಳಿಂದ ವಂಚಿತನಾಗಿದ್ದಲ್ಲದೆ ಮಲತಾಯಿಯ ಮಲತನಕ್ಕೆ ತತ್ತರಿಸಿ ಹೋಗಿದ್ದ ಮಹಾಲಿಂಗನಿಗೆ. "ತಮ್ಮಾ ಯಾವುದಕ್ಕೂ ಸಂಕೋಚ ಮಾಡಬ್ಯಾಡ. ಇದ ಹಳ್ಳಿ ಊರು. ಎಲ್ಲಾ ಅನುಕೂಲ ಇಲ್ಲ. ಇದ ಸ್ವಂತ ಮನೀ

* ಕುಟುಂಬ ಸಮಾಜ ಬಿಟ್ಟು ಬದುಕಲಾಗದು. ಈ ಹೇಳಿಕೆಯನ್ನು ಸೀಮಿತ ಪರಿಧಿಯಲ್ಲಿ ಗ್ರಹಿಸುವುದು ಪ್ರಸ್ತುತ ಸಂದರ್ಭದಲ್ಲಿ ಸೂಕ್ತ

ಅಂತ ತಿಳಿ. ಬಾಬಾಸಾಹೇಬ ಎಲ್ಲಾ ನಮಗ ಹೇಳ್ಯಾನು. ನೀನು ತ್ರಾಸ ತಗೊಂಡ ಕಲಿತಿಯಂತ....''[೪] ಎಂಬ ಸಾವಿತ್ರಮ್ಮನ ಹಾರ್ದಿಕ ಮಾತುಗಳು ಮಹಾಲಿಂಗನ ಮನಸ್ಸನ್ನು ಆರ್ದ್ರಗೊಳಿಸಿದ್ದಲ್ಲದೆ. ಆ 'ಅಂತಸ್ತಿನ ಮನೆ'ಗೆ ಅವನನ್ನು ಒಬ್ಬ ಸದಸ್ಯನನ್ನಾಗಿಸಿತು. ಇತ್ತ ಅಂತಸ್ತಿನ ಅಂತರದಲ್ಲಿ ಸಿಕ್ಕಿಹಾಕಿಕೊಂಡ ಮಹಾಲಿಂಗ ಒಂದೆಡೆ ತಾಯಿ ಪ್ರೀತಿಯನ್ನೆರೆವ ಸಾವಿತ್ರಮ್ಮ. ಒಡಲೆರಡಾದರೂ ಆತ್ಮವೊಂದೇ ಎಂಬಷ್ಟು ಪ್ರೀತಿ - ವಿಶ್ವಾಸವಿದ್ದ ಸ್ನೇಹಿತ ಬಾಬಾಸಾಹೇಬ. ಈ ಮಧ್ಯೆ ಉಮಾಳ ಉನ್ಮಾದದ ಉಪಟಳಕ್ಕೆ ತತ್ತರಿಸಿ ಹೋಗುತ್ತಿದ್ದಂತೆ. ದೀಪಾಳ ಒಲವು ಮಹಾಲಿಂಗನನ್ನು 'ವಾಡೆ'ಯ ಅಂತಸ್ತನ್ನು ಅರಿಯದಂತವನನ್ನಾಗಿಸಿದರೆ. ಅತ್ತ ಶಾಲೆಯಲ್ಲಿ ಹಿಡಕಲ್ ಮಾಸ್ತರ ಪುಂಡಲೀಕನಂಥ ಪುಂಡ ವಿದ್ಯಾರ್ಥಿಗಳ ಪುಂಡಾಟಿಕೆಯಿಂದ ಬೇಸರವೆನಿಸುತ್ತದೆ. ಮುಖ್ಯೋಪಾಧ್ಯಾಯರಾದ ಎಸ್. ಜಿ. ಪಾಟೀಲ. ಅನುರಾಧಾರಂಥ ವಿದ್ಯಾರ್ಥಿಗಳಿಂದ ವೃತ್ತಿಯಲ್ಲಿ ಹೊಸಚೈತನ್ಯ ತುಂಬಿಕೊಳ್ಳುತ್ತದೆ. ಹೀಗೆ ವೃತ್ತಿ - ಬದುಕುಗಳೆರಡರಲ್ಲಿಯೂ ಅನೇಕ ಅವಘಡಗಳನ್ನು ಕಂಡುಂಡು ಕೊನೆಗೆ ದೀಪಾಳನ್ನೇ ಎಲ್ಲರ ಒತ್ತಾಸೆಯಂತೆ ವರಿಸಿದ್ದು ಈ ಕಾದಂಬರಿಯ ಕಥಾಹಂದರ.

ಉತ್ತಮ ಪ್ರವೃತ್ತಿಯ ಶಿಕ್ಷಕನಾದ ಮಹಾಲಿಂಗ ಶಾಲೆಯಲ್ಲಿ ಒಡಕಲ್ ಮಾಸ್ತರ ಮತ್ತು ಪುಂಡ - ಪುಂಡಲೀಕನಂಥವರಿಂದ ನಡೆಯುವ ಅನಾಚಾರಗಳಿಗೆ ರೋಸಿಹೋಗಿದ್ದ. ಆದರೆ ಅನುರಾಧ - ದೀಪಾರನ್ನು ತನ್ನ ಮನದಲ್ಲಿಯೇ ತೂಗಿ ನೋಡುತ್ತ ತನ್ನ ಭಾವೀ ಬದುಕನ್ನು ಚಿಂತಿಸುತ್ತಿದ್ದ. ಇಬ್ಬರೂ ಗೆಳೆಯನ ತಂಗಿಯರೇ. ಆದರೆ ಎಂಥ ಅಂತರ! ಹೇಳಲರಿಯದ ಸೆಳೆತಕ್ಕೆ ಸಿಕ್ಕ ಮಹಾಲಿಂಗ ಉಮಾ. ಅನುರಾಧಾ. ದೀಪಾರ ಸಂಬಂಧಗಳಿಗೆ ಸ್ಪಂದಿಸಲೂ ಆಗದೆ. ಬಿಡಲೂ ಆಗದೆ ಅಪರಾಧಿಮನೋಭಾವದೊಂದಿಗೆ ದಿನಗಳನ್ನು ನೂಕುತ್ತ ನಡೆದಂತೆ ಕಾದಂಬರಿಯೂ ಸಹೃದಯನನ್ನು ನೂಕುತ್ತ ನಡೆಯುತ್ತದೆ.

ತಾಯಿ - ಅಣ್ಣಂದಿರಲ್ಲಿ ಕಾಣದ ವಿಶ್ವಾಸವನ್ನು ದೀಪಾ ಮಹಾಲಿಂಗನಲ್ಲಿ ಕಂಡಿದ್ದು ಯೌವ್ವನಾಕರ್ಷಣೆಯೆನ್ನುವುದಕ್ಕಿಂತ ಅದು ಸ್ತ್ರೀಯೊಬ್ಬಳ ಜಾಣ್ಮೆಯೆಂದೆನ್ನಬಹುದು. ಹೆಣ್ಣುಮಕ್ಕಳು ಸಾಮಾನ್ಯವಾಗಿ ಗಂಡಸರಿಗಿಂತ ಬದುಕಿನ ಸಮಸ್ಯೆ - ಸಂಕೀರ್ಣತೆಗಳನ್ನು ಬಿಡಿಸುವಲ್ಲಿ ಜಾಣರು ಎಂಬುದಿಲ್ಲಿ ಅವಲೋಕನಾರ್ಹ. ಪೂರ್ವಪರಿಚಯವಿಲ್ಲದಿದ್ದರೂ ಮಹಾಲಿಂಗನ ನಡೆ ನುಡಿಗಳಿಂದಲೇ ಅವನ ವ್ಯಕ್ತಿತ್ವವನ್ನು ಅರ್ಥೈಸಿಕೊಂಡು. ತನ್ನ ಭಾವೀ ಪತಿ ಆಜೂರಿನ ಗೌಡರಾದ ದಾದಾಸಾಹೇಬನಿಂದ ಮುಕ್ತಿ ಪಡೆಯಲು ನಿರ್ಧರಿಸಿದ ದೀಪಾ "ಈ ಮಾತ ನಿಶ್ಚಿತ. ನನಗ ಆ ಲಗ್ನ ಬ್ಯಾಡಃ ಬ್ಯಾಡ. ಎಲ್ಲರೂ ಒತ್ತಾಯ ಮಾಡಿದ್ರ ನಾ ಆತ್ಮಹತ್ಯಾ ಮಾಡ್ಕೋತೀನು"[೫] ಎಂದು ಮಹಾಲಿಂಗನಿಗೆ ಸ್ಪಷ್ಟಪಡಿಸಿದ್ದರಲ್ಲಿ ದೀಪಾಳ ಶಬ್ದಸಾಮರ್ಥ್ಯವಷ್ಟೇ

---

೪. ದು. ನಿಂ. ಬೆಳಗಲಿ : ಅಂತಸ್ತಿನ ಮನೆ. ಪುಟ ೧೧

೫. ದು. ನಿಂ. ಬೆಳಗಲಿ : ಅಂತಸ್ತಿನ ಮನೆ. ಪುಟ ೨೯

ಅಲ್ಲ ಆತ್ಮಸಾಮರ್ಥ್ಯವೂ ಕೂಡ ಸಹಜಗೋಚರವಾಗುತ್ತದೆ. ಈ ಘಟನೆಯಿಂದಾಗಿ ಮಹಾಲಿಂಗನ ಹೃದಯದಲ್ಲಿ ದೀಪಾಳ ಪ್ರತಿಬಿಂಬ ಅಚ್ಚೊತ್ತಿದಂತೆ ಅಚಲವಾಗಿ ಸ್ಥಾಪನೆಗೊಂಡಿತು.

ಕಾತರದ ಎರಡು ಜೋಡಿ ಕಣ್ಣುಗಳ ಜೊತೆಗೆ ಉನ್ಮತ್ತ - ಉನ್ಮಾದದ ಉಮಾಳ ಕಂಗಳು ಮಹಾಲಿಂಗನನ್ನು ಧೃತಿಗೆಡಿಸಿದವು. ದೀಪಾ ಸುದೀರ್ಘ ಪತ್ರವೊಂದನ್ನು ಬರೆದು 'ಅಂತಸ್ತಿನ ಮನೆ'ಯ ಏಳು - ಬೀಳು. ಸುಖ - ದುಃಖ. ತನ್ನ ಭವಿಷ್ಯ. ಅಣ್ಣ - ಅತ್ತಿಗೆಯರ ಒಳಗುದಿ - ಓಗೆ 'ವಾಡೆ' ತನ್ನ ಒಡಲಲ್ಲಿಯೇ ಹುದುಗಿಸಿಕೊಂಡಿದ್ದ ನೂರೆಂಟು ಭಯಾನಕ - ವೇದನೆಗಳನ್ನು ಮಹಾಲಿಂಗನಲ್ಲಿ ತೋಡಿಕೊಂಡು. ತನ್ನ ಬದುಕಿಗೊಂದು ದಾರಿ ತೋರಬೇಕೆಂಬ ಕೋರಿಕೆಯಲ್ಲಿ ಅವಳ ನಿಷ್ಕಲ್ಮಶ ಮನಸ್ಸು ಕಂಡರೆ. ಇನ್ನೂ ಸೂಕ್ಷ್ಮವಾಗಿ ವಿಚಾರಿಸಿ ನೋಡಿದರೆ ಸ್ಫಟಿಕದಂತಹ ಮಹಾಲಿಂಗನ ಮನಸ್ಸಿಗೆ ದೀಪಾ ಸಲ್ಲಿಸಿದ ಕೃತಜ್ಞತೆಯೇ ಸರಿ ಎಂದೆನಿಸುವುದರಲ್ಲಿ ಸಂದೇಹವಿಲ್ಲ. ಮುಂದೆ ತನ್ನ ಬದುಕಿಗೆ ಆಘಾತ ತರಬಹುದಾದ ಆಜೂರಿನ ದಾದಾಸಾಹೇಬ ತಾನೇ ಅಪಘಾತದಲ್ಲಿ ತೀರಿಹೋಗಿದ್ದು. ಮಹಾಲಿಂಗನಲ್ಲಿ ಇವಳಿರಿಸಿದ ವಿಶ್ವಾಸ. ಪ್ರೀತಿಯಾಗಿ ಮಾರ್ಪಟ್ಟು. ಮದುವೆಯಾದರೆ ಮಹಾಲಿಂಗನನ್ನೇ ಎಂಬ ದೃಢನಿಶ್ಚಯಕ್ಕೆ ತಲುಪಿತು. ಅಂಥ ಸಂದರ್ಭವೊಂದಕ್ಕಾಗಿ ಕಾದುಕುಳಿತ ಇವಳಿಗೆ ಮಧ್ಯ - ಮಧ್ಯ ಮಹಾಲಿಂಗನ ಭರವಸೆಯ ಭದ್ರಕೋಟೆ ಇವಳ ಬದುಕಿನ ದೀಪ ನಂದದಂತೆ ನೋಡಿಕೊಳ್ಳುತ್ತದೆ.

ಕೊನೆಯಲ್ಲಿ ಬಾಬಾಸಾಹೇಬ ತನ್ನ ಅಂತಸ್ತಿನ ಅಂತರಗಳನ್ನು ದಾಟಿ ವಾಸ್ತವದತ್ತ ಗಮನಹರಿಸಿ. ತನ್ನ ಪೊಳ್ಳು ಅಂತಸ್ಥಿಕೆಯಲ್ಲಿ ನಿಂತು ನೋಡದೆ ಗೆಳೆಯನ ಹಾಗೂ ತನ್ನ ತಂಗಿಯ ಮನೋಗತಗಳನ್ನರಿತುದು. ಸಾವಿತ್ರಮ್ಮನೂ ಕೂಡ "ತಮಾ. ಇದರಾಗೇನ ಮುಚ್ಚ ಮಾತಿಲ್ಲ.... ಏನಿಲ್ಲ. ದೀಪಾ ನಿಮ್ಮನ್ನs ಲಗ್ನ ಆಗ್ತನ ಅಂತಾಳು.... ನಮ್ಮದೂ ಮರ್ಜಿ ಐತಿ...."[೬] ಎಂಬ ಸ್ಪಷ್ಟ ಮಾತುಗಳಿಂದ ಒಪ್ಪಿಗೆ ಸೂಚಿಸಿದ್ದು ಕಾದಂಬರಿಯ ಸುಖಾಂತ ಸನ್ನಿವೇಶ.

ಕಾದಂಬರಿಯ ಮುಖ್ಯ ವಸ್ತು 'ಅಂತಸ್ತು'. ಅದರ ಪರಿಪಾಲನೆ ಕಾದಂಬರಿಯುದ್ದಕ್ಕೂ ನಡೆದುದು ಹಾಗೂ ಅದರ ಒಳಪದರುಗಳಲ್ಲಿ ಅವಿತುಕೊಂಡ ಭಾವನೆಗಳ ಮಧ್ಯದ ಸಂಘರ್ಷ. ಉಮಾಳ ಉನ್ಮತ್ತ - ಉನ್ಮಾದವೊಂದೆಡೆ ಪ್ರದರ್ಶನಗೊಂಡರೆ. ಅದೇ ಉಮಾ ವಿಕೃತ ಮನೋಭಾವದ ಬಾಬಾಸಾಹೇಬನ ಮನೋಗತದೆದುರು ಸೋತುಸುಣ್ಣಾದುದು ಕಂಡುಬರುತ್ತದೆ. ಪಟ್ಟಣದ ಗಾಳಿಯುಂಡ ಉಮಾ 'ವಾಡೆ'ಯ ಕಟ್ಟಳೆಗಳನ್ನು ಕಳಚಿ ಹೊರಬರುವ ಪ್ರಯತ್ನದಲ್ಲಿ ಸೋಲನ್ನುಂಡದ್ದು ಸಿಂಧುವಾಗಿದೆ. ಉಪಾಯವಾಗಿ 'ವಾಡೆ'ಯ ಕಟ್ಟು - ಕಟ್ಟಳೆಗಳಿಂದ ಹೊರಬಂದ ದೀಪಾ ಸೌಮ್ಯವಾಗಿಯೇ ತನ್ನ ಮನೋಗತವನ್ನು ಈಡೇರಿಸಿಕೊಳ್ಳುತ್ತಾಳೆ. ಇದು ಸ್ವಾಗತಾರ್ಹವಾದುದು. ಬಾಬಾಸಾಹೇಬನ ಕುಟುಂಬದ ಆಗು - ಹೋಗುಗಳನ್ನು.

---

೬. ದು. ನಿಂ. ಬೆಳಗಲಿ : ಅಂತಸ್ತಿನ ಮನೆ. ಪುಟ ೯೮

ಆಸೆ - ನಿರಾಶೆಗಳನ್ನು. ಬದುಕು - ಭವಣೆಗಳನ್ನು. ತರ - ತಮಗಳನ್ನು. ಒಲುಮೆ - ನಲುಮೆಗಳನ್ನು. ಸಹಜ - ಸರಳವಾಗಿಯೇ ಕಾದಂಬರಿಕಾರರು ಪ್ರಚುರಪಡಿಸಿದ್ದಾರೆ. ವಾಡೆಯ ಸುತ್ತಮುತ್ತಲೇ ಹರಿದಾಡುವ ಕಥಾವಸ್ತು ಓಡಕಲ್ ಮಾಸ್ತರನ ಮನೆಯತ್ತಲೂ ಒಮ್ಮೊಮ್ಮೆ ದೃಷ್ಟಿಹರಿಸುತ್ತದೆ. ಅಪಕ್ವ ವಯಸ್ಸಿನ ವಿದ್ಯಾರ್ಥಿಗಳ ಮನದಲ್ಲಿ ವಿಷತುಂಬಿ ಅವರಿಂದ ತಮ್ಮ ಬೇಳೆಬೇಯಿಸಿಕೊಳ್ಳುವ ಓಡಕಲ್ ಮಾಸ್ತರನನ್ನು ಹಾಗೂ ಪುಂಡ - ಪುಂಡಲೀಕನನ್ನು. ಮೂಲಿಮನಿ ಪಂಚಪ್ಪ. ಜಗದಾಳ ಭೀಮಶಿ. ಹಳಬರ ನಾಗಪ್ಪ ಸೇರಿಕೊಂಡು ಒದ್ದು ಬುದ್ಧಿ ಕಲಿಸಿದ್ದು ಬಲು ಮೋಜಿನ ಪ್ರಸಂಗವೆನಿಸುವುದಲ್ಲದೆ– "ಈಗ ಇಷ್ಟ ಸಾಕು. ಇನ್ನೊಮ್ಮೆ ಆ ಹುಡುಗಿ ಹೆಸರ್ಗೆ ಬಂದ್ರ ಮತ್ತ ಮಾಸಿಂಗಪ್ಪ ಮಾಸ್ತರ್ಗ ಏನಾದರ ಅಂದ್ರ. ಗೌಡ್ರ ನಿಮ್ಮ ಜೀವಂತ ಸುಟ್ಟುಹಾಕ್ತಾರಂತ ಹೇಳ್ಯಾರು. ಅದಕಿಂತ ಪೈಲೆ ನಾವು ಕೂಡಿ ಸಾಲಿ ಮುಂದ ಕುಳಬಾಣ ಒಟ್ಟಿ ಕಾಮಣ್ಣನ ಸುಟ್ಟಂಗ ನಿಮ್ಮ ಸುಟ್ಟ ಹಾಕ್ತೀವು. ಮರೀಬ್ಯಾಡ್ರಿ. ಬೇಕಾರ ಪದರಾಗ ಗಂಟ ಹಾಕೋರಿ...." [೭] ಎಂದು ಎಚ್ಚರಿಸಿದ್ದು ಗೌಡರ ಅಂತಸ್ತಿಗೆ ಹಿಡಿದ ಕನ್ನಡಿ.

ಬಡವ - ಶ್ರೀಮಂತ. ಮೇಲು - ಕೀಳು. ಜಾತಿ - ವಿಜಾತಿಗಳೆಂಬ ಅಂತಸ್ತನ್ನೆಲ್ಲ ಮರೆತು ಒಂದಾಗುವ ಮೂಲಕ ಕಾದಂಬರಿಯ ಕಥಾವಸ್ತು ಸಾರ್ಥಕ್ಯವನ್ನು ಪಡೆಯುತ್ತದೆ.

ಮಹಾಲಿಂಗ. ಬಾಬಾಸಾಹೇಬ. ಸಾವಿತ್ರಿ. ಉಮಾ. ದೀಪಾ. ದಾದಾಸಾಹೇಬ. ಹಿಡಕಲ್ ಮಾಸ್ತರ. ಅನುರಾಧಾ. ಪುಂಡಲಿಕ ಮೊದಲಾದವುಗಳೇ ಕಾದಂಬರಿಯ ಪಾತ್ರಗಳಾದರೂ ಕೂಡ ಮಹಾಲಿಂಗನದು ಕಾದಂಬರಿಗೆ ಆಧಾರಸ್ತಂಭವೆನಿಸಿದ ಪಾತ್ರ. ಬಡತನ. ತಾಯಗಲಿಕೆ. ಸ್ನೇಹಿತನ ಸಹಾಯ. ಅಸಹಾಯಕತೆಯ ಮಧ್ಯದಲ್ಲಿಯೂ ಎದೆಗುಂದದೆ ಓದಿ ತನ್ನ ಅನ್ನವನ್ನು ತಾನೇ ಕಂಡುಕೊಂಡ ಸಂಯಮಿ - ಸರಳ - ಅನುಕಂಪದ. ಬದುಕನ್ನು ಅರ್ಥೈಸಿಕೊಳ್ಳಬಲ್ಲ ವ್ಯಕ್ತಿತ್ವ. ಆದರೆ 'ಅಂತಸ್ತಿನ ಮನೆ' ಯನ್ನು ಪ್ರವೇಶಿಸಿದೊಡನೆ ಅಲ್ಲಿನ ವಾತಾವರಣದಲ್ಲಿ ಬದುಕುವುದೆಂದರೆ ಸೂಜಿಮೊನೆ ಮೇಲೆ ನಡೆದಂತಹ ಅನುಭವ. ಒಂದಾದ ಮೇಲೊಂದರಂತೆ ತನ್ನನ್ನು ಮುತ್ತಿಕೊಳ್ಳುವ ಸಮಸ್ಯೆಗಳ ಜಾಲದಲ್ಲಿ ಬಿದ್ದು ಒದ್ದಾಡುವ ಈತ ಅವಿವಾಹಿತ ಯುವಕನಾದರೂ ಹಣ್ಣಾಗುತ್ತಲಿದ್ದ. 'ಅಂತಸ್ತಿನ ಮನೆ' ಯಲ್ಲಿ ಸಿಕ್ಕಿಹಾಕಿಕೊಂಡ ಆತನ ಸ್ಥಿತಿ ಪಂಜರದ ಪಕ್ಷಿಯಂತಾಗಿತ್ತು. ಅಂತಸ್ತಿನ ಅಂತರದ ಪದರುಗಳಲ್ಲಿನ ಬಿರುಕುಗಳು ತನ್ನನ್ನು ನುಂಗಿಹಾಕುತ್ತಿರುವಂತೆ ಭಾಸವಾಗುತ್ತಿತ್ತು. ಬಲು ಜಾಣ್ಮೆಯಿಂದ 'ವಾಡೆ'ಯಿಂದ ದೂರಸರಿದರೂ ದೀಪಾಳ ಸಾಮಿಪ್ಯವೇ ಆಪ್ಯಾಯಮಾನವೆನಿಸಿತು. ಸುಕೃತಕ್ಕೆ ಇವರಿಬ್ಬರ ಮದುವೆಗೆ ಗೌಡಿಕೆ ಗತ್ತಿನ ಸ್ನೇಹಿತನ. ಕಟುಸಂಪ್ರದಾಯದ ಸಾವಿತ್ರಮ್ಮನಿಂದ ಹಸಿರುನಿಶಾನೆ ದೊರೆತುದು ಮಹಾಲಿಂಗನ ಬದುಕಿಗೆ ಸಿಕ್ಕ ಯಶಸ್ಸು.

---

೭. ದು. ನಿಂ. ಬೆಳಗಲಿ : ಅಂತಸ್ತಿನ ಮನೆ. ಪುಟ ೫೫

ಒಟ್ಟಿನಲ್ಲಿ 'ಅಂತಸ್ತಿನ ಮನೆ' ಯಲ್ಲಿ ನಡೆಯುವ ಅವಾಂತರಗಳನ್ನೆಲ್ಲ ಬಿಚ್ಚಿಡುವ ಈ ಕಾದಂಬರಿ ಗಾತ್ರದಲ್ಲಿ ಕಿರಿದೇನೋ ಸರಿ: ವಿಕೃತ - ಸುಕೃತ ಮನೋಪದರುಳನ್ನು ವಿಶ್ಲೇಷಿಸುವುದರಲ್ಲಿ ಹಿರಿದಾಗಿಯೇ ಕಾಣುತ್ತದೆ.



**ತಿರುಗಣಿ ಮಡು (೧೯೭೦) :**

೧೯೭೦ ರಲ್ಲಿ ಹೊರಬಂದ ಈ ಕಾದಂಬರಿ ಮೊದಲು 'ಪ್ರಜಾಮತ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು. ಅನಂತರ ೧೯೮೭ ರಲ್ಲಿ ಪರಿಷ್ಕರಣಗೊಂಡು 'ಪ್ರೀತಿಯ ಆ ಮುಖ' ವಾಗಿ ಮರು ಮುದ್ರಣಗೊಂಡಿತು. ಸುಮಾರು ೨೧೭ ಪುಟಗಳ ವ್ಯಾಪ್ತಿಯಲ್ಲಿ ತನ್ನ ಮೈಬಿಚ್ಚಿಕೊಳ್ಳುವ ಕಾದಂಬರಿ ಆಧುನಿಕ ಶಿಕ್ಷಣ. ನಗರೀಕರಣದ ಫಲವಾಗಿ ತೀವ್ರ ಬದಲಾವಣೆಗೀಡಾದ ಯುವಪೀಳಿಗೆಯ ಮೇಲೆ ತನ್ನ ಕ್ಷ - ಕಿರಣ ಬೀರುತ್ತದೆ.

ಹಳ್ಳಿಯಿಂದ ನಗರಕ್ಕೆ ಬಂದು ನೆಲಸಿದ ದೇಸಗತಿ ಕುಟುಂಬವೊಂದರ ಕಥೆ ಕಾದಂಬರಿಯ ವಸ್ತು: ಪಾಶ್ಚಾತ್ಯ ಜೀವನಶೈಲಿಗೆ ಮರುಳಾಗುತ್ತ, ಮೈ - ಮನಸ್ಸುಗಳೆರಡನ್ನೂ ಪರಾಧೀನಗೊಳಿಸಿ 'ತಿರುಗಣಿ ಮಡು' ವಿನ ಸುಳಿಗೆ ಸಿಕ್ಕು ಸುತ್ತಿ ಅದರಿಂದ ಹೊರಬರಲಾಗದೆ ಆ ಸುಳಿಯಲ್ಲಿಯೇ ತನ್ನ ಬದುಕನ್ನು ನಿರ್ನಾಮ ಮಾಡಿಕೊಂಡ ಕುಟುಂಬವೊಂದರ ವ್ಯಥೆಯೂ ಹೌದು. ಬೆಳಗಾವಿ - ಕಂಪಳ್ಳಿಯ ಸುತ್ತಲೇ ತಿರುಗುವ ಈ ಕಾದಂಬರಿಗೆ ಹೆಸರೇ ಸೂಚಿಸುವಂತೆ ಪ್ರೀತಿಯೇ ಇದರ ಕಥಾನಾಯಕಿ. ಪ್ರೀತಿಯ ಪೂರ್ವಜರು ಬೆಳಗಾವಿಗೆ ತೀರ ಹತ್ತಿರದ ಕಂಪಳ್ಳಿಯ ದೇಸಗತಿ ಮನೆತನದವರು. ದೇಸಗತಿಯ ಆಸ್ತಿ ಕಾಲಕ್ರಮದಲ್ಲಿ ಕರಗುತ್ತ ಕರಗುತ್ತ ಬಂದು ಪ್ರೀತಿಯ ತಂದೆಯ ಕಾಲಕ್ಕೆ ಉಳಿದದ್ದು ಕೇವಲ ನೂರು ಎಕರೆ ಮಾತ್ರ: ಅದರೊಂದಿಗೆ ಅಜ್ಜ ಕಟ್ಟಿಸಿದ ಬಂಗಲೆಯೊಂದು. ಪ್ರೀತಿಯ ತಂದೆ ಚಿಕ್ಕವನಿದ್ದಾಗಲೇ ಬೆಳಗಾವಿಗೆ ಬಂದು ನೆಲಸಿದುದರಿಂದ ಕಂಪಳ್ಳಿಯ ತೋಟ - ಗದ್ದೆಗಳ ಉಸ್ತುವಾರಿ ಚಂದ್ರಣ್ಣನೆಂಬ ಕಾರಭಾರಿಯ ಕೈಗೊಪ್ಪಿತ್ತು.



ಕಂಪಳ್ಳಿಯಲ್ಲಿ ಚಂದ್ರಣ್ಣ ಕಾರಸ್ಥಾನ ನಡೆಸಿದರೆ ಬೆಳಗಾವಿಯಲ್ಲಿ ಪ್ರೀತಿಯ ತಾಯಿ ವಿಮಲಾಬಾಯಿ ಸ್ವೇಚ್ಛೆಯಾಗಿರುತ್ತಾಳೆ. ಬೆಳಗಾವಿಯ ಮನೆಯಲ್ಲಿ ಪ್ರೀತಿ. ಅವಳ ತಂದೆ - ತಾಯಿ. ತಂಗಿ ಚಂಚಲೆ ಇವರಿಷ್ಟೇ ಜನ. ಪ್ರೀತಿ ಪದವೀಧರೆ. ಮುಂದೆ ಎಂ. ಎ. ಸೇರಬೇಕೆಂದರೂ ಮನಸ್ಸು ಬೇಸರಿಸಿದಾಗ ಅತ್ತ ಹೆಚ್ಚಿನ ವಿಚಾರ ಮಾಡದೆ ಮನೆಯಲ್ಲಿದ್ದಳು. ಚಂಚಲೆ ಕಾಲೇಜಿನಲ್ಲಿ ಓದುತ್ತಿರುವವಳು. ನಡೆ - ನುಡಿ. ವೇಷ - ಭೂಷಣ. ಆಶೆ - ಆಕಾಂಕ್ಷೆ. ಆಚಾರ - ವಿಚಾರಗಳಲ್ಲಿ ಅಕ್ಕ ತಂಗಿಯರಿಬ್ಬರೂ ಪೂರ್ವ - ಪಶ್ಚಿಮವಾಗಿದ್ದರು. ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಚಲಿಸುವ ಇವರ ಜೀವನ ಶೈಲಿಗೆ ತಂದೆ - ತಾಯಂದಿರಿಬ್ಬರೂ ಮೌನವಾಗಿದ್ದರು. ಅಕ್ಕನಿಗೆ ಹಳ್ಳಿ. ಅಲ್ಲಿನ ಬದುಕು - ಸಂಸ್ಕೃತಿ. ಸಾಹಿತ್ಯ. ಸಂಗೀತ. ಕಲೆಗಳು ಇಷ್ಟವೆನಿಸಿದರೆ. ಚಂಚಲೆಗೆ ಥಳಕು - ಬಳುಕಿನ. ರಂಗುರಂಗಾದ ಪಾಶ್ಚಾತ್ಯ ಪ್ರಭಾವದ ನಗರ ಜೀವನವೇ ಬೇಕಾಗಿತ್ತು. ಅವಳ ವಿಚಿತ್ರ ವೇಷ - ಭೂಷಣಗಳು.

ಬಾಯ್ ಫ್ರೆಂಡ್ಸರೊಂದಿಗಿನ ತಿರುಗಾಟ, ಸಿನಿಮಾ, ಪಿಕ್‌ನಿಕ್‌ಗಳನ್ನು ನೋಡಿದರೆ, ದೀಪದ ಸುತ್ತಲೇ ಹಾರಾಡುವ ಚಿಟ್ಟೆಯಂಥ ಮನೋಸ್ಥಿತಿ. ಈ ಹಾರಾಟಕ್ಕೆ ರಮಾಳಂಥ ಸ್ನೇಹಿತೆಯ ಸಹಕಾರ ಬೇರೆ. ತಂಗಿಯ ಈ ರೀತಿಯ ಚೆಲ್ಲು - ಚೆಲ್ಲಾದ ದಿನಚರಿಯನ್ನು ಪ್ರೀತಿ ಸೇರುತ್ತಿರಲಿಲ್ಲ. ಚಂಚಲೆಯ ಸ್ವೇಚ್ಛಾಚಾರದ ವರ್ತನೆಗಳನ್ನು ಕಂಡೂ ಕಾಣದಂತೆ ಸುಮ್ಮನಿರುವ ತಂದೆ, ತಾಯಿಗಳನ್ನು ಕಂಡರೆ ಪ್ರೀತಿಗೆ ಎಲ್ಲಿಲ್ಲದ ಸಿಟ್ಟು. ತಾನಾದರೂ ತಂಗಿಗೆ ಒಂದಿಷ್ಟು ಬುದ್ಧಿ ಹೇಳಬಹುದಲ್ಲವೆಂದು ಒಂದೆರೆಡು ಬಾರಿ ಅದನ್ನೂ ಪ್ರಯತ್ನಿಸಿ ನಿರಾಶೆಗೊಂಡಿದ್ದಳು. ತಂದೆಯ ಮೌನ, ತಾಯಿಯ ಪ್ರೋತ್ಸಾಹ ಚಂಚಲೆಗೆ ಇನ್ನಷ್ಟು ಬಲಬಂದಂತಾಗಿತ್ತು. ಆದರೆ ಇದರಿಂದ ನೋವಾದುದು ಪ್ರೀತಿಗೆ ಮಾತ್ರ. ಅಸಹ್ಯ ಬರಿಸುವಂಥ ಮನೆಯ ಪರಿಸದಲ್ಲಿದ್ದು, ಮಾನಸಿಕ ಹಿಂಸೆ ಅನುಭವಿಸುವುದಕ್ಕಿಂತ ಕಂಪಳ್ಳಿಯ ತೋಟಕ್ಕಾದರೂ ಹೋಗಬೇಕೆಂದು ನಿರ್ಧರಿಸಿ ಹೊರಟುಹೊದಳು.

"ನೀನೇ ಹಾಳು ಮಾಡುತ್ತೀ! ನಾಳೆ ನಿನ್ನ ತಲೆ ಮೇಲೆ ಮೆಣಸು ಅರೀತಾಳೆ ನೋಡ್ತಾ ಇರು ಅವ್ವ"[೮] ಎಂದು ತಾಯಿಯನ್ನು ಎಚ್ಚರಿಸಿ ಪ್ರೀತಿ ಕಂಪಳ್ಳಿಗೆ ಹೊರಟು ಹೋದಳು. ಅಕ್ಕ ಹಳ್ಳಿಗೆ ಹೋದ ಮೇಲೆ ಮುಳ್ಳು ಬೇಲಿಯನ್ನೆಲ್ಲ ಕಿತ್ತು ವೈರಿ ಶಿಬಿರದಿಂದ ಪಾರಾಗಿ ಬಂದ ಸೈನಿಕನಷ್ಟು ಉತ್ಸಾಹಗೊಂಡ ಚಂಚಲೆ ಕುಣಿದು - ಕುಪ್ಪಳಿಸಿ, ಪೀಡೆ ತೊಲಗಿತೆಂದು ಸಂತೋಷಗೊಂಡು ತನ್ನ ಸ್ವಚ್ಛಂದ ವರ್ತನೆಗಳಿಗೆ ಮತ್ತಷ್ಟು ಚಾಲನೆ ನೀಡಿದಳು. ಅತ್ತ ಹಳ್ಳಿಯ ತೋಟದ ಹಿತವಾದ ವಾತಾವರಣದಲ್ಲಿ ಪ್ರೀತಿ ಉಲ್ಲಸಿತಗೊಂಡು, ಹೊಸ ಹುರುಪಿನೊಂದಿಗೆ ನಿತ್ಯ ಕೂಲಿಹೆಣ್ಣುಮಕ್ಕಳಿಗೆ ಅವರ ಆರೋಗ್ಯ - ಬದುಕು - ಮಿತ ಸಂತಾನ, ಸಂಸ್ಕೃತಿ - ಮೌಲ್ಯಗಳ ಕುರಿತಾಗಿ ಮಾರ್ಗದರ್ಶನ ಮಾಡುವುದರೊಂದಿಗೆ ಆಳುಗಳಿಗೆಲ್ಲ ಅಚ್ಚುಮೆಚ್ಚಿನ ಒಡತಿಯಾದಳು. ಅವರೊಂದಿಗೆ ತಾನೂ ಒಬ್ಬಳಾಗಿ ಬದುಕಲು ಪ್ರಯತ್ನಿಸುತ್ತಿದ್ದರೆ, ಇತ್ತ ಚಂಚಲೆಯ ಬದುಕು - ಬೇಲಿಯಿಲ್ಲದ ಹೊಲದಂತೆ ನಿಕೃಷ್ಟವಾಯಿತು. ಪ್ರೀತಿ ಹೊಸ - ಹೊಸ ಅಭಿರುಚಿ - ಹವ್ಯಾಸಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಕಂಪಳ್ಳಿ ತೋಟಕ್ಕೆ ಒಂದು ಕಳೆ ತಂದುಕೊಟ್ಟಳು. ಇದೇ ಸಂದರ್ಭದಲ್ಲಿ ಅಲ್ಲಿಯ ಪ್ರೌಢಶಾಲಾ ಶಿಕ್ಷಕ ಪ್ರಭಾಕರನ ಪರಿಚಯವಾಯಿತು. ಪರಿಚಯ ಸ್ನೇಹವಾಗಿ ಈ ಸ್ನೇಹವೇ ಕ್ರಮೇಣ ಪ್ರೇಮಕ್ಕೆ ತಿರುಗಿ, ಮದುವೆಯ ಕನಸಿನ ಕೋಟೆಯನ್ನೇ ಕಟ್ಟುತ್ತಾರೆ. ಪ್ರಭಾಕರನ ಪರಿಚಯದಿಂದಾಗಿ ಪ್ರೀತಿಯ ದಿನಚರಿಯೇ ಬದಲಾಗುತ್ತದೆ. ದಿನ ನಿತ್ಯ ಕಪಿಲೇಶ್ವರ ದೇವಾಲಯದಲ್ಲಿ ಸಂದರ್ಶಿಸಿ ಕಲೆ - ಸಂಗೀತ - ಸಾಹಿತ್ಯ - ಸಂಸ್ಕೃತಿಗಳನ್ನು ಕುರಿತು ಚರ್ಚಿಸುವುದೊಂದು ವಾಡಿಕೆಯಾಗುತ್ತದೆ. ಕೈಲಾದಷ್ಟು ಸಮಾಜದ ಋಣ ತೀರಿಸುವ ಹಂಬಲದಿಂದ ಪ್ರೀತಿ ಸಂಬಳಕ್ಕೆ ಆಸೆಪಡದೆ ಪ್ರಭಾಕರನಿದ್ದ ಶಾಲೆಯಲ್ಲಿಯೇ ಶಿಕ್ಷಕಿಯಾಗಿ ಸೇರಿಕೊಳ್ಳುತ್ತಾಳೆ. ಶಾಲೆಯಲ್ಲಿ ಪ್ರಭಾಕರ - ಪ್ರೀತಿಯ ಒಡನಾಟಕ್ಕೆ ಅನೇಕ ರೆಕ್ಕೆ - ಪುಕ್ಕವಿಲ್ಲದ ಸುದ್ದಿಗಳೆದ್ದರೂ ಅದಾವುದಕ್ಕೂ ಸೊಪ್ಪುಹಾಕದ ಈ ಜೋಡಿ ಮದುವೆಯಾಗಲು ದೃಢನಿರ್ಧಾರ ತೆಗೆದುಕೊಳ್ಳುತ್ತದೆ.

---

೮. ಮ. ನಿಂ. ಬೆಳಗಲಿ : ಪ್ರೀತಿಯ ಆ ಮುಖ, ಪುಟ ೧೮

ಪ್ರೀತಿ - ಪ್ರಭಾಕರರ ಒಡನಾಟ - ತಿರುಗಾಟಗಳು ಚಂದ್ರಣ್ಣನಿಗೆ ಸರಿಬರುವುದಿಲ್ಲ. ಇವರನ್ನು ಬೇರ್ಪಡಿಸಲು ಶತಾಯ ಗತಾಯ ಪ್ರಯತ್ನಿಸುತ್ತಾನೆ. ಈ ಮಧ್ಯೆ ಪ್ರೀತಿ ಮದುವೆಯಾದರೆ ಪ್ರಭಾಕರನನ್ನೇ ಎಂದು ತನ್ನ ಅಚಲ ನಿರ್ಧಾರವನ್ನು ಪ್ರಕಟಿಸುತ್ತಾಳೆ. 'ಅದು ಅಸಾಧ್ಯ' ವೆಂದು ಚಂದ್ರಣ್ಣ ಗುಡುಗುತ್ತಾನೆ. ಪ್ರೀತಿಗೆ ದಾರಿತೋಚದಂತಾಗಿ ಮಮ್ಮಲ ಮರುಗುತ್ತಾಳೆ. ಚಂದ್ರಣ್ಣನ ಈ ವರ್ತನೆಗೆ ಕಾರಣವನ್ನು ಹುಡುಕುತ್ತ ಹೊರಟ ಪ್ರೀತಿಗೆ ಚಂದ್ರಣ್ಣನೆ ಪ್ರಭಾಕರನ ತಂದೆಯೆಂದರಿತಾಗ ಚಂದ್ರಣ್ಣನ ಹೇಯಕೃತ್ಯಕ್ಕೆ ಹೇಸಿಕೆ ಪಡುತ್ತಾಳೆ. ಚಂದ್ರಣ್ಣನ ಈ ಹೊಸ ಅವತಾರ - ಮುಖವಾಡ. ಕೂಲಿ ಹೆಣ್ಣುಮಕ್ಕಳೊಂದಿಗಿನ ಅವನ ವರ್ತನೆಗಳನ್ನೆಲ್ಲ ನೀಲಕ್ಕನಿಂದ ತಿಳಿದುಕೊಂಡ ಪ್ರೀತಿಗೆ ಚಂದ್ರಣ್ಣನ ಬಗ್ಗೆ ಮತ್ತಷ್ಟು ಅಸಹ್ಯಮೂಡಿಸುತ್ತದೆ. ಪ್ರಭಾಕರನ ತಾಯಿ ಗಂಡನಿಂದ ಸಂತಾನ ದೊರೆಯಲಾರದೆಂದರಿತಾಗ. ಚಂದ್ರಣ್ಣನಿಂದ ಅದನ್ನು ಪಡೆದುದಕ್ಕಿಂತ ಆಘಾತಕರ ವಿಷಯವೆಂದರೆ. ತಾಯಿ ಆತ್ಮಹತ್ಯೆಗಿಂತ ಮುಂಚೆ ಬರೆದಿಟ್ಟ ಪತ್ರದಲ್ಲಿ 'ತಾಯಿ ತಾನು ಚಂದ್ರಣ್ಣನ ಬಲೆಗೆ ಬಿದ್ದುದು. ಪ್ರತಿಫಲವಾಗಿ ಚಂಚಲೆಯ ಜನನ. ಇದನ್ನರಿತ ತಂದೆ ಬ್ರಹ್ಮಚರ್ಯ ವ್ರತ ಕೈಗೊಂಡಿದ್ದು' ಇವುಗಳೆಲ್ಲ ಗೊತ್ತಾದಾಗ ಪ್ರೀತಿಗೆ ಬದುಕಿನ ಬಗ್ಗೆ ಜಿಗುಪ್ಸೆ ಮೂಡುತ್ತದೆ. ಹಾಗಾದರೆ ಚಂಚಲೆ - ಪ್ರಭಾಕರ ಇಬ್ಬರೂ ಚಂದ್ರಣ್ಣನ ಮಕ್ಕಳೇ. ನಾನು ಪ್ರಭಾಕರ ? ನಮ್ಮ ಸಂಬಂಧ ? ಈ ಎಲ್ಲ ರಹಸ್ಯಗಳು ಹೊರಬಿದ್ದಾಗ ಪ್ರೀತಿಯ ಮದುವೆಯ ಕನಸಿನ ಭದ್ರಕೋಟೆ ಒಡೆದು ನುಚ್ಚು ನೂರಾಗುತ್ತದೆ.

ಚಂಚಲೆಯ ಸ್ವಚ್ಛಂದ ವರ್ತನೆಗಳನ್ನು. ತಂದೆಯ ನಿರ್ಲಿಪ್ತತೆ. ಕುಡಿತ. ತಾಯಿಯ ಪ್ರೋತ್ಸಾಹಗಳನ್ನೇ ಕಾದಂಬರಿಯುದ್ದಕ್ಕೂ ರಮ್ಯವಾಗಿಯೇ ವರ್ಣಿಸುತ್ತ ಹೋದ ಲೇಖಕರ (ಕಾದಂಬರಿಯ) ಬಗ್ಗೆ ಸಹೃದಯನಿಗೆ ಇದಕ್ಕೆಲ್ಲ ಕಾರಣವೇನೆಂಬುದೇ ತಿಳಿಯುವುದಿಲ್ಲ. ಅಲ್ಲದೆ ಪ್ರೀತಿಗೂ ಇದೊಂದು ಒಗಟಾಗಿಯೇ ಕಾಣುತ್ತದೆ. ಆದರೆ ವಿಮಲಾಬಾಯಿ ತನ್ನ ಸಾವಿಗಿಂತ ಮುಂಚೆ ಬರೆದಿಟ್ಟ ಪತ್ರ ಈ ಎಲ್ಲ ಪ್ರಶ್ನೆ ರಹಸ್ಯಗಳಿಗೆ ಸ್ಫೋಟಕದಂಥ ಉತ್ತರನೀಡಿ ಬೆರಗುಗೊಳಿಸುತ್ತದೆ. ಇಡೀ ಕಾದಂಬರಿಯುದ್ದಕ್ಕೂ ಕಾಪಾಡಿಕೊಂಡು ಬಂದ ಲೇಖಕರ ರಹಸ್ಯಗಳಿಗೆಲ್ಲ ವಿಮಲಾಬಾಯಿಯ ಆ ಏಕೈಕ ಪತ್ರ ಸಾಕ್ಷಿ ನೀಡಿ ಕಾದಂಬರಿಗೆ ಒಂದು ಹೊಸ ತಿರು (Climax) ವನ್ನೇ ಕೊಡುತ್ತದೆ. ಪ್ರೀತಿಯ ತಾಯಿಗೆ ಒಳ್ಳೆಯ ಗಂಡ. ಮಗಳು. ಆಸ್ತಿ - ಅಂತಸ್ತು ಎಲ್ಲ ಇದ್ದರೂ ಕೂಡ ಅತಿಯಾದ ವಿಷಯಾಸಕ್ತಿಯಿಂದಾಗಿ ಚಂದ್ರಣ್ಣನ ಬಲೆಗೆ ಬಿದ್ದು ತನ್ನ ಗೋರಿಯನ್ನು ತಾನೇ ತೋಡಿಕೊಳ್ಳುತ್ತಾಳೆ. 'ತಿರುಗಣಿ ಮಡುವಿನ' ಸುಳಿವಿಗೆ ಸಿಕ್ಕ ಅವಳು ಅದರಿಂದ ಹೊರಬರುವ ಪ್ರಯತ್ನ ಮಾಡದೆ. ಅದರ ಸುಳಿಯಲ್ಲಿಯೆ ಸುತ್ತಿ ಸುತ್ತಿ ತನ್ನ ಬದುಕನ್ನೇ ಆಹುತಿ ಕೊಡುತ್ತಾಳೆ. ಚಂದ್ರಣ್ಣ ವಿಮಲಾಬಾಯಿಯ ಅನೈತಿಕ ಸಂಬಂಧ ಖಚಿತವಾದ ಮೇಲೆ ಪ್ರೀತಿಯ ತಂದೆ ಏಕಾಂಗಿಯಾಗಿ ಸುರೆಯ ದಾಸನಾಗಿ ತ್ರಿಶಂಕು ಬದುಕನ್ನು ನಡೆಸುತ್ತಾನೆ. ಗಂಡನ ಮನಸ್ಸನ್ನು ಪರಿವರ್ತಿಸುವಲ್ಲಿ. ಗೆಲ್ಲುವಲ್ಲಿ ವಿಫಲಳಾದ ವಿಮಲಾಬಾಯಿ. ಪ್ರೀತಿಯನ್ನು ಮುಖವಿಟ್ಟು. ಪ್ರೀತಿಸುವ ಎದೆಗಾರಿಕೆಯನ್ನು ಕಳೆದುಕೊಳ್ಳುತ್ತಾಳೆ. ಇಷ್ಟಲ್ಲದೆ ತನ್ನ ಅನೈತಿಕತೆಯನ್ನು ಕಣ್ಣಾರೆ ಕಂಡ ಚಂಚಲೆ ಹೆದರದೆಯಿದ್ದಾಗ ಅವಳ ತಾಳಕ್ಕೆ ತಕ್ಕಂತೆ ಇವಳೇ ಕುಣಿಯಲು ಪ್ರಾರಂಭಿಸಿದ್ದೊಂದು ಅವಳ ದುರ್ದೈವ.

ಚಂದ್ರಣ್ಣನ ಕೃಷ್ಣಲೀಲೆಗಳು ಕಾದಂಬರಿಯಲ್ಲಿ ಲೀಲಾಜಾಲವಾಗಿ ಚಿತ್ರಣಗೊಂಡಿವೆ. ಆದರೂ ದೇಸಾಯರ ಮನೆತನದ ನಂಬಿಗಸ್ತನಂತೆ ನಟಿಸುತ್ತಾನೆ. ಈ ನಟನೆಯ ಪರದೆಗಳು ಒಂದೊಂದಾಗಿ ಸರಿದಾಗ ದಿಕ್ಕುಗಾಣದೆ ಬೆಳಗಾವಿಗೆ ಹೋಗಿ ವಿಮಲಾಬಾಯಿಯೆದರು ಗೋಗರೆದು ಪ್ರೀತಿ - ಪ್ರಭಾಕರರ ಮದುವೆಯನ್ನು ಹೇಗಾದರೂ ಮಾಡಿ ನಿಲ್ಲಿಸಬೇಕೆಂದು ಪ್ರಯತ್ನಿಸಿದ್ದು ಅವನಲ್ಲಿಯ ಪಾಪಪ್ರಜ್ಞೆಯ ಪ್ರತೀಕ. ಇಂಥ ಪಾಪಪ್ರಜ್ಞೆ ವಿಮಲಾಬಾಯಿಯನ್ನು ಜೀವನದುದ್ದಕ್ಕೂ ಕಾಡಿತ್ತೆಂಬುದು ಅವಳ ಆತ್ಮಹತ್ಯೆಯಿಂದಲೇ ಗೊತ್ತಾಗುತ್ತದೆ. ಆದರೆ ಕೇವಲ ಸಂತಾನಕ್ಕಾಗಿಯಷ್ಟೇ ಚಂದ್ರಣ್ಣನಲ್ಲಿ ಸಂಬಂಧ ಬೆಳೆಸಿದ್ದು. 'ಅಕ್ರಮ ಸಂತಾನ'ದ ಪ್ರತೀಕವಾದ ಪ್ರಭಾಕರನ ಜನನದ ನಂತರ ಚಂದ್ರಣ್ಣನನ್ನು ಸಂಪೂರ್ಣವಾಗಿ ಮರೆತು ಗಂಡನಲ್ಲಿಯೇ ನಿಷ್ಠೆಯಿಟ್ಟು ಬದುಕಿದ ಪ್ರಭಾಕರನ ತಾಯಿಗೆ ಇಂಥ ಪಾಪಪ್ರಜ್ಞೆ ಕಾಡಲಿಲ್ಲ. ಚಂಚಲೆ. ಪ್ರಭಾಕರ ಇಬ್ಬರೂ ಚಂದ್ರಣ್ಣನ ಮಕ್ಕಳೇ ಆದರೂ ಇಬ್ಬರಲ್ಲಿಯೂ ವ್ಯತ್ಯಾಸ ಕಲ್ಪನಾತೀತ. ಇದಕ್ಕೆ ಬಹುಮುಖ್ಯ ಕಾರಣ ಅವರವರು ಬೆಳೆದು ಬಂದ ಪರಿಸರ ಹಾಗೂ ತಾಯಂದಿರ ಲಾಲನೆ - ಪಾಲನೆಗಳು.

"ಬೆಳಗಲಿಯವರು ಮಧ್ಯಮವರ್ಗದ ಸಮಾಜ ಜೀವನವನ್ನು ಚಿತ್ರಿಸಿ ತೋರುವಲ್ಲಿ. ಅದರ ಸಮಸ್ಯೆಗಳನ್ನು ತೊಳೆತೊಳೆಯಾಗಿ ಬಿಚ್ಚಿ ತೋರುವಲ್ಲಿ ಯಶಸ್ವಿಯಾಗಿದ್ದಾರೆ"[೯] ಅಲ್ಲದೆ ಅಧಮ ಪ್ರವೃತ್ತಿಯ ಮನೋವ್ಯಾಪಾರಗಳನ್ನು ಬಯಲಿಗೆಳೆದು ಕುಟುಂಬವೊಂದರಲ್ಲಿ ತಾಯಿಯಾದವಳ ಪ್ರಾಮುಖ್ಯತೆಯನ್ನು ತಿಳಿಸುವಲ್ಲಿಯೂ ಯಶಸ್ವಿಯಾಗಿದ್ದಾರೆ. ಮುಖವಾಡ ಧರಿಸಿದ ಚಂದ್ರಣ್ಣನ ಗುಪ್ತಗಾಮಿ ಸಂಬಂಧಗಳು ಕಾದಂಬರಿಯ ಮುಖ್ಯ ಪಾತ್ರಗಳನ್ನಾಡಿಸುವ ಸೂತ್ರವಾಗಿದ್ದನ್ನು ಹಾಗೂ ಕರಿನೆರಳಾಗಿ ಕಾಡುವುದನ್ನು ಕಾದಂಬರಿಕಾರರು ಚೆನ್ನಾಗಿಯೇ ಚಿತ್ರಿಸಿದ್ದಾರೆ. ಕಾದಂಬರಿಯ ಆರಂಭದಿಂದಲೂ ಚಂದ್ರಣ್ಣನನ್ನು 'ಸಾಚಾ' ನೆಂಬಂತೆಯೇ ಚಿತ್ರಿಸುತ್ತ ಬಂದು ಅವನ ಚಾರಿತ್ರ್ಯ. ವ್ಯಕ್ತಿತ್ವದ ಬಗ್ಗೆ ಸಂಶಯ ಬಾರದಂತೆ ನೋಡಿಕೊಂಡ ಲೇಖಕರು. ವಿಮಲಾಬಾಯಿ ಬರೆದ ಪತ್ರವನ್ನು ಓದಿಸುವ ಮುಖಾಂತರ ಚಂದ್ರಣ್ಣನ ಮುಖವಾಡ ಸರಿಸಿ ನಿಜರೂಪವನ್ನು ತೋರಿಸಿ. ಆ ಪಾತ್ರದ ಬಗೆಗಿನ ಸಂಯಮ ಆದರಗಳನ್ನೆಲ್ಲ ಒಟ್ಟುಗೂಡಿಸಿ ಒಮ್ಮೆಲೇ ತೂರಿಬಿಡುತ್ತಾರೆ. ಪ್ರಭಾಕರ - ಪ್ರೀತಿ ದಂಪತಿಗಳಾಗುವರೆಂದು ಕಾತರದಿ ಕಾದು ಕುಳಿತವರಿಗೆ ಅವರಿಬ್ಬರೂ ಸೋದರ ಸೋದರಿಯರೆಂದು ಪ್ರಕಟಿಸಿ ಓದುಗರನ್ನು ಮಮ್ಮಲಮರುಗುವಂತೆ ಮಾಡುತ್ತಾರೆ.

ಭಾರತೀಯ ಕುಟುಂಬ ಪದ್ಧತಿಯಲ್ಲಿ ತಾಯಿಗೆ ಗುರುವಿನ ಸ್ಥಾನವಿದೆ. ಕುಟುಂಬದ ಕಣ್ಣಾಗಿರುವ ತಾಯಿಯೇ ದಾರಿತಪ್ಪಿದರೆ. ಕುಟುಂಬ ಸಾಗುವುದಾದರೂ ಹೇಗೆ? ಆ ತಾಯಿ ಕಲಿಸುವ ಪಾಠ ಮಕ್ಕಳ ಬದುಕನ್ನು ನಿರ್ಮಾಣ ಮಾಡಬೇಕೇ ಹೊರತು 'ನಿರ್ನಾಮ ಮಾಡಬಾರದು' ವಿಮಲಾಬಾಯಿಯ ಒಂದೇ ಒಂದು ತಪ್ಪು ಹೆಜ್ಜೆ ಅವಳ ಇಡೀ ಕುಟುಂಬವನ್ನೇ ನಿರ್ನಾಮಗೊಳಿಸಿತು. ಎಲ್ಲ ಮುಗಿದ ಮೇಲೆ ಪಾಶ್ಚಾತ್ತಾಪ

---

೯. ಶಂಕರ ಪಾಟೀಲ : ಕರ್ಮವೀರ ಪತ್ರಿಕೆ : 'ಅಂತಸ್ತಿನ ಮನೆ'ಯ ಬೆನ್ನುಡಿಯಿಂದ

ಪಟ್ಟ ವಿಮಲಾಬಾಯಿಯ ಸ್ಥಿತಿ 'ಅಟ್ಟ ಮೇಲೆ ಒಲೆ ಉರಿಯಿತು: ಕೆಟ್ಟ ಮೇಲೆ ಬುದ್ಧಿ ಬಂತು' ಎಂಬಂತಾಗಿತ್ತು. ತನ್ನ ಬದುಕಿನುದ್ದಕ್ಕೂ ಅನೇಕ ಅವಘಡಗಳನ್ನೇ ಸೃಷ್ಟಿಸಿದ ವಿಮಲಾಬಾಯಿಗೆ ಆತ್ಮಹತ್ಯೆಯೊಂದೇ ಪರಿಹಾರವಾಗಿರುವದರಲ್ಲಿ ಆಶ್ಚರ್ಯವೇನಿಲ್ಲ.

ತಾಯಿಯ ವ್ಯಭಿಚಾರ ಗೊತ್ತಾದ ಯಾವ ಮಗಳು ತಾನೆ ಅವಳಿಗೆ ಬೆಲೆಕೊಡಬಲ್ಲಳು? ಚಂಚಲೆಗೆ ತಾಯಿಯ ದುರ್ನಡತೆ ತನ್ನ ಸ್ವಚ್ಛಂದ ವರ್ತನೆಗಳಿಗೆ ಪೋಷಕವಾಯಿತು. ಅತಿಯಾದ ಆಧುನಿಕತೆ.... ನಗರೀಕರಣದ ರಂಗುರಂಗಾದ ಜೀವನಕ್ಕೆ ಶರಣುಹೋದ ಚಂಚಲೆಗೆ ತಾನು ಕಂದಕದಲ್ಲಿ ಬಿದ್ದುದೇ ಅರಿವಾಗಲಿಲ್ಲ. ಹೀಗೆ ಜೀವನದ ಕಂದಕದಲ್ಲಿ ಬಿದ್ದು ಹೊರಳಾಡುವ - ಹೊರಳಾಡುತ್ತಿರುವ ಅನೇಕ ಯುವತಿಯರ ಪ್ರತಿನಿಧಿಯಾಗಿ ಚಂಚಲೆ ಗೋಚರಿಸುತ್ತಾಳೆ. ಪ್ರೀತಿ. ಪ್ರೀತಿಯ ತಂದೆ. ಪ್ರಭಾಕರ - ಅವನ ತಾಯಿ ಇವರೆಲ್ಲ ಓದುಗರ ಮನವನ್ನು ಸೆರೆಹಿಡಿದರೆ. ವಿಮಲಾಬಾಯಿ - ಚಂದ್ರಣ್ಣ - ಚಂಚಲೆ. ರಮಾ ಇವರುಗಳು ಮನವನ್ನು ಹಿಂಡುತ್ತಾರೆ. ಕುತೂಹಲಕಾರಿಯಾದ ಕೊನೆಯ ದೃಶ್ಯ ಕಾದಂಬರಿಗೆ ಮೆರಗು ತರುವುದಲ್ಲದೆ ಇಡೀ ಕಾದಂಬರಿಯ ಸ್ವರೂಪವನ್ನೇ ಬದಲಿಸಿ ಓದುಗರನ್ನು ಮೌನವಾಗಿ ರೋದಿಸುವಂತೆ ಮಾಡುತ್ತದೆ: ಇದು ಕಾದಂಬರಿಯ ವಿಶೇಷಗಳಲ್ಲೊಂದು.

ಲೇಖಕರು ಸರಳ - ಸಹಜ ಶೈಲಿಯಲ್ಲಿ 'ಪ್ರೀತಿಯ ಆ ಮುಖ'ವನ್ನು ತೋರಿಸುವಲ್ಲಿ ಸಫಲರಾಗಿದ್ದಾರೆ. ಕಾದಂಬರಿಯ ಪ್ರಾರಂಭದಿಂದ ವಿಮಲಾಬಾಯಿಯ ಪತ್ರದವರೆಗೆ 'ಪ್ರೀತಿಯ ಈ ಮುಖ' ಪರಿಚಯವಾದರೆ. ಪತ್ರದ ಓದಿನ ನಂತರ 'ಆ ಮುಖ'ದ ದರ್ಶನವೂ ಆಗಿ ಪ್ರಭಾಕರ - ಪ್ರೀತಿಯರ ಮದುವೆಗೆ ಹಾರೈಸಲು ಕಾದು ನಿಂತ ಓದುಗ ನಿಟ್ಟುಸಿರಿಡುತ್ತಾನೆ. ಹಿತವಾದ ಭಾಷೆ. ಸಂದರ್ಭಕ್ಕೆ ತಕ್ಕಷ್ಟೇ ವರ್ಣನೆ. ಕುತೂಹಲ ಕೆರಳಿಸುವ ಪ್ರಸಂಗಗಳು. ಎಲ್ಲೂ ಹದ್ದುಮೀರದ ಪಾತ್ರಗಳ ವಿಶ್ಲೇಷಣೆ. "ರೆಕ್ಕೆ ಬಲಿತ ಹೃದಯವನ್ನು ಹಿಡಿದಿಟ್ಟುಕೊಳ್ಳುವುದು. ಅದೂ ಒಂದು ಸಾಹಸವೆಂದೇ ಹೇಳಬೇಕು. ಬಂಧನದ ಜಾಳಿಕೆಯಲ್ಲಿ ಸುಲಭವಾಗಿ ಸಿಗಲಾರದ ಆ ಪುಟ್ಟ ಹಕ್ಕಿ ಅದೆಲ್ಲಿಗೋ ಹಾರಲು ಪ್ರಯತ್ನಿಸುತ್ತಲೇ ಇರುತ್ತದೆ. ಅದನ್ನು ಸಾಧುಗೊಳಿಸಿ ಬಲೆಯ ಬಂಧನದಲ್ಲಿಡಬೇಕಾದ ಸಾತ್ವಿಕ ಓದು. ಹಿತವಾದ ಮನರಂಜನೆ ಬೇಕು"[೧೦] ಎಂಬಂತಹ ಕಾವ್ಯಮಯ ಮಾತುಗಳು ಲೇಖಕರ ಭಾಷಾಲಾಲಿತ್ಯಕ್ಕೆ ಸಾಕ್ಷಿಯಾಗುವುದರೊಂದಿಗೆ ಓದುಗರ ಮನಸ್ಸನ್ನು ಪ್ರಫುಲ್ಲಗೊಳಿಸುತ್ತವೆ.

ಉಣ್ಣಲು - ಉಡಲು. ಕಲಿಯಲು - ನಲಿಯಲು ಪಾಲಕರು ಎಲ್ಲ ಮಕ್ಕಳಿಗೆ ಸ್ವಾತಂತ್ರ್ಯವನ್ನೀಯಲೇಬೇಕು. ಅದು ಅವರವರ ಕರ್ತವ್ಯ. ಆದರೆ ಅದರರ್ಥದಲ್ಲಿ ಹಿತ - ಮಿತ ಸೇರಿದೆ.

---

೧೦. ದು. ನಿಂ. ಬೆಳಗಲಿ : ಪ್ರೀತಿಯ ಆ ಮುಖ, ಪುಟ ೪೭

ಅದರಲ್ಲಿಯೇ ಕಟ್ಟು - ನಿಟ್ಟುಗಳಿವೆ. ಆ ಕಟ್ಟುಗಳನ್ನೆಲ್ಲ ಬಿಚ್ಚಿ ಸ್ವಾತಂತ್ರ್ಯದ ಹೆಸರಿನಲ್ಲಿ ಸಿಕ್ಕಹಾಗೆ ಕುಣಿದರೆ ? ಮನಬಂದವಹಾಗೆ ವರ್ತಿಸಿದರೆ ? ಆ ಸೂತ್ರಗಳನ್ನೆಲ್ಲ ಬಿಗಿ ಹಿಡಿಯಲಿಕ್ಕೆ ಪಾಲಕರೇ ಮುಂದೆ ಬರಬೇಕಲ್ಲವೆ ? ಮಕ್ಕಳನ್ನು ಹದ್ದಿನಲ್ಲಿಡುವುದು ಮೊದಲು ತಂದೆ - ತಾಯಿಗಳ. ಪಾಲಕರ ಆದ್ಯ ಕರ್ತವ್ಯ. ಅನಂತರ ಶಿಕ್ಷಕರು - ಸಮಾಜ. ಮಕ್ಕಳ ಬೇಡಿಕೆಗಳನ್ನೆಲ್ಲ ಪೂರೈಸುವುದಷ್ಟೇ ಪಾಲಕರ ಕರ್ತವ್ಯವಲ್ಲ. ಬೇಡಿಕೆಗಳ ಸಾಧಕ-ಬಾಧಕಗಳನ್ನರಿಯಬೇಡವೆ. ಅವುಗಳ ಇತಿಮಿತಿ ಅರ್ಥಮಾಡಿಕೊಡಬೇಕು. ಮಕ್ಕಳ ನಡೆ - ನುಡಿಯ ಬಗೆಗೆ ಕಣ್ಣುಹಾಯಿಸಬೇಕು. ಅವರ ದಿನಚರಿಯ ಬಗ್ಗೆ ಗಮನವೀಯಬೇಕು. ಇಂದಿನ ಪಾಲಕರೇನು ? ಯಾಂತ್ರಿಕ ಜೀವನದ ಬೆನ್ನುಹತ್ತಿ ತಾವೂ ಯಂತ್ರಗಳಾದಂತೆ. ಒಂದೇ ರೀತಿ ದಿನಚರಿಯ ಚಕ್ರದಲ್ಲಿ ಸುತ್ತುತ್ತ (ತಾವೂ ಯಂತ್ರಗಳಾದಂತೆ) ಮನೆ - ಮಕ್ಕಳ ಬಗ್ಗೆ ಅದೆಷ್ಟು ಗಮನವೀಯುತ್ತಾರೆ.[೧೧] ಎಂಬುದು ಕಾದಂಬರಿಯ ಒಡಲಾಳದ ಕಾಳಜಿಯಾಗಿದೆ. ಅದು ಲೇಖಕರ ವಿಷಾದವೂ ಹೌದು.

" ಸಾಹಿತ್ಯದ ಉದ್ದೇಶ ಕೇವಲ ಪಂಡಿತರ ಸ್ವತ್ತಲ್ಲ: ಕಾಲೇಜಿನ ಪ್ಲಾಟಫಾರ್ಮಿನ ವಿಷಯವೂ ಅಲ್ಲ. ಆದರೂ ಜನಸಾಮಾನ್ಯರಿಗೆ ಮುಟ್ಟಬೇಕೆಂಬ ಮಾತು. ಈಗ ಬರೀ ಮಾತಾಗಿ ಉಳಿಯುತ್ತ ನಡೆದಿದೆ "[೧೨] ಎಂದೆನ್ನುವ ಲೇಖಕರು ತಮ್ಮ ಇಂಥ ಕಾದಂಬರಿಗಳ ಮುಖಾಂತರ ಜನಸಾಮಾನ್ಯರಿಗೆ ಸಾಹಿತ್ಯದ ಉದ್ದೇಶವನ್ನು ಮುಟ್ಟಿಸುವಲ್ಲಿ ಸಫಲರಾಗಿದ್ದಾರೆಂಬುದಕ್ಕೆ ಎರಡು ಮಾತಿಲ್ಲ.

" ಇತ್ತೀಚೆಗೆ ಏನಾದರೊಂದು ಹಣೆಪಟ್ಟಿ ಕಟ್ಟಿಕೊಂಡು ಓದುಗರ (ವಿಮರ್ಶಕರ) ಒಂದು ವಿಶಿಷ್ಟ ವರ್ಗವನ್ನು ನಿರ್ಮಿಸಿಕೊಂಡೇ ಕೆಲಕೃತಿಗಳು ಡಂಗುರ ಬಾರಿಸಿಕೊಳ್ಳುತ್ತ ಬರುತ್ತಿರುವ ಸಮಯದಲ್ಲಿ ನಾನು ಈ ಕಾದಂಬರಿಗೆ ಯಾವ ಹಣೆಪಟ್ಟಿಯನ್ನು ಕಟ್ಟಲಾರೆ "[೧೩] ಎಂದೆನ್ನುವ ಲೇಖಕರ ಅಭಿಪ್ರಾಯಕ್ಕೆ ಪ್ರತಿಕ್ರಯಿಸುತ್ತ " ಬೆಳಗಲಿಯವರು ಪ್ರಗತಿಶೀಲ ಸಂದರ್ಭದ ಮುಖ್ಯ ಕಾದಂಬರಿಕಾರರಾದರೂ ಪ್ರಸ್ತುತ ಕಾದಂಬರಿಯ ಕಥಾವಸ್ತು. ಪಾತ್ರ ಚಿತ್ರಣ. ನಿರೂಪಣಾ ಶೈಲಿಗಳು ಮಾತ್ರ ನವೋದಯ ಮಾರ್ಗದ್ದೆಂದು ಹೇಳಬಹುದು "[೧೪] ಎಂಬ ರಾಮಕೃಷ್ಣ ಮಾರಾಠೆಯವರ ಮಾತಿನಲ್ಲಿ ಸತ್ಯಾಂಶವಿದೆ.

ಈ ಕಾದಂಬರಿಯ ಸೂಕ್ಷ್ಮಾವಲೋಕನದ ನಂತರ ಅರಿವಿಗೆ ಬರುವ ಸಂಗತಿಯೆಂದರೆ ನಮ್ಮ ಪರಿಸರದ ವಾಸ್ತವವನ್ನು ಪರಿಚಯಿಸುವುದರ ಜೊತೆ - ಜೊತೆಗೆ ಓದುಗರ ಕುತೂಹಲ ಕಾಯ್ದುಕೊಂಡು ಹೋಗುವ ಶೈಲಿಯ ಬೆಳಗಲಿಯವರ ಸದ್ದುಗದ್ದಲವಿಲ್ಲದ ಆತ್ಮೀಯ ನಿವೇದನೆ: ತನ್ಮೂಲಕ ಸಾಹಿತ್ಯದ ಉದ್ದೇಶವನ್ನು ಸಫಲಗೊಳಿಸುವ ಸಂಗತಿ ಮೆಚ್ಚಬೇಕಾದದ್ದೇ.

---

೧೧. ದು. ನಿಂ. ಬೆಳಗಲಿ : ಪ್ರೀತಿಯ ಆ ಮುಖ. ಪುಟ ೨೭

೧೨. ದು. ನಿಂ. ಬೆಳಗಲಿ : ಪ್ರೀತಿಯ ಆ ಮುಖ. ನನ್ನ ನುಡಿಯಿಂದ

೧೩. ದು. ನಿಂ. ಬೆಳಗಲಿ : ಪ್ರೀತಿಯ ಆ ಮುಖ. ನನ್ನ ನುಡಿಯಿಂದ

೧೪. ಡಾ. ರಾಮಕೃಷ್ಣ ಮರಾಠೆ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೨೨

# ಸಾಮಾಜಿಕ ಕಾದಂಬರಿಗಳು

ಕನ್ನಡ ಕಾದಂಬರಿಗೆ ನೂರು ವರ್ಷ ತುಂಬಿದೆ. ೧೮೯೯ ರಲ್ಲಿ ಗುಲ್ವಾಡಿ ವೆಂಕಟರಾಯರು ರಚಿಸಿದ ' ಇಂದಿರಾಬಾಯಿ ' ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿ. ಅಲ್ಲಿಂದಲೇ ಕನ್ನಡ ಕಾದಂಬರಿಗೆ ನಾಂದಿ. ನಂತರದ ದಿನಗಳಲ್ಲಿ ನೂತನ ಆಯಾಮವನ್ನು ಪಡೆಯುತ್ತ ಸಾಗಿರುವ ಕಾದಂಬರಿ. ಜನಮನ ಗೆದ್ದು ಇಂದಿಗೂ ಸಾಹಿತ್ಯದ ಪ್ರಬಲ ಜನಪ್ರಿಯ ಪ್ರಕಾರವಾಗಿ ವಿಜ್ರಂಭಿಸುತ್ತಿದೆ. ಬೆಳಗಲಿಯವರು ಪ್ರಗತಿಶೀಲ ಸಂದರ್ಭದ ಪ್ರಮುಖ ಕಾದಂಬರಿಕಾರರು. ಪ್ರಗತಿಶೀಲ ಲೇಖಕರಿಗೆ ಸಮಾಜವೇ ಮೂಲವಸ್ತುವಾಗಿತ್ತೆಂಬುದು ಸರ್ವವಿದಿತ. ಸಾಮಾಜಿಕ ಪ್ರಗತಿಗೆ ಮಾರಕವಾದ ಅನೇಕ ಸಮಸ್ಯೆಗಳನ್ನು. ಅಂಥ ವ್ಯಕ್ತಿ - ಶಕ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ತಮ್ಮ ಬರವಣಿಗೆಯ ಮುಖಾಂತರ ಖಂಡಿಸಿದರು; ಸುಧಾರಣೆಗೆ ತಮ್ಮ ಸಲಹೆ - ಸೂಚನೆಗಳನ್ನು ಮಂಡಿಸಿದರು. ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಸಾಮಾಜಿಕ ಸಮಸ್ಯೆ. ಅರೆ -ಕೊರೆಗಳನ್ನು ಕೇವಲ ಎತ್ತಿ ತೋರಿಸಿ ತೃಪ್ತಿಪಡಲಿಲ್ಲ; ಬದಲಾಗಿ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸಿದ್ದೊಂದು ಅವರ ಬರವಣಿಗೆಯ ವಿಶೇಷತೆಯಾಗಿದೆ. ವ್ಯಕ್ತಿಕೇಂದ್ರಿತ ನೆಲೆಯಲ್ಲಿ ಅನುಭವದ ಶೋಧ ನಡೆಸುತ್ತ ಹೊರಟ ಕಾದಂಬರಿಕಾರ ಭಾರತೀಯ ಜನತೆಯ ಜೀವಂತ ಸಮಸ್ಯೆಗಳಿಗೆ ಸ್ಪಂದಿಸಲಾರದೆ ಹೋದದ್ದು ಆ ಕ್ಷೇತ್ರದ ಒಂದು ಬಹುದೊಡ್ಡ ಕೊರತೆ. ಆದರೆ ಗ್ರಾಮೀಣ ಸಂವೇದನೆಗಳಿಗೆ ಧ್ವನಿಗೊಟ್ಟ ಬೆಳಗಲಿಯವರು ಭಾರತ ಜನತೆಯ ಮೂಲ ಸಮಸ್ಯೆಗಳನ್ನು ಪರಿಶೀಲಿಸಿ ಅವುಗಳ ಭೀಕರ ಸ್ವರೂಪವನ್ನು ಸಾಹಿತ್ಯ ಮಾಧ್ಯಮದಲ್ಲಿ ತರುವ ದಿಟ್ಟ ಹೆಜ್ಜೆಯನ್ನಿಟ್ಟಿರುವುದು ಗಮನಾರ್ಹ ಸಂಗತಿ. ಹೀಗಾಗಿ ಬೆಳಗಲಿಯವರು ಕನ್ನಡದ ಸಂದರ್ಭದಲ್ಲಿ ಮಾತ್ರವಲ್ಲದೆ. ಭಾರತೀಯ ಸನ್ನಿವೇಶದಲ್ಲೂ ಅವಲೋಕನಾರ್ಹರು. " ಭಾರತದ ಗ್ರಾಮೀಣ ಸಮಸ್ಯೆಗಳನ್ನೇ ತಮ್ಮ ಕಾದಂಬರಿಗಳಿಗೆ ವಸ್ತುವಾಗಿರಿಸಿಕೊಂಡ ಬೆಳಗಲಿಯವರು ಭಾರತದ ಅಭಿವೃದ್ಧಿಯ ಚಿಂತಕರೂ ಆಗಿದ್ದಾರೆ ".[೧೫] " ಸಾಹತ್ಯಕ್ಕೆ ಸಮಾಜ ನಿಷ್ಠೆ ಎಂದರೆ. ಅಂದಿನ ತಾತ್ಕಾಲಿಕವಾದ ರಾಜಕೀಯ ಹಾಗೂ ಆರ್ಥಿಕ ಸಮಸ್ಯೆಗಳಲ್ಲಿ ಮುಳುಗೇಳುವುದೇನೂ ಅಲ್ಲ; ಸಾಹಿತಿ ಒಂದು ವೇಳೆ ಇದರಲ್ಲಿ ಮುಳುಗಿದರೂ ಅದರಿಂದ ಎದ್ದು ಬಂದು. ಎಲ್ಲ ಕಾಲಕ್ಕೂ ಸಲ್ಲುವ ಪ್ರಯೋಜನದ ಕಡೆಗೆ ನೋಡಬೇಕು. ಹೀಗಾಗದಿದ್ದರೆ ಅದು ಸಾಹಿತ್ಯವಾಗುವುದಿಲ್ಲ ".[೧೬]

ವಸ್ತುವಿನ ದೃಷ್ಟಿಯಿಂದ ಬೆಳಗಲಿಯವರ ಕಾದಂಬರಿಗಳಲ್ಲಿ ಬಹುಭಾಗ ಸಾಮಾಜಿಕ ಕಾದಂಬರಿಗಳೇ ಆಗಿವೆ. ಆದಾಗ್ಯೂ ಸಾಮಾಜಿಕ ವಿವಿಧ ಸ್ತರಗಳ ಮೇಲೆ ಬರೆದ ವಸ್ತುವನ್ನಾಧರಿಸಿ ಮರುವಿಂಗಡಿಸುವುದು ಸೂಕ್ತವೆಂದು ಭಾವಿಸಿ ಅಧ್ಯಯನಕ್ಕೊಳಪಡಿಸಲಾಗಿದೆ. ವಸ್ತುವಿನ ದೃಷ್ಟಿಯಿಂದ ಅವರ ಪ್ರಾದೇಶಿಕ ಕಾದಂಬರಿಗಳೂ ಕೂಡ ಸಾಮಾಜಿಕವೇ ಆಗಿದ್ದರೂ ಅವುಗಳನ್ನು ' ಪ್ರಾದೇಶಿಕ ಕಾದಂಬರಿಗಳು ' ಎಂಬ ಭಾಗದಲ್ಲಿ ವಿವೇಚನೆಗೊಳಪಡಿಸಿದೆ. ಅಲ್ಲಿ ಸಾಮಾಜಿಕ ವಸ್ತುವಿನೊಂದಿಗೆ ಪ್ರಾದೇಶಿಕ ವೈಶಿಷ್ಟ್ಯಗಳನ್ನು ವಿಶೇಷವಾಗಿ ಗಮನದಲ್ಲಿರಿಸಿಕೊಂಡು ಚಿಂತನೆ ನಡೆಸಲಾಗಿದೆ.

---

೧೫. ಜಿ. ಎಸ್. ಎಸ್. : ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ. ಪುಟ ೪೩

೧೬. ಜಿ. ಎಂ. ಹೆಗಡೆ : ಸಾಹಿತ್ಯ ಮತ್ತು ಸಹೃದಯತೆ. ಪುಟ ೨೭೬

ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನಕ್ಕೊಳಪಡಿಸುವ ಬೆಳಗಲಿಯವರ ಸಾಮಾಜಿಕ ಕಾದಂಬರಿಗಳನ್ನು ಅವುಗಳ ಆಂತರಿಕ ವಸ್ತುವನ್ನಾಧರಿಸಿ. ಮತ್ತೆ 'ಸಾಮಾಜಿಕ - ಶೈಕ್ಷಣಿಕ ಸಮಸ್ಯೆಗಳ ಚಿತ್ರಣದ ಕಾದಂಬರಿಗಳು'. 'ಸಾಮಾಜಿಕ - ಶೋಷಣೆಯ ಚಿತ್ರಣದ ಕಾದಂಬರಿಗಳು' ಹಾಗೂ 'ಸಾಮಾಜಿಕ ಪತ್ತೇದಾರಿ ಕಾದಂಬರಿಗಳು' ಎಂದು ಮೂರು ರೀತಿಯಲ್ಲಿ ವಿಂಗಡಿಸಿ ಅಧ್ಯಯನ ಕೈಗೊಳ್ಳಲಾಗಿದೆ.

**ಸಾಮಾಜಿಕ - ಶೈಕ್ಷಣಿಕ ಸಮಸ್ಯೆಗಳ ಚಿತ್ರಣದ ಕಾದಂಬರಿಗಳು :**

ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆಗೆ ಪ್ರಾಧಾನ್ಯತೆ ದೊರೆತದ್ದು ಪ್ರಗತಿಶೀಲ ಲೇಖಕರಿಂದಲೇ: ಯಾಕೆಂದರೆ ಇಲ್ಲಿ ವಸ್ತುವಿನ ಆಯ್ಕೆಗೆ ಯಾವುದೇ ರೀತಿಯ ಕಟ್ಟುಪಾಡುಗಳಿಲ್ಲ. ಸಾಮಾಜಿಕ ಸಮಸ್ಯೆಯೆಂದು ಕಂಡದ್ದನ್ನು. ಸಮಸ್ಯೆಗಳನ್ನು ಸೃಷ್ಟಿಸಿದವರನ್ನೂ ಸಾಮಾಜಿಕ ಪ್ರಗತಿಗೆ ಆತಂಕವಾದ ವ್ಯಕ್ತಿ - ಶಕ್ತಿಗಳನ್ನೂ. ಒಟ್ಟಿನಲ್ಲಿ ಸಮಾಜದಲ್ಲಿ ಕಾಣುವ ವಿಕೃತಿಗಳನ್ನೆಲ್ಲ ತಮ್ಮ ಕಾದಂಬರಿಗಳ ಮೂಲಕ ಪ್ರಗತಿಶೀಲರು ಎತ್ತಿ ತೋರಿಸಿದರು. ಹೀಗಾಗಿ ಕಾದಂಬರಿ ಪ್ರಕಾರ ತುಂಬ ಜನಪ್ರಿಯವಾದುದು ಈ ಅವಧಿಯಲ್ಲಿಯೇ ಸಂಖ್ಯೆ ಸತ್ವಗಳೆರಡರ ದೃಷ್ಟಿಯಿಂದಲೂ ಪ್ರಗತಿಶೀಲವೂ 'ಕಾದಂಬರಿಯುಗ' ವೆಂದು ಕರೆಯಿಸಿಕೊಳ್ಳುವಷ್ಟು ಸೊಂಪಾಗಿ ಸಮೃದ್ಧವಾಗಿ ಬೆಳೆದು ಬಂತು. ಬೆಳಗಲಿಯವರು ಮೊದಲಿನಿಂದಲೂ ಪ್ರಗತಿಶೀಲ ಮನೋಭಾವವನ್ನು ಇರಿಸಿಕೊಂಡು ಬಂದವರು: ಇದಕ್ಕಾಗಿಯೇ ಕಟ್ಟಿಮನಿ ಇವರ ನೆಚ್ಚಿನ ಲೇಖಕರು.

ಬೆಳಗಲಿಯವರ ಕಾದಂಬರಿಗಳ ವಿಶೇಷತೆಯೆಂದರೆ ಸಾಮಾಜಿಕ ಪ್ರಜ್ಞೆಯೊಂದಿಗೆ. ಶೈಕ್ಷಣಿಕ ಅಂಗರಂಗಗಳನ್ನು ಚಿತ್ರಿಸಿದ್ದು. ವೃತ್ತಿಯಿಂದ ಶಿಕ್ಷಕರಾದ ಇವರು ತಮ್ಮ ಪ್ರವೃತ್ತಿಯಲ್ಲಿ ವೃತ್ತಿಯ ಅನೇಕ ಸಮಸ್ಯೆ. ಅಂಕುಡೊಂಕುಗಳನ್ನು ಚಿತ್ರಿಸುತ್ತ ವಿಷಾದ ಪಟ್ಟಿದ್ದೂ ಉಂಟು. 'ಆದರ್ಶ ಶಿಕ್ಷಕ' ರಾದ ಇವರು ಅನೇಕ 'ಆದರ್ಶಶಿಕ್ಷಕ' ಪಾತ್ರಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಉತ್ತಮವಾದ ಶೈಕ್ಷಣಿಕ ವಾತಾವರಣದ ಕೊರತೆ ಶಿಕ್ಷಕರಾದ ಬೆಳಗಲಿಯವರಿಗೆ ಬೇಸರದ ಸಂಗತಿ. ಸರಳ ಸಹಜ. ಸುಂದರ ಬದುಕಿಗೆ ಹೆಸರಾದ ಇವರು ಶೈಕ್ಷಣಿಕರಂಗದಲ್ಲಿ ಸರಳ - ಸಂಯಮದ - ಅನುಕಂಪಶೀಲರಾದ ಆದರ್ಶ ಶಿಕ್ಷಕರು ಇರಬೇಕೆಂದು ಬಯಸಿದ್ದು ಸ್ವಾಭಾವಿಕ. ಉತ್ತಮ ಶೈಕ್ಷಣಿಕ ವಾತಾವರಣ ಮಾತ್ರ ಉತ್ತಮ ಸಮಾಜ ನಿರ್ಮಾಣ ಮಾಡಬಲ್ಲುದೆಂಬುದು ಸರ್ವವಿದಿತ. ಶೈಕ್ಷಣಿಕ ಕ್ಷೇತ್ರದ ಅಂಕು - ಡೊಂಕುಗಳನ್ನು ತಮ್ಮ ಬಹುತೇಕ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಈ ನಿಟ್ಟಿನಲ್ಲಿ ಅವರ 'ಮುಳ್ಳು ಮತ್ತು ಮಲ್ಲಿಗೆ'. 'ಹತ್ತು ಹೆಡೆಯ ಹಾವು'. ಮತ್ತು 'ಬಿಸಿಲು ಬೆಳದಿಂಗಳು'ಗಳು ಪ್ರಮುಖವಾದ ಕಾದಂಬರಿಗಳಾಗಿದ್ದು. ಅವುಗಳನ್ನಿಲ್ಲಿ ಅಧ್ಯಯನ ಮಾಡಲಾಗಿದೆ.

**ಮುಳ್ಳು ಮತ್ತು ಮಲ್ಲಿಗೆ (೧೯೬೦) :**

ಇದು ಬೆಳಗಲಿಯವರ ಪ್ರಥಮ ಕಾದಂಬರಿ. ಪ್ರಕಟವಾದುದು ೧೯೬೦ ರಲ್ಲಾದರೂ. ಇದರ ರಚನೆಯಾದುದು ಬೆಳಗಲಿಯವರು ಶಿಕ್ಷಕರಾಗಿ ಸೇರಿಕೊಂಡ ಹೊಸದರಲ್ಲಿ. ಅವರೇ ಮುನ್ನುಡಿಯಲ್ಲಿ ಹೇಳಿರುವಂತೆ. 'ನಾನು

ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವ ಸಮಯಕ್ಕೆ ಈಗ ವಿದ್ಯಾರ್ಥಿಕ್ಷೇತ್ರದಲ್ಲಿ ತೋರುತ್ತಿರುವ ಕೆಲ ಅನಾಹುತಗಳ ಹಿನ್ನೆಲೆಯಲ್ಲಿ ಈ ಕಾದಂಬರಿಯನ್ನು ಹೆಣೆದಿದ್ದೇನೆ ' ಕುಡಿಮೀಸೆ ಒಡೆಯುವ ವಯಸ್ಸಿನಲ್ಲಿ ಪ್ರೌಢಶಾಲೆಯ ಕಟ್ಟೆ ಹತ್ತುವ ವಿದ್ಯಾರ್ಥಿಗಳಿಗೆ ಅನೇಕ ' ಕವಲುದಾರಿಗಳು '. ಅವೆಲ್ಲ ರಂಜನೀಯ - ಮನರಂಜನೆಯ - ಮೋಜಿನ ದಾರಿಗಳು. ಅಂಥ ದಾರಿಗಳ ಸೆಳವಿಗೆ ಸಿಕ್ಕ ಅನೇಕ ಪ್ರೌಢರು ತಮ್ಮ ಬದುಕಿನ ದಾರಿಯನ್ನೇ ತಪ್ಪಿಸಿಕೊಂಡು ತೆಪ್ಪಗಾಗಿ ತಮ್ಮನ್ನು ತಾವೇ ದುರಂತಕ್ಕೀಡು ಮಾಡಿಕೊಳ್ಳುತ್ತಾರೆ. ಅಂಥ ದುರಂತ ಪ್ರಣಯ ಚಿತ್ರವೊಂದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸಿದೆ.

ಹಾಲೂರು ಹತ್ತುಸಾವಿರ ಜನವಸತಿಯುಳ್ಳ ಕೃಷ್ಣಾತೀರದಲ್ಲಿರುವ ಒಂದು ಗ್ರಾಮ. ಒಕ್ಕಲುತನದ ಮೇಲೆ ಅವಲಂಬಿತ ಊರು. ಅರ್ಧಕ್ಕಿಂತ ಹೆಚ್ಚು ಭೂಮಿ ಮಹಾಪೂರದಿಂದ ನೀರುಂಡು ಹಣದ ಬೆಳೆಗಳನ್ನೇ ಕೊಡುತ್ತಿರುವುದರಿಂದ ಊರು ಉಂಡುಟ್ಟು ಸುಖದಿಂದಿತ್ತು. ಶಿವನಗೌಡರು ಊರಗೌಡರಲ್ಲದಿದ್ದರೂ ಊರಿಗೆ ಬೇಕಾದವರು. ಊರಗೌಡರ ಸಂಬಂಧಿಕರಾದ ಅವರನ್ನು ' ಗೌಡ್ರ ಶಿವಗೊಂಡ ' ನೆಂದೇ ಊರವರೆಲ್ಲ ಪ್ರೀತಿಯಿಂದ ಕರೆಯುತ್ತಿದ್ದರು. ಹೊಳಿಹೊಲ. ಜೋಳದ ಮೇಲಾಡಿ ಹೊಲ. ಕಡ್ಲಿ. ಗೋದಿ. ಕಬ್ಬುಗಳನ್ನು ಬೆಳೆಯುವ ಸಂಪದ್ಭರಿತ ಜಮೀನು ಹೊಂದಿದ್ದ ಶಿವನಗೌಡರು ಉಂಡುಟ್ಟು ಸುಖವಾಗಿರುವುದರೊಂದಿಗೆ ಕೈಯಲ್ಲಿ ಒಂದಿಷ್ಟು ಕಾಸು ಮಾಡಿಕೊಂಡವರು. ಹೆಂಡತಿ ಸಾಂವಕ್ಕ ಗಂಡನಿಗೆ ತಕ್ಕ ಮಡದಿಯಾಗಿದ್ದು. ಹೊಲಗಳ ಉಸ್ತುವಾರಿಯಲ್ಲಿ ಎತ್ತಿದ ಕೈ. ಶಂಕರ ಏಕಮಾತ್ರ ಪುತ್ರ. ಕಷ್ಟವಿಲ್ಲದ ಜೀವ; ಗೌರಿ ಒಬ್ಬಳೇ ಹೆಣ್ಣು ಸಂತಾನ. ಅವಳೂ ಶಂಕರನಂತೆ ಓದುವವಳಾಗಿದ್ದು. ಹೊಲ - ಮನೆಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಂಡವಳಲ್ಲ. ಸಿಂಗ ಗೌಡರ ಬಲಗೈಯಾಗಿದ್ದವ. ತಂದೆ - ತಾಯಿಗಳನ್ನು ಕಳೆದುಕೊಂಡು ಪರದೇಶಿಯಾಗಿದ್ದ ಸಿಂಗನನ್ನು ಗೌಡರು ಶಂಕರಹಟ್ಟಿಯಿಂದ ಕರೆತಂದು ಮಗನಂತೆಯೇ ನೋಡಿಕೊಳ್ಳುತ್ತಿದ್ದರು. ಅವನನ್ನು ಆಳುಮನುಷ್ಯನೆಂದು ಯಾರೂ ತಿಳಿದಿರಲಿಲ್ಲ. ಮನೆಯಲ್ಲಿ ಅವನೂ ಒಬ್ಬ ಸದಸ್ಯನಂತೆ ಇದ್ದು. ಹೊಲದ ಕೆಲಸ ಕಾರ್ಯಗಳನ್ನೆಲ್ಲ ಸಾಂಗವಾಗಿ ನೋಡಿಕೊಂಡು ಹೋಗುತ್ತಿದ್ದ. ಸಿಂಗ ಗೌಡರ ತಾಯಿಯ ತವರೂರಿನವ. ಅವನ ಮೇಲೆ ಗೌಡರಿಗೆ ಇನ್ನೂ ಹೆಚ್ಚಿನ ಪ್ರೀತಿ. ವಯಸ್ಸಿನಿಂದ ಶಂಕರನಿಗಿಂತ ಒಂದೆರಡು ವರ್ಷ ಹಿರಿಯನಾದ ಸಿಂಗ. ದುಡಿತದಲ್ಲಿ ನಾಲ್ಕು ರಟ್ಟೆಯ ಶಕ್ತಿ ಒಂದೇ ರಟ್ಟೆಯಲ್ಲಿ ಪಡೆದಿದ್ದ. ಗೌಡರು ತಮ್ಮ ಹೊಲದ ಜವಾಬ್ದಾರಿಯನ್ನೆಲ್ಲ ಸಿಂಗನಿಗರ್ಪಿಸಿ ತಾವು ನಿಶ್ಚಿಂತರಾಗಿದ್ದರು. ಸಿಂಗನೂ ಅಷ್ಟೇ. ತನ್ನದೇ ಮನೆಯೆಂದು ತಿಳಿದಿದ್ದ. ಎಂತಲೇ ತಂದೆ - ತಾಯಿಗಳ ನೆನಪನ್ನೇ ಮರೆತು ಗೌಡರ ಬಲಗೈಯಾಗಿ. ಮಗನಾಗಿ ಮನೆಯಲ್ಲಿದ್ದ.

ಶಂಕರ ಪಾಟೀಲ ಹೈಸ್ಕೂಲ ಕೊನೆ ಕ್ಲಾಸಿನಲ್ಲಿ ಓದುತ್ತಿದ್ದವ; ಓದುತ್ತಿದ್ದವನೆನ್ನುವುದಕ್ಕಿಂತ ಚೈನೀ ಮಾಡುತ್ತಿದ್ದವನೆಂದರೆ ಹೆಚ್ಚು ಸೂಕ್ತ. ವರ್ಗದಲ್ಲೊಂದು ದಿನ ಬಾಗೇವಾಡಿ ಮಾಸ್ತರರು ಹಾಜರಿ ತೆಗೆದುಕೊಳ್ಳುವಾಗ ' ಲತಾ ಕುಲಕರ್ಣಿ ' ಯ ಹೆಸರಿಗೆ ಪ್ರಸಂಟ್ ಸಾರ್ ಎಂದು ಎರಡೇಟು ತಿಂದವ. ಬಾಗೇವಾಡಿ ಮಾಸ್ತರರು ಡೆಸ್ಕ ಮೇಲೆ ನಿಲ್ಲಿಸಿ ಎರಡೇಟು ಬಿಗಿದು ಚೆನ್ನಾಗಿ ಶಿಕ್ಷಿಸಿದ್ದರು. ಶಂಕರ ಒಳಗೊಳಗೆ ಭುಸುಗುಡುತ್ತಲೇ ಏಟನ್ನು ಸಹಿಸಿಕೊಂಡಿದ್ದ. ಅವರಲ್ಲದೆ ಬೇರೆ ಯಾರೇ ಆಗಿದ್ದರೂ. ಮರಳಿ ವಾದಿಸಬಹುದಿತ್ತು. ಆದರೆ ಬಾಗೇವಾಡಿ ಮಾಸ್ತರರು

ತಂದೆಯ ಆಪ್ತರಾದುದರಿಂದ ತೆಪ್ಪಗೆ ಸುಮ್ಮನಾಗಿದ್ದ. ಇಡೀ ವರ್ಗದಲ್ಲಿ ಹೆಣ್ಣುಹುಡುಗಿಯರೆದುರು ಏಟು ತಿಂದ ಶಂಕರ ಪೆಟ್ಟುತಿಂದ ನಾಗರಹಾವಿನಂತೆ ಹಲ್ಲು ಕಡಿಯುತ್ತಿದ್ದ. ತನ್ನ ಮೇಲೆ ಕಂಪ್ಲೇಂಟ್ ಹೇಳಿದ ಮಾಲಾ ಮಠದ ಹಾಗೂ ಬಸಣ್ಣೆಯ ಮೇಲೆ ಒಳಗೊಳಗೇ ಕುದಿಯುತ್ತಿದ್ದ. ' ಬಸೂ ' ಅದೇ ವರ್ಗದ ' ಅಳುಬುರುಕ ಬಸು '. ಆತನ ಕೈಯಿಂದ ಯಾವ ಕೆಲಸಗಳಾಗದಿದ್ದರೂ ' ಚಾಡಿ ' ಹೇಳುವುದು ಹುಡುಗ ಹುಡುಗಿಯರಲ್ಲಿ ಕದನ ಹಚ್ಚುವುದು. ತನ್ನ ಇತಿಮಿತಿಗಳಡಿಯಲ್ಲಿಯೇ ಇಂಥವುಗಳನ್ನೆಲ್ಲ ಚೆನ್ನಾಗಿ ನಿರ್ವಹಿಸುತ್ತಿದ್ದ. ಯಾವಾಗಲೂ ಹುಡುಗಿಯರ ಗುಂಪಿನಲ್ಲಿಯೇ ಇರುವ ಈತ ಚಿಕ್ಕವನಿದ್ದಾಗಲೂ ಕೂಡ. ಗಿಡಮಂಗ. ಚಿಣಿಪಣಿ. ಕಳ್ಳಪೋಲೀಸ ಇಂಥ ಹುಡುಗರಾಡುವ ಆಟವನ್ನಾಡದೆ. ಕಣ್ಣುಮುಚ್ಚಾಲೆ. ರಘಲಪಿ. ಹತ್ತಿಕಟ್ಟಾ ಬತ್ತಿಕಟ್ಟಾ. ಚಕ್ಕಾ ಆಡುತ್ತಿದ್ದವ. ಅದೂ ಹುಡುಗಿಯರ ಕೂಡ ಮಾತ್ರ. ಆತನ ಸ್ವಾಭಾವಿಕ ಗುಣಗಳೇ ಹೆಣ್ಣು ಹುಡುಗಿಯರ ಹಿಂಡಿನಲ್ಲಿ ಬೆಳೆದು ಬಂದುದರಿಂದ ಆತನ ಮನೋವೃತ್ತಿಯ ಒಲವು ಅತ್ತಲೇ ಇದ್ದುದು ಅಚ್ಚರಿಯ ಸಂಗತಿಯೇನಲ್ಲ. ಬಸೂ ಹೆಣ್ಣು ಹುಡುಗ ಇಲ್ಲವೆ ಗಂಡು ಹುಡುಗಿಯಾಗಿದ್ದ ಆ ವರ್ಗದಲ್ಲಿ. ಹೀಗಾಗಿ ಅವನನ್ನು ಎಲ್ಲರೂ ' ದೂತಿ ' ಎಂದೇ ಕರೆಯುತ್ತಿದ್ದರು. ಕಾರಣ. ಹುಡುಗರಿಂದ ಹುಡುಗಿಯರಿಗೆ. ಹುಡುಗಿಯರಿಂದ ಹುಡುಗರಿಗೆ ನೋಟ್ಸ್ ಇತ್ಯಾದಿ ಇಸಿದುಕೊಡುವ ಏಕೈಕ ಮಾಧ್ಯಮವಾಗಿದ್ದ.

ಶಂಕರ. ವಸಂತ. ಅನಂತ ಮತ್ತು ರಾಚಯ್ಯ ಅರ್ಥಾತ್ ಕುಂಟಗಾಡಿ ಈ ನಾಲ್ವರೂ ಎಸ್. ಎಸ್. ಸಿ. ವಿದ್ಯಾರ್ಥಿಗಳು. ಹಾಲೂರು ಹೈಸ್ಕೂಲಿನಲ್ಲಿ ಕೂಡಿ ಓದುತ್ತಿದ್ದವರು. ಶಂಕರ. ವಸಂತ ಇದ್ದೂರಿನವರೇ ! ಅನಂತ ಉಗಾರದಿಂದ. ರಾಚಯ್ಯ ಕೋಳಿಗುಡ್ಡದಿಂದ ಮಾಧ್ಯಮಿಕ ಶಿಕ್ಷಣದ ಸಲುವಾಗಿ ಹಾಲೂರಿಗೆ ಬಂದವರು. ವರ್ಗದಲ್ಲಿ ಒಬ್ಬರಿಗೊಬ್ಬರು ಪರಿಚಯವಾಗಿ. ಅಭ್ಯಾಸದ ಅನುಕೂಲಕತೆಗೆಂದು ನಾಲ್ವರೂ ಸೇರಿ ಕೋಣೆಯೊಂದನ್ನು ಬಾಡಿಗೆಗೆ ಹಿಡಿದಿದ್ದರು. ಈ ನಾಲ್ವರಲ್ಲಿ ರಾಚಯ್ಯ ವಿನೋದಿ. ಬಿಚ್ಚುಮನಸ್ಸುಳ್ಳವ. ಆತ ಎಡಗಾಲನ್ನು ಸ್ವಲ್ಪ ಎಳೆದು ಇಡುವುದರಿಂದ ಆತನಿಗೆ ಎಲ್ಲರೂ ' ಕುಂಟಗಾಡಿ ' ಎಂದೇ ಕರೆಯುತ್ತಿದ್ದರು. ಇದರಿಂದ ಅವನಿಗೇನೂ ಬೇಸರವಿಲ್ಲ. ಅನ್ವರ್ಥಕವಾದ ಆ ಹೆಸರು ಕಾಲಕ್ರಮದಲ್ಲಿ ಅಂಕಿತ ನಾಮವೇ ಆಗಿಬಿಟ್ಟಿತು. ಮನೆತನದಿಂದ ಬಡವನಾದ ರಾಚಯ್ಯ ಇದ್ದುದರಲ್ಲಿಯೇ. ಅಂದರೆ ಹಾಸಿಗೆಯಿದ್ದಷ್ಟು ಕಾಲು ಚಾಚುವವ. ಓದನ್ನು ಮುಂದುವರಿಸಿದವ. ಇನ್ನು ಅನಂತ. ಆತನೊಬ್ಬ ಲಹರಿ ಮನುಷ್ಯ. ಒಳ್ಳೆಯ ಹಾಡುಗಾರ. ದಿನದ ಅರ್ಧಕಾಲ ಹಾಡಿನಲ್ಲಿಯೇ ಕಳೆಯುವವ. ಹಾಡುವುದು ಅವನ ಹುಟ್ಟುಸ್ವಭಾವ. ಉಗಾರದಲ್ಲಿ ಆತನ ಅಣ್ಣ ಬಸ್ತಿ ಪಂಡಿತನಾಗಿದ್ದು. ತಮ್ಮನಿಗೇನೂ ಕೊರತೆ ಮಾಡದೆ ತುಂಬ ಕಾಳಜಿಯಿಂದ ಓದಿಸುತ್ತಿದ್ದ. ಒಂದರ್ಥದಲ್ಲಿ ಅನಂತ ಗೆಳೆಯರ ದೃಷ್ಟಿಯಲ್ಲಿ ' ಅಬಾಲ ಗಂಧರ್ವ ' ನಾಗಿದ್ದ. ಹಾಡುವ ಖಯಾಲಿಯ ಆತನನ್ನು ಸಹಪಾಠಿಗಳೆಲ್ಲ ತುಂಬ ಆದರಿಂದ ಕಾಣುತ್ತಿದ್ದರಷ್ಟೇ ಅಲ್ಲದೆ. ಅವನಿಂದ ಹಾಡು ಕೇಳಲು ಸದಾ ಹಂಬಲಿಸುತ್ತಿದ್ದರು.

ವಸಂತ ' ಪುಸ್ತಕದ ಹುಳು ' (Book worm) ಶಾಲೆಯ ಅಭ್ಯಾಸದಲ್ಲಿ ಎಲ್ಲ ಹುಡುಗರಿಗಿಂತ ಮುಂದಿದ್ದನಾದರೂ. ಲತಾಳನ್ನು ಹಿಂದೆ ಹಾಕಲು ಆಗುತ್ತಿರಲಿಲ್ಲ. ಲತಾ ತಂದೆಯನ್ನು ಕಳೆದುಕೊಂಡ ದುರ್ದೈವಿ:

ಜಾಣಳು. ಒಂದು ಸಲ ಓದಿದಾಗಲೇ ಲತೆಯ ಚುರುಕು ಬುದ್ಧಿ ಎಲ್ಲವನ್ನೂ ಗ್ರಹಿಸುತ್ತಿತ್ತು. ' ಓದು ಒಕ್ಕಾಲು ಬುದ್ಧಿ ಮುಕ್ಕಾಲು ' ಎಂಬ ಗಾದೆಗೆ ಸಾಕ್ಷಿಯಂತಿದ್ದವಳು. ಲತೆಯನ್ನು ಒಂದೆ ಹಾಕಲೆಂದೇ ವಸಂತ ಸದಾ ಮುಖದ ಮುಂದೆ ಪುಸ್ತಕ ಹಿಡಿದೇ ಇರುತ್ತಿದ್ದ. ವಸಂತನ ತಂದೆ ರಾಮಾಚಾರ್ಯರಿಗೆ ಹಿರಿಯರು ಮಾಡಿಟ್ಟು ಹೋದ ಹೊಳೆಮುಳುಗುವ ಆರೆಕರೆ ಜಮೀನಿದ್ದರೂ. ಅದು ಟೆನೆನ್ಸಿಯಲ್ಲಿ ರೈತರ ಪಾಲಾಗಿತ್ತು. ವೈದಿಕ ವೃತ್ತಿಯಿಂದ ಚೂರುಪಾರು ಕೂಡಿಸಿ ಒಂದಿಬ್ಬರು ಹೆಣ್ಣುಮಕ್ಕಳ ಮದುವೆ ಮಾಡಿದ್ದಾಗಿತ್ತು. ಇನ್ನು ವಸಂತನಿಗೆ ಸ್ಕಾಲರ್‌ಶಿಪ್ ಹಾಗೂ ಫೀ ಮಾಫಿಯ ಸೌಲತ್ತುಗಳಿದ್ದುದರಿಂದ ಅತ್ತ ಹೆಚ್ಚು ತೊಂದರೆಯಿಲ್ಲದಿದ್ದರೂ ಸಂಕಟಕಾಲ ತಪ್ಪಿದ್ದಿಲ್ಲ.

ಇನ್ನು ಶಂಕರಗೌಡಾ ಪಾಟೀಲನದು ಮಾತ್ರ ಉಳಿದವರಿಗಿಂತ ಭಿನ್ನವಾದ ವಿಧ್ಯಾರ್ಥಿಜೀವನ. ಕಷ್ಟವೆಂಬುದನ್ನು ಕನಸಿನಲ್ಲಿಯೂ ಕಂಡವನಲ್ಲ. ಆತನ ಮನಸ್ಸು ಪಾಠಗಳಿಗಿಂತ ಆಟಗಳಲ್ಲಿಯೇ ಹೆಚ್ಚು. ಆತನೇನೂ ದಡ್ಡನಲ್ಲ. ಆದರೆ ಕೈಯಲ್ಲಿ ಪುಸ್ತಕ ಹಿಡಿದು ಕುಳಿತು ಓದುವವನಲ್ಲ. ಕಾಲಲ್ಲಿ ಚಕ್ರಗಳಿದ್ದಂತೆ ಸದಾ ತಿರುಗುವುದೇ ಅವನ ಸ್ವಭಾವ. ಪರೀಕ್ಷೆಯ ಮುನ್ನಾದಿನ ಪುಸ್ತಕದ ಧೂಳು ಜಾಡಿಸಿದರೆ ಆ ಪುಸ್ತಕಗಳ ಸುದೈವ. ತಾಯಿಗೆ ಪ್ರೀತಿಯ ಮಗು. ತಂದೆಗೆ ನಲುಮೆಯ ಕುಲದೀಪಕ. ತಂಗಿಗೆ ನಲುಮೆಯ ಅಣ್ಣ. ಅಕ್ಕನಿಗೆ ನಚ್ಚಿನ ತಮ್ಮನಾಗಿ. ಊರಲ್ಲಿ ಇಪ್ಪತ್ತೆರಡರ ತರುಣ. ಶಾಲೆಯಲ್ಲಿ ವಿದ್ಯಾರ್ಥಿ. ವರ್ಗದಲ್ಲಿ ನಾಯಕ. ಅಭ್ಯಾಸ ಕೋಣೆಯಲ್ಲಿ ಹಿರಿಗಡಿ ಸಕ್ಕರೆಯಾಗಿ ಬೆಳೆದಿದ್ದ ಶಂಕರ. ಬಾಗೇವಾಡಿ ಶಿಕ್ಷಕರಿಂದ ಏಟು ತಿಂದುದು ಇಡೀ ವರ್ಗದಲ್ಲಿಯೇ ಒಂದು ಅಪಮಾನಕರ ಸಂಗತಿಯಾಗಿತ್ತು. ಅಪಮಾನದ ಸೇಡಿಗಾಗಿ ಕಾದುಕುಳಿತ ಶಂಕರನಿಗೆ ಅದಿನ್ನೂ ಕೂಡಿ ಬಂದಿರಲಿಲ್ಲವಾದರೂ. ' ಗಾಂಧಿ ಚೌಕದ ಕಟ್ಟೆ ' ಗೆ ಮಾತ್ರ ನಿತ್ಯ ಹಾಜರಿ ತಪ್ಪಿಸುತ್ತಿರಲಿಲ್ಲ. ಗಾಂಧೀಚೌಕಿನ ಕಟ್ಟೆಯ ವಿಶೇಷವೆಂದರೆ. ವರ್ಣರಂಜಿತ ಹೊಸರಕ್ತದ ಹುರುಪಿನ ತರುಣರ ತಂಡದ ಸಭೆ ನಿತ್ಯ ನಡೆಯುತ್ತಿದ್ದುದು. ' ಕೇವಲ ಪ್ರೌಢರಿಗೆ ಮಾತ್ರ ' ವಾದ ಆ ತರುಣರ ತಂಡದ ಸಭೆಗೆ ಶಂಕರನೂ ಆಜೀವ ಸದಸ್ಯ. ಆ ತಂಡದವರ ಸ್ವಭಾವವೆಂದರೆ. " ಎಲ್ಲರೂ ಹೊಲಮನೆ ಇದ್ದವರೆ. ಹೈಸ್ಕೂಲು ಕಟ್ಟೆ ಏರಿದವರಾದುದರಿಂದ ಕೈಯಲ್ಲಿ ಕುರುಪಿ ಹಿಡಿದು ಕಸ ತೆಗೆಯುವುದಾಗಲಿ. ಕವಣೆ ಹಿಡಿದು ಹಕ್ಕಿ ಹೊಡೆಯುವುದಾಗಲಿ. ಕುಡುಗೋಲು ಹಿಡಿದು ಬೆಳೆ ಕೊಯ್ಯುವುದಾಗಲಿ. ಮೂಗದಾಣ ಹಿಡಿದು ಬಂಡಿ ಹೊಡೆಯುದಾಗಲಿ ಇವೆಲ್ಲವು ಆಗದಿದ್ದರೂ ಕೊನೆಗೆ ಹೊಲದ ಕಡೆಗೆ ಹಣಿಕಿ ಹಾಕುವುದೂ. ಆಗಲಾರದ ಕೆಲಸ ".[೧೭]

ಬಾಗವ್ವ ಶಿವನಗೌಡರ ಹಿರಿಯ ಮಗಳು. ಕೊಟ್ಟಿದ್ದು ಆಸಂಗಿಯ ದೇಸಾಯರ ಮನೆತನಕ್ಕೆ. ಬಾಗವ್ವ ಎಷ್ಟು ಸಂಭ್ರಮದಿಂದ ಪತಿಯ ಹೊಸ್ತಿಲಲ್ಲಿ ಕಾಲಿಟ್ಟಿದ್ದಳೋ ಅಷ್ಟೇ ಕಡುದುಃಖದಿಂದ ಆ ಹೊಸಲು ದಾಟಿ ತವರು ಮನೆಯನ್ನು ಸೇರಿದ್ದಳು. ಬಾಗವ್ವ ಪತಿಯ ಮನೆಗೆ ಹೋದ ವರುಷದಲ್ಲಿಯೇ ಆಕೆಯ ಪತಿ ಸದಾಶಿವಪ್ಪ ಒಂದು ಶ್ರಾವಣ ಸೋಮವಾರ. ತುಂಬಿ ಹರಿಯುವ ಕೃಷ್ಣೆಯಲ್ಲಿ ಪುಣ್ಯಸ್ನಾನ ಮಾಡುವಾಗ. ನೀರು ಪಾಲಾಗಿದ್ದ. ಪತಿಯ ಪ್ರೇಮದ ಕುರುಹಾಗಿ ಬಂಗಾರಿ ಹುಟ್ಟಿದ್ದಳು. ಆಸಂಗಿಯವರು ತಮ್ಮಲ್ಲಿಯೇ ಇರಬೇಕೆಂದು ಒತ್ತಾಯಿಸಿದರೂ.

---

೧೭. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೩೦

ಬಾಗವ್ವ - ಮಗಳೊಂದಿಗೆ ತಂದೆಯ ಮನೆಯಲ್ಲಿಯೇ ಬಂದು ನಿಂತಳು. ಹೀಗಿದ್ದಾಗ್ಯೂ " ಆಕೆಯ ಪಾಲು ಆಕೆಗೆ ಸಲ್ಲಲೇಬೇಕು. ಒಬ್ಬ ಹೆಣ್ಣುಮಗಳ ಪಾಲಿನದು ನಾವೇಕೆ ತಿನ್ನಬೇಕು ? ನೀವೇನು ಇಲ್ಲದವರಲ್ಲ: ನಿಮಗೆ ಕಷ್ಟಕಾಲವೆಂದೂ ನಾವು ಕೊಡುವುದಿಲ್ಲ. ಇದೆಲ್ಲ ಕೂಡಿಸಿ ಬಂಗಾರಿಯ ಮದುವೆಗೆ ವರದಕ್ಷಿಣೆ ಅಂತ ತಕ್ಕೊಳ್ಳಿರಿ " [೧೮] ಎಂದು ಬಾಗವ್ವನ ಪಾಲಿಗೆ ಬಂದ ಕಾಳು - ಕಡಿಯನ್ನು ಆಸಂಗಿಯವರು ಪ್ರತಿವರ್ಷ ತಪ್ಪದೆ ತಂದು ಒಪ್ಪಿಸುತ್ತಿದ್ದರು.

ಬಂಗಾರಿ ಅಜ್ಜ - ಅಜ್ಜಿಯರಿಗೆ ಮುದ್ದಿನ ಮೊಮ್ಮಗಳು. ಹೆಸರಿಗೆ ತಕ್ಕಂತೆ ಬಂಗಾರದ ಬೊಂಬೆಯೇ ಆದ ಅವಳಿಗೆ ಹೊಲದಲ್ಲಿ ದುಡಿಯುವುದೆಂದರೆ ಬಲು ಅಚ್ಚುಮೆಚ್ಚು. " ಜೋಳದ ಬೆಳೆಯ ನಡುವೆ ಹಾಕಿದ ಅಟ್ಟದ ಮೇಲೆ ನಿಂತು ಕೈಯಲ್ಲಿಯ ಕವಣೆಯನ್ನು ತಿರುಗಿಸುತ್ತ ' ಹಾ...... ಹೂ ' ಎಂದು ಹಕ್ಕಿಗಳನ್ನೋಡಿಸುತ್ತ. ನಿಂತಿದ್ದ ಬಂಗಾರಿಯನ್ನು ಬಾಲರವಿಯ ಸುವರ್ಣ ಕಿರಣದ ಎಳೆಗಳು ಅಪ್ಪಿ ಮುದ್ದಿಡುತ್ತಿದ್ದಾಗ ಆಕೆ ಸುರಸುಂದರಿಯಂತೆ ಶೋಭಿಸುತ್ತಿರುವುದೇನೂ ಅಚ್ಚರಿಯಲ್ಲ " [೧೯]. ಬಾಲ್ಯದೊಂದಿಗೆ ಶಂಕರನ ಜೊತೆಯಲ್ಲಿಯೇ ಬೆಳೆದು ಬಂದ ಬಂಗಾರಿ. ಅವನೇ ತನ್ನ ಪತಿಯೆಂದು ಭಾವಿಸಿದ್ದು. ಅದಕ್ಕೆ ಅಜ್ಜ - ಅಜ್ಜಿಯರ ಅನುಮೋದನೆಯ ಮುದ್ರೆ ಬಿದ್ದು ಮತ್ತಷ್ಟು ಖಚಿತಗೊಂಡಾಗ ಅವಳೆದೆಯಲ್ಲಿ ತನಗರಿಯದಂತೆ ಶಂಕರನ ಮೂರ್ತಿ ಸ್ಥಾಪನೆಗೊಂಡಿತ್ತು. ಆದರೆ ಶಂಕರ ಮಾತ್ರ ಅತ್ತ ಲಕ್ಷವೀಯದೆ ಕೇವಲ ಶಾಲೆ - ಶೋಕಿಗಳತ್ತಲೇ ವಾಲುತ್ತಿರುವುದು ಬಂಗಾರಿಯ ಮನಸ್ಸನ್ನು ಈಗೀಗ ಹಿಂಡುತ್ತಿತ್ತು. ಆದರೂ ಅಜ್ಜ - ಅಜ್ಜಿಯರ ಶ್ರೀರಕ್ಷೆ ಅವಳ ಮೇಲಿದ್ದುದರಿಂದ ಹೆಚ್ಚು ಆ ಬಗ್ಗೆ ತಲೆಕೆಡಿಸಿಕೊಳ್ಳದೆ ತಾನಾಯಿತು ತನ್ನ ಹೊಲವಾಯಿತೆಂದು ಪ್ರಕೃತಿಮಾತೆಯ ಮಡಿಲಲ್ಲಿ ಅರಳುತ್ತಿರುವ ಕುಸುಮದಂತಿದ್ದಳು ಬಂಗಾರಿ.

ಎಸ್. ಎಸ್. ಸಿ. ಪರೀಕ್ಷೆ ಬೆಳಗಾವಿ ಕೇಂದ್ರದಲ್ಲಿ ನಡೆಯುತ್ತಿದ್ದುದರಿಂದ ಹಾಲೂರಿನ ಅನೇಕ ವಿದ್ಯಾರ್ಥಿಗಳು ಪರೀಕ್ಷೆಗೆ ಮುಂಚೆಯೇ ಅಲ್ಲಿಗೆ ಹೋಗಿ ಅಭ್ಯಾಸದಲ್ಲಿ ತೊಡಗುತ್ತಿದ್ದರು. ಲತಾ ಬೆಳಗಾವಿಗೆ ಹೋದ ಸುದ್ದಿ ಶಂಕರನನ್ನು ಘಾಸಿಗೊಳಿಸಿತ್ತು. ತಾನೂ ಬೆಳಗಾವಿಗೆ ಅಭ್ಯಾಸಕ್ಕಾಗಿ ಹೋಗುವೆನೆಂದು ಶಂಕರ ಹಟಹಿಡಿದ. ಅದರಲ್ಲಿ ಯಶಸ್ವಿಯೂ ಆದ. ಕಾಂತು ಬೆಳಗಾವಿಯಲ್ಲಿದ್ದ ಶಂಕರನ ಪರಿಚಿತ ಸ್ನೇಹಿತ. ಶಂಕರ ನೇರವಾಗಿ ಅವನ ರೂಮಿಗೆ ಹೋದ. ಕಾಂತನೂ ಎಸ್. ಎಸ್. ಸಿ. ಪರೀಕ್ಷೆಯ ತಯಾರಿ ನಡೆಸಿದವ. ' ಬಸೂನ ' ಮಾಹಿತಿಯಂತೆ ಲತೆಯನ್ನು ಹುಡುಕಿ ತೆಗೆದ ಶಂಕರ ಅವಳನ್ನು ಹಿಂಬಾಲಿಸತೊಡಗಿದ. ' ರಾಮೇಶ್ವರಕ್ಕೆ ಹೋದರೂ ಶನೀಶ್ವರನ ಕಾಟ ಬಿಡಲಿಲ್ಲ' ವೆಂಬಂತೆ ಲತಾ ಹೊಸಲು ದಾಟಿದರೆ ಶನಿಯ ಕಾಟವೆಂದು ತೆಪ್ಪಗೆ ಮನೆಯಲ್ಲಿಯೇ ಇದ್ದು ಇನ್ನಷ್ಟು ತನ್ನ ಓದನ್ನು ಹೆಚ್ಚಿಸಿದಳು. ಆದರೆ ಒಂದು ದಿನ ಅಶೋಕನ ಒತ್ತಾಯಕ್ಕೆಂದು ಸಿನಿಮಾಕ್ಕೆ ಹೊರಟ ಲತಾ ಶಂಕರನ ಕಣ್ಣಿಗೆ ಬಿದ್ದದ್ದೇ ತಡ. ರತಿದೇವಿಯೇ ಕರುಣಿಸಿ ಕಾಮನತ್ತ ಬರುವಂತೆ ಪ್ರೇಮ ಕೃಪಾಶೀರ್ವಾದದಿಂದ ಲತೆ ತನ್ನೆಡೆ ಹರಿದು ಬರುವಳೆಂದು ಭಾವಿಸಿದ ಶಂಕರ. " ಲತಾ ರೂಮಿಗೆ ಬಾ ....! ಮಾತನಾಡುವುದು ಅದೆ " [೨೦] ಎಂದೆನ್ನುತ್ತ ಅವಳನ್ನು

---

೧೮. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೧೮

೧೯. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೩೮

೨೦. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೬೨

ಬಿಗಿಯಾಗಿ ಹಿಡಿದೆಳೆಯ ಹತ್ತಿದಾಗ. ವಿಧಿಯಿಲ್ಲದೆ ಲತಾ ಚಪ್ಪಲಿಪೂಜೆ ಮಾಡಬೇಕಾಯಿತು. ಅಶೋಕನೂ ಒಂದೆರಡು ಬಿಗಿದಿದ್ದ. ನಡುರಸ್ತೆಯಲ್ಲಿ ಶಂಕರನಿಗಾದ ಅವಮಾನ ಹೇಳತೀರದು. ಹುಚ್ಚನಂತೆ ಅಪಮಾನ - ರೋಷ - ಆವೇಶದಿಂದ ಅಲೆಯುತ್ತಿದ್ದ ಶಂಕರನಿಗೆ ಸಹಜವಾಗಿ ' ಕೆಂಪುದೀಪ ' ಆಕರ್ಷಿಸಿತು. ಬೆಲೆವೆಣ್ಣಿನ ರುಚಿಯುಂಡ ಶಂಕರ ಮತ್ತಷ್ಟು ವ್ಯಗ್ರನಾದ; ಅತೃಪ್ತಿಯ ಹೊಗೆಯಾಡಲಾರಂಭಿಸಿತು. ಲತೆಯನ್ನು ಹೊಸಕಿಹಾಕಬೇಕೆಂದು ದೃಢನಿರ್ಧರಿಸುವುದರಲ್ಲಿಯೇ ಲಿಲ್ಲಿ ಶಂಕರನ ಕೋಣೆ ಪ್ರವೇಶಿಸಿದಳು. ಲಿಲ್ಲಿ ಕಾಂತನ ಅಕ್ಕ ಮಿರಜದಲ್ಲಿ ನರ್ಸಳಾಗಿದ್ದಳು. ತಮ್ಮನ ಪರೀಕ್ಷೆಯ ನಿಮಿತ್ತ ಬಂದವಳು. ಶಂಕರನ ಪರಿಚಯವಾಗಿ. ಅವನೊಂದಿಗೆ ನಿರ್ಭಿಡೆ - ನಿಸ್ಸಂಕೋಚದಿಂದ ಮಾತನಾಡಿಸಲು ಪ್ರಾರಂಭಿಸಿದ್ದು. ಶಂಕರನಿಗೆ ಬೇರೆಯೇ ಹೊಳೆಯಲು ಪ್ರಾರಂಭವಾಯಿತು. ಕೋಪ - ತಾಪ - ಉದ್ರೇಕ - ಅಪಮಾನ - ಈರ್ಷ್ಯೆಗಳಲ್ಲಿಯೇ ಮುಳುಗೇಳುತ್ತಿದ್ದ ಶಂಕರ ಪರೀಕ್ಷೆಗೆ ಕೂಡಲೇ ಇಲ್ಲ. ಲಿಲ್ಲಿಯ ಸವಿಮಾತುಗಳು. ಸ್ನೇಹದ ಸಲಿಗೆ. ಅನುಕಂಪ. ಆದರ. ಪ್ರೀತಿಗಳು. ಶಂಕರ ಲಿಲ್ಲಿಯನ್ನು ಬಯಸುವಂತೆ ಮಾಡಿದವು. ಲತೆಯ ಮೇಲಿನ ಈರ್ಷೆ ಲಿಲ್ಲಿಯ ಮೇಲೆ ಪ್ರೀತಿಯಾಗಿ ಮಾರ್ಪಟ್ಟಿತು. ಅವಳಿಗೆ ತನ್ನ ಭಾವನೆಗಳನ್ನು ಹೇಳಲು ತನ್ನ ಪ್ರೀತಿಯನ್ನು ಲಿಲ್ಲಿಗೆ ಹೇಳಿ ಅವಳಿಂದ ' ಹಸಿರುನಿಶಾನೆ ' ಪಡೆಯಬೇಕೆಂದು ಹವಣಿಕೆ ಹಾಕುತ್ತ ಕುಳಿತ ಶಂಕರನಿಗೆ ಬಾಗೇವಾಡಿ ಮಾಸ್ತರು ಬಂದುದು ತುತ್ತಿನಲ್ಲಿ ಕಲ್ಲು ಸಿಕ್ಕಂತಾಗಿತ್ತು. ಪರೀಕ್ಷೆಗೆ ಕೂಡದ ಶಂಕರನನ್ನು ಉಪಾಯವಾಗಿ ಹಾಲೂರಿನ ಹಾದಿ ಹಿಡಿಸುವಲ್ಲಿ ಯಶಸ್ವಿಯಾದರು ಮಾಸ್ತರರು.

ಶಂಕರ ಬೆಳಗಾವಿಯಲ್ಲಿದ್ದಾಗಲೇ ಹಾಲೂರಿನಲ್ಲಿ ಮದುವೆಯ ತಯಾರಿ ಜೋರಾಗಿ ನಡೆದಿತ್ತು. ವಸ್ತ್ರ. ಒಡವೆ. ಆಭರಣ. ಸೀರೆ ಇತ್ಯಾದಿಗಳಿಗಾಗಿ ಧಾರಾಳವಾಗಿ ಖರ್ಚು ಮಾಡುತ್ತಿದ್ದ ಶಿವನಗೌಡರಿಗೆ ಮಗ ಶಂಕರನ ಮೇಲಿನ ಪ್ರೀತಿಗಿಂತ ಮೊಮ್ಮಗಳು ಬಂಗಾರಿಯ ಮೇಲಿನ ಅಕ್ಕರೆಯೇ ಹೆಚ್ಚಾಗಿತ್ತು. ಶಂಕರನಿಗೆ ಬಂಗಾರಿ ಇಷ್ಟವಿಲ್ಲ; ಆದರೆ ಬಂಗಾರಿಗೆ ಶಂಕರನೆ ದೈವ. ಅವನಿಗೋಸ್ಕರ ವ್ರತ - ಪೂಜೆಗಳನ್ನು ಮಾಡುವುದಷ್ಟೇ ಅಲ್ಲ. ತನ್ನ ಪ್ರಾಣವನ್ನೂ ಕೊಡಲು ಸಿದ್ಧಳಿದ್ದಳು. ಶಂಕರ ಹ್ಯಾಗಾದರೂ ಮಾಡಿ ಈ ಮದುವೆಯನ್ನು ತಪ್ಪಿಸಲೇಬೇಕೆಂದು ತಂದೆಯನ್ನು ವಿರೋಧಿಸಿಯೂ ರಾತ್ರೋ ರಾತ್ರಿ ಬೆಳಗಾವಿ ಲಿಲ್ಲಿಗಾಗಿ ರೈಲು ಹಿಡಿದರೆ. ಅವಳು ಅಲ್ಲಿರಲಿಲ್ಲ. ಜೇಬೂ ಖಾಲಿ - ಹೊಟ್ಟೆಯೂ ಖಾಲಿಯಾಗಿದ್ದ ಶಂಕರ ಟಿಕೇಟಿಲ್ಲದೆ ಬರ್ಥನಲ್ಲಿ ಕೂತು ಟಿಕೇಟ್ ಚಕ್ಕರ್‌ನ ಕೈಯಲ್ಲಿ ಸಿಕ್ಕಿಹಾಕಿಕೊಂಡಾಗ ಅದೇ ಲತೆ - ಅಶೋಕರೇ ಕಾಪಾಡಬೇಕಾಯಿತು. ಲತಾ - ಅಶೋಕರ ಅನುಕಂಪ - ಪ್ರೀತಿ - ಆದರ ಸಹಾಯಗಳನ್ನು ಕಣ್ಣಾರೆ ಕಂಡ ಶಂಕರ ತನ್ನಲ್ಲಿದ್ದ ಈರ್ಷೆಯನ್ನೆಲ್ಲ ಮರೆತು. ಕುಡಚಿ ಬಂದಾಗ ಅವರಿಬ್ಬರಿಗೂ ಕೈಮುಗಿದು ಬೀಳ್ಕೊಂಡು ತಾನು ಮಾತ್ರ ಮಿರಜದತ್ತ ಪ್ರಯಾಣಿಸಿದ. ಹುಚ್ಚನಂತೆ ಓಡೋಡುತ್ತ ತನ್ನೆದುರು ಬಂದು ನಿಂತ ಶಂಕರನನ್ನು ಕಂಡು ಲಿಲ್ಲಿ ದಂಗಾಗಿ ಹೋದರೂ ಸಾವರಿಸಿಕೊಂಡು ಕ್ವಾರ್ಟರ್ಸಿಗೆ ಕರೆದುಕೊಂಡು ಹೋಗುತ್ತಾಳೆ. ಒಂದೇ ಉಸಿರಿನಲ್ಲಿ ತಾನು ಮನೆ ಬಿಟ್ಟು ಬಂದುದನ್ನು. ಅವಳನ್ನೇ ಮದುವೆಯಾಗುವುದಾಗಿಯೂ. ಬೇಕಾದರೆ ಅವಳಿಗೋಸ್ಕರ ಧರ್ಮವನ್ನೂ ಬಿಡಬಲ್ಲೆನೆಂದೂ ಶಂಕರ ಹೇಳಿ ಮುಗಿಸಿದ್ದ. ಎಲ್ಲವನ್ನು ಶಾಂತವಾಗಿ ಮೊದಲು ಕೇಳಿಕೊಂಡ ಲಿಲ್ಲಿ ಅವನನ್ನು ಒಂದೆಡೆ ಕೂಡಿಸಿ ತನ್ನ ಅಭಿಪ್ರಾಯವನ್ನು ತಿಳಿಸುತ್ತ ಹೊರಟಳು.

ಅತ್ತ ಮಿರಜದಲ್ಲಿ ಲಿಲ್ಲಿಯೆದುರು ಶಂಕರ ಉಪದೇಶ ಕೇಳುತ್ತ ಕುಳಿತಂತೆ. ಇತ್ತ ಮಗನನ್ನು ಕಳೆದುಕೊಂಡು ಸಿಟ್ಟಿನಿಂದ ಉರಿಯುತ್ತಿರುವ ಶಿವನಗೌಡರು. ಪಶ್ಚಾತ್ತಾಪದಿಂದ ಕುದಿಯುತ್ತಿದ್ದರು. ಹಾಕಿದ ಹಂದರವನ್ನು ಹಾಗೇ ತೆಗೆಯಲು ಇಷ್ಟಪಡದ ಶಿವನಗೌಡರು ಸಿಂಗನಿಗೇ ಬಂಗಾರಿಯನ್ನು ಕೊಟ್ಟು ಮದುವೆ ಮಾಡಲು ನಿರ್ಧರಿಸಿದ್ದು. ಎಲ್ಲರಿಗೂ ಆಶ್ಚರ್ಯ ತಂದಿತ್ತು. ಆದರೆ ಗೌಡರನ್ನು ಎದುರು ಹಾಕಿಕೊಳ್ಳದ ಆಸಂಗಿಯ ಬೀಗರಾಗಲಿ. ನೆಂಟರಾಗಲಿ. ಊರವರಾಗಲಿ. ಯಾರೂ ಪ್ರತಿರೋಧಿಸದೆ ಬಿಟ್ಟ ಕಣ್ಣು ಬಿಟ್ಟಂತೆ ನೋಡುತ್ತ ನಿಂತರಷ್ಟೇ.

" ನೀವು ನನ್ನನ್ನು ಬಯಸಿದ್ದು ಯಾಕೆ ? ನನ್ನ ವೇಷ ಅಲ್ಲವೆ ? ನನ್ನ ರೂಪಕ್ಕಿಂತ ನನ್ನ ವೇಷವೇ ಕಾರಣ. ನೀವು ಬಂಗಾರಿಯನ್ನೇಕೆ ಸೇರಲಿಲ್ಲ. ಅದೂ ವೇಷ ಕಾರಣ. ಬಂಗಾರಿಯನ್ನು ತಂದು ಆಕೆಯನ್ನು ಆಧುನಿಕ ರೀತಿಯಲ್ಲಿ ಅಲಂಕರಿಸಿದರೆ. ಉಳಿದವರಿಗಿಂತ ಸುಂದರಿಯಾಗುವಳು. ನನ್ನನ್ನೂ ಮರೆಯುವಿರಿ. ಅಹುದಲ್ಲವೆ ? ಮತ್ತೊಂದು. ಕಾಮಣಿಯಾದದ್ದು ನಿಮಗೆ. ಉಳಿದವರಿಗೇಕೆ ಜಗ ಹಸಿರು ಕಾಣಬೇಕು ? ಇದಲ್ಲದೆ ನನ್ನ ನಡವಳಿಕೆ ನಿಮಗೆ ತಪ್ಪು ಕಲ್ಪನೆ ಮಾಡಿಕೊಟ್ಟಿರಬಹುದು. ಯಾಕೆಂದರೆ. ನೀವು ಇನ್ನೂ ಪೂರ್ಣ ಸುಧಾರಿಸಿದವರಲ್ಲ. ಸುಸಂಸ್ಕೃತರೂ. ಅಲ್ಲ. ಒಬ್ಬ ಹೆಣ್ಣುಮಗಳು ಗಂಡಸಿನ ಕೂಡ ಬಿಚ್ಚು ಮನಸ್ಸಿನಿಂದ ವರ್ತಿಸಿದರೆ ಬೇರೆಯೇ ಭಾವಿಸಬೇಕೆ ? ಕಣ್ಣೆತ್ತಿ ಕಂಡರೆ ಆಕೆ ಕರೆದಳೆಂದೇ ಕಲ್ಪಿಸಬೇಕೆ ? ಆಕೆ ನಕ್ಕರೆ ಪ್ರೀತಿಸಿದಳೆಂದೂ. ಕಣ್ಣು ಕೆಂಪಗೆ ಮಾಡಿದರೆ ದ್ವೇಷಿಸಿದಳೆಂದೂ ತಿಳಿಯುತ್ತಿರುವ ನಿಮ್ಮ ಸುಧಾರಣೆ ಬಿಳಿ ಅರಿವೆ ತೊಟ್ಟರೆ ಬಂದಂತಾಗಲಿಲ್ಲ "[೨೧] ಎಂದು ಹೇಳುತ್ತಾ. ತನಗೆ ಎಂಗೇಜಮೆಂಟ್ ಆದುದನ್ನೂ. ಧರ್ಮದ ಒಳತಿರುಳನ್ನೂ. ಬಂಗಾರಿಯ ಮನಸ್ಸನ್ನೂ ಬಿಚ್ಚಿಬಿಚ್ಚಿ ಲಿಲ್ಲಿ ಹೇಳುತ್ತಾ ಹೋದಂತೆ ಶಂಕರನ ಕಣ್ಣು ತೆರೆಯಿತು. ಬಂಗಾರಿ ದಂತದ ಗೊಂಬೆಯೆಂದರಿತ. ಭ್ರಮೆಯ ಬೆನ್ನು ಹತ್ತಿ ಬದುಕನ್ನೇ ನಿರ್ನಾಮ ಮಾಡಿಕೊಳ್ಳುತ್ತಿದ್ದೇನೆಂದೂ ಅರಿತುಕೊಂಡ. ಹಿಂದೆ ಹಾಲಿವುಡ್ ನಟಿಯಂತೆ ಕಂಡ ಲಿಲ್ಲಿ ಇಂದು ಕಣ್ಣು ಕೊಟ್ಟ ವೈದ್ಯಳಾಗಿದ್ದಳು. ಕಣ್ಣು ತೆರೆಸಿದ ದೇವತೆಯಾಗಿದ್ದಳು. ತಕ್ಷಣ ಎದ್ದು ಲಿಲ್ಲಿಯ ಪಾದ ಮುಟ್ಟಿ ನಮಸ್ಕರಿಸಿದ ಶಂಕರ. ಬಂಗಾರಿಗಾಗಿ ಹಂಬಲಿಸುತ್ತ ಹಾಲೂರ ದಾರಿ ಹಿಡಿದ. ಕುಡಚಿ ಸ್ಟೇಶನ್‌ದಲ್ಲಿ ಇಳಿದವನೇ. ಒಂದೇ ಉಸಿರಿನಲ್ಲಿ ಓಡುತ್ತಿದ್ದ ಶಂಕರನಿಗೆ. ' ಖೋಡಿ. ಕೊಲೆಗಡುಕ. ಕಟುಕ. ಹುಚ್ಚ. ಪಾಪಿ ' ಎಂಬೆಲ್ಲ ಅಕ್ಕಪಕ್ಕದವರ ಮಾತುಗಳ್ಯಾವೂ ಕಿವಿಗೆ ಕೇಳುತ್ತಿರಲಿಲ್ಲ; ಹಾಗೇ ಓಡುತ್ತಿದ್ದ. " ಶಂಕರನ ಮುಳ್ಳು ಮನಸ್ಸು ಪರಿವರ್ತನೆ ಹೊಂದಿ ದುಂಬಿಯಾಗಿ ಬಂಗಾರಿಯ ಮಲ್ಲಿಗೆಯ ಮನಸ್ಸನ್ನು ಸ್ವಾದಿಸಬೇಕೆಂದಿತ್ತು....! "[೨೨] ಆದರೇನು ಕಾಲ ಮೀರಿ ಹೋಗಿತ್ತು. ಬಂಗಾರಿಗೆ. ತನ್ನ ಆರಾಧ್ಯ ದೈವ ಶಂಕರ ದಕ್ಕದಾದಾಗ. ಆ ನೋವು ತಾಳದೆ ಏಕನಿಷ್ಠೆಯ ಆ ಸಾಧ್ವಿ ಕೃಷ್ಣೆಯಲ್ಲಿ ಹಾರಿ ತನ್ನ ಪ್ರಾಣಬಿಟ್ಟಿದ್ದಳು: ಕಾದಂಬರಿ ದುಃಖಾಂತವಾಗುತ್ತದೆ.

' ಮುಳ್ಳು ಮತ್ತು ಮಲ್ಲಿಗೆ ' ಅರ್ಥಪೂರ್ಣ ಶೀರ್ಷಿಕೆಯ ಇದೊಂದು ಪ್ರಣಯ ಚಿತ್ರ. " ಯೌವ್ವನಾವಸ್ಥೆಯ ಹೊಸ್ತಿಲಲ್ಲಿ ಕಾಲಿಟ್ಟ ' ಹುಡುಗರ ' ಪ್ರಣಯವೆಂಥದು ? ಎಲ್ಲರಿಗೆ ಕಾಣಬರುವ ಪ್ರಶ್ನೆಯಾದರೂ ಅದು

---

೨೧. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೧೫೯

೨೨. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೧೬೪

ಅಸಂಭವನೀಯವಲ್ಲ. ' ಪ್ರೇಮ '. ' ಪ್ರಯಣ ' ಗಳ ಪೂರ್ತಿ ಭಾವನೆಯಿಲ್ಲದಿದ್ದರೂ. ಆ ವಯಸ್ಸಿನ ದೈಹಿಕ - ಮಾನಸಿಕ ಬೆಳವಣಿಗೆಯಲ್ಲಿ ಒಂದು ತರಹ ಕಾಮಾಕರ್ಷಣೆ ತಲೆ ತಿನ್ನುತ್ತಿರುವಾಗ ಅದನ್ನೇ ಪ್ರೇಮವೆಂದು ಕರೆದು. ತಮ್ಮ ಭಾವೀ ಜೀವನವನ್ನು ಹಾಳುಮಾಡಿಕೊಳ್ಳುತ್ತಿರುವ ಯುವಕ ಯುವತಿಯರು ನಮಗೆ ಕಾಣದವರೆಷ್ಟು ಜನರಿದ್ದಾರೆ ? "[೨೩] ಲೇಖಕರ ಈ ಪ್ರಶ್ನೆಗೆ. ಉತ್ತರವಾದುದೇ ಈ ಕಾದಂಬರಿ. ಹಳ್ಳಿ - ಪಟ್ಟಣಗಳೆರಡರ ಮಧ್ಯದಲ್ಲಿಯೂ ಹಬ್ಬಿನಿಂತ ಕಥಾಹಂದರ. ಹೆಚ್ಚಾಗಿ ಸೊಗಸು - ಸೊಬಗು ಕಂಡದ್ದು ಹಳ್ಳಿಯಲ್ಲಿಯೇ.

ಬೆಳಗಲಿಯವರ ಬರವಣಿಗೆಯ ಪಕ್ವತೆ ಎದ್ದು ಕಾಣುವುದು ಬಂಗಾರಿಯ ಪಾತ್ರಚಿತ್ರಣದಲ್ಲಿ. ಅವಳ ಆಸೆ - ಆಕಾಂಕ್ಷೆ. ನಡೆನುಡಿ. ಮಾತು - ಮೌನ. ಹಾಡು - ಪಾಡು. ಚಲನವಲನ. ಕೆಲಸ - ಕಾರ್ಯ. ಅಜ್ಜ - ಅಜ್ಜಿಯರೊಂದಿಗಿನ ಮಮತೆ. ತಾಯಿಯಲ್ಲಿನ ಅಕ್ಕರೆ ಎಲ್ಲಕ್ಕಿಂತ ಹೆಚ್ಚಾಗಿ ಶಂಕರನನ್ನು ಆರಾಧ್ಯದೈವವಾಗಿ ಪೂಜಿಸುವ ರೀತಿ. ಅವಳ ವ್ಯಕ್ತಿತ್ವವನ್ನು ಹೆಸರಿಗೆ ತಕ್ಕಂತೆ ಬಂಗಾರಿ ಬಂಗಾರವೇ ಎಂಬಂತೆ ಚಿತ್ರಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಹುಲುಸಾಗಿ ಬೆಳೆದ ಜೋಳದ ಬೆಳೆಯ ಮಧ್ಯ ಅಟ್ಟದ ಮೇಲೆ ನಿಂತು ಪಕ್ಕಿ ಕಾಯುವ ಬಂಗಾರಿಯ ಚಿತ್ರಣವಂತೂ ಕಣ್ಣಿಗೆ ಕಟ್ಟಿದಂತಿದೆ. ಮಾವಿನ ಮರದಡಿ ಕೂತು ಕಲ್ಪನೆಯಲ್ಲಿಯೇ ತನ್ನನಿಯನಾದ ಶಂಕರನೊಂದಿಗೆ ನಡೆಸಿದ ಸಂಭಾಷಣೆಯಂತೂ ಅದ್ಭುತವಾದುದೇ. ಬೆಳಗಲಿಯವರ ಕೈಯಲ್ಲಿ ಬಂಗಾರಿ ' ನಿಸರ್ಗ ದೇವಿ 'ಯಂತೆ ಚಿತ್ರಣಗೊಂಡಿದ್ದಾಳೆ. ಗ್ರಾಮೀಣ ಬದುಕಿನ ನೇರಸಂಪರ್ಕದಲ್ಲಿರುವ ಬೆಳಗಲಿಯವರಿಗೆ ಹಳ್ಳಿಯ ಹೆಣ್ಣುಮಕ್ಕಳ ಬದುಕನ್ನು ಚಿತ್ರಿಸುವದೆಂದರೆ ಎಲ್ಲಿಲ್ಲದ ಖುಷಿ. ಅವರ ಅಭಿವ್ಯಕ್ತಿ ಅಕೃತಕವಾಗಿ ಸಾಗುವುದು ಇಲ್ಲಿಯೇ.

ಸ್ವತಃ ಶಿಕ್ಷಕರಾದ ಬೆಳಗಲಿಯವರಿಗೆ ಶೈಕ್ಷಣಿಕ ಸಮಸ್ಯೆಗಳ ಮೇಲೆ ಸದಾ ಕಣ್ಣು. ಅದು ವಿದ್ಯಾರ್ಥಿಯದಿರಲಿ. ಶಿಕ್ಷಕನದಿರಲಿ. ಅದನ್ನು ಹೊರಗೆಳೆದಾಗಲೇ ಅವರಿಗೆ ಸಮಾಧಾನ. ನಮ್ಮ ಶಿಕ್ಷಣ ಪ್ರೌಢಶಾಲಾ ಹಂತದಲ್ಲಿಯೇ ಕುಸಿಯುತ್ತಿರುವುದು. ಹಸಿಬಿಸಿ ಮನಸ್ಸಿನ ಕುಡಿಮೀಸೆಯ ತುಂಟ ಎಸ್. ಎಸ್. ಸಿ.ವಿದ್ಯಾರ್ಥಿಗಳಲ್ಲಿನ ಸಹಜ ಸ್ವಾಭಾವಿಕ ಮನೋವ್ಯಾಪಾರಗಳನ್ನು ಚಿತ್ರಿಸುವಲ್ಲಿ ಬೆಳಗಲಿಯವರು ಸಫಲರಾಗಿದ್ದಾರೆ. ಶಂಕರನ ' ಭ್ರಮಾಲೋಕ ' ವನ್ನು ಬಯಲಿಗೆಳೆದ ಲೇಖಕರು. ದೀಪದ ಬೆಳಕಿಗೆ ಆಕರ್ಷಣೆಗೊಂಡು. ಅದು ಬೆಂಕಿಯೆಂದರಿತೂ ಸುಟ್ಟುಕೊಂಡು ಸಾಯುವ ದೀಪದಹುಳುವಿನಂತೆ ಅನೇಕ ಪ್ರೌಢಶಾಲಾ ವಿದ್ಯಾರ್ಥಿಗಳು ಪ್ರೇಮಲೇಪನದ ಕಾಮದಲ್ಲಿ ಮುಳುಗಿ. ಅದೇ ಭ್ರಮೆಯಲ್ಲಿ ತಮ್ಮ ಬದುಕನ್ನು ತಾವೇ ನಿರ್ನಾಮ ಮಾಡಿಕೊಳ್ಳುತ್ತಿರುವುದನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಇಂಥವರಿಗೆಲ್ಲ ಶಂಕರನೇ ಪ್ರಾತಿನಿಧಿಕ ವ್ಯಕ್ತಿ. ಲತೆಯ ಮೌನವೇ ಪ್ರೀತಿಯೆಂದೂ. ಅವಳ ಕಣ್ಣೋಟವೇ ತನಗೆ ಆಹ್ವಾನವೆಂದೂ ಭ್ರಮಿಸಿದ ಶಂಕರನಿಗೆ ಅವಳ ಚಪ್ಪಲಿಯೇಟು ಅವನಲ್ಲಿ ಈರ್ಷ್ಯೆಯನ್ನು ಹುಟ್ಟುಹಾಕಿತು. ಈರ್ಷ್ಯೆಯಲ್ಲಿ ಕುದಿಯುತ್ತಿದ್ದವನಿಗೆ ಲಿಲ್ಲಿಯ ಸಲಿಗೆಯ ನಡುವಳಿಕೆಯನ್ನು ಕಂಡಾಗ ಆ ಈರ್ಷ್ಯೆ ಇಲ್ಲಿ ಪ್ರೇಮವಾಗಿ

---

೨೩. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ ಮುನ್ನುಡಿಯಲ್ಲಿ ಹೇಳಿದ್ದು

ಮಾರ್ಪಟ್ಟಿತು. ಈ ಈರ್ಷ್ಯೆ - ಪ್ರೇಮ - ಕಾಮಗಳ ತ್ರಿವೇಣಿ ಸಂಗಮದಲ್ಲಿ ಬಿದ್ದ ಶಂಕರ ಮೇಲೆದ್ದು ಬರಲಾರದ್ದೂ ಅವನ ಬದುಕಿನ ದುರಂತರವೆಂದೇ ಹೇಳಬೇಕು. ಆದರೆ ಏನೂ ಅರಿಯದ ಮುಗ್ಧೆ ಬಂಗಾರಿಯನ್ನು ಬಲಿತೆಗೆದುಕೊಂಡದ್ದು ಮಾತ್ರ ಅಕ್ಷಮ್ಯ ಅಪರಾಧ.

ಬಂಗಾರಿಯ ಪಾತ್ರಚಿತ್ರಣದಲ್ಲಿ. ನಿಸರ್ಗಬಣ್ಣನೆಯಲ್ಲಿ. ಹಾಗೂ ಲಿಲ್ಲಿಯ ಹಿತೋಪದೇಶ ಪ್ರಸಂಗದಲ್ಲಿ ಕಾದಂಬರಿ. ಬೆಳಗಲಿಯವರ ಪ್ರಥಮ ಕಾದಂಬರಿಯಾದರೂ. ಗಟ್ಟಿಗೊಂಡಿದೆ. ಲಿಲ್ಲಿ ಕಾದಂಬರಿಯ ಪ್ರವೇಶದಲ್ಲಿ ಒಬ್ಬ ಶೋಕಿ ಹೆಣ್ಣಿನಂತೆ ಕಂಡುಬಂದರೆ. ಅಂತ್ಯದಲ್ಲಿ ಒಬ್ಬ ಧರ್ಮೋಪದೇಶ ಮಾಡುತ್ತಿರುವ ಕ್ರೈಸ್ತ ಸಂನ್ಯಾಸಿಯಂತೆ ಕಂಡುಬರುತ್ತಾಳೆ. " ಸುಧಾರಿಸಿದ ವಸ್ತ್ರದಲ್ಲಿ ಸಂಸ್ಕೃತಿಯಿಲ್ಲ. ಇಂದು ನಮ್ಮಲ್ಲಿ ನಾನಾ ತರದ ಸಂಸ್ಕೃತಿ ಸಮ್ಮಿಲಿತವಾಗಿ ಮೂಲಸಂಸ್ಕೃತಿಯನ್ನೇ ಹಾಳುಗೆಡಿಸಿವೆ. ಆಚಾರವಿಲ್ಲ: ವಿಚಾರವಿಲ್ಲ: ಧರ್ಮವಿಲ್ಲ: ನಡೆಯಿಲ್ಲ: ನುಡಿಯಿಲ್ಲ: ಎಲ್ಲವೂ ವಿಶುದ್ಧ "[೩೪] ವೆಂದೆನ್ನುತ್ತಾ ಲಿಲ್ಲಿ. " ಒಂದು ಹೆಣ್ಣಿಗಾಗಿ ಪ್ರಾಣಕ್ಕಿಂತ ಪ್ರಿಯವಾದ ಧರ್ಮ ಬಿಡಬೇಕೆ ? ಸಾವಿರ ಹೆಣ್ಣು ಸಿಗಬಹುದು ಶಂಕರ. ನಚ್ಚಿನ ಧರ್ಮ ಸಿಗಲಾರದು.... ತಿರುಗಿ ಮನೆಗೆ ಹೋಗಿರಿ. ತಂದೆ - ತಾಯಿಗಳ ಕಾಲಿಗೆ ಬಿದ್ದು ಕ್ಷಮೆ ಬೇಡಿರಿ. ಅವರೂ ಕ್ಷಮಿಸಿಬಿಡುವರು. ಏನಾದರೂ ನೀವು ಅವರ ಮಗನಲ್ಲವೆ ? ನನ್ನ ದುರ್ದೈವ ! ನಾನು ತಾಯಿ - ತಂದೆಗಳ ಸುಖವನ್ನೇ ಕಾಣಲಿಲ್ಲ. ನೀವು ಇದ್ದೂ ಪಡೆಯದಾಗಿದ್ದೀರಿ: ನಿಮ್ಮ ದುರ್ದೈವ ! ಹೆಣ್ಣಿನ ಸಲುವಾಗಿ ತಂದೆ - ತಾಯಿ. ಮನೆ - ಮಾರು. ತ್ಯಾಗಮಾಡವುದೇ ? ಎಂಥ ತ್ಯಾಗ ? ನಾಡಿಗಾಗಿ ತ್ಯಾಗ ಮಾಡಿದರೆ ನಿಮ್ಮ ಜೀವನ ಸಾರ್ಥಕವಾಗಬಹುದು. ಹೆಜ್ಜೆ ಹೆಜ್ಜೆಗೆ ಹೆಣ್ಣು ಸಿಕ್ರೆ. ಶಂಕರ ಜನ್ಮದಲ್ಲಿ ತಂದೆ - ತಾಯಿ ಸಿಗುವುದು ಒಮ್ಮೆಯೇ "[೩೫] ಎಂದು ಧರ್ಮದೇವತೆಯಂತೆ. ಜ್ಞಾನದೇವತೆಯಂತೆ ಲಿಲ್ಲಿ ಶಂಕರನಿಗೆ ಹಿತೋಪದೇಶಿಸಿದ್ದು. ಚೆನ್ನಾಗಿ ನಾಟಿತ್ತು. ಎದ್ದು ಅವಳ ಪಾದಮುಟ್ಟಿ ನಮಸ್ಕರಿಸಿದ್ದರಲ್ಲಿಯೇ ಅವಳ ಉಪದೇಶದ ಪ್ರಭಾವದ ಆಳವನ್ನು ಅರಿಯಬಹುದು.

' ಹಿತ್ತಲ ಗಿಡ ಮದ್ದಲ್ಲ ' ವೆಂಬಂತೆ ಅಂಗೈಯಲ್ಲಿಯೇ ಆರಾಧಿಸುವ ಬಂಗಾರದಂಥ ಬಂಗಾರಿಯನ್ನು ಬಿಟ್ಟು. ವಿಫಲ ಪ್ರೇಮದ ಸೆಳವಿನಲ್ಲಿ ಸಿಕ್ಕು ತೊಳಲಿ - ಬಳಲಿ - ಬೆಂಡಾಗಿ - ಸೋತು ಸುಣ್ಣಾಗಿದ್ದ ಶಂಕರ ಹಾತೊರೆದು - ಹಂಬಲಿಸಿ ಬಂಗಾರಿಯನ್ನು ಕೂಡಲು ಬಂದರೆ. ಅವಳಾಗಲೇ ಕೃಷ್ಣೆಯ ಪಾಲಾದದ್ದು ಕಾದಂಬರಿಯ ಒಡಲಾಳದ ಧ್ವನಿ. ಮುಳ್ಳಿನಂಥ ಮನಸ್ಸಿನ ಶಂಕರ ಮಲ್ಲಿಗೆಯಂಥ ಮುಗ್ಧ. ಕೋಮಲ ಹೃದಯದ ಬಂಗಾರಿಯನ್ನು ಚುಚ್ಚಿ ಘಾಸಿಗೊಳಿಸಿದ್ದಲ್ಲದೆ. ಅವಳನ್ನು ಬಲಿತೆಗೆದುಕೊಂಡಿದ್ದ. " ಲೇಖಕರದು ಜೀವಂತ ಶೈಲಿ.... ಈ ಕಾದಂಬರಿ ಹರೆಯದವರಿಗೆ ಬುದ್ಧಿಪ್ರಚೋದಕವೂ. ಮಾರ್ಗದರ್ಶಕವೂ ಆಗಿದೆ.... ಬಂಗಾರಿ ಪಾತ್ರವನ್ನು ಸೃಷ್ಟಿಸಿದ ಕಾದಂಬರಿಕಾರರಿಗೆ ಓದುಗರು ಋಣಿಗಳು "[೩೬] ಎಂಬ ಮಾತು ತುಂಬ ಔಚಿತ್ಯಪೂರ್ಣವಾದುದು. ಕಾದಂಬರಿಕಾರರು.

---

೩೪. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೧೫೯

೩೫. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ. ಪುಟ ೧೬೧

೩೬. ' ಜೀವನ ' ದಲ್ಲಿನ ವಿಮರ್ಶೆ. ದೇವದಾಸಿಯ ೪೪೬ ನೇ ಪುಟದಿಂದ ತೆಗೆದುಕೊಂಡದ್ದು.

ಪ್ರಕೃತಿ ವರ್ಣನೆಯಲ್ಲಿ ಬೆಳೆಯ ವರ್ಣನೆಯಲ್ಲಿ. ಹೆಚ್ಚಿನ ಕಸುವನ್ನು ತುಂಬಿದ್ದಾರೆ: ಅಲ್ಲದೆ ಅನೇಕ ಜನಪದ ಹಾಡುಗಳನ್ನು ಬಳಸುವ ಮುಖಾಂತರ ಕೃತಿಗೆ ಹೆಚ್ಚಿನ 'ನೈಸರ್ಗಿಕ ಶಕ್ತಿ' ನೀಡಿ ಉತ್ತಮ ಅಭಿವ್ಯಕ್ತಿಯ ಜೀವಂತಶೈಲಿಯನ್ನೇ ಮೆರೆದಿದ್ದಾರೆ. ಪ್ರಸ್ತುತ ಕೃತಿ ಬೆಳಗಲಿಯವರ ಪ್ರಥಮ ಕಾದಂಬರಿಯಾದರೂ. ಇದೊಂದು ಉತ್ತಮ ಸಾಮಾಜಿಕ ಕಾದಂಬರಿಯಾಗಿದ್ದು. ಇಂದಿನ ವಿದ್ಯಾರ್ಥಿಜೀವನದ ಮೇಲೆ 'ಕ್ಷ' ಕಿರಣವಾದ ಕೃತಿ. ಶಂಕರ. ಬಂಗಾರಿ. ಲತಾ. ಲಿಲ್ಲಿ. ಬಾಗೇವಾಡಿ ಮಾಸ್ತರ. ಶಿವನಗೌಡ. ಹಳ್ಳಿಯ ಹತ್ತು ಹಲವು ಹೆಣ್ಣು ಮಕ್ಕಳು. ಈ ಎಲ್ಲರೂ ಜೀವಂತ ವ್ಯಕ್ತಿಗಳಾಗಿ ಇಲ್ಲಿ ನಮ್ಮ ಕಣ್ಣುಮುಂದೆ ನಿಲ್ಲುವರಲ್ಲದೆ. ಅವರಿಲ್ಲಿ ಸರಿಬೆರೆತು. ಕತೆ ಕಣ್ಣಿಗೆ ಕಟ್ಟಿದಂತೆ ಕಾಣುತ್ತಾರೆ. ಮುಗುದೆ ಮಲ್ಲಿಗೆಯ ಬಂಗಾರಿ ಬಗೆಗೆ ಯಾರ ಕರುಳು ಕಲುಕುವುದಿಲ್ಲ ? ಮುಳ್ಳಿನಂಥ ಶಂಕರನ ಬಗೆಗೆ ಯಾರ ಸಹಾನುಭೂತಿ ? ಎಂಥ ಹಿರಿಯ ಕ್ರೈಸ್ಥಳಾದ ಲಿಲ್ಲಿ ! ಈ ಮೂರು ಪಾತ್ರಗಳು ಬೆಳಗಲಿಯವರ ಕೈಯಲ್ಲಿ ಕಲಾತ್ಮಕವಾಗಿ ಅರಳಿನಿಂತಿವೆ. ಬಂಗಾರಿ. ಲತಾ. ಲಿಲ್ಲಿ ಇಂಥವರು ಸಿಗುವುದು ತೀರ ವಿರಳ. " ಉತ್ತಮವಾದ ಕಥಾನಿರೂಪಣೆ. ಸುಂದರವಾದ ಶೈಲಿ. ಇವುಗಳಿಂದ ಈ ಕಾದಂಬರಿಯು ಜನಮೆಚ್ಚುಗೆಯನ್ನು ಪಡೆಯಬಲ್ಲುದು. ಇದು ಲೇಖಕರ ಪ್ರಥಮ ಕಾದಂಬರಿಯಾದರೂ ಉತ್ತಮ ಕಾದಂಬರಿಗಳ ಸಾಲಿಗೆ ಸೇರುವುದರಲ್ಲಿ ಸಂದೇಹವಿಲ್ಲ " [೨೭]

ಇದಕ್ಕಿಂತ ಹಿಂದೆ ಎರಡು ಕಥಾಸಂಕಲನಗಳನ್ನು ಪ್ರಕಟಿಸಿ. ಆಗಲೇ ತಾವೊಬ್ಬ ಉತ್ತಮ ಕಥೆಗಾರರು ಎಂದು ನಿರೂಪಿಸಿದ ಬೆಳಗಲಿಯವರು. ಪ್ರಸ್ತುತ ಕೃತಿಯಲ್ಲಿ ತಮ್ಮ ಕಥಾಕೌಶಲ್ಯವನ್ನೇ ಮೆರೆದಿದ್ದಾರೆ. ಕಥೆಯಲ್ಲಿ ಪಳಗಿದ. " ಬೆಳಗಲಿಯವರ ಲೇಖನಿಯಿಂದ ರಚಿತವಾದ ಇದು. ಸುಂದರವಾದ ಶೈಲಿಯಲ್ಲಿ ಪಾತ್ರಗಳ ಚಿತ್ರ ಅಚ್ಚಳಿಯದೆ ನಮ್ಮೆದುರು ಅವರ ಕಥೆಗಳಂತೆಯೇ ಈ ಕಾದಂಬರಿಯೂ ಕೂಡ ನಾಡಿನ ಒಳ್ಳೆಯ ಕಾದಂಬರಿಗಳ ಸಾಲಿನಲ್ಲಿ ಸೇರುವುದರಲ್ಲಿ ಯಾವ ಸಂದೇಹವಿಲ್ಲ " [೨೮]. ಇಂದು ಪ್ರೇಮದ ಹೆಸರಿನ ಮುಸುಕಿನಲ್ಲಿ ಕಾಮವನ್ನೇ ಹೆಚ್ಚಾಗಿ ಕಾಣುತ್ತಿದ್ದೇವೆ. ಬಹಳಷ್ಟು ಜನ 'ಶಂಕರ' ನಂತಿದ್ದರೆ. ಬಂಗಾರಿಯಂಥ 'ಏಕನಿಷ್ಠ' ಮುಗುದೆಯರು ಅಪರೂಪ. ಅದೂ. ಕಂಡರೆ ಯಾವ ವಿಷಗಾಳಿ ಸೋಂಕದ ಮೂಲೆಯ ಹಳ್ಳಿಗಳಲ್ಲಿ ಮಾತ್ರ. ಸಾಮಾಜಿಕ ಸ್ವಾಸ್ಥ್ಯದ ಮೂಲಬೇರಾದ ಶಿಕ್ಷಣ ಕ್ಷೇತ್ರದ ಅರೆಕೊರೆಗಳನ್ನು. ವಿದ್ಯಾರ್ಥಿಗಳಲ್ಲಿ ಅಶಿಸ್ತು. ಅಜ್ಞಾನ. ಭ್ರಮೆಗಳನ್ನು ಚೆನ್ನಾಗಿ ಬಿಚ್ಚಿಡುವ ಪ್ರಸ್ತುತ ಕೃತಿ ಒಂದು ಉತ್ತಮ ಸಾಮಾಜಿಕ ಕಾದಂಬರಿಯಾಗಿದೆ. ಆದರೂ ಅಲ್ಲಲ್ಲಿ ಕೊರತೆಯ ಎಳೆಗಳು ಕಾಣದಿಲ್ಲ. ಆಧುನಿಕ ಕಾದಂಬರಿ ಪರಿಕರಗಳ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದ ಕಾದಂಬರಿಕಾರರ 'ಬಂಧ' ಕೆಲವೆಡೆಗಳಲ್ಲಿ ಸಡಿಲಾದಂತೆ ಕಂಡುಬರುತ್ತದೆ. ವಸ್ತುವನ್ನು ಇನ್ನಷ್ಟು ಶೈಕ್ಷಣಿಕ. ಸಾಮಾಜಿಕ ಪಾತಳಿಯಲ್ಲಿ ಶೋಧಿಸಬಹುದಾಗಿದ್ದರೂ ಹಾಗೆ ಮಾಡದಿರುವುದರಿಂದ ಕೃತಿಗೆ ಹೆಚ್ಚಿನ ಗಾಂಭೀರ್ಯ - ಪ್ರೌಢಿಮೆಯ ಕೊರತೆ ಎದ್ದು ಕಾಣುತ್ತದೆ. ಪ್ರಕೃತಿಯ ವರ್ಣನೆಯಲ್ಲಿ ಕಾಣುವ ಲೇಖಕರ ಮೊನಚು. ಪ್ರೌಢತೆ. ಪ್ರಖರತೆ ಮಿಕ್ಕೆಡೆಗಳಲ್ಲಿ ಸೋತಂತೆ

---

೨೭. 'ಯುಗಪುರುಷ' ಪತ್ರಿಕೆಯಲ್ಲಿಯ ವಿಮರ್ಶೆ. ದೇವದಾಸಿಯ ೪೪೬ ನೇ ಪುಟದಿಂದ

೨೮. ದು. ನಿಂ. ಬೆಳಗಲಿ : ಮುಳ್ಳು ಮತ್ತು ಮಲ್ಲಿಗೆ : ಬೆನ್ನುಡಿ

ಕಾಣುತ್ತದೆ. ಅಲ್ಲಿ ಅನೇಕ ಸಂಕೇತ - ಪ್ರತಿಮೆಗಳ ಮುಖಾಂತರ ಕೃತಿಗೆ ಜೀವಂತಿಕೆ - ಶ್ರೀಮಂತಿಕೆ ತುಂಬಿದ ಲೇಖಕರು ಉಳಿದ ವಿವರಣೆಗಳಲ್ಲಿ ಹೆಚ್ಚಿನ ಗಾಂಭೀರ್ಯ ತುಂಬದೆ. ಕೇವಲ ಕಥಾನಿರೂಪಣೆಯಲ್ಲಿಯೇ ಸಾಗಿದ್ದಾರೆ. ಅಂಥ ಹೇಳಿಕೊಳ್ಳಬಹುದಾದ ನಾವೀನ್ಯ ತಂತ್ರಗಾರಿಕೆಯೇನು ಇಲ್ಲವಾದರೂ. ಉತ್ತಮವಾದ ಶೈಲಿಯನ್ನು ಮಾತ್ರ ತರುವುದರ ಮುಖಾಂತರ " ಈ ಕಾದಂಬರಿ ಯುಗದಲ್ಲಿ ಇವರಿಗೂ ಒಂದು ಸ್ಥಾನವಿದೆ ಎಂದು ಧಾರಾಳವಾಗಿ ಹೇಳಬಹುದು " [೨೯] ಎಂಬುದನ್ನು ಸಾಬೀತುಪಡಿಸಿದ್ದಾರೆ.

' ತಿರುಗಣೆ ಮಡು ' ವಿನಲ್ಲಿಯ ಚಂಚಲೆಯ ಪಾತ್ರವನ್ನೇ ಹೋಲುವ ಶಂಕರನ ಪಾತ್ರವನ್ನು ಲೇಖಕರು ಒಬ್ಬ ಪ್ರತಿನಿಧಿಯಾಗಿರಿಸಿಕೊಂಡು. ಪಟ್ಟಣದ ವ್ಯಾಮೋಹಕ್ಕೆ. ಅಲ್ಲಿನ ಥಳಕು ಬಳುಕು. ರಂಗುರಂಗಿನ - ರಂಜನೀಯ ಬದುಕಿಗೆ ಮಾರುಹೋಗಿ ವಾಸ್ತವ ಪ್ರಪಂಚವನ್ನೇ ಮರೆತು ಭ್ರಮನಿರಶನದಲ್ಲಿಯೇ ತೊಳಲಾಡಿ - ಬಳಲಿ - ಬೆಂಡಾಗುವುದರೊಂದಿಗೆ ಶೈಕ್ಷಣಿಕ. ಸಾಮಾಜಿಕ ಕ್ಷೇತ್ರಕ್ಕೆ ಹೇಗೆ ಕಂಟಕರಾಗುತ್ತಾರೆಂಬುದನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಈ ಕೃತಿ ನವೋದಯ ಮಾದರಿಯಲ್ಲಿ ಮೂಡಿಬಂದ ಒಂದು ಉತ್ತಮ ಸಾಮಾಜಿಕ ಕಾದಂಬರಿಯಾಗಿದ್ದು. ಸಾಹಿತ್ಯಿಕ ದೃಷ್ಟಿಯಿಂದಾಗಿ ಬೆಳಗಲಿಯವರಿಗೆ ಕಾದಂಬರಿಕ್ಷೇತ್ರದಲ್ಲಿ ಉತ್ತಮ ಭವಿಷ್ಯವಿದೆಯೆಂಬುದಕ್ಕೆ ಸಾಕ್ಷಿಯಾಗಬಲ್ಲ ಕೃತಿ.

**ಹತ್ತು ಹೆಡೆಯ ಹಾವು (೧೯೬೦) :**

ಇದು ಬೆಳಗಲಿಯವರ ಎರಡನೇ ಕಾದಂಬರಿ. ಪ್ರಾಥಮಿಕ - ಮಾಧ್ಯಮಿಕ ಶಾಲಾ ಶಿಕ್ಷಕ - ಶಿಕ್ಷಕಿಯರ ಜೀವನ ಚಿತ್ರಣವನ್ನೇ ಮುಖ್ಯ ಕಥಾವಸ್ತುವನ್ನಾಗಿರಿಸಿಕೊಂಡ ಈ ಕಾದಂಬರಿ ಕೊನೆಯಲ್ಲಿ ಧರ್ಮಗುರುಗಳನ್ನು ತಳುಕು ಹಾಕಿಕೊಳ್ಳುವುದರ ಮುಖಾಂತರ ಹೊಸ ತಿರುವನ್ನೇ ಪಡೆದಿದೆ. ಮಾಧ್ಯಮಿಕ ಶಾಲೆಯಲ್ಲಿ ನಡೆಯುವ ಅನಾಚಾರ - ಅನಾಗರಿಕತೆ - ಗುಂಪುಗಾರಿಕೆ. ವಿದ್ಯಾರ್ಥಿಗಳ ಅಶಿಸ್ತು. ಅದಕ್ಕೆ ನೀರೆರೆದು ಬೆಳೆಸುವ ಶಿಕ್ಷಕ - ಶಿಕ್ಷಕಿಯ ಅಂತರಂಗ - ಬಹಿರಂಗಗಳೆರಡನ್ನೂ ಹೊರಗೆಳೆಯುವ ಇದು ಶೈಕ್ಷಣಿಕ ಕ್ಷೇತ್ರ ತನ್ನ ಮೂಲನೆಲೆಯಲ್ಲಿಯೇ ಮಲೀನಗೊಳ್ಳುತ್ತಿರುವುದಕ್ಕೆ ವಿಷಾದ ವ್ಯಕ್ತಪಡಿಸುತ್ತದೆ.

ಸಂಗಮ ಆಕರ್ಷಕ ವ್ಯಕ್ತಿತ್ವದ ಶಿಕ್ಷಕ. ಶಿಸ್ತು. ಅಚ್ಚುಕಟ್ಟುತನ. ಬಿಂಬಿಸುವ ಚಾತುರ್ಯ. ನಗೆಗಾರಿಕೆ. ಪಾಠ ಹೇಳುವ ಶೈಲಿಗಳಿಂದಾಗಿ ನೌಕರಿ ಸೇರಿದ ಹೊಸದರಲ್ಲಿಯೇ ವಿದ್ಯಾರ್ಥಿಗಳ ನೆಚ್ಚಿನ ಶಿಕ್ಷಕನಾದ. ಉಳಿದ ವಿದ್ಯಾರ್ಥಿಗಳಿಗಿಂತ ಕಮಲೆಗೆ ಇನ್ನೂ ಅಚ್ಚುಮೆಚ್ಚಾದ. ಅವಳು ಸಂಗಮರ ಕ್ಲಾಸಿಗೆ ಕೂಡ್ರುವ ಕುತೂಹಲ. ತೋರುವ ಆಸಕ್ತಿ. ಕೇಳುವ ಪ್ರಶ್ನೆಗಳು ಅವರನ್ನು ಮುಕ್ತಕಂಠದಿಂದ ಹೊಗಳುವಿಕೆ. ಅಭಿಮಾನ. ಇವೆಲ್ಲ ಅವಳ ಸಹಪಾಠಿಗಳ ಕುಹಕ - ಕುಚೇಷ್ಟೆಗಳಿಗೆ ಅನುಮಾನ - ಅಪಾರ್ಥಗಳಿಗೆ ಗ್ರಾಸವಾಯಿತು. ಈ ಅನುಮಾನ - ಅಸೂಯೆ - ಅಪಾರ್ಥಗಳು ದಿನೇ ದಿನೇ ಹೆಚ್ಚುತ್ತಲೇ ಹೋದವು. ಇದರಿಂದ ಕಮಲೆ ನೊಂದುಕೊಳ್ಳುತ್ತಿದ್ದಳು. ವಿಪರ್ಯಾಸವೆಂದರೆ. ಆಡಿಕೊಳ್ಳುವ ಪರಿಸರದ ಮಧ್ಯೆಯೂ ಪ್ರೀತಿ ಅಂಕುರಿಸಿದ್ದು. ಇದನ್ನರಿತ ಸಂಗಮ ಮುಗ್ಧ

---

೨೯. ಕನ್ನಡನುಡಿ ಪತ್ರಿಕೆಯಿಂದ : ದೇವದಾಸಿಯ ೪೪೬ ನೇ ಪುಟದಿಂದ ಆಯ್ದುಕೊಂಡದ್ದು

ಕಮಲೆಗೆ ಬುದ್ಧಿ ಹೇಳಿ ಎಚ್ಚರಿಸಬೇಕೆಂದು ಚಡಪಡಿಸಿದ. ಆದರೆ ಅದಕ್ಕೆ ಅವಕಾಶವೇ ಸಿಗುವುದಿಲ್ಲ. ಅತ್ತ ಕಮಲೆ ಕೂಡ ತನ್ನ ಪ್ರೀತಿಯನ್ನು ನೆಚ್ಚಿನ ಸಂಗಮನಲ್ಲಿ ಮನಬಿಚ್ಚಿ ಹೇಳಬೇಕೆಂದರೆ ಅವಳಿಗೆ ಧೈರ್ಯ ಸಾಲದು. ಪರಸ್ಪರರು ಇಂಥ ಸಂಧಿಗ್ಧ ಪರಿಸ್ಥಿತಿಗೆ ಸಿಕ್ಕು ದೂರ ಉಳಿದರೆ ಈ ನಡುವೆ ಇವರ ' ಸಂಬಂಧ ' ದ ಕಥೆ ರೆಕ್ಕೆ - ಪುಕ್ಕಗಳನ್ನು ಪಡೆದು ಇಡೀ ಶಾಲೆಯ ವಾತಾವರಣದಲ್ಲೆಲ್ಲ ಹಾರಾಡುತ್ತದೆ. ಈ ಹಾರಾಟಕ್ಕೆ ಸಂಗಮನ ಸಹಪಾಠಿಗಳೇ ಸೂತ್ರಧಾರರು.

ವೃತ್ತಿ - ಪ್ರವೃತ್ತಿಗಳೆರಡರಲ್ಲಿಯೂ ಒಳ್ಳೆಯವನಾದ ಸಂಗಮನೊಬ್ಬ ಆದರ್ಶ ಶಿಕ್ಷಕ. ಹೀಗಾಗಿ ಅವನ ಪ್ರಭಾವ - ವರ್ಚಸ್ಸು ಅಲ್ಪಾವಧಿಯಲ್ಲಿಯೇ ಎಲ್ಲೆಡೆ ಪಸರಿಸಿತು. ಆದರೆ ಇವನನ್ನು ಕಂಡರೆ ಸಹದ್ಯೋಗಿಗಳಿಗೆ ಮೈಯುರಿ. ಅದರಲ್ಲಿಯೂ ಮಠ ಮಾಸ್ತರ. ಮಣ್ಣಿನಮನಿ ಮಾಸ್ತರ ಇವರಿಗಂತೂ ಎಲ್ಲಿಲ್ಲದ ಅಸೂಯೆ. ಇವರಿಗೆ ಕಲಿಸುವುದೆಂದರೆ ಆಗದು; ಉಳಿದ ಉಸಾಬರಿಗಳಲ್ಲಿ ಎತ್ತಿದ ಕೈ. ರೋಗಿಷ್ಠ ಹೆಂಡತಿಯಿಂದ ಸಿಗಲಾರದ ಸುಖ ಪ್ರಾಥಮಿಕ ಶಾಲೆಯ ಹೆಡ್‌ಮಿಸ್ ಬಸಮ್ಮಳಲ್ಲಿ ಕಂಡುಕೊಂಡ ಮಠಮಾಸ್ತರ ಸದಾಕಾಲ ಅವಳ ತಾಳಕ್ಕೆ ತಕ್ಕಂತೆ ಕುಣಿಯುವುದೇ ಈತನ ನಿತ್ಯಕರ್ಮ. ಚಪಲಿಗನಾದ ಈತ ಬಸಮ್ಮನ ಸೆರಗಿನಿಂದಲೇ ಕೈಚಾಚಿ ಕಮಲೆಯನ್ನು ಒಲಿಸಿಕೊಳ್ಳಲು ಹವಣಿಸಿ ಅದು ಸಾಧ್ಯವಾಗದಾದಾಗ ನಿರಾಶೆಗೊಂಡಿದ್ದ. ಬಸಮ್ಮನ ' ಬಾಸಿಜಂ ' ಗಳಿಗೆ ಸದಾ ಪೋಷಕನಾಗಿದ್ದ. ಇನ್ನು ಮಣ್ಣಿನಮನಿ ಮಾಸ್ತರ, ವಿದ್ಯಾರ್ಥಿಗಳೆದುರೇ ಸಿಗರೇಟು ಸೇದುತ್ತ. ಕುಡಿಯುತ್ತ. ಬೇಕೆಂದರೆ ಅವರಿಗೂ ಕೊಡುತ್ತ. ವಿದ್ಯಾರ್ಥಿನಿಯರ ' ಬೇಟೆ ' ಗಾಗಿ ವಿದ್ಯಾರ್ಥಿಗಳನ್ನು ಗಾಳವಾಗಿ ಉಪಯೋಗಿಸುವ ಈತ ಜಗಳಗಂಟಿ ಶಕುಂತಲೆಯ ಪ್ರಿಯಕರ. ಇಂಥವರ ಮಧ್ಯದಲ್ಲಿ ಸಂಗಮನ ಸ್ಥಿತಿ ತ್ರಿಶಂಕುಸ್ವರ್ಗ. ಅನೇಕ ಕುಹಕ - ನಿಂದೆಗಳನ್ನು ಎದುರಿಸಬೇಕಾಗಿ ಬಂದುದು ಅವನ ಎದೆಗಾರಿಕೆಗೊಂದು ಸವಾಲೇ ಸರಿ.

ಹೊಳೆಹಾದಿ - ಹಳ್ಳಿಗರ ಹಲವು ಚಟುವಟಿಕೆಗಳ ಕೇಂದ್ರಸ್ಥಳ. ದನ - ಜನಗಳಿಗೆ ಜೀವರಕ್ಷಕವಾದ ಹೊಳೆಯೊಂದಿಗೆ ಚೆಲ್ಲಾಟವಾಡುವ ಜನರು ಶುದ್ಧನೀರನ್ನು ಮಲೀನಗೊಳಿಸುತ್ತಾರೆ. ನೀರನ್ನಷ್ಟೇ ಅಲ್ಲ. ಮನಗಳನ್ನೂ ಮಲಿನಗೊಳಿಸುವ ಕ್ರಿಯೆ ' ಹೊಳೆದಂಡೆ ' ಮೇಲೆ ನಿರಾತಂಕವಾಗಿ ನಡೆದಿರುತ್ತದೆ. ಶುದ್ಧಗೊಳಿಸುವುದು ನೀರಿನ ಧರ್ಮವಾದರೆ. ಮಲಿನಗೊಳಿಸುವುದು ಜನರ ಕರ್ಮ. ಧರ್ಮ - ಕರ್ಮಗಳ ಈ ತಾಕಲಾಟದಲ್ಲಿ ಹಳ್ಳಿಗರದು ನಿರಾತಂಕ ಬದುಕು. ಅವರ ಈ ನಿರಾತಂಕ ಬದುಕಿಗೆ ಮಣ್ಣಿನಮನಿ ಮಾಸ್ತರ ಮತ್ತು ಅವನ ಕಂಪನಿ ಆಗಾಗ ಆತಂಕವೊಡ್ಡುತ್ತದೆ. ಊರಲ್ಲಿನ ಪ್ರೀತಿ - ಪ್ರೇಮ - ಕಾಮದ ಕಥೆಗಳು ' ಹೊಳೆಹಾದಿ ' ಯಲ್ಲಿ ಬಣ್ಣಪಡೆಯುತ್ತವೆ. ಕೆಲವು ಸಲ ಅವುಗಳ ಮೂಲಬಣ್ಣವೇ ಅಳಿಸಿಹೋದಷ್ಟು ರಂಗು - ರಂಗಾಗಿರುತ್ತವೆ. ಅನೇಕ ಚಟುವಟಿಕೆಗಳ ಆಗರವಾದ ' ಹೊಳೆಹಾದಿ ' ಯನ್ನು ಕಾದಂಬರಿ ವಿಶೇಷವಾಗಿ ವಿವರಿಸುತ್ತದೆ.

ಈವರೆಗೆ ಸಂಗಮರ ಶಾಲೆ. ಅಲ್ಲಿನ ಅನಾಚಾರ. ವಿಘಟನೆಗಳಿಗಷ್ಟೇ ಸೀಮಿತವಾದ ಕಾದಂಬರಿ ಧರ್ಮಲಂಪಟ. ಧರ್ಮರಥಕ್ಕೆ ಜೋಡಿಸಿದ ಅಧರ್ಮ ಚಕ್ರದಂತಿರುವ ಶ್ರೀ ಶ್ರೀ ಶ್ರೀ ಹಾವನಳ್ಳಿ ಹೊಸ ಹಿರಿಯಪೀಠದ ಐದಾಚಾರ್ಯ ಪಟ್ಟದ ಶ್ರೀಗಳು ಅಧ್ಯಕ್ಷತೆ ಅಹಿಸಿದ್ದ ಅಕ್ಕನ ಬಳಗದ ಕಾರ್ಯಕ್ರಮದ ಕಡೆ ತಿರುಗಿ ಹದಗೆಟ್ಟ ಧರ್ಮ ಕ್ಷೇತ್ರವನ್ನು ಬಯಲಿಗೆಳೆಯುತ್ತದೆ. ಅಕ್ಕನ ಬಳಗದ ಕಾರ್ಯಕ್ರಮವೊಂದರಲ್ಲಿ ಸಂಗಮ ಭಾಷಣ ಮಾಡುವ ಪ್ರಸಂಗ

ಬರುತ್ತದೆ. " ಶ್ರೀಗಳವರೇ. ಅಣ್ಣಂದಿರೆ. ಅಕ್ಕಂದಿರೆ..... ನಾನು ಮಾತನಾಡುವ ಎರಡು ನುಡಿ ಮಹಾದೇವಿಯಕ್ಕನ ಮುತ್ತಿನಂಥ ಎರಡು ವಚನಗಳ ಬಗೆಗೆ "[೩೦] ಎಂದು ಪ್ರಾರಂಭಿಸಿದ ಸಂಗಮನಾಥ ವಚನಸಾಹಿತ್ಯ ಸಂಸ್ಕೃತಿಯ ಬಗ್ಗೆ ಸುದೀರ್ಘ ಭಾಷಣವನ್ನು ಮಾಡುತ್ತ ಅಕ್ಕನ ಬದುಕು - ಭಾವನೆಗಳನ್ನು ಸಭೆಯ ಮುಂದಿಟ್ಟು. ನಂತರ ಬಸವಣ್ಣನ ಕಡೆಗೆ ತನ್ನ ಮಾತುಗಳನ್ನು ಹೊರಳಿಸಿ 'ಎನಗಿಂತ ಕಿರಿಯರಿಲ್ಲ' ಎಂಬ ಅಣ್ಣನವರ ಧೋರಣೆ ನಮ್ಮ ಧರ್ಮಾಧಿಕಾರಿಗಳಿಗೆ ಅನುಕರಣೀಯವಾಗಬೇಕು. ಆದರೆ " ಜಗಜ್ಜ್ಯೋತಿರವಾಗಿ ಸಾರಿದ ಅಂಥ ಮಹಾಪುರುಷರ ಹೆಸರಿಗೆ ಕಲಂಕ ತರುವ ಕಾರ್ಯ ನಾವೇ ಮಾಡುತ್ತಿದ್ದೇವೆ. ಶೋಚನೀಯ....."[೩೧] ವೆಂದು ಗಡಿಚಿಕ್ಕುವ ಚಪ್ಪಾಳೆಗಳ ಸದ್ದಿನ ಮಧ್ಯದಲ್ಲಿ ನುಡಿದದ್ದು ಶ್ರೀಗಳಿಗೆ. ಮರಿಲಿಂಗನಿಗೆ. ಮಠಮಾಸ್ತರರಿಗೆ ಅಪಥ್ಯವಾಯಿತು. ತಕ್ಷಣ ಎದ್ದು ನಿಂತ ಮಠಮಾಸ್ತರ ಸಂಗಮನ ಮಾತುಗಳನ್ನು ಖಂಡಿಸುತ್ತ ಶ್ರೀಗಳಿಗಿದು ಅವಮಾನವೆಂದೂ ಅದನ್ನು ಹಿಂತೆಗೆದುಕೊಳ್ಳಬೇಕೆಂದೂ ಕೋಪೋದ್ರಿಕ್ತನಾಗಿ ಕೂಗಾಡಿದ. ಇದಕ್ಕೆ ಮರಿಲಿಂಗನೂ ಬೆಂಬಲ ಸೂಚಿಸಿದ. ಆದರೆ ಸಂಗಮನಿಗೆ ತಾನಾಡಿದ ಮಾತುಗಳಲ್ಲಿ ತಪ್ಪೇನಿಲ್ಲವೆನ್ನಿಸಿತು. ಮಾತಿಗೆ ಮಾತು ಬೆಳೆದು ಸಭೆಯಲ್ಲಿ ಗೊಂದಲವುಂಟಾಯಿತು. ದಾರಿತೋಚದಾದಾಗ ಅಕ್ಕನ ಬಳಗದ ಅಧ್ಯಕ್ಷೆಯ ಪತಿ ರೇವಣಶೆಟ್ಟರು ಮಧ್ಯಪ್ರವೇಶಿಸಿ ಸಂಗಮನಿಗೆ ಸಮಾಧಾನ ಹೇಳಿ ಅವರ ಕೋಣೆಗೆ ಕರೆದೊಯ್ದರು. ಇದನ್ನೆಲ್ಲ ಸೌಮ್ಯವಾಗಿಯೇ ನೋಡುತ್ತಿದ್ದ ಕಮಲೆ ಹೇಗೋ ಧೈರ್ಯಗೊಂಡು ಸಂಗಮನಾಥರ ಕೋಣೆಗೆ ಹೋಗಿ ಇನ್ನೇನು ಕೋಣೆ ಪ್ರವೇಶಿಸಬೇಕೆನ್ನುವಷ್ಟರಲ್ಲಿ ಕಮಲೆಯ ತಂದೆ - ತಾಯಿಗಳೂ ಅಲ್ಲಿಗೆ ಬರುವರು. ಕಮಲೆಯನ್ನು ಚೆನ್ನಾಗಿ ಬೈಯ್ದು - ಬಡಿದು. ಒದಿಯುತ್ತ ಧರಧರನೆ ಎಳೆದೊಯ್ಯುವುದನ್ನು ಸಂಗಮ ಬಿಟ್ಟಕಣ್ಣು ಬಿಟ್ಟಂತೆ ನೋಡುತ್ತ ನಿಂತ. ಸಂಗಮನಾಥನಿಗೆ ಕಾರ್ಯಕ್ರಮದಲ್ಲಿನ ಗೊಂದಲ - ಜಗಳ. ಇಲ್ಲಿ ಕಮಲೆಯನ್ನು ಎಳೆದೊಯ್ದ ನೋಟ. ಶಾಲೆಯಲ್ಲಿನ ಅನಾಚಾರ - ಅಪಾರ್ಥಗಳು. ಶಿಕ್ಷಕ - ಶಿಕ್ಷಕಿಯರ ಅನೈತಿಕ ಬದುಕು ಯಾವುದನ್ನೂ ಪ್ರತಿಭಟಿಸಲಾಗದೆ - ಸ್ವೀಕರಿಸಲೂ ಆಗದೆ; ಇಂಥ ದುಷ್ಟಶಕ್ತಿಗಳ ವಿರುದ್ಧ ಹೋರಾಡುವುದು ತನ್ನಿಂದ ಅಸಾಧ್ಯವೆನಿಸಿದಾಗ ತನ್ನ ನೌಕರಿಗೇ ರಾಜೀನಾಮೆ ಬರೆದಿಟ್ಟು ತನ್ನ ಸಾಮಾನು - ಸರಂಜಾಮುಗಳೊಂದಿಗೆ ಆ ರಾತ್ರಿಯೇ ಅಲ್ಲಿಂದ ಹೊರಟು ಹೋಗುತ್ತಾನೆ. ಇದಿಷ್ಟು ಕಾದಂಬರಿಯ ಕಥಾ ವಸ್ತು.

'ಇಂದಿನ ವಿದ್ಯಾರ್ಥಿಗಳೇ ನಾಳಿನ ನಾಗರಿಕರು' ನಾಳಿನ ನಾಗರಿಕರನ್ನು ತಯಾರು ಮಾಡುವ ಶಾಲೆಗಳ ಶಿಕ್ಷಕ - ಶಿಕ್ಷಕಿಯರ ಅನಾಚಾರಗಳನ್ನು ಬಯಲಿಗೆಳೆಯುವಲ್ಲಿ ಬೆಳಗಲಿಯವರು ಪ್ರಾಮಾಣಿಕ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಸ್ವತಃ ಮಾಸ್ತರರಾದ ಬೆಳಗಲಿಯವರು ಶೈಕ್ಷಣಿಕ ದುಸ್ಥಿತಿಯನ್ನು ಕಂಡು ರೋಸಿಹೋಗಿದ್ದಾರೆ. ಮಣ್ಣಿನಮನಿ ಮಾಸ್ತರ. ಮಠಮಾಸ್ತರನಂತವರು ಇಂದಿಗೂ ಕಂಡುಬರುತ್ತಾರೆ. ಕಲಿಸುವ ಮಾಸ್ತರನಂತೆ ಪೋಜು ಕೊಡುತ್ತ ವರ್ಗಪ್ರವೇಶಿಸಿ ತಮ್ಮ ಸಿನಿಮಾಬುತ್ತಿಯನ್ನೇ ವಿದ್ಯಾರ್ಥಿಗಳೆದುರು ಬಿಚ್ಚಿಡುವ

---

೩೦. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೧೯

೩೧. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೧೯

ಮಣ್ಣಿನಮನಿ ಮಾಸ್ತರ ಪುಂಡ ವಿದ್ಯಾರ್ಥಿಗಳ ಗುಂಪುಕಟ್ಟಿಕೊಂಡು ಅವರೆದುರೇ ಸಿಗರೇಟು ಸೇದುತ್ತ. ಬೇಕೆಂದರೆ ಅವರಿಗೂ ಕೊಡುತ್ತ ವಿದ್ಯಾರ್ಥಿನಿಯರ 'ಬೇಟೆ' ಯಾಡುವ ಇಂಥವರಿಂದ ವಿದ್ಯಾರ್ಥಿಗಳ ಭವಿಷ್ಯ ನಿರ್ಮಾಣವಾಗುವುದರ ಬದಲು ನಿರ್ನಾಮವಾಗುತ್ತದೆಂಬ ವಿಷಾದ ಲೇಖಕರಲ್ಲಿದೆ. "ನಿಮಗೇನು ಗೊತ್ತು ? ನಿಮ್ಮ ತಲೆ.... ಈ ಹಾಳು ಊರಲ್ಲಿ ಒಂದು ತಟ್ಟು ಟಾಕೀಜು ನಡೆಯಬೇಕಾದರೆ. ಅಳುತ್ತದೆ. ಅವೂ ಅಜ್ಜಿಪುರಾಣದ ಕತೆಗಳ ಚಿತ್ರಗಳೇ ! ಇಲ್ಲಿಯ ಮಳ್ಳ ಜನಕ್ಕೆ ಅದೇ ರುಚಿ. ನಾವು ಕಾಲೇಜಿನಲ್ಲಿ ಇರುವಾಗೇನು ? ಒಂದಿನ ಬಿಡುತ್ತಿರಲಿಲ್ಲ ಥಿಯೇಟರ ಬೇಟೆ ! ನಿನ್ನೆ ರೆಕ್ಸ ಆದರೆ. ಇಂದು ರೀರ್ಘ. ನಾಳೆ ಕೃಷ್ಣಾ ಆದರೆ. ನಾಡಿದ್ದು ಪ್ರಕಾಶ ಹೀಗೆ ಎಲ್ಲ...."[೩೨] ಎಂದು ವರ್ಗದಲ್ಲಿಯೇ ತಮ್ಮ ಅವಾಂತರಗಳನ್ನು ತೆರೆದಿಡುವ ಮಣ್ಣಿನಮನಿ ಮಾಸ್ತರನಂಥವರನ್ನು ಪಡೆದ ನಮ್ಮ ಹಳ್ಳಿಯ ಶಾಲೆಗಳ ಸ್ಥಿತಿ ದೇವರೇ ಬಲ್ಲ.

ವಿದ್ಯಾಕ್ಷೇತ್ರವಿಂದು ಸಾವಕಾಶವಾಗಿ ಕುರುಕ್ಷೇತ್ರವಾಗುತ್ತಿರುವ ಬಗ್ಗೆ ಲೇಖಕರಿಗೆ ತುಂಬ ನೋವಿದೆ. ಹೆಡ್‌ಮಿಸ್ ಬಸಮ್ಮನಂಥವರು ಶಾಲೆಯ ಮುಖ್ಯಸ್ಥರಾದರೆ. 'ಕಾಗೆಕೈಯಲ್ಲಿ ಕಚೇರಿ ಕೊಟ್ಟಂತಾಗುವುದರಲ್ಲಿ' ಸಂದೇಹವಿಲ್ಲ. ದಘೂತಿಯಾದ ಬಸಮ್ಮ ತನ್ನ ಸಹಪಾಠಿಗಳ ಮೇಲೆ ಸದಾ ಅನಗತ್ಯ ಅಧಿಕಾರ ಚಲಾಯಿಸುವುದರಲ್ಲಿಯೇ ತನ್ನ ಕರ್ತವ್ಯವನ್ನರಿತವಳು; ತೃಪ್ತಿ ಪಟ್ಟವಳು. ಮನೆಪಾಠ ಹೇಳುವ ನೆಪದಲ್ಲಿ ಮಕ್ಕಳನ್ನು ಮನೆಗೆ ಕರೆಯಿಸಿಕೊಂಡು ಅವರಿಂದ ಕಸಮುಸುರೆ - ಮನೆಗೆಲಸ ಮಾಡಿಸಿಕೊಳ್ಳುತ್ತ. ತಾನು ಮಠಮಾಸ್ತರನೊಂದಿಗೆ ಲಲ್ಲೆಗರೆಯುವ ಬಸಮ್ಮ ಮೊದಲ ಗಂಡನನ್ನು ನೌಕರಿಸಿಕ್ಕ ನಂತರ ಬಿಟ್ಟು. ಆಸರಕ್ಕೆ ಮಠಮಾಸ್ತರನನ್ನು ಪಡೆದು ಸುಖ ಪಟ್ಟವಳು. ಮಣ್ಣಿನಮನಿ ಮಾಸ್ತರನ ಪ್ರಿಯತಮೆ ಶಕುಂತಲೆ ಬಸಮ್ಮನ ಸಹಶಿಕ್ಷಕಿ. ಪ್ರಿಯತಮನ ಬೆಂಬಲದಿಂದಲೇ ಬಸಮ್ಮನ 'ಬಾಸಿಜಂ'ಗೆ ಸೊಪ್ಪುಹಾಕದೆ ಸದಾ ಹೂಂಕರಿಸುತ್ತಲೇ ಎದುರುತ್ತರ ಕೊಡುವವಳು. ಅವಿವಾಹಿತ ಸುಬ್ಬಕ್ಕ ಅದೇ ಶಾಲೆಯ ಸಂಗೀತ ಶಿಕ್ಷಕಿ. ಒಳಗೊಳಗೆ ಸಂಗಮನನ್ನು ಪ್ರೀತಿಸುವ ಈಕೆ ಅವನನ್ನು ಮದುವೆಯಾಗಲು ಮನದಲ್ಲಿಯೇ ಮಂಡಿಗೆ ತಿನ್ನುವವಳು. ಇಂಥ ಮನೆಮುರುಕು - ಮನಮುರುಕ ಶಿಕ್ಷಕಿಯರನ್ನು ಬೆನ್ನಿಗೆ ಕಟ್ಟಿಕೊಂಡ ಬಸಮ್ಮನಿಗೆ ಬರೀ ಬುಸ್ಸೆನ್ನುವುದೇ ಅವಳ ದೈನಂದಿನ ಕೆಲಸ. ಅವಳ ಅನಾಚಾರಗಳಿಗೆ ಆಧಾರವಾಗಿದ್ದ ಮಠಮಾಸ್ತರನೇ ಸ್ವತಃ ಅನಾಚಾರಿಯಾಗಿದ್ದೊಂದು ದುರ್ದೈವ.

ಈ ಕಾದಂಬರಿಯ ಕಥಾವಸ್ತು ಪ್ರಮುಖವಾಗಿ ಮೂರು ಸ್ತರ - ಸ್ಥಳಗಳಲ್ಲಿ ತನ್ನ ಮೈ - ಮನಸ್ಸನ್ನು ಬಿಚ್ಚಿಕೊಳ್ಳುತ್ತದೆ. ಒಂದು ಶಾಲೆ. ಎರಡು ಹೊಳೆಯ ಹಾದಿ. ಮೂರು ಅಕ್ಕನ ಬಳಗ. ಈ ಮೂರು ಸ್ತರಗಳಲ್ಲಿ ಸಮಾಜದ ಸ್ವಾಸ್ಥ್ಯ ಕೆಟ್ಟು ಹೋಗುತ್ತಿರುವುದನ್ನು ಲೇಖಕರು ಚೆನ್ನಾಗಿ ಚಿತ್ರಿಸಿದ್ದಾರೆ. ಪ್ರಾಥಮಿಕ ಶಾಲೆ. ವಿದ್ಯಾರ್ಥಿ - ವಿದ್ಯಾರ್ಥಿನಿಯರ ಚೀರಾಟ. ಶಿಕ್ಷಕ - ಶಿಕ್ಷಕಿಯರ ಜಗಳಾಟದಿಂದಾಗಿ ವರ್ಗದ ವಾತಾವರಣವೇ ಹದಗೆಟ್ಟು ಸಂತೆಯಂತಾಗುತ್ತಿರುವ ಸನ್ನಿವೇಶ ಕಾದಂಬರಿಯಲ್ಲಿ ಚೆನ್ನಾಗಿ ಚಿತ್ರಣಗೊಂಡಿದೆ. ಪ್ರೌಢಶಾಲೆ

---

೩೨. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೧೯

ಆಗತಾನೆ ಯೌವ್ವನದ ಸಮೀಪಕ್ಕೆ ಕಾಲಿರಿಸಿದ ವಿದ್ಯಾರ್ಥಿಗಳು ದುಶ್ಚಟಗಳಿಗೆ ದಾಸರಾಗುವುದು– ಅದಕ್ಕೆ ನೂಕುವ ಮಣ್ಣಿನಮನಿ ಮಾಸ್ತರನಂತವರು ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಪೀಡಿಸುವ ಪರಿಪಾಠಕ್ಕೆ ತೊಡಗಿರುವುದು. ಶಿಕ್ಷಕರ ಗುಂಪುಗಾರಿಕೆ. ಈರ್ಷ್ಯೆ - ವೈಮನಸ್ಸುಗಳನ್ನು ಕಾದಂಬರಿ ಚೆನ್ನಾಗಿ ಬಯಲಿಗೆಳೆದಿದೆ. 'ಶಿಕ್ಷಣವೇ ಶಕ್ತಿ' ಯೆಂದೆನ್ನುವುದೇನೋ ಸರಿ. ಆದರೆ ಆ ಶಕ್ತಿ ವಿದ್ಯಾರ್ಥಿಗಳನ್ನು ನಿರ್ಮಾಣ ಮಾಡುತ್ತಿರುವ ಇಂಥ ಶಾಲೆಗಳು ದೇಗುಲಗಳಾಗಿರದೆ. ಸಮಾಜಕ್ಕೆ ಕಂಟಕರಾಗಬಲ್ಲ ಯುವಕರನ್ನು ಉತ್ಪಾದನೆ ಮಾಡುವ ಫ್ಯಾಕ್ಟರಿಗಳಾಗಿವೆ.

ಹೊಳೆಯಹಾದಿ - ಹಳ್ಳಿಗರ ಕೇಂದ್ರಸ್ಥಳ: ಆ ಊರಿನ ಬಾಯಿ ಇದ್ದಂತೆ. ಹೊಳೆಯದಡ ಊರಜನರ ಅನಾಚಾರದ ಮಾತು - ಕೃತಿಗಳಿಗೆ ಮೂಕಪ್ರೇಕ್ಷಕ. "ಊರು ಬಿಟ್ಟು ಒಂದೂವರೆ ಮೈಲು ದೂರವಿರುವ ನದಿ ದಡದಲ್ಲಿಯ 'ಗಡ್ಡೆ' ಕ್ಷೇತ್ರವಾಗಿತ್ತು. ಮುಗಿಲು ಮುದ್ದಿಸುವ ಗಿಡಗಳ ಗುಂಪಿನ ಮಧ್ಯ ಈಶ್ವರಲಿಂಗವಿದ್ದು, ಅಲ್ಲಿಯ ತಾಣ ಒಳ್ಳೆಯ ಸೊಬಗಾಗಿತ್ತು. ಅದು ಏಕಾಂತಸ್ಥಳವೆಂದು ಅಲ್ಲಿ ವಿಶೇಷವಾಗಿ ದೈವಭಕ್ತರಲ್ಲದೆ. ಪ್ರೇಮಭಕ್ತರೂ ಹೋಗುವುದು ರೂಢಿ. ಸ್ನಾನವೂ ಆಯಿತು. ಊಟವೂ ಆಯಿತು. ಕಣ್ಣೋಟವು ಆಯಿತೆಂದು"[೩೩]. ಎಂದು ಲೇಖಕರು ನದಿದಡವನ್ನು ಪರಿಚಯಿಸುತ್ತಾರೆ. ಮಣ್ಣಿನಮನಿ ಮಾಸ್ತರನಂತವರಿಗೆ ನದಿದಡವೊಂದು ಕಂಗಳಿಗೆ ಹಬ್ಬದಂತಿರುವ ಸ್ಥಳ. ವಿದ್ಯಾರ್ಥಿಗಳೊಂದಿಗೆ ಸಿಗರೇಟು ಜಗ್ಗುತ್ತ. ಕಣ್ಣುಗಳನ್ನು ಹೆಂಗಳೆಯರ ಮೇಲಿಟ್ಟು. ಹಾರಾಡಿ ಹರಟೆಹೊಡೆಯುವ ವಿಜ್ಞಾನ ಬೋಧಿಸುವ ಅಜ್ಞಾನಿ.

ಊರಿನ ಕಾಮ -ಪ್ರೇಮಗಳಿಗೆ. ಅನಾಚಾರ - ಅವಾಂತರಗಳಿಗೆ ರೆಕ್ಕೆ - ಪುಕ್ಕಗಳು ಬಂದು ರಂಗುರಂಗಾಗಿ ಹಾರಾಡುವುದೇ ಹೊಳೆಹಾದಿಯಲ್ಲಿ. ಮೈ-ಮನಗಳೆರಡನ್ನೂ ಮಲಿನ ಮಾಡಿಕೊಂಡ ಜನ ಹೊಳೆಹಾದಿಯನ್ನಷ್ಟೇ ಅಲ್ಲದೆ ಹೊಳೆನೀರನ್ನು ಮಲಿನಗೊಳಿಸುವ ಪರಿ ಕಾದಂಬರಿಯಲ್ಲಿ ಚೆನ್ನಾಗಿ ಮೂಡಿಬಂದಿದೆ. ಜನರ ಮಲಿನತೆಯನ್ನೆಲ್ಲ ಕುಡಿದು 'ಶುದ್ಧ'ತೆಯನ್ನೇ ನೀಡುವ ನದಿ ಮಣ್ಣಿನಮನಿ ಮಾಸ್ತರನಂತವರ ಉಪಟಳಕ್ಕೆ ಬೇಸತ್ತು ತಿರುಗಿಬಿದ್ದರೆ ?

ಈವರೆಗೆ ಕೇವಲ ಶೈಕ್ಷಣಿಕ-ಸಾಮಾಜಿಕ ಅಸ್ವಾಸ್ಥ್ಯದ ಕಡೆಗೆ ಗಮನಹರಿಸಿದ ಕಾದಂಬರಿ ಕೊನೆ-ಕೊನೆಗೆ ಹದಗೆಡುತ್ತಿರುವ 'ಧರ್ಮ'ದ ಕಡೆಗೂ ತನ್ನ ದೃಷ್ಟಿ ಬೀರಿ ಅಲ್ಲಿನ ಅನಾಚಾರಗಳನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತದೆ. ಧರ್ಮರಥವನ್ನು ಎಳೆಯುವ ಅಧರ್ಮಚಕ್ರಗಳು, ಸತ್ಯವನ್ನು ಕೊಂದು ಮಿಥ್ಯಗಳಿಗೆ ಗುಟುಕು ನೀಡುತ್ತಿರುವ ಪರಿ ವಿಷಾದನೀಯ. ಅಕ್ಕನ ಬಳಗ. ಅದರ ಸಂಘಟನೆ. ಅದರ ಕಾರ್ಯವೈಖರಿ. ಅದರ ಧ್ಯೇಯೋದ್ದೇಶಗಳನ್ನೆಲ್ಲ ಬದಿಗಿರಿಸಿ ಅವು ಕೇವಲ ಧಾರ್ಮಿಕ ಮುಖಂಡರ ಮಠಾಧೀಶರನ್ನು ಓಲೈಸುವ ವೇದಿಕೆಗಳಾಗಿ ಕೆಲಸ ಮಾಡುತ್ತಿರುವುದರ ಚಿತ್ರಣ ಕೊಡುತ್ತ. ಕೇವಲ ಶ್ರೀಮಂತಿಕೆಯ 'ಅಹಂ' ನಿಂದಲೇ ಇಂಥ

---

೩೩. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೪೧

ಬಳಗದ ಅಧ್ಯಕ್ಷಗಿರಿಯನ್ನು ಮಾಡುತ್ತಿರುವ ನಾಗಮ್ಮನಂಥವರು ತಮ್ಮ ಒಣಪ್ರತಿಷ್ಠೆ ತೋರಿಸಿಕೊಳ್ಳುವ ವೇದಿಕೆಗಳನ್ನಾಗಿ ಮಾರ್ಪಡಿಸಿದ್ದಾರೆಂಬುದನ್ನು ಕಾದಂಬರಿಕಾರರು ಎತ್ತಿ ತೋರಿಸಿದ್ದಾರೆ. ಅತ್ತೆ-ಸೊಸೆಯರಿಬ್ಬರೂ ಬಣ್ಣದ ಚಿಟ್ಟೆಯಂತೆ 'ಅಕ್ಕನ ಬಳಗ'ದ ಬಳ್ಳಿಯುದ್ದಕ್ಕೂ ಹಾರಾಡುತ್ತ ಶ್ರೀಗಳ ಸೇವೆಗೈಯುತ್ತಾರೆ.

ಇಂಥ ಅಕ್ಕನ ಬಳಗದ ಕಾರ್ಯಕ್ರಮವೊಂದರಲ್ಲಿ ನಡೆದ ಘಟನೆಯೇ ಕಾದಂಬರಿಗೆ ಹೊಸ ತಿರುವು ನೀಡುತ್ತದೆ. ಅಕ್ಕನ ಬಳಗದ ಕಾರ್ಯಕ್ರಮಕ್ಕೆ ಮಕ್ಕಳ. ನಾಗಮ್ಮ-ಪ್ರಭಾವತಿ. ಮಣ್ಣಿನಮನಿ ಮಾಸ್ತರ. ಮಠಮಾಸ್ತರ. ಬಸಮ್ಮ ಶಕುಂತಲೆಯರಲ್ಲದೆ. ಸಂಗಮ. ಕಮಲೆ ಹಾಗೂ ಊರಿನ ಬಹುತೇಕ ಜನರ ಹಾಜರಿಯಿಂದಾಗಿ ಹೊಸ ಕಳೆಯೇ ಬಂದಂತಾಗಿತ್ತು. ಸಂಗಮ - ಕಮಲೆಯರ 'ಸಂಬಂಧ' ದ ಕಥೆ ಶಾಲೆಯಲ್ಲಿ ಮೊಳೆತು. ಹೊಳೆಹಾದಿಯಲ್ಲಿ ಬೆಳೆದು. ಈ ಕಾರ್ಯಕ್ರಮದಲ್ಲಿ ಒಂದು ಹಂತ ತಲುಪಿತು. ಆದರೆ ದುರಂತದಲ್ಲಿ ಕೊನೆಗೊಂಡದ್ದು ವಿಪರ್ಯಾಸವೇ ಸರಿ. ಶ್ರೀಗಳವರು ಗದ್ದುಗೆಯನ್ನೇರಿ ಕಾರ್ಯಕ್ರಮಕ್ಕೆ ಅನುಮತಿಸಿದರೆ ಅವರ ಸಂಬಳದ ಹೊಗಳುಭಟ್ಟರು ಅವರನ್ನು ಬಹುಪರಾಕುಗಳಿಂದ ಮುತ್ತಿ: ನೆಲಕ್ಕೆ ಹಣೆಯೂರಿ ಮಂಡಿಸಿದಾಗ. ಮಠಮಾಸ್ತರರು ದಿವ್ಯಸನ್ನಿಧಿಗೆ ಅಡ್ಡಬಿದ್ದು. ಜನತೆಗೆ ವಂದಿಸಿ ತಮ್ಮ ಮಾತನ್ನು ಪ್ರಾರಂಭಿಸಿದರು. "ಶ್ರೀ ಶ್ರೀ ಶ್ರೀ ಶ್ರೀ.... ಗಳವರೇ ಸಾಕ್ಷಾತ್ ದೈವೀಪುರುಷರೇ. ನನ್ನ ಬಂಧುಗಳೇ. ನನ್ನ ಭಗಿನಿಯರೇ.... ಸಿಂಹಾಸನ ದೊಡ್ಡದು: ಮಹಾತ್ಮ್ಯ ಘನವಾದುದು.... ಇಂದಿನ ಅನಾಚಾರಯುಗದಲ್ಲಿ ನಶಿಸಿ ಹೋಗುತ್ತಿರುವ ಧರ್ಮವನ್ನು ಕಾಪಾಡಲು ಶ್ರೀಗಳವರು ತಮ್ಮ ಜೀವನವನ್ನೇ ಮುಡಿಪಾಗಿಸಿದ್ದಾರೆ" [೩೪] ಎಂದು ಶ್ರೀಗಳ ಧ್ಯೇಯವನ್ನು ಸಭೆಯ ಮುಂದಿಟ್ಟು ಮಾಸ್ತರರು ".....ಇಂಥವರಿರುವವರೆಗೆ ನಮ್ಮ ಧರ್ಮದ ಏಳ್ಗೆಯಾಗದು: ಪ್ರಗತಿ ಹೊಂದದು. ಇದಕ್ಕೆ ಶ್ರೀಗಳವರ ಮಹಾತ್ಮ್ಯದ ಪರಿಣಾಮವಾಗದಿರದು. ಅಧರ್ಮಿಗಳು ಅದರ ಫಲ ಉಣ್ಣಲೇಬೇಕು.... ಅವರಿಗೆ ನರಕ ತೆರೆದೇ ಇದೆ...." [೩೫] ಎಂಬ ಮಠ ಮಾಸ್ತರರ ವಾಗ್ದಾಳಿ ಸಂಗಮನ ಮೇಲೇ ಇತ್ತೆಂಬುದು ಅಲ್ಲಿದ್ದ ಜನರಿಗೆ ಸಹಜಸ್ಪಷ್ಟವಾಗಿತ್ತು. ಮತ್ತೆ ಶ್ರೀಗಳವರತ್ತ ಮಾತು ಹೊರಳಿಸಿದ ಮಠಮಾಸ್ತರರು. "..... ಶ್ರೀಗಳವರೆಂದರೆ ಜಗದ್ವಂದ್ಯರು.... ಮಹಾತ್ಮರು.... ದೇವತಾಪುರುಷರು.... ಪಟ್ಟಾಧಿಕಾರಿಗಳು.... ದೇವರು .... ಗುರುವಿನ ಸ್ಥಾನದಲ್ಲಿದ್ದ 'ಇವರು' ಭಕ್ತಸ್ಥಾನದಲ್ಲಿದ್ದ ಬಸವಣ್ಣನಿಗಿಂತಲೂ ಹೆಚ್ಚಿನವರು.... ಎದೆ ತಟ್ಟಿ ಹೇಳುವೆ...." [೩೬] ಎಂದು ಹೇಳಿದ ಅವರ ನುಡಿಗಳು ಶ್ರೀಗಳವರ ಹೊಗಳುಭಟ್ಟರಿಗೆ ಪಂಚಾಮೃತ ಸಿಂಚನಗೊಳಿಸಿದರೆ. ಸಂಗಮನ ಬುದ್ಧಿ-ಭಾವಕ್ಕೆ ಖಡ್ಗವನ್ನೇ ಬೀಸಿದಂತಾಗಿ ಕೆಂಡಮಂಡಲನಾದನು.

ಸಂಗಮನು ತನ್ನ ಭಾಷಣದ ಸರದಿ ಬಂದಾಗ. ಮಠಮಾಸ್ತರರು ವಾಕ್‌ಚಪಲತೆಗೆಂದು ಮಾತಾಡಿದ ಅನಾಚಾರಗಳನ್ನೇ ಎತ್ತಿತೋರಿಸುತ್ತ. ಅಕ್ಕಮಹಾದೇವಿ - ಬಸವಣ್ಣನವರ ವಚನಗಳ ಮೇಲೆ ಮಾತು

---

೩೪. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೧೮

೩೫. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೧೮

೩೬. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೧೮

ಪ್ರಾರಂಭಿಸಿದರು. ಶರಣರ. ಅಕ್ಕನ ವಚನವೌಲ್ಯಗಳನ್ನು - ಸಾಮಾಜಿಕ ಅಗತ್ಯತೆಗಳನ್ನು ಪಟ್ಟಿಮಾಡಿದ್ದಲ್ಲದೆ. ವಚನಗಳ-ಶರಣರ ಉದ್ದೇಶಗಳನ್ನೇ ಸಭಾಮಧ್ಯದಲ್ಲಿಟ್ಟರು. "..... ನೆಲದ ಮರೆಯ ನಿಧಾನದಂತೆ ಫಲದ ಮರೆಯ ರುಚಿಯಂತೆ. ಶಿಲೆಯ ಮರೆಯ ಹೇಮದಂತೆ. ತಿಲದಮರೆಯ ತೈಲದಂತೆ ಭಾವದ ಮರೆಯ ಬ್ರಹ್ಮವಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲುವನಾರು ಅರಿಯಬಾರದು...."[೩೭] ಎಂದು ಅಕ್ಕನ ಘನತೆಯೊಂದಿಗೆ ಶರಣಸಾಹಿತ್ಯದ ಮೌಲ್ಯವನ್ನೂ ತಿಳಿಸಿದ ಸಂಗಮರು. ಬಸವಣ್ಣನವರ ಕಡೆಗೆ ತಮ್ಮ ವಿಚಾರಲಹರಿಯನ್ನು ಹರಿಸಿ. "..... ಅದೇ ಬಸವಣ್ಣನವರು ಭಕ್ತಸ್ಥಾನದವರೆಂದು. ತಾವು ಗುರುಸ್ಥಾನದವರೆಂದು ಆಡಿಕೊಂಡಿದ್ದಾರೆ. ಆಡಿಕೊಳ್ಳುತ್ತಲಿದ್ದಾರೆ ಕೆಲವರು. ತಮ್ಮನ್ನು ತಾವು ಬೇಕಾದಂತೆ ಭಾವಿಸಿಕೊಳ್ಳುವ ವ್ಯಕ್ತಿಸ್ವಾತಂತ್ರ್ಯವಿದೆ. ಅದರಲ್ಲಿಯೂ ನಿಜವಾದ ಅರಿವುಬೇಕು.... ದೊಡ್ಡವರು ತಾವೆಂದು ಭಾವಿಸುವುದು ಮೂರ್ಖತನ 'ಎನಗಿಂತ ಕಿರಿಯರಿಲ್ಲ' ಎಂದು ಸಾರಿದ ಅಂಥ ಮಹಾಪುರುಷರ ಹೆಸರಿಗೆ ಕಲಂಕ ತರುವ ಕಾರ್ಯ ನಾವೇ ಮಾಡುತ್ತಿದ್ದೇವೆ; ಶೋಚನೀಯ...."[೩೮] ಎಂದೆನ್ನುತ್ತ ಸಂಗಮ ಧರ್ಮಾಧಿಕಾರಿಗಳ ಅಧರ್ಮವನ್ನೂ. ಮಿಥ್ಯದ ತೋಳ್ತೆಕ್ಕೆಗೆ ಸಿಕ್ಕು ಸಾಯುತ್ತಿರುವ ಸತ್ಯವನ್ನೂ ಬಯಲಿಗೆಳೆದರು. 'ನೀನಾಡಿದ ಮಾತನ್ನು ಹಿಂತೆಗೆದುಕೋ' ಎಂದು ಮಠಮಾಸ್ತರರು ಎದ್ದು ಪ್ರತಿಭಟಿಸಿದರು. ಆದರೆ ಸಂಗಮನಿಗೆ ವಿಚಿತ್ರವೆನ್ನಿಸಿತು. ತನ್ನದೇ ಸತ್ಯವೆಂದು ಹಟವಿಡಿದಾಗ. ಅದಕ್ಕೆ "ಏ ಭವಿ ಬಾಯಿಮುಚ್ಚು ಎಂಥ ಅನಾಚಾರ ನುಡಿಯುತ್ತಿರುವೆ. 'ದೇವರ' ಎದುರು ಬಾಯಿತೊಳೆದುಕೊಳ್ಳು....."[೩೯] ಎಂದು ಕೆಂಗಣ್ಣಿನಿಂದ ನೋಡುತ್ತ ಮರಿಲಿಂಗ ಗುಡುಗಿದ. ಈ ಗುಡುಗಿಗೆ ನಡುಗದ ಸಂಗಮ ಮಾಸ್ತರ ತನ್ನದೇನೂ ತಪ್ಪಿಲ್ಲವೆಂದು ವಾದಿಸತೊಡಗಿದಾಗ ಆ ಸಭೆಯಲ್ಲಿ ಗೊಂದಲವುಂಟಾಯಿತು. ಇದರಿಂದ ಪೇಚಿಗೆ ಸಿಲುಕಿದವರೆಂದರೆ. ರೇವಣ್ಣ ಶೆಟ್ಟರು. ಕೊನೆಗೆ ಅವರೇ ಸಂಗಮನನ್ನು ಸಮಾಧಾನಪಡಿಸಿ ಕೋಣೆಯವರೆಗೆ ಕರೆದೊಯ್ಯುವ ಮುಖಾಂತರ ಸಭೆಯನ್ನು ಇನ್ನಷ್ಟು ಅನಾಹುತದಿಂದ ತಪ್ಪಿಸಿದರು. ಇದಕ್ಕಿಂತ ಹೆಚ್ಚಿನ ಅನಾಹುತವೊಂದು ಸಂಗಮನಿಗಾಗಿ ಕಾದುಕುಳಿತ್ತಿತ್ತು. ಅದೆಂದರೆ ತನ್ನ ಬೆನ್ನ ಹಿಂದೆಯೇ ತನ್ನೊಂದಿಗೆ ಹೇಗಾದರೂ ಧೈರ್ಯಗೊಂಡು ಮಾತಾಡಬೇಕೆಂದು ಬಂದ ಕಮಲೆಯನ್ನು ಅವಳ ತಂದೆ-ತಾಯಿಯರು ಬೆನ್ನಟ್ಟಿ ಬಂದು ಅಮಾನವೀಯವಾಗಿ ಎಳೆದಾಡಿ ಹೊಡೆದು ಎಳೆದೊಯ್ದುದ್ದು. ಕಣ್ಣಾರೆ ಕಂಡುಂಡ ಈ ದೃಶ್ಯಗಳಿಗೆಲ್ಲ ಅಸಹಾಯಕನಾಗಿ ಸಂಗಮ ಎದುರಿಸಲಾಗದೆ ನೌಕರಿಗೆ ರಾಜೀನಾಮೆ ಬರೆದಿಟ್ಟು ರಾತ್ರೋರಾತ್ರಿ ಹೊರಟುಹೋದದ್ದು ಹದಗೆಟ್ಟುಹೋದ 'ಧರ್ಮಕ್ಷೇತ್ರ'ಕ್ಕೆ ಹಿಡಿದ ಕನ್ನಡಿ.

ಮಕ್ಕಳ ಭವಿಷ್ಯದ ಬಗೆಗೆ ಕಾಳಜಿಯಿಲ್ಲದ. ಕರ್ತವ್ಯಪ್ರಜ್ಞೆ ಇಲ್ಲದ ಶಿಕ್ಷಕ-ಶಿಕ್ಷಕಿಯರು ವೈಯಕ್ತಿಕ ದ್ವೇಷ-ಅಸೂಯೆ. ಈರ್ಷ್ಯೆ-ಸ್ವಾರ್ಥಗಳಲ್ಲಿಯೇ ತೇಲಿ-ಮುಳುಗಿ ಶಾಲೆಯ ವಾತಾವರಣವನ್ನೇ ರಣರಂಗವನ್ನಾಗಿ

---

೩೭. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೨೧

೩೮. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೨೫

೩೯. ದು. ನಿಂ. ಬೆಳಗಲಿ : ಹತ್ತು ಹೆಡೆಯ ಹಾವು. ಪುಟ ೧೨೫

ಮಾಡಿದ್ದನ್ನು. ಇಂಥ ಶಿಕ್ಷಕರಿಂದ ವಿದ್ಯಾರ್ಥಿಗಳಿಗೆ ಒಳ್ಳೆಯ ಸಂಸ್ಕಾರ ದೊರೆಯಲಾರದೆಂಬುದನ್ನು ಲೇಖಕರು ಚೆನ್ನಾಗಿಯೇ ವಿವರಿಸಿದ್ದಾರೆ. ಸ್ವತಃ ಶಿಕ್ಷಕರಾದ ಬೆಳಗಲಿಯವರಿಗೆ ಈ 'ವಾಸ್ತವ' ಚಿತ್ರಣದ ನಿರೂಪಣೆ ಮಾಡುವುದು ಕಷ್ಟವೆನಿಸಿಲ್ಲ.

'ಆದರ್ಶ-ಆಕರ್ಷಕ ವ್ಯಕ್ತಿತ್ವದ ಸಂಗಮ ಶಿಕ್ಷಕನನ್ನು ಕಾದಂಬರಿಕಾರರು ಅತೀ ವೈಭವೀಕರಿಸಿದ್ದಾರೆ. ಈ ಪಾತ್ರದ ಬಗ್ಗೆ ಸೌಮ್ಯಧೋರಣೆಯನ್ನೇ ತಾಳಿದ ಲೇಖಕರು ಸದಾ ಸಂಗಮನ ಬೆನ್ನಹಿಂದೆಯೇ ಇದ್ದು 'ಕಣ್ಣುರೆಪ್ಪೆಯಲ್ಲಿಟ್ಟು ಕಾಪಾಡಿದಂತೆ ಭಾಸವಾಗುತ್ತದೆ. ಮುಗ್ಧೆ ಕಮಲೆಯ ಪ್ರೀತಿ. ಸಂಗೀತ ಶಿಕ್ಷಕಿ ಸುಬ್ಬಕ್ಕನ ಪ್ರೇಮಪತ್ರ. ಶಿವಲಿಂಗ ಶೆಟ್ಟರ ಹೆಂಡತಿ ಪ್ರಭಾವತಿಯ ಒಲವು. ಇವೆಲ್ಲ ಸಂಗಮನ ಸುತ್ತಲೇ ತಿರುಗುತ್ತವೆ. ಇವುಗಳಿಗೆಲ್ಲ ತಲೆಕೆಡಿಸಿಕೊಳ್ಳದ ಸಂಗಮ ಮಾಸ್ತರ ದಿವ್ಯನಿರ್ಲಕ್ಷ್ಯ ತೋರುತ್ತಾನೆ. ಹೀಗೆ ಒಂದೇ ಪಾತ್ರದ ಬೆನ್ನುಹತ್ತಿದ ಲೇಖಕರು ಕಾದಂಬರಿಯುದ್ದಕ್ಕೂ ಅವಶ್ಯಕ್ಕಿಂತ ಹೆಚ್ಚಿನ ಗಮನಹರಿಸಿದ್ದಾರೆ. "ಸಂಗಮ ಕಮಲೆಯರ ಸುತ್ತ ಶೀಲವಿಲ್ಲದ. ಶಿಕ್ಷಣ ಪ್ರಜ್ಞೆಯಿಲ್ಲದ ಶಿಕ್ಷಕ-ಶಿಕ್ಷಕಿಯರ ಮೇಳವೇ ನೆರೆದಂತಾಗಿದೆ. ಇದರಿಂದ ಪಾತ್ರಗಳು ಒಳ್ಳೆಯ ಮತ್ತು ಕೆಟ್ಟ ಎಂಬ ಸರಳ ವರ್ಗೀಕರಣಕ್ಕೆ ಒಳಗಾಗಿ ಬಿಡುತ್ತವೆ. ಈ ರೀತಿಯ ಪಾತ್ರವಿವರಣೆಯಿಂದ ಮನುಷ್ಯ ಸ್ವಭಾವದ ಸಂಕೀರ್ಣತೆಯನ್ನು ಮರೆಮಾಚುತ್ತದೆ. ಹೀಗಾಗಿ ಪಾತ್ರಗಳಲ್ಲಿ ಕೆಲವರು ನಾಯಕರಾಗಿ ಮತ್ತೆ ಕೆಲವರು ಖಳನಾಯಕರಾಗಿ ಲಂಬವಾಗಿ ಬೆಳೆದು ನಿಲ್ಲುತ್ತಾರೆ". [೪೦]

ಭಾಷೆ-ಭಾವ-ಪಾತ್ರನಿರೂಪಣೆಗಳಲ್ಲೆಲ್ಲ ಸರಳತೆಯನ್ನೇ ಮೈಗೂಡಿಸಿಕೊಂಡ ಪ್ರಸ್ತುತ ಕಾದಂಬರಿ. 'ಕಾದಂಬರಿ ತಂತ್ರ-ಶೈಲಿ' ಗಳತ್ತ ಲೇಖಕರು ಹೆಚ್ಚಿನ ಗಮನಹರಿಸಿದಂತೆ ಕಾಣುವುದಿಲ್ಲ. ಪಾತ್ರಗಳ ಸರಳೀಕರಣದಿಂದಾಗಿ ಅವು ಸಂಕೀರ್ಣತೆಯನ್ನೇ ಮರೆತಿವೆ. ಘಟನೆಗಳ ಸರಳ ನಿರೂಪಣೆ. ಪಾತ್ರಗಳ ಸರಳೀಕರಣ. ವ್ಯಕ್ತಿಪ್ರಾಶಸ್ತ್ಯ. 'ಸುಧಾರಣೆ'ಯ ಅತೀಯಾದ ಹಂಬಲ-ಇವುಗಳಿಂದಾಗಿ ಕಾದಂಬರಿ ಅಲ್ಪ ಸೊರಗಿದಂತೆ ಕಾಣುತ್ತದೆ. ಆದರೆ "ನಮ್ಮ ದೃಷ್ಟಿಯಲ್ಲಿ ಬೆಳಗಲಿಯವರು ಖಂಡಿತ ಕಾದಂಬರಿಕಾರರು. ಅವರಿಗೆ ಮನೋಜ್ಞವಾಗಿ ಬರೆಯುವ ಶಕ್ತಿಯಿದೆ. ಚೂಪಾಗಿ ಹೇಳುವ ಸಾಮರ್ಥ್ಯವಿದೆ". [೪೧] ಬೆಳಗಲಿಯವರು ಒಬ್ಬ ಉತ್ತಮಕಾದಂಬರಿಕಾರರಾಗಿ ಬೆಳೆಯುವ ಮುನ್ಸೂಚನೆಗಳಂತೂ ಇದರಲ್ಲಿ ಸ್ಪಟಿಕಸ್ಪಷ್ಟ.

**ಬಿಸಿಲು-ಬೆಳದಿಂಗಳು (೧೯೭೪) :**

ಪ್ರಸ್ತುತ ಕಾದಂಬರಿ ಮೊದಲು 'ಕರ್ಮವೀರ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಣೆಯಾಗಿತ್ತು. ಅನಂತರ ೧೯೮೩ ರಲ್ಲಿ ಪರಿಷ್ಕರಣಗೊಂಡು 'ಗಂಡಿನ ನೆರಳು' ಆಯಿತು. ಬೆಳಗಲಿಯವರ ಉತ್ತಮ ಸಾಮಾಜಿಕ ಕಾದಂಬರಿಗಳಲ್ಲಿ ಇದೂ ಒಂದು.

---

೪೦. ಡಾ. ರಾಮಕೃಷ್ಣ ಮರಾಠೆ : ಜಿ. ಎಸ್. ಕಾಪಸೆ. (ಸಂ.) : ಬೆಳಗಲಿ - ಅಭಿನಂದನ ಗ್ರಂಥ. ಪುಟ ೧೧೮

೪೧. 'ಜನಪ್ರಗತಿ' ಪತ್ರಿಕೆ : 'ಅಂತಸ್ತಿನ ಮನೆ' ಕಾದಂಬರಿಯ ಬೆನ್ನುಪುಟದಿಂದ

ವತನದಾರ ಮನೆತನದ ಏಕಮಾತ್ರ ಪುತ್ರ ಬಾಳಾಸಾಹೇಬ ಬೆಳ್ಳಿಗಿಂಡಿಯಲ್ಲಿ ಹಾಲುಕುಡಿದು. ಸುಖದ-ಸುಪ್ಪತ್ತಿಗೆಯಲ್ಲಿ ಬೆಳದವ. ಕಾಲೇಜು ವ್ಯಾಸಂಗಕ್ಕೆಂದು ಜಮಖಂಡಿಗೆ ಬಂದ ಬಾಳ. ಸ್ನೇಹಿತ ಧವಳೇಶ್ವರ ಸಹಾಯದಿಂದ ಬಾಡಿಗೆಗೆಂದು ಒಂದು ಕೋಣೆಹಿಡಿದ. ಆ ಕೋಣೆಯ ಎದುರುಮನೆಯ ಮಂಗಲೆಯನ್ನು ಮೆಚ್ಚುತ್ತಾನೆ. ಮಂಗಲೆ ಹೈಸ್ಕೂಲು ಶಿಕ್ಷಣ ಪೂರೈಸಿದ ಸುಂದರಿ-ಸುಸ್ವಭಾವಿ. ಆದರೆ ಮೊದಲು ನೋಡಲು ಬಂದ ಮುಧೋಳದ ಚೆನ್ನವೀರನ ತಂದೆ 'ಕುಂಕುಮ ಬೊಟ್ಟಿನವರಿಗೆ ದಾರ ಬರಲಿಲ್ಲವೆಂಬ ಕಾರಣಕ್ಕಾಗಿ ಮಗ ಚೆನ್ನವೀರನಿಗೆ ಹಾಗೂ ತನ್ನ ಹೆಂಡತಿಗೆ ಒಪ್ಪಿಗೆಯಿದ್ದರೂ ನಿರಾಕರಿಸುತ್ತಾನೆ. ಇದರಿಂದ ಗಂಗವ್ವ ಮಂಗಲೆಯ ತಾಯಿ. ಅಣ್ಣ ಶ್ರೀಶೈಲ ಮನದಲ್ಲಿಯೇ ನೊಂದುಕೊಂಡರೂ. ಗುಣ-ಸ್ವಭಾವ-ರೂಪದಲ್ಲಿ ಯಾರಿಗಿಂತಲೂ ಕಡಿಮೆಯಿರದ ಮಂಗಲೆಯ ಬಗ್ಗೆ ಅಷ್ಟೇನು ತಲೆಕೆಡಿಸಿಕೊಳ್ಳಲಿಲ್ಲ.

ಧವಳೇಶ್ವರ ಬಾಳಾಸಾಹೇಬನ ಸ್ನೇಹಿತ; ಅವನ ಅಂತರ್ಯವನ್ನು ಅರಿತವ. ಅಂತೆಯೇ ಬಾಳನ 'ಕಿಟಕಿ ರಹಸ್ಯ'ವನ್ನು ಭೇದಿಸಿ. ಬಾಳ-ಮಂಗಲೆಯರ 'ಸಂಬಂಧ' ಬೆಳೆಸಬೇಕೆಂದು ಯೋಚಿಸಿದ. ಬಾಳನಿಗೂ ಅಷ್ಟೇ ಬೇಕಾಗಿತ್ತು. ಶ್ರೀಶೈಲನೊಂದಿಗೆ ಮಾತನಾಡಿದ ಧವಳೇಶ್ವರ ಬಾಳನನ್ನು ಒಂದುದಿನ ಮಂಗಲೆಯ ಮನೆಯವರಿಗೆ ತೋರಿಸಿದ: ಅವರೂ ಮೆಚ್ಚುತ್ತಾರೆ. ಮದುವೆಯೊಂದೇ ಬಾಕಿ. ಆಗಾಗ ಕಡಪಟ್ಟಿ ಬಸವಣ್ಣನ ಗುಡಿಯಲ್ಲಿ ಬಾಳ-ಮಂಗಲೆಯರ ಭೇಟಿ ಪ್ರಾರಂಭವಾಗುತ್ತದೆ. ಸಾಲದೆಂಬಂತೆ ಬಾಳ ಮನೆಗೂ ಬರಲು ಪ್ರಾರಂಭಿಸುತ್ತಾನೆ. ಇದರಿಂದ ಮಂಗಲೆಗೆ ಧರ್ಮಸಂಕಟವಾದರೂ ಸಹಿಸುವಳು.

ಗಂಗವ್ವ-ಗಿರಿಜಾರಿಬ್ಬರೂ ಗೆಳತಿಯರು. ಒಂದು ದಿನ ಬಾಳನನ್ನು ತನ್ನ ಮನೆಗೆ ಆಹ್ವಾನಿಸಿದ ಗಿರಿಜಾ. ಬಾಳನ ಪೂರ್ವಾಪರಗಳನ್ನೆಲ್ಲ ತಿಳಿದುಕೊಂಡು. ರಮಾಳಿಂದಲೇ ಅವನಿಗೆ ತಿಂಡಿ-ತಿನಿಸು-ಚಹಾ ಕೊಡಿಸುತ್ತಾಳೆ. ರಮಾ ಮಂಗಲೆಯ ಚಿಕ್ಕಪ್ಪನ ಮಗಳು. ಇದರಿಂದ ಉತ್ತೇಜಿತನಾದ ಬಾಳ ಆಗಾಗ ಗಿರಿಜಾಳ ಮನೆಗೆ ಹೋಗಲು ಪ್ರಾರಂಭಿಸುತ್ತಾನೆ. ರಮಾ ಮಂಗಲೆಯಷ್ಟು ಸುಂದರಿಯಲ್ಲದಿದ್ದರೂ ಕುರೂಪಿಯೇನಲ್ಲ. ಮಂಗಲೆ-ರಮಾರ ಮನೆಗಳ ಮಧ್ಯದಲ್ಲಿ ಮಧುರ ಬಾಂಧವ್ಯವಿಲ್ಲದಿರುವುದು ಬಾಳನಿಗೆ ಒಂದು ರೀತಿಯಲ್ಲಿ ಒಳ್ಳೆಯದೇ ಆಗಿತ್ತು. ಗಿರಿಜಾ ಬೀಸಿದ ಬಲೆಯಲ್ಲಿ ಬಿದ್ದ ಬಾಳನಿಗೆ ಮಂಗಲೆಯ ನೆನಪು ಮಸುಕಾಗಲು ಪ್ರಾರಂಭಿಸಿ. ಆ ಜಾಗವನ್ನು ರಮಾ ಸಾವಕಾಶವಾಗಿ ತುಂಬಿಕೊಳ್ಳುತ್ತಿದ್ದಳು. ಇದನ್ನೆಲ್ಲ ಅರಿತ ಧವಳ. ಇದು ಸರಿಯಲ್ಲವೆಂದೂ. ಮಂಗಲೆ ಮುಗ್ಧೆ-ಒಳ್ಳೆಯವಳೆಂದೂ. ಮನೆತನ ತುಂಬ ಒಳ್ಳೆಯದೆಂದೂ. ಅವರೊಂದಿಗೆ ಸಂಬಂಧ ಬೆಳೆಸುತ್ತಿರುವುದರಿಂದ ಎಚ್ಚರಿಕೆಯಿಂದ ಇರಬೇಕೆಂದು ಕಳಕಳಿಯಿಂದ ಎಚ್ಚರಿಸಿ ಬಾಳನನ್ನು ತಿದ್ದಲು ಪ್ರಯತ್ನಿಸಿದ. ಇದರಿಂದಾಗಿ ಬಾಳ ಧವಳನಿಂದ ದೂರ ಉಳಿಯಲು ಪ್ರಾರಂಭಿಸಿದ. ಈ ಮಧ್ಯೆ ವಿಜಾಪುರದಿಂದ ವರ್ಗವಾಗಿ ಬಂದ ಶಶಿಕಾಂತ. ಸ್ನೇಹಿತ ಶ್ರೀಶೈಲನ ಒತ್ತಾಯಕ್ಕೆ ಕೆಲದಿನಗಳ ಅತಿಥಿಯಾಗಿ ಬಾಳನ ಕೋಣೆಯಲ್ಲಿಯೇ ಉಳಿದುಕೊಳ್ಳುತ್ತಾನೆ. ಬಾಳನ ಅಭಿರುಚಿ. ನಡೆ-ನುಡಿಗಳು ಶಶಿಕಾಂತನಿಗೆ ಸರಿಬರುವುದಿಲ್ಲ. ಆದಷ್ಟು ಬೇಗ ಆ ಕೋಣೆ ಬಿಟ್ಟು ಬೇರೆಡೆ ಹೋಗಲು ಮನಸ್ಸು ಮಾಡುತ್ತಾನೆ.

ಗಿರಿಜೆಯ ಮನೆಗೆ ಬಾಳ ಆಗಾಗ ಹೋಗುತ್ತಿರುವುದು. ಅಲ್ಲಿಗೆ ರಮಾ ಕೂಡ ಹೋಗುತ್ತಿರುವ ಸುದ್ದಿ ಚಂದ್ರಪ್ಪನ ಹೆಂಡತಿಯ ಮುಖಾಂತರ ಗಂಗವ್ವ-ಮಂಗಲೆಯರಿಗೆ ತಿಳಿಯುತ್ತದೆ. ಬಾಳನ ಈ ವರ್ತನೆ ಮಂಗಲೆಯನ್ನು ಗಾಸಿಗೊಳಿಸುತ್ತದೆ. ಸಾಲದೆಂಬಂತೆ ಪುಷ್ಪಾಳೊಂದಿಗಿನ ಸಂಬಂಧ. ನಂದಿನಿಗೆ ಪ್ರೇಮಪತ್ರ ಬರೆದು ಪ್ರಿನ್ಸಿಪಾಲರಿಂದ ಛಿಮಾರಿ ಹಾಕಿಸಿಕೊಂಡುದನ್ನು ಪ್ರಭಾವತಿ ಮಂಗಲೆಗೆ ತಿಳಿಸಿದಾಗ ಗಾಯದ ಮೇಲೆ ಬರೆ ಎಳೆದಂತಾಗುತ್ತದೆ. ಗೆಳತಿ ಪ್ರಭಾ ಬಾಳನನ್ನು ಮರೆತುಬಿಡುವುದೇ ಸೂಕ್ತವೆಂದು ಸಲಹೆ ನೀಡುತ್ತಾಳೆ. ಮಂಗಲೆಗೂ ಕೂಡ ಹಾಗೇ ಅನ್ನಿಸುತ್ತದೆ. ಬಾಳ ತನ್ನ ಹೆಚ್ಚಿನ ಸಮಯವನ್ನೆಲ್ಲ ಗಿರಿಜೆಯ ಮನೆಯಲ್ಲಿಯೇ ಕಳೆಯಲು ಪ್ರಾರಂಭಿಸಿದ್ದು. ರಮಾಳೊಂದಿಗೆ ನಿತ್ಯ ಪೇಟೆ ಸುತ್ತುವುದು. ಕೋಣೆ ಬಿಟ್ಟು ಗಿರಿಜಾಳ ಮನೆಯಲ್ಲಿಯೇ ಠಿಕಾಣಿ ಹೂಡಿದ್ದು. ಕೋಣೆ ಬಿಡುವ ಸಮಯದಲ್ಲಿ ಶಶಿಕಾಂತ ಮತ್ತು ಬಾಳನ ನಡುವೆ ನಡೆದ ಘರ್ಷಣೆ ಬಾಳನಾಡಿದ ಅಸಂಬದ್ಧ ಮಾತುಗಳು. ಕೋಪಗೊಂಡ ಶಶಿಕಾಂತ ಕೆನ್ನೆಗೆ ಬಾರಿಸಿದ್ದು ಹೀಗೆ ಒಂದರಮೇಲೊಂದರಂತೆ ಒದಗಿದ ಇಂಥ ಆಕಸ್ಮಿಕಗಳಿಂದ ಮಂಗಲೆಯ ದೇಹ-ಮನಸ್ಸುಗಳೆರಡೂ ದುರ್ಬಲಗೊಂಡು ಅವಳಿಗೆ ಚಿತ್ತಕ್ಷೋಭೆಯುಂಟಾಗುತ್ತದೆ. ಗಂಗವ್ವ-ಶ್ರೀಶೈಲರಿಗೆ ದಾರಿಯೇ ತೋಚದಂತಾಗುತ್ತದೆ. ಈ ಮಧ್ಯೆ ಚೆನ್ನವೀರ ಬಂದು ಹೋಗುತ್ತಾನೆ; ಇದೀಗ ಅವಳನ್ನು ಮದುವೆಯಾಗಲು ಸಂಗಪ್ಪನ ಮೂಲಕ ಪ್ರಯತ್ನಿಸುತ್ತಾನೆ. ಹಿಂದೆ ನೋಡಿ ಮೆಚ್ಚಿ ನಿರಾಕರಿಸಿದ ಆತನ ಮನಃಪರಿವರ್ತನೆ ಗಂಗವ್ವನಿಗೆ ಸಂತಸ ತರುತ್ತದೆ. ಆದರೆ ಅಣ್ಣನಿಂದ ಇದನ್ನು ತಿಳಿದ ಮಂಗಲೆ ನೇರವಾಗಿಯೇ ಸ್ಪಷ್ಟಮಾತುಗಳಲ್ಲಿ ಚೆನ್ನವೀರನ ಬಯಕೆಯನ್ನು ನಿರಾಕರಿಸುತ್ತಾಳೆ. ಮಾನಸಿಕ ಗೊಂದಲದಲ್ಲಿರುವ ಮಂಗಲೆ ತನಗೆ ಮದುವೆಯೇ ಬೇಡವೆನ್ನುತ್ತಾಳೆ. ಜ್ವರದ ತಾಪದಿಂದಾಗಿ. ಮೇಲಿಂದ ಮೇಲೆ ಎರಗುತ್ತಿರುವ ಗಂಡಾಂತರಗಳಿಂದಾಗಿ ಅವಳ ಮನಸ್ಸೇ ಹದಗೆಟ್ಟಿತ್ತು; ಯಾವುದರಲ್ಲಿಯೂ ಆಸಕ್ತಿತೋರದೆ ಮನೆಯಲ್ಲಿಯೇ 'ಪಂಜರದ ಪಕ್ಷಿ' ಯಂತೆ ಸದಾ ಚಿಂತಾಮಗ್ನಳಾಗಿರುತ್ತಾಳೆ. ಗೆಳತಿ ಪ್ರಭಾ ತುಂಬ ಎಚ್ಚರಿಕೆಯಿಂದ ತಿಳಿಹೇಳಿ. ಅವಳಲ್ಲಿ ಹೊಸಚೈತನ್ಯ ತುಂಬುತ್ತಾಳೆ.

ಶಶಿಕಾಂತನ ಸ್ಥಿತಿಯೂ ಹೆಚ್ಚು-ಕಡಿಮೆ ಇದೇ. 'ತನ್ನ ಸ್ನೇಹಕ್ಕಾಗಿ ಹಾತೊರೆದ ವತ್ಸಲಾ. ಕಾಲೇಜು ದಿನಗಳಲ್ಲಿನ ಜೇನ್ ಎಂಬ ಕ್ರಿಶ್ಚಿಯನ್ ಮಹಿಳೆ ಹಾಗೂ ಗಂಡನನ್ನು ಬಿಟ್ಟು ಊರಲ್ಲಿಯೇ ಉಳಿದಿದ್ದ ಕಾಶಿ ಈ ಮೂವರೂ ಆಗಾಗ ಅವನ ಕಣ್ಣೆದುರು ಸುಳಿದು ಸುತ್ತಾಡಿ ಹೋಗುವುದುಂಟು. ಈ ಮೂವರೂ ಅತೃಪ್ತ ಬಯಕೆಯುವರೇ. ಇವರಾರನ್ನೂ ಮೆಚ್ಚದ ಶಶಿಕಾಂತ ಬಂಗಾರಿಯ ಮೇಲೆ ಪ್ರೀತಿಯಿಟ್ಟಿದ್ದು; ಆದರೆ ಇದನ್ನರಿತರೂ ಅವನ ತಂದೆ ಪದೆ-ಪದೆ ಕನ್ಯೆ ನೋಡಲೆಂದು ಮಗನನ್ನು ಕರೆದುಕೊಂಡು ಅಲೆಯುತ್ತಿದ್ದ. ಇದರಿಂದಾಗಿ ಶಶಿಕಾಂತ ತನ್ನ ಮಾನಸಿಕ ಸಮತೋಲನ ಕಳೆದುಕೊಳ್ಳುವ ಮಟ್ಟಕ್ಕೆ ಮುಟ್ಟುತ್ತಿದ್ದ.

ಪುಷ್ಪಾ ಬಾಳಾಸಾಹೇಬನ ಪ್ರೇಯುಸಿ. ತಂದೆ-ತಾಯಿಯರ ಲೈಸನ್ಸಿನಿಂದಲೇ ಬಾಳನೊಂದಿಗೆ ಸುತ್ತುವಳಿವಳು. ಇವಳಿಗಾಗಿ ಬಾಳ ಹಣದ ಹೊಳೆಯನ್ನೇ ಹರಿಸುತ್ತಾನೆ. ಪುಷ್ಪಾಳ ಸಂಗ. ನಂದಿನಿಯ ಮೇಲೆ

ವ್ಯಾಮೋಹ. ರಮಾಳೊಂದಿಗೆ ಚೆಲ್ಲಾಟ ಇದು ಬಾಳನ ದಿನಚರಿ. ಒಂದು ದಿನ ನಂದಿನಿಯ ಅಣ್ಣ ಮಾರುತಿ ಹಾಗೂ ಅವನ ಸ್ನೇಹಿತ ಭೀಮಸೇನ ರಮೆಯ ಜೊತೆ ಹೊರಟಿದ್ದ ಬಾಳನನ್ನು ಮೈಮುರಿ ಹೊಡೆಯುತ್ತಾರೆ. ಈ ಸಿನಿಮೀಯ ಘಟನೆಯ ನಂತರ ಬಾಳ ಊರನ್ನೇ ಬಿಟ್ಟ. ಇದೇ ಸಂದರ್ಭದಲ್ಲಿ ರಮೆಯ ಚಾರಿತ್ರ್ಯ ಬಾಳನಿಗೆ ಗೊತ್ತಾಗುತ್ತದೆ. ಸಂಶಯದ ಸುಳಿಯಲ್ಲಿ ಸಿಕ್ಕ ಅವನ ಮನಸ್ಸು ರಮೆಯನ್ನು ಮದುವೆಯಾಗುವುದರಿಂದ ಹಿಮ್ಮೆಟ್ಟಿಸುತ್ತದೆ. ಚಿತ್ರರಗಿ ಎಂಬುವವನೊಂದಿಗೆ ರಮೆಯ ಪೂರ್ವ 'ಸಂಬಂಧ' ವಿದ್ದುದು ಗೊತ್ತಾದಾಗ ಆತ ಅವಳನ್ನು ನೇರವಾಗಿಯೇ ತಿರಸ್ಕರಿಸುತ್ತಾನೆ.

ತೇರದಾಳದ ಕನ್ಯೆ ಶಶಿಕಾಂತನಿಗೆ ಒಪ್ಪಿಗೆಯಾದರೂ: 'ಮನೆ ಅಳಿಯ' ನಾಗಬೇಕೆಂಬ ಹಂಬಲದ ಅವರು ಶ್ರೀಮಂತರೆಂಬ ನೆಪ ಒಡ್ಡಿ ಆ ಸಂಬಂಧವನ್ನು ನಿರಾಕರಿಸುತ್ತಾನೆ. ಒಬ್ಬಳೇ ಮಗಳಾದುದರಿಂದ ಅವಳ ಹಿಂದೆ ಸಾಕಷ್ಟು ಸಂಪತ್ತು ಬರಬಹುದೆಂದು ಆಸೆಪಟ್ಟವರಿಗೆಲ್ಲ ನಿರಾಶೆಯಾಗುತ್ತದೆ. ಆದರೆ ಸೋದರಮಾವ ಸಿಂಗಣ್ಣ ಮಾತ್ರ ಶಶಿಕಾಂತನ ಜಾಣತನದ ಈ ನಿರ್ಧಾರವನ್ನು ಮೆಚ್ಚುತ್ತಾನೆ. ಬಂಗಾರಿಯನ್ನು ಮದುವೆಯಾಗುವ ತನ್ನ ಮನೋಗತವನ್ನು ನಿಂಗಣ್ಣನಿಗೆ ತಿಳಿಸುತ್ತಾನೆ. ಈ ಆಸೆ ಅವನಲ್ಲಿ ಮೊದಲಿನಿಂದ ಇತ್ತಾದರೂ ಸ್ವಾರ್ಥವಾದೀತೆಂಬ ಕಾರಣಕ್ಕಾಗಿ ನಿಂಗಣ್ಣ ಹಿಂಜರಿಯುತ್ತಿದ್ದ. ಅನಾರೋಗ್ಯದಿಂದ ಬಳಲುತ್ತಿದ್ದ ಶಶಿಕಾಂತನ ತಾಯಿ ಬಂಗಾರಿಯ ಉಪಚಾರಕ್ಕೆ ಮನಸೋತು ಅದಾಗಲೇ ಅವಳನ್ನು ಸೊಸೆಯೆಂದು ಸ್ವೀಕರಿಸಿಯೇ ಬಿಟ್ಟಿದ್ದಳು. ಬಂಗಾರಿಯನ್ನೇ ವರಿಸುವುದಾಗಿ ಸ್ನೇಹಿತ ಶ್ರೀಶೈಲನಿಗೂ ಶಶಿಕಾಂತ ತಿಳಿಸುತ್ತಾನೆ. ಮಂಗಲೆಯ ಅನಾರೋಗ್ಯ ವಿಚಾರಿಸಲು ಹೋದ ಶಶಿಕಾಂತ ಅಂದು ಅಲ್ಲಿಯೇ ಊಟ ಮಾಡಬೇಕಾಗುತ್ತದೆ. ಅದೂ ಮಂಗಲೆಯ ಒತ್ತಾಯಕ್ಕೆ.

ಮತ್ತೆ ಚಿತ್ತಕ್ಷೋಭೆಯುಂಟಾದಾಗ ಮಂಗಲೆ ಶಶಿಕಾಂತನನ್ನೇ ಮದುವೆಯಾಗುವೆನೆಂದು ಕನವರಿಸುತ್ತಾಳೆ. ಇದರಿಂದ ಶ್ರೀಶೈಲನಿಗೆ ಆಕಾಶವೇ ಕಳಚಿ ಮೈಮೇಲೆ ಬಿದ್ದಂತಹ ಅನುಭವ. ತನ್ನ ತಂಗಿಯ ಜೀವ ಉಳಿಸಿಕೊಡಬೇಕೆಂದು ಶಶಿಕಾಂತನಲ್ಲಿ ಶ್ರೀಶೈಲ ಅಂಗಲಾಚಿದ. ಆದರೆ ಶಶಿಕಾಂತನಲ್ಲಿ ಬಂಗಾರಿಯೇ ತುಂಬಿಕೊಂಡಿದ್ದಳು; ಮಂಗಲೆ ಹೊಸಹುಟ್ಟು ಪಡೆಯಬೇಕೆಂಬ ಹಂಬಲದಿಂದ ಬೇಡಿಕೊಂಡಿದ್ದಳು. ಶಶಿಕಾಂತ ಪಾತಾಳಕ್ಕಿಳಿದು ಹೋದ. ಒಂದೆಡೆ ಒಲವಿನ ಬಂಗಾರಿ. ಇನ್ನೊಂದೆಡೆ ಮುಗ್ಧೆ ಮಂಗಲೆ; ಆದರೂ ಬಂಗಾರಿಯನ್ನು ಎದುರಿಗೆ ಕೂಡ್ರಿಸಿಕೊಂಡು ತನ್ನೆಲ್ಲ ವಿಚಾರಗಳನ್ನು ತಿಳಿಸಿದ: ಒಪ್ಪಿಸಿದ. ಅಲ್ಲದೆ ತನ್ನ ತಮ್ಮನನ್ನು ಮದುವೆಯಾಗುವಂತೆಯೂ ಒಪ್ಪಿಸಿದ. ಒಮ್ಮೆ ಬಂಗಾರಿಯನ್ನು ಜಮಖಂಡಿಗೆ ಕರೆದೊಯ್ದು ಮಂಗಲೆಯನ್ನು ಪರಿಚಯಿಸಿ. ಒಂದೆರಡು ದಿನವಿದ್ದು ಇಬ್ಬರಲ್ಲೂ ಪರಸ್ಪರ 'ಅನ್ಯೋನ್ಯ-ಸೋದರತ್ವ' ಬೆಸೆದ. ಶಶಿಕಾಂತ ಬಲು ಜಾಣತನದಿಂದ ಎರಡು ಜೀವಗಳನ್ನು ಉಳಿಸುವುದರೊಂದಿಗೆ ತಾನೂ ಸಮಸ್ಯೆಯಿಂದ ಪಾರಾಗಿದ್ದ.

ಈರಪ್ಪನಿಗೆ ಬಾಳನ ಮೇಲೆ ಸಂದೇಹವಿತ್ತು. ಅಂತೆಯೇ ಗಿರಿಜಾಳೊಡಗೂಡಿ ಅವನೂರಿಗೆ ಹೋಗುತ್ತಾನೆ. ಅಲ್ಲಿ ಬಾಳನ 'ಬಣ್ಣ' ಬಯಲಾದಾಗ. ಅವನ ತಾಯಿಗೆ ತನ್ನ ಮಗಳನ್ನು ಸೊಸೆಯಾಗಿ ಸ್ವೀಕರಿಸಲು

ವಿನಂತಿಸಿಕೊಂಡ. ಗೌಡಿಕೆಯ ಗತ್ತಿನಲ್ಲಿದ್ದ ಬಾಳನ ತಾಯಿ ತನ್ನಣ್ಣನ ಮಗಳೊಂದಿಗೆ ಬಾಳನ ಮದುವೆ ಮಾಡಲು ನಿರ್ಧರಿಸಿದ್ದನ್ನು ಹೇಳುತ್ತಾಳೆ. ಚಿಂತಾಕ್ರಾಂತನಾದ ಈರಪ್ಪ ತನ್ನ ಮಗಳೀಗ ಬಸುರಿಯೆಂದು ಗೋಗರೆಯುತ್ತಾನೆ. ಅದಕ್ಕವಳು ಇವರಿಗೇ ಬುದ್ಧಿ ಹೇಳಿ ಅಲ್ಲಿಂದ ಅಟ್ಟುತ್ತಾಳೆ. ಸ್ವಾಭಿಮಾನಕ್ಕೆ ಪೆಟ್ಟು ಬಿದ್ದಾಗ ಬಾಲಮುದುಡಿಸಿಕೊಂಡು ಈರಪ್ಪ ಬಂದದಾರಿಗೆ ಸುಂಕವಿಲ್ಲವೆಂಬಂತೆ ಜಮಖಂಡಿಗೆ ಮರಳಿದ್ದ.

ಬಾಳನಿಗೆ ಪ್ರಥಮ ಅನುಭವದ ರುಚಿ ತೋರಿಸಿದ್ದ ತಮ್ಮೂರಿನ ಕೇರಿಯ ಸೋನಿಯೀಗ ಸೊಲ್ಲಾಪುರದಲ್ಲಿ ವೇಶ್ಯೆಯಾಗಿದ್ದಳು. ಅಂತಲೇ ಬಾಳ ಜಮಖಂಡಿಗೆ ಹೋಗುವುದಾಗಿ ತಾಯಿಗೆ ಹೇಳಿ ಸೊಲ್ಲಾಪುರದ ದಾರಿ ತುಳಿದಿದ್ದ. ಜಮಖಂಡಿಯ ಅವಾಂತರಗಳಿಂದ ಅಲ್ಪ ದೂರವಿರಲು ಸೋನಿಯ ಮನೆಯೇ ಸೂಕ್ತಸ್ಥಳ. ಸೋನಿ ಬಾಳನ ಸಂಪತ್ತನ್ನೆಲ್ಲ ಲೂಟಿಮಾಡಿ. ಅವನಿಗೆ ಹುಚ್ಚುಹಿಡಿಸಿ ಮಾನಸಿಕ ಆಸ್ಪತ್ರೆಗೆ ದಾಖಲಿಸಿದ್ದು ಶಶಿಕಾಂತನಿಗೆ ತಿಳಿಯುತ್ತದೆ. ವಿವಾಹಪೂರ್ವದಲ್ಲಿ ಬಸುರಿಯಾದ ರಮೆಯನ್ನು ಬಾಳನ ತಾಯಿ ತಿರಸ್ಕರಿಸಿದಾಗ. ಅವಳಿಗೆ ಗರ್ಭಪಾತ ಮಾಡಿಸಿದ್ದೇ ಕಾರಣವಾಗಿ ನಂಜೇರಿ ರಮೆ ಸಾವನ್ನಪ್ಪುತ್ತಾಳೆ. ರಮಾಳ ಸಾವು ದಾಯಾದಿಗಳನ್ನು ಮತ್ತೆ ಒಂದುಗೂಡಿಸುತ್ತದೆ. ಮಂಗಲೆಯ ಆರೋಗ್ಯ ಕ್ರಮೇಣ ಸುಧಾರಿಸುತ್ತದೆ. ಔಪಚಾರಿಕ ವಧುಪರೀಕ್ಷೆ ನಡೆದು. ಮಂಗಲಾ-ಶಶಿಕಾಂತರ ಮದುವೆಯ ಸಾಂಪ್ರದಾಯಿಕ ನಿಶ್ಚಿತಾರ್ಥ ಕಾರ್ಯ ಮುಗಿಯುತ್ತದೆ. ಶಶಿಕಾಂತ - ಮಂಗಲೆಯರ ಸಂಗಮದೊಂದಿಗೆ ಕಾದಂಬರಿ ಸುಖಾಂತ ಕಾಣುತ್ತದೆ.

'ಗಂಡಿನ ನೆರಳು' ಮುಖ್ಯವಾಗಿ ಪಾತ್ರಪ್ರಧಾನ ಕಾದಂಬರಿ. ಸಮಾಜದಲ್ಲಿನ ದುಷ್ಟ-ಶಿಷ್ಟ ವ್ಯಕ್ತಿಗಳೆಲ್ಲ ಇಲ್ಲಿಯ ಪಾತ್ರಗಳು. ಘಟನೆ (Incidents) ಗಳೂ ಕೂಡ ಇದಕ್ಕೆ ಪೂರಕವಾಗಿಯೇ ಬಂದಿವೆ. ವಿದ್ಯಾರ್ಥಿಗಳಂತೆ ಸೋಗುಹಾಕಿದ ಬಾಳಾಸಾಹೇಬನಂತವರು ದುಂಬಿಯಂತೆ ಹೂವಿನಿಂದ ಹೂವಿಗೆ ಹಾರುವ ಇವರು 'ಮನೆಮುರುಕವ್ಯಕ್ತಿಗಳ' ಪ್ರತಿನಿಧಿಯೆಂಬುದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸುತ್ತದೆ. ಬಾಳಾಸಾಹೇಬ. ಶಶಿಕಾಂತ. ಧವಳೇಶ್ವರ. ಈರಪ್ಪ. ನಿಂಗಣ್ಣ. ಬಸವಪ್ರಭು. ಭೀಮಸೇನ. ಮಾರುತಿ. ಶ್ರೀಧರ. ಶಶಿಕಾಂತನ ತಂದೆ. ಸಂಗಪ್ಪ. ಚೆನ್ನವೀರ ಹಾಗೂ ಅವನ ತಂದೆ ಮುಂತಾದವರು ಪುರುಷ ಪಾತ್ರಗಳಾದರೆ. ಮಂಗಲೆ. ಗಂಗವ್ವ. ಗಿರಿಜಾ. ರಮಾ. ಪ್ರಭಾವತಿ. ಸೋನಿ. ಪುಷ್ಪಾ. ನಂದಿನಿ. ಇವೆಲ್ಲ ಸ್ತ್ರೀಪಾತ್ರಗಳು ಹೀಗೆ ಕಾದಂಬರಿಯುದ್ದಕ್ಕೂ ಪಾತ್ರಗಳ ದಂಡೇ ಸೇರಿದಂತಿದೆ.

'ಗಂಡಿನ ನೆರಳು'ಗೆ ಶಶಿಕಾಂತನೇ ಕಥಾನಾಯಕ: ಅವನೊಬ್ಬ ಆದರ್ಶ ಶಿಕ್ಷಕ. ಈತನ ಶಿಸ್ತು-ಸಂಯಮ. ಗಾಂಭೀರ್ಯ. ತಿಳಿವಳಿಕೆ. ಸಮಸ್ಯೆಗಳ ಪರಿಹಾರದಲ್ಲಿ ತೂಕಬದ್ಧ ಆಲೋಚನಾ ನಿರ್ಣಯ ಇವನ್ನೆಲ್ಲ ಲೇಖಕರು ಎರಕ ಹೊಯ್ದಂತೆ ಕಾದಂಬರಿಯಲ್ಲಿ ಹಿಡಿದಿಟ್ಟಿದ್ದಾರೆ. "ಥೂ ನಾಯಿ. ಅಲ್ಲ. ಹಸಿದ ನಾಯಿ !! ಹಳಸಿದ ನುಚ್ಚಿಗೆ ಹಸಿದು ಕುಳಿತ ನೀ. ಹಾಲಿಗೆ ಏನಾದರೂ ಹೆಸರಿಡಬೇಡ. ನೀನೊಬ್ಬ ಮನುಷ್ಯನೆಂದು ತಿಳಿದಿದ್ದೆ. ಮತ್ತಾವ ಪ್ರಾಣಿಗೂ ಹೋಲಿಸಲಾರದ ಕಟುಕ ನೀನು...."[೪೨] ಎಂದು ಬಾಳಾಸಾಹೇಬನಿಗೆ ಕಪಾಳಮೋಕ್ಷ

---

೪೨. ದು. ನಿಂ. ಬೆಳಗಲಿ : ಗಂಡಿನ ನೆರಳು. ಪುಟ ೯೫

ಮಾಡುವಾಗ ಶಶಿಕಾಂತ ತನ್ನ ವ್ಯಕ್ತಿತ್ವವನ್ನೇ ಮರೆದಿದ್ದಾನೆ. ಶಿಕ್ಷಕನ ಮನಸ್ಸು ಸರಿಯಾಗಿದ್ದರೆ ಮಾತ್ರ ಪಾಠ ಸರಿಯಾಗಿ ನಡೆಯಲು ಸಾಧ್ಯ. ಆದರೆ ಬೆಳಗಿನ ಜಾವದ ಬಾಳನೊಂದಿಗಿನ ಘರ್ಷಣೆ ಶಶಿಯ ಮನಸ್ಸನ್ನು ಕದಡಿತ್ತು. ಕ್ಲಾಸಿನಲ್ಲಿದ್ದರೂ ಮನಸ್ಸು ಮಾತ್ರ ತನ್ನ ಹಿಂದಿನ ನೆನಪುಗಳ ಸುರುಳಿಯನ್ನೇ ಬಿಚ್ಚಿತ್ತು. ಬಿಜಾಪುರದಲ್ಲಿ ತನ್ನ ಸಹಪಾಠಿ ವತ್ಸಲಾ ತನ್ನನ್ನು ಆಸೆಪಟ್ಟಿದ್ದು. ಬಿ.ಇಡಿ. ಕಲಿಯುವಾಗಿನ ಕ್ರಿಶ್ಚಿಯನ್ ಹೆಂಗಸು ಜೇನ್. ಸಾಲದೆಂಬಂತೆ ಊರಿಗೆ ಹೋದರೆ ಗಂಡನನ್ನು ಬಿಟ್ಟು ಊರಲ್ಲಿಯೇ ಉಳಿದಿದ್ದ ಕಾಶಿ ಬೇರೆ. ಈ ಮೂವರೂ ಅತೃಪ್ತ ಕಾಮಿನಿಯರೇ. ವಿಕೃತ ಮನೋಭಾವದವರೇ. "ಗಂಡನನ್ನು ಬಿಟ್ಟು ಬಂದ ಕಾಶಿ ತಾರುಣ್ಯಸಹಜವಾದ ಬಯಕೆಗೆ ಯಾರನ್ನೂ ಬಲಿಬೇಡುತ್ತಿದ್ದಳು. ಪರಿಸ್ಥಿತಿಯ ಅನುಕೂಲತೆ ಪಡೆದು ತನ್ನತ್ತ ಕಣ್ಣು ಹಾಕಿದ್ದಳು. ಜೇನ್ ಸ್ವಚ್ಛಂದ ಪರಿಸರದಲ್ಲಿ ಸ್ವೇಚ್ಛೆಯಾಗಿ ಬೆಳೆದ ಮನಸ್ಸನ್ನು ಹತೋಟಿಯಲ್ಲಿಡದೆ. ಸ್ನೇಹವನ್ನು ಬೇರೊಂದು ಅರ್ಥದಲ್ಲಿ ವಿನಿಯೋಗಿಸಲು ಇಚ್ಛಿಸಿದಳು. ವತ್ಸಲಾ. ಮದುವೆಯ ವಯಸ್ಸು ಮೀರಿದಾಗ ಅದಮ್ಯ ಬೇಡಿಕೆಗಳ ದಾಸಿಯಾಗಿ. ಯಾರಾದರೇನಂತೆ ಎನ್ನುವ ತೆರ. ತನ್ನತ್ತ ಮನಸ್ಸು ಹರಿಸಿರಬೇಕು...."[೪೩] ಈ ಕಾಮಿನಿಯರ ಕಾಮವಾಸನೆಗಳು ಕಣ್ಣುಮುಂದೆ ಬಂದಂತಾಗಿ 'ಛೇ' ಎಂದು ತನ್ನಲ್ಲಿಯೇ ಶಶಿಕಾಂತ ಹೇಸಿಕೆಪಟ್ಟುಕೊಂಡಿದ್ದ. ಈ ಪ್ರಸಂಗಗಳು ಶಶಿಯ ಆದರ್ಶವನ್ನು ಒರೆಗಚ್ಚಿದಂತೆ ಕಾದಂಬರಿಯಲ್ಲಿ ಮೂಡಿಬಂದಿವೆ. ತೇರದಾಳದಲ್ಲಿ ಕನ್ಯೆ ತೋರಿಸಿದ ತಂದೆ. ಶ್ರೀಮಂತರಾದ ಅವರ ಆಸ್ತಿಗೆ ಆಸೆಪಟ್ಟಿದ್ದ. ಆದರೆ ಶ್ರೀಮಂತರೆಂಬ ಕಾರಣಕ್ಕಾಗಿ ಹಾಗೂ 'ಮನೆ ಅಳಿಯ' ನಾಗಿ ಅಲ್ಲಿಯೇ ಹೋಗಬಹುದೆಂಬ ಕಾರಣಕ್ಕಾಗಿ ಅದನ್ನು ತಿರಸ್ಕರಿಸಿದ್ದು: "ಹಣಕಟ್ಟಿಕೊಂಡು ಬರುವ ಹುಡುಗಿ; ಆ ದುಡ್ಡಿನ ರಾಶಿಯಲ್ಲಿ ನಾನು ಆಕೆಯ ಕಣ್ಣಿಗೆ ಕಾಣಬೇಕಲ್ಲ! ಒಬ್ಬಳೇ ಮಗಳೆಂದು ಅಚ್ಚೆಯಿಂದ ಬೆಳೆದವಳು. ಆ ಅಚ್ಚೆಯನ್ನು ಕಾಯ್ದುಕೊಂಡು ಹೋಗಲು ಆಕೆಯಲ್ಲಿ ಹಣವೂ ಇದೆ. ಎಲ್ಲ ಮಾರಿ. ಬೇಕಾದರೆ ಆಕೆಯ ಹೆಸರಿಗೆ ಬ್ಯಾಂಕಿನಲ್ಲಿ ಹಣ ಇಡಬಹುದಂತೆ ನಾನೇ ನೌಕರಿ ಬಿಟ್ಟು. ಅವರ ಮನೆಯಲ್ಲಿ 'ಮನೆ ಅಳಿಯ' ನಾಗಿ ಇರಬಹುದಂತೆ; ಅವರ ಸೆರೆಯಾಗಿ ಮೂಕಪ್ರಾಣಿಯಂತೆ ಅವರ ಕೈಯನ್ನು ನೋಡುತ್ತ ಕೂಡ್ರುವುದು ನನಗೆ ಬೇಡವಾಗಿದೆ...."[೪೪] ಎಂದೆನ್ನುವ ಶಶಿಯಂಥ ಸ್ವಾಭಿಮಾನ. ಮದುವೆಯಾಗುವ ಪ್ರತಿಯೊಬ್ಬ ಯುವಕನಲ್ಲಿಯೂ ಬಂದರೆ. ನಮ್ಮ ಸಮಾಜಕ್ಕೆ ವರದಕ್ಷಿಣೆಯೆಂಬ ಶಾಪವೇ ಇರುತ್ತಿರಲಿಲ್ಲ. ಶಶಿಕಾಂತನ ನಿರ್ಧಾರಕ್ಕೆ ಮೂಕಪ್ರೇಕ್ಷಕನಂತೆ ಪಿಳಿ-ಪಿಳಿ ಕಣ್ಣುಬಿಡುತ್ತ. ನೋಡುತ್ತ ಕುಳಿತಿದ್ದ ನಿಂಗಣ್ಣಮಾವ "ಭಲೇ ಮಗನ. ನೀ ಹಾಂಗ ಶ್ಯಾಣ್ಯಾ ಅಂತ ತಿಳಿದೀನಿ. ಆದರ. ನೀ ಭಾಳ ಶ್ಯಾಣ್ಯಾ ಅದಿ ಕಾಂತಪ್ಪಾ! ಎಷ್ಟು ವಿಚಾರಮಾಡಿ ಹೇಳಿದಿ ನೋಡು. ಇದಕ್ಕ ಶ್ಯಾಣ್ಯಾತನ ಅನಬೇಕು! ಇದೆಲ್ಲಾ ವಿಚಾರಮಾಡಿ ನಮಗ ನೋಡಾಕ ಆಗೋಣ?"[೪೫] ಎಂದು ತನ್ನ ಶಹಬ್ಬಾಸಗಿರಿಯನ್ನು ತನಗರಿಯದಂತೆ ಹೇಳಿದ್ದು ಕಾದಂಬರಿಯ ಹಾಗೂ ಶಶಿಕಾಂತನ ಸಹಜ ಪ್ರೌಢತೆಗೆ ಸಾಕ್ಷಿ.

---

೪೩. ದು. ನಿಂ. ಬೆಳಗಲಿ : ಗಂಡಿನ ನೆರಳು. ಪುಟ ೧೦೩

೪೪. ದು. ನಿಂ. ಬೆಳಗಲಿ : ಗಂಡಿನ ನೆರಳು. ಪುಟ ೧೨೯

೪೫. ದು. ನಿಂ. ಬೆಳಗಲಿ : ಗಂಡಿನ ನೆರಳು. ಪುಟ ೧೨೯

ಹಳ್ಳಿಯ ಮುಗ್ಧೆ. ತಾಯಿಯನ್ನು ಅಂಗೈಯಲ್ಲಿ ಆರೈಕೆ ಮಾಡುತ್ತಿರುವ ಬಂಗಾರಿಯನ್ನು ಮದುವೆಯಾಗಲು ನಿರ್ಧರಿಸಿದ ಶಶಿಕಾಂತ. ಅನಿರೀಕ್ಷಿತ ಬೆಳವಣಿಗೆಯೊಂದರಲ್ಲಿ 'ಶ್ರೀಶೈಲ ಅಂಜಬೇಡ ನಿನ್ನ ತಂಗಿಯನ್ನು ಬದುಕಿಸುವೆನೆಂದು' ಹೇಳಿ ಮಂಗಲೆಯನ್ನು ಮದುವೆಯಾಗಲು ಒಪ್ಪಿದ. ಇದರಿಂದಾಗಿ 'ಅಡಕತ್ತಿನಲ್ಲಿ ಅಡಿಕೆ ಸಿಕ್ಕಂತಾ ಅನುಭವ. ಸಮಸ್ಯೆಗಳ ಮಹಾಪೂರದಲ್ಲಿ ಬಂಗಾರಿ ಮುಳುಗೇಳುತ್ತಿದ್ದಳು. ತನ್ನ ಮೇಲಿರಿಸಿದ ಬಂಗಾರಿಯ ಪ್ರೀತಿಯನ್ನೇ ಬಂಡವಾಳವಾಗಿಸಿಕೊಂಡು ಶಶಿಕಾಂತ ಅವಳ ಮನಸ್ಸನ್ನು ಪರಿವರ್ತಿಸಿ ತನ್ನ ತಮ್ಮನನ್ನು ಮದುವೆಯಾಗಲು ಒಪ್ಪಿಸಿದ್ದು. ಶಶಿಕಾಂತನ ಜಾಣ್ಮೆ. ತಾಳ್ಮೆ. ಸಮಸ್ಯೆಯನ್ನು ಬಿಡಿಸುವ ತಂತ್ರಗಾರಿಕೆಗೆ ಬಂಗಾರಿಯಷ್ಟೇ ಯಾಕೆ ಓದುಗರೂ ತಲೆಬಾಗಬೇಕು. 'ಕಾಂತು ನನ್ನ ಜೀವನದ ಸುತ್ತ ತಿರ್ರ್ರೀರಿ' ಎಂದೆನ್ನುತ್ತಲೇ ಬಂಗಾರಿ ಅವನ ಮಾತುಗಳಿಗೆ ಮೌನವಾಗಿಯೇ 'ಹುಂ' ಎಂದು ಸಮ್ಮತಿಸಿದ್ದು ತುಂಬ ಆಪ್ಯಾಯಮಾನವೆನ್ನಿಸುತ್ತದೆ. ಬಂಗಾರಿಯ 'ಹುಂ' ನ್ನೇ ಹೊತ್ತುಕೊಂಡು ಬಂದ "ಶಶಿಕಾಂತನ 'ಬುತ್ತಿ' ಬಿಚ್ಚುತ್ತಿದ್ದಾಗ ಪೇರಲ. ಬಾರೇಹಣ್ಣು ಉರುಳಿ ನೆಲದ ತುಂಬೆಲ್ಲ ಓಡಿದವು. ಹುಚ್ಚ ಬೆದರಿಸಿದ ಹುಡುಗರಂತೆ ಹಣ್ಣುಗಳನ್ನೆಲ್ಲ ಸೇರಿಸಿ ಒಂದು ತಾಟಿನಲ್ಲಿ ತೆಗೆದಿಟ್ಟು ಬುತ್ತಿ ಬಿಚ್ಚಹತ್ತಿದಳು ಮಂಗಲ".[೪೬] ಲೇಖಕರ ಔಚಿತ್ಯಪೂರ್ಣವಾದ ಈ ಹೋಲಿಕೆಯೇ 'ಶಶಿಕಾಂತ-ಮಂಗಲೆಯ ಬದುಕಿನ ಬುತ್ತಿಯಲ್ಲಿಯ ಫಲಗಳೆಲ್ಲ ನೆಲದ ಮೇಲೆಲ್ಲ ಹರಿದಾಡಿ ಚೆಲ್ಲಾಪಿಲ್ಲಿಯಾಗಿ ಹೋಗುತ್ತಿದ್ದ ಅವುಗಳನ್ನು ಆಯ್ದು ಒಂದು ತಾಟಿನಲ್ಲಿರಿಸಿ ಒಟ್ಟುಗೂಡಿಸಿದ್ದು ಅವರ ಸಂಬಂಧ ಗಟ್ಟಿಗೊಂಡ ಬಗೆಗೆ ಸೂಚನೆಯಿತ್ತಂತೆ. ಮಂಗಲೆ-ಬಂಗಾರಿಯರಲ್ಲಿ ಅಕ್ಕ-ತಂಗಿಯರ ಸಂಬಂಧವನ್ನೇ ಬೆಸೆದ ಶಶಿಕಾಂತ. ಮಂಗಲಾಳ ಬಗ್ಗೆ ಅನೇಕ– 'ಈಕಿನ ಕೆಡಿಸಿ ಹೋದ; ಆಕೀನ ಕೊಂದು ಹೋದ....' ಎಂಬಂತಹ ಬಿರುನುಡಿಗಳನ್ನು ಕೇಳಿದರೂ. ಅವುಗಳಿಗೆಲ್ಲ ತಲೆಕೆಡಿಸಿಕೊಳ್ಳದೆ. ಮಂಗಲೆಯನ್ನು ಯಥಾಸ್ಥಿತಿಯಲ್ಲಿಯೇ ಪ್ರೀತಿ-ಆದರದಿಂದ ಕಾಣುತ್ತ ಹೋದುದು ಶಶಿಕಾಂತನ 'ಉನ್ನತಮಟ್ಟ'ವನ್ನು ತೋರಿಸುತ್ತದೆ. 'ಬಿಸಿಲುಂಡವನಿಗೆ ಬೆಳದಿಂಗಳು ಆಪ್ಯಾಯಮಾನವೆನ್ನಿಸುವಂತೆ ಮೊದಲು ಕಷ್ಟ. ಅನಂತರ ಆನಂದ ದೈವಲೀಲೆಯೇ ಹೀಗೆ ಎಂದು ಮಂಗಲೆಗೆ ಹೇಳುತ್ತ. ಬೆಂಗಳೂರಿನಲ್ಲಿದ್ದಾಗ. ಅತೀ ಸಂಯಮದಿಂದ ಅವಳೊಂದಿಗಿನ 'ಸಂಬಂಧರೇಖೆ'ಯನ್ನು ಕಾಪಾಡಿಕೊಂಡದ್ದು ಶಶಿಕಾಂತನ ನಡೆ-ನುಡಿಗಳಿಗೆ ವ್ಯಾಖ್ಯಾನ ಬರೆದಂತಿದೆ. ಹೀಗೆ ಕಾದಂಬರಿಯುದ್ದಕ್ಕೂ ಶಶಿಕಾಂತನ ಪಾತ್ರಕ್ಕೆ ಧಕ್ಕೆ ಬಾರದಂತೆ ಅಚ್ಚುಕಟ್ಟಾಗಿಯೇ ಪ್ರತಿಬಿಂಬಿಸಿದ್ದು. ಶಿಕ್ಷಕರಾದ ಬೆಳಗಲಿಯವರು ಶಿಕ್ಷಕರ ಪಕ್ಷಪಾತಿಯೇನೋ ಎಂಬಂತಿದೆ. ಅದು ಸಹಜ.

ಬಾಳಾಸಾಹೇಬ ಶ್ರೀಮಂತಿಕೆಯಲ್ಲಿಯೇ ಹೊರಳಾಡಿದವ. 'ಕಾಲೇಜಿನ ಪ್ರಥಮವರ್ಷ ವಿಜಾಪುರ. ದ್ವಿತೀಯ ವರ್ಷ ಬಾಗಲಕೋಟದಲ್ಲಿ ಕಳೆದು. ತೃತೀಯ ವರ್ಷಕ್ಕೆ ಜಮಖಂಡಿ....' ಗೆ ಬಂದ ಬಾಳನ ಖಯಾಲಿ ಜೀವನದ ಬಗ್ಗೆ ಬರೆಯುತ್ತ ಲೇಖಕರು. "ಹೊಸದಾಗಿ ಬಂದವರು. ಹೊಸವರ್ಗಕ್ಕೆ ಸೇರಿದ ಹುಡುಗರು ವಸ್ತ್ರಪ್ರದರ್ಶನ ನಡೆಸುತ್ತಿದ್ದಂತೆ ಕೆಲ ಹುಡುಗಿಯರು. ಅರಿವೆ ಅಂಗಡಿಗಳ ಮುಂದಿನ ಪ್ರತಿಮೆಗಳಂತೆ ಅಲಂಕರಿಸಿಕೊಂಡು

೪೬. ದು. ನಿಂ. ಬೆಳಗಲಿ : ಗಂಡಿನ ನೆರಳು. ಪುಟ ೧೭೭

ತಿರುಗುತ್ತಿದ್ದರು. ನಿರುದ್ದೇಶವಾಗಿ "[೪೭] ಎಂದೆನ್ನುತ್ತ ಎತ್ತಲೋ ಸಾಗುತ್ತಿರುವ ಕಾಲೇಜು ಶಿಕ್ಷಣವನ್ನು ಅನಾವರಣಗೊಳಿಸಿದ್ದಾರೆ. ಬಟ್ಟೆಬದಲಿಸಿದಂತೆ 'ಸ್ತ್ರೀಸಂಗ' ವನ್ನು ಬದಲಿಸುವ ಬಾಳ ಅಪ್ಪಟ ಉಡಾಳ. ಬಾಳಿಪಡದಲ್ಲಿ ಸೋಸಿಯ ಸೆರಗಿನಲ್ಲಿ ಬಿದ್ದ ಈತನ ಬದುಕಿಗೆ ಅದೇ ಸೆರಗು ಉರುಳಾಗಿ ಪರಿಣಮಿಸಿದ್ದೊಂದು ಅವನ ಬದುಕಿನ ದುರಂತವೇ ಸರಿ. ಕಾಲೇಜಿನ ಒಂದೊಂದು ತರಗತಿಗಳನ್ನು ದ್ವೈವಾರ್ಷಿಕ ಯೋಜನೆಯಂತೆ ಪಾಸು ಮಾಡುತ್ತಿದ್ದ ಬಾಳ. ಎದುರುಮನೆಯ ಮಂಗಲೆಯನ್ನು ಮೆಚ್ಚಿ. ಮದುವೆಯಾಗುವ ಸೋಗುಹಾಕಿದ್ದ. ಆದರೆ ತನ್ನ-ಮಂಗಲೆಯ ಗುಣ-ಸ್ವಭಾವಗಳು ಪರಸ್ಪರ ವಿರುದ್ಧವೆಂದರಿತಾಗ ಸಾವಕಾಶವಾಗಿ ಗಿರಿಜಾಳ ಮುಖಾಂತರ ರಮಾಳತ್ತ ಜಾರಿದ: ಗಿರಿಜಾಳ ಮನೆಯಲ್ಲಿ ತನ್ನ ಠಿಕಾಣಿ ಊರಿದ. ರಮಾಳೊಂದಿಗೆ ತಿರುಗಾಡಿದ್ದೇ ತಿರುಗಾಡಿದ್ದು. ಇದೂ ಸಾಲದೆಂಬಂತೆ ಪುಷ್ಪಳ 'ಸಂಗ'ವಂತೂ ಇದ್ದೇ ಇತ್ತು. ಅವಳಿಗಾಗಿ ಹಣದ ಹೊಳೆಯನ್ನೇ ಹರಿಸುತ್ತಲಿದ್ದ. ನಂದಿನಿಗೆ ಸಿಳ್ಳು ಹೊಡೆಯಲು ಪ್ರಾರಂಭಿಸಿದ್ದು ಬಾಳನ ಅಶಕ್ತ ಮನಸ್ಸಿಗೆ ಹಿಡಿದ ಕನ್ನಡಿ. ದುಂಬಿಯಂತೆ ಹೂವಿಂದ ಹೂವಿಗೆ ಹಾರಾಡುವ ಬಾಳನಿಗೆ ಶ್ರೀಮಂತಿಕೆಯೇ ಇವನ ಬಾಲಂಗಾಸಿ. ನಂದಿನಿಗೆ ಪತ್ರ ಬರೆಯುತ್ತ ಪೀಡಿಸಿದ್ದು. ಅವಳ ಅಣ್ಣ ತನ್ನ ಸ್ನೇಹಿತರೊಂದಿಗೆ ಒಂದು ದಿನ ಇವನನ್ನು ಅಡ್ಡಗಟ್ಟಿ. ರಮೆಯ ಎದುರಲ್ಲಿಯೇ 'ಒದ್ದ ಪ್ರಸಂಗ' ಸಿನಿಮೀಯ ರೀತಿಯಲ್ಲಿ ನಡೆದುಹೋಗುತ್ತದೆ. ಅವನನ್ನೆಬ್ಬಿಸಿ ಮನೆಗೆ ಕರೆತಂದ ರಮಾ. ಗಿರಿಜಾಳ ಮಾತಿಗೆ "ಕತ್ತಲ್ಲಿ ನೋಡದೆ ಮುಳ್ಳುಕಟ್ಟಿಗೆಯೊಳಗೆ ಬಿದ್ದರು"[೪೮] ಎಂದು ಹೇಳುವ ಆಕೆ ಹಾಡುಹಗಲಲ್ಲಿಯೇ ಮೇಲೇಳದ ಬದುಕಿನ ಕಂದಕದಲ್ಲಾಗಲೇ ಬಿದ್ದಿದ್ದಳು. ತನ್ನಂತೆ ರಮೆಯೂ ಅನಾಚಾರಿಯೆಂದರಿತಾಗ. ಅವಳನ್ನು ನೇರವಾಗಿಯೇ ತಿರಸ್ಕರಿಸಿ. ಮತ್ತೆ ಕೆಂಪು ದೀಪದ ಸೋಸಿಯ ಸೆರಗನ್ನೇ ಸೇರಿದ್ದ. ತನ್ನ ಸಂಪತ್ತನ್ನೆಲ್ಲ ಒಂದೆಡೆ ಪುಷ್ಪಾ ಲೂಟಿಮಾಡಿದರೆ: ಉಳಿದುದನ್ನು ಸೋಸಿಯ ಸೆರಗಿನಲ್ಲಿ ಸುರಿದ. ಎಲ್ಲವೂ ಖಾಲಿಯಾದಾಗ ಹುಚ್ಚಾಸ್ಪತ್ರೆಗೆ ಸೇರಿಕೊಂಡ. ಕಾದಂಬರಿಯುದ್ದಕ್ಕೂ 'ಶೋಕಿಲಾಲ' ನಾಗಿಯೇ ಕಾಣುವ ಬಾಳನ ಬದುಕು ನಾಟಕೀಯ ತಿರುವು ಪಡೆದು ಹುಚ್ಚನಾಗಿ ಬೆಂಗಳೂರಿನಲ್ಲಿ ಶಶಿಕಾಂತನಿಗೆ ಭೇಟ್ಟಿಯಾದದ್ದು: ಕಾಮುಕ-ಹೊಣೆಗೇಡಿಯಾದ ಈತನ ಬದುಕು ದುರಂತಕ್ಕೀಡಾದ ಬಗೆಯನ್ನು ಕಾದಂಬರಿಕಾರರು ಚೆನ್ನಾಗಿ ಚಿತ್ರಿಸಿದ್ದಾರೆ.

ಶ್ರೀಶೈಲನದು ಸಮತೂಕದ ವ್ಯಕ್ತಿತ್ವ. ವಯಸ್ಸಿನಿಂದ ಕಿರಿಯನಾದರೂ ಮನೆಯ ಪೂರ್ಣ ಜವಾಬ್ದಾರಿ ಹೊತ್ತು ನಡೆಸುವ ಅವನ ಗುಣ ಉಳಿದವರಿಗೆ ಮಾದರಿ. ತಂಗಿಯ ಬಗ್ಗೆ ಅವನಿಗಿರುವ ಪ್ರೀತಿ-ವಾತ್ಸಲ್ಯಗಳು ಸದಾ ಸ್ಮರಣೀಯ. ಕುಟುಂಬದ ಎಂಥ ಸಂಕಟದಲ್ಲಿಯೂ ಎದೆಗುಂದದೆ ಮುನ್ನುಗ್ಗುವ ಸಮರ್ಥ. ಕುಟುಂಬದ ಭಾರಹೊತ್ತು ಸಾಗಲು ಬೇಕಾದ ಗುಣಗಳನ್ನೆಲ್ಲ ಕಾದಂಬರಿಕಾರರು ಶ್ರೀಶೈಲನಲ್ಲಿ ತುಂಬಿದ್ದಾರೆ. ಒಟ್ಟಿನಲ್ಲಿ ತಂಗಿಗೆ ಒಳ್ಳೆಯ ಅಣ್ಣನಾಗಿ. ತಾಯಿಗೆ ತಕ್ಕ ಮಗನಾಗಿ ನಡೆದುಕೊಳ್ಳುವ ಶ್ರೀಶೈಲನ ಪಾತ್ರ ಕಾದಂಬರಿಯಲ್ಲಿ ಚೆನ್ನಾಗಿಯೇ ಮೂಡಿಬಂದಿದೆ.

---

೪೭. ದು. ನಿಂ. ಬೆಳಗಲಿ : ಗಂಡಿನ ನೆರಳು, ಪುಟ ೮

೪೮. ದು. ನಿಂ. ಬೆಳಗಲಿ : ಗಂಡಿನ ನೆರಳು, ಪುಟ ೧೨೧

ಸ್ತ್ರೀಪಾತ್ರಗಳಲ್ಲಿ ಪ್ರಮುಖವಾದ ಮಂಗಲಾ. ಕಾದಂಬರಿಯ ಪ್ರಾರಂಭದಲ್ಲಿಯೇ ಕಣ್ಣಿಗೆ ಬೀಳುತ್ತಾಳೆ. ಆರಂಭದಿಂದ ಕೊನೆಯವರೆಗೂ ವ್ಯಾಪಿಸಿಕೊಂಡ ಈ ಪಾತ್ರ 'ಬಿಸಿಲ ಹೂವಂತೆ' ಕಾಣುತ್ತಾಳೆ. ಮಂಗಲೆಯ ಬಾಳಿನಲ್ಲಿ ಬಿಸಿಲಾಗಿ ಪ್ರವೇಶಿಸಿದ ಬಾಳ ಅರ್ಧಕ್ಕೆ ಕೈಬಿಟ್ಟು ಹೋದರೆ. ಬೆಳದಿಂಗಳಾಗಿ ನೊಂದ ಮನಕ್ಕೆ ಶಶಿಕಾಂತ ಶಾಂತಿ-ನೆಮ್ಮದಿಯನ್ನು ನೀಡುತ್ತಾನೆ. 'ಬಿಸಿಲು ಬೆಳದಿಂಗಳೆರಡನ್ನು ಉಂಡ ಮಂಗಲೆಯ ಪಾತ್ರ ಒಂದರ್ಥದಲ್ಲಿ 'ಪರಿಪೂರ್ಣ'ವಾಗಿ ಮೂಡಿಬಂದಿದೆಯೆಂದು ಹೇಳಬಹುದು. ಅವಳ ಬದುಕೇ ವಿಚಿತ್ರವೆನ್ನಿಸುತ್ತದೆ. ನೋಡಿದ್ದು ಒಬ್ಬ; ಮೆಚ್ಚಿದ್ದು ಇನ್ನೊಬ್ಬ; ಮದುವೆಯಾಗಲು ಒಪ್ಪಿದ್ದು ಮತ್ತೊಬ್ಬ. ದೈವಭಕ್ತೆಯಾದ ಮಂಗಲೆಯನ್ನು ಕೊನೆಗಾಲದಲ್ಲಿ ಆ ದೈವ ಕೈಬಿಡುವುದಿಲ್ಲ. ಬಂಗಾರಿ ಹಳ್ಳಿಗಾಡಿನ ಹುಡುಗಿಯಾದರೂ ಶಶಿಯ ಮೇಲಿನ ಪ್ರೀತಿಯಿಂದಾಗಿ ಮಂಗಲೆಯ ಒಳಿತಿಗಾಗಿ ಶಶಿಯನ್ನು ತ್ಯಾಗ ಮಾಡಿದ್ದು. ಮಂಗಲೆಗೆ ಮೆಚ್ಚುಗೆಯಾಗುತ್ತದೆ: ಎಲ್ಲರಿಗೂ ಮೆಚ್ಚುಗೆಯಾಗುತ್ತದೆ. ಲೇಖಕರು ಮಂಗಲೆಯ ಪಾತ್ರಚಿತ್ರಣದ ಮೂಲಕ ಸ್ತ್ರೀ ಪಾತ್ರಗಳನ್ನು ಪ್ರೌಢ ಹಾಗೂ ಪರಿಣಾಮಕಾರಿಯಾಗಿ ಚಿತ್ರಿಸುವಲ್ಲಿ ತಾವೂ ಸಿಪ್ಣಾತರೆಂಬುದನ್ನು ಸಾಬೀತುಪಡಿಸಿದ್ದಾರೆ. ಕಾದಂಬರಿಯುದ್ದಕ್ಕೂ ಮಂಗಲೆಯ ನೋವು - ನಲಿವು. ಮರುಕ - ವಿಷಾದ. ಹಟ. ಮುಗ್ಧತೆ. ಕಠಿಣತೆ. ಮಧುರತೆ. ಸೋದರತೆಗಳು ಮೂರ್ತಿವೆತ್ತಿವೆ.

ಗಂಗವ್ವ-ಗಿರಿಜಾ ಇಬ್ಬರೂ ಆತ್ಮೀಯ ಗೆಳತಿಯರಾದರೂ. ನಡೆ-ನುಡಿಗಳಲ್ಲಿ ಸಾಕಷ್ಟು ಅಂತರ ಹೊಂದಿದವರು. ಗಂಗವ್ವನದು ಮನೆ-ಮನೆತನ-ಮಕ್ಕಳು ಎಂದು ಹೊಂದಿಕೊಂಡು ಹೋಗುವ ಪಾತ್ರವಾದರೆ, ಗಿರಿಜಾ ಹಾಗಲ್ಲ. ಈರಪ್ಪನೊಂದಿಗಿನ ಸಂಬಂಧದ ಕಾರಣಕ್ಕಾಗಿಯೇ ಗಂಡನನ್ನು ಇಬ್ಬರೂ ಸೇರಿ ಮುಗಿಸಿದ್ದಲ್ಲದೆ. ಬಾಳನನ್ನು ಆಹ್ವಾನಿಸಿ ರಮಾ ದಾರಿತಪ್ಪಲು ಎಡೆಮಾಡಿಕೊಟ್ಟದ್ದು. ಅನಂತರ ತನ್ನಷ್ಟಕ್ಕೆ ತಾನು ತಪ್ಪನ್ನರಿತುಕೊಂಡು ಸರಿಪಡಿಸಲು ಮುಂದಾದಾಗ. ಅಷ್ಟೊತ್ತಿಗಾಗಲೇ ಬಾಳ-ರಮಾ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಈಜುತ್ತಿದ್ದರು. ಗಿರಿಜಾ ಕಾದಂಬರಿಯಲ್ಲಿ ಒಬ್ಬ ಕುಂಟಲಗಿತ್ತಿಯಾಗಿ ಕಾಣುತ್ತಾಳೆ. ಇಂಥವರು ಸದಾಕಾಲಕ್ಕೂ ಇರುವವರೇ. ಗಿರಿಜಾ-ರಮಾ-ಸೋನಿ-ಪುಷ್ಪಾಳಂಥವರು ಸಮಾಜದಲ್ಲಿರುವವರೆಗೆ. ಮಂಗಲಾ-ಶಶಿಯಂತವರಿಗೆ ಸುಖವಿಲ್ಲವೆಂದು ಸಾರುವುದೇ ಕಾದಂಬರಿಯ ಮೂಲ ಆಶಯ.

'ಬಿಸಿಲು-ಬೆಳದಿಂಗಳು' ಹೆಸರೇ ಸೂಚಿಸುವಂತೆ ಇಲ್ಲಿಯ ಎಲ್ಲರೂ ಬಿಸಿಲು-ಬೆಳದಿಂಗಳುಗಳೆರಡನ್ನು ಉಂಡವರೇ. ಪ್ರಸ್ತುತ ಕಾದಂಬರಿ ಬರೆಯುವಷ್ಟೊತ್ತಿಗಾಗಲೇ ಬೆಳಗಲಿಯವರಿಗೆ 'ಕಾದಂಬರಿ ರಚನೆ' ಸಲೀಸಾಗಿ ರೂಢಿಸಿತ್ತು. ಈ ಹಿಂದಿನ ಕಾದಂಬರಿಗಳಿಗಿಂತ. "ಭಾಷೆ-ಭಾವ-ನಿರೂಪಣೆ ಅಕೃತಕ: ಸಂಸ್ಕೃತಿ - ಪರಂಪರೆಗಳ ಜೀವಂತ ಚಿತ್ರಣವಿದೆ. ಕಾದಂಬರಿಯ ಘಟನೆಗಳು. ಸನ್ನಿವೇಶಗಳು. ಸಹಜವಾಗಿದ್ದು. ಬೆಳಗಲಿಯವರು ಅನಗತ್ಯವಾಗಿ ಎಲ್ಲಿಯೂ ವರ್ಣನೆಗಳನ್ನು ಬೆಳೆಸುವುದಿಲ್ಲ. ಒಂದೆರಡು ಮಾತುಗಳಲ್ಲಿಯೇ ಚಿತ್ರಣವನ್ನು ಮೂಡಿಸುತ್ತಾರೆ. ಬಿಜಾಪುರ ಸುತ್ತಮುತ್ತಲಿನ ನಿತ್ಯ ಬಳಕೆ ಮಾತಿನಲ್ಲಿ ನಡೆಯುವ ಆತ್ಮೀಯ ಸಂಭಾಷಣೆ ಕಾದಂಬರಿಯ ಸೊಗಸನ್ನು

ಹೆಚ್ಚಿಸಿದೆ. ಅಲ್ಲಲ್ಲಿ ನಾಣ್ಣುಡಿ, ನುಡಿಗಟ್ಟುಗಳನ್ನು ಬಳಸಲು ಮರೆತಿಲ್ಲ ಬೆಳಗಲಿ" [೪೯]. ಕಾದಂಬರಿಯ ಕಥಾನಿರೂಪಣೆಯಂತೂ ಎಲ್ಲಿಯೂ ಉದ್ವೇಗಗೊಳ್ಳದೆ ಶಾಂತವಾಗಿ ಸಾಗುತ್ತದೆ.

'ಬಿಸಿಲು-ಬೆಳದಿಂಗಳು' ಉತ್ಕೃಷ್ಟ ಕಾದಂಬರಿಯಾಗದಿದ್ದರೂ, ಒಂದು ಉತ್ತಮ ಸಾಮಾಜಿಕ ಕಾದಂಬರಿಯಾಗಿ ಓದುಗರ ಮನವನ್ನು ಆಕರ್ಷಿಸಿದೆ.

### ಸಾಮಾಜಿಕ ಶೋಷಣೆಯನ್ನು ಚಿತ್ರಿಸುವ ಕಾದಂಬರಿಗಳು :

ಬೆಳಗಲಿಯವರಿಗೆ 'ಗ್ರಾಮೀಣ ಸಾಮಾಜಿಕ' ಸಮಸ್ಯೆಗಳ ಬಗ್ಗೆ ಹೆಚ್ಚಿನ ಆಸಕ್ತಿ. ಅವರ ಬಹುತೇಕ ಕಾದಂಬರಿಗಳು ಸಾಮಾಜಿಕವೇ ಆಗಿವೆ. ಅವರ ಕಾದಂಬರಿಗಳಲ್ಲಿ ಉತ್ತರ ಕರ್ನಾಟಕದ ಹಳ್ಳಿ-ಪಳ್ಳಿಯ ಜನಜೀವನ ಚೆನ್ನಾಗಿ ಚಿತ್ರಿತವಾಗಿದೆ. ಪ್ರಗತಿಶೀಲ ಮನೋಭಾವ ಅವರಲ್ಲಿದ್ದರೂ ಕೂಡ ಯಾವುದೇ ಪಂಥಕ್ಕೆ ಜೋತುಬಿದ್ದು ಬರೆದವರಲ್ಲ. ಸಾಮಾಜಿಕ ಅಸಮಾನತೆ, ಹಾಗೂ ಶೋಷಣೆಗಳನ್ನು ನಿರಾತಂಕವಾಗಿ ಅಷ್ಟೇ ನಿರ್ಭಿಡೆಯಾಗಿ ಹೇಳುವ ಇವರು, ಸದ್ದುಗದ್ದಲವಿಲ್ಲದೆ ತಮ್ಮ ಗುರಿಯನ್ನು ಮುಟ್ಟುವ 'ಛಾತಿ' ಇವರ ಬರವಣಿಗೆಗಿದೆ. ಸಾಮಾಜಿಕ ವಿಕೃತ ಅಂಗ-ರಂಗಗಳನ್ನು ಕೇವಲ ಎತ್ತಿ ತೋರಿಸಿದ್ದಕ್ಕಷ್ಟೇ ತೃಪ್ತರಾಗದ ಬೆಳಗಲಿಯವರು ಆ ಸಮಸ್ಯೆಗಳಿಗೆ ಸೂಕ್ತ ಪರಿಹಾರೋಪಾಯಗಳನ್ನೂ ಸೂಚಿಸುತ್ತ ಹೋಗಿದ್ದು ಇವರ ಸಾಮಾಜಿಕ ಕಾದಂಬರಿಗಳ ವೈಶಿಷ್ಟ್ಯ. ಯಾವುದೇ ರೀತಿಯ ಆವೇಶ-ಆಕ್ರೋಶಗಳಿಗೆ ವೈಯಕ್ತಿಕ ಆಸ್ಪದಕೊಡದೆ ಸಂಯಮದಿಂದ ಬರೆಯುತ್ತ ಹೋಗುವ ಬೆಳಗಲಿಯವರು ಓದುಗರ ಮೇಲೆ ತಮ್ಮ ಯಾವುದೇ ಸಿದ್ಧಾಂತಗಳನ್ನು ಹೇರದೆ, ಒಳಿತು-ಕೆಡಕುಗಳನ್ನು ಮುಂದಿಟ್ಟು ಓದುಗನನ್ನು 'ಸಮತೋಲನ ಪ್ರಜ್ಞೆ'ಯಲ್ಲಿ ಕಟ್ಟಿಹಾಕುತ್ತಾರೆ. ಸಾರ್ವಕಾಲಿಕ ಮಾನವೀಯ ಮೌಲ್ಯಗಳನ್ನು ಬಿತ್ತರಿಸುವಲ್ಲಿ ಇವರ ಸಾಮಾಜಿಕ ಕಾದಂಬರಿಗಳು ಯಶಸ್ವಿಯಾಗಿವೆ.

'ಅಂಧೇರಿನಗರಿ', 'ವಾತ್ಸಲ್ಯಮಯಿ', 'ಸೀಮೆಗಳು', 'ರಣಹದ್ದುಗಳು', 'ಖೂನೀಜನ' ಮುಂತಾದವುಗಳು ಸಾಮಾಜಿಕ ಶೋಷಣೆಯ ಮೇಲೆ ಕ್ಷ-ಕಿರಣ ಬೀರುವ ಪ್ರಮುಖ ಕಾದಂಬರಿಗಳು.

### ಅಂಧೇರಿನಗರಿ (೧೯೮೨) :

ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಆಡಂಬರ, ದರ್ಪ, ಅಟ್ಟಹಾಸ ಹಾಗೂ ವೈಭವೋಪೇತ ಜೀವನಕ್ಕೆ ಹೆಸರಾಗಿದ್ದ ದೇಶಿ ಆಳಸರಸರ ಮನೆತನಗಳು ಕಾರಣಾಂತರಗಳಿಂದ ಕ್ರಮೇಣ ಅವನತಿಯತ್ತ ಸಾಗಿದ್ದು ಕಾಲದ ಬದಲಾವಣೆಯ ಸಂಕೇತ. ಇಂಥ ಆಳರಸರ ಮನೆತನವೊಂದರ ಹಾಗೂ ಅಂದಿನ ಸಾಮಾಜಿಕ ಸ್ಥಿತಿ-ಗತಿಗಳ 'ವಿಶಿಷ್ಟ ಕುತೂಹಲಕಾರಿಕಥೆ' ಯನ್ನೊಳಗೊಂಡ 'ಅಂಧೇರಿನಗರಿ' ಒಂದು ಮನೋಜ್ಞ ಸಾಮಾಜಿಕ ಕಾದಂಬರಿ.

ಆನಂದವಾಡಿ ಒಂದು ಚಿಕ್ಕಸಂಸ್ಥಾನ. ಈ ಸಂಸ್ಥಾನದ ಮೂಲಪುರುಷ ಧೋಂಡಿಬಾ ಪೇಶ್ವೆಯವರಲ್ಲಿ ಮನಸಬ್‌ದಾರನಾಗಿದ್ದ. ಅವನ ಕಾರ್ಯವೈಖರಿಗೆ ಮೆಚ್ಚಿ ಪೇಶ್ವೆ ಅವನಿಗೆ ಕರ್ನಾಟಕದ ನಂದರಗಿಯನ್ನು

೪೯. ಬಸವರಾಜ ಜಗಜಂಪಿ : ಜಿ. ಎಸ್. ಕಾಪಸೆ (ಸಂ) : ಬೆಳಗಲಿ : ಅಭಿನಂದನ ಗ್ರಂಥ, ಪುಟ ೧೩೬

ಉಂಬಳಿಯಾಗಿ ಕೊಟ್ಟಿದ್ದರು. ಇದನ್ನೇ ಘೋಂಡಿಬಾ ವಿಸ್ತರಿಸಿ. ಹತ್ತೆಂಟು ಹಳ್ಳಿಗಳನ್ನು ಅದಕ್ಕೆ ಸೇರಿಸಿಕೊಂಡು ತನ್ನ ಮಗನ ಹೆಸರಿನಿಂದ ' ಆನಂದವಾಡಿ ' ಎಂದೇ ಕರೆದಿದ್ದ. ಹಿಂದಿನ ಮಹಾರಾಜ ರಾಘೋಜಿರಾವ್ ಒಬ್ಬ ಕಟ್ಟಡಗಳ ಶೋಕಿ ರಾಜನಾಗಿದ್ದುದರಿಂದ. ಬೆಟ್ಟದ ಮೇಲೊಂದು ಮೂರು ಅಂತಸ್ತಿನ ಭವ್ಯ ಬಂಗಲೆಯೊಂದನ್ನು ಕಟ್ಟಿಸಿದ್ದ. ಆ ಬಂಗಲೆಗೆ ಉತ್ತರಾಧಿಕಾರಿಯಾಗಿ ರಾವ್‌ಸಾಹೇಬ ಹಾಗೂ ರಾಘೋಜಿರಾವ್‌ರ ಅಧಿಕಾರಾವಧಿಯಲ್ಲಿ ದಿವಾಣರಾಗಿದ್ದ ನಾಗೇಶರಾಯರ ಮಗ ಉಮೇಶ ಸಂಸ್ಥಾನದ ದಿವಾಣನಾದ. ಆನಂದವಾಡಿಯ ಈ ದೇಶಿ ಆಳರಸರ ಭದ್ರಗೋಡೆಯ ರಾಜವಾಡೆಗಳಲ್ಲಿ ಎಂಥೆಂಥ ಅದ್ಭುತ ಪ್ರಸಂಗಗಳು. ಗೂಢಪ್ರಕರಣಗಳು ವಿವಿಧ ಭಾನಗಡಿಗಳು. ನಂಬಲಸಾಧ್ಯವಾದ ಕಥೆಗಳು ಜರುಗುತ್ತವೆಯೆಂಬುದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸುತ್ತದೆ.

ಪ್ರಭು ಒಬ್ಬ ವೈದ್ಯಕೀಯ ಪದವೀಧರ. ತಂದೆ ಶಿವಣ್ಣನ ಆಶಯದಂತೆ ಆನಂದವಾಡಿಯ ಸರಕಾರಿ ಆಸ್ಪತ್ರೆಗೆ ಡಾಕ್ಟರನಾಗಿ ಸೇರಿಕೊಂಡ. ಉಮೇಶನ ತಂಗಿ ಪ್ರೀತಿಯನ್ನೇ ಪ್ರಭುವಿಗೆ ಕೊಡುವುದೆಂದು ನಿರ್ಧಾರವಾಗಿತ್ತು. ಇದಕ್ಕೆ ಶಿವಣ್ಣನ ಅನುಮೋದನೆಯೂ ಇತ್ತು. ನಾಗೇಶರಾಯರು. ಶಿವಣ್ಣನವರು ಪರಸ್ಪರ ಒಳ್ಳೆಯ ಸ್ನೇಹಿತರಾಗಿದ್ದರು. ಈಗ ದಿವಾಣರ ಮನೆತನದ ಪ್ರೀತಿ ತಮ್ಮ ಮನೆಗೆ ಸೊಸೆಯಾಗಿ ಬರುತ್ತಿರುವುದು ಶಿವಣ್ಣನಿಗೆ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಗಿತ್ತು. ಪ್ರಭು-ಪ್ರೀತಿಯಿಬ್ಬರೂ ಪ್ರೇಮಿಗಳು: ಆದರೆ ಹದಗೆಟ್ಟ ಮಳೆಗಾಲದಲ್ಲಿ ನದಿಗೆ ಮಹಾಪೂರ ಬಂದು. ಎರಡೂ ದಡಗಳನ್ನು ಮೀರಿ-ಉಕ್ಕಿ ಸಿಕ್ಕಸಿಕ್ಕಲ್ಲಿ ಧಾವಿಸುವಂತೆ ಅವರು ಸೀಮೆ ದಾಟಿರಲಿಲ್ಲ. ಒಂದು ದಿನ ಪ್ರೀತಿಯೊಂದಿಗೆ ವಾಯುವಿಹಾರಕ್ಕೆ ಹೋದಾಗ ದಿಡ್ಡಿಮನಿ ದಾದಪ್ಪನ ಮಗಳು ತುಳಸಿಯ ಹೆಣ ಕೆರೆಯಲ್ಲಿ ತೇಲಾಡುತ್ತಿದ್ದುದನ್ನು ಕಂಡ. ಮರುದಿನ ಪೋಸ್ಟ ಮಾರ್ಟಂ ಮಾಡಿದ ಪ್ರಭು ಅದನ್ನು ' ರೇಪ್ ಆ್ಯಂಡ್ ಮರ್ಡರ್ ಡೆಥ್ ' ಎಂದು ರಿಪೋರ್ಟ್ ಬರೆದು ಸರಕಾರಕ್ಕೆ ಸಲ್ಲಿಸಿದ. ಆದರೆ ' ಬೇಲಿಯೇ ಎದ್ದು ಹೊಲ ಮೇಯ್ದಂತಿರುವ ಸ್ಥಿತಿ ' ರಾಜಸಂತತಿಯ ರಾವ್‌ಸಾಹೇಬ ಹಾಗೂ ಉನ್ನತ ಪೋಲಿಸ ಅಧಿಕಾರಿ ಹೊನವಾಡಕರನ ಕರಾಮತ್ತಿನಿಂದ ಆ ರಿಪೋರ್ಟ್ ಮೂಲೆಗುಂಪಾಯಿತು. ಇಲ್ಲಿ ಹೀಗೆ ತುಳಸಿಯ ಪೋಸ್ಟಮಾರ್ಟ್‌ಂ ರಿಪೋರ್ಟ್ ತಿದ್ದಿದ್ದು. ಮುಂದೆ ನೀಲವ್ವನ ಮಾನಭಂಗ ಮಾಡಿದ್ದು. ಸಂಸ್ಥಾನದಲ್ಲಿ ನಡೆಯುವ ಪ್ರತಿಯೊಂದು ಶೋಷಣೆಗಳಿಗೂ ಪ್ರಭು ರೋಸಿಹೋದ.

ಸ್ವದೇಶ ಅಭಿಮಾನ ಹಾಗೂ ಆಳರಸರ ಬಗೆಗೆ ಅಸಹಕಾರ ಪ್ರಭಾವ ಹೆಚ್ಚಾಗುತ್ತಿದ್ದ ಆ ಸಂದರ್ಭದಲ್ಲಿ ದಾನಪ್ಪನಂಥ ಚಳುವಳಿಗಾರನಿಗೆ ತನ್ನ ಆಸ್ಪತ್ರೆಯಲ್ಲಿ ಜಾಗಕೊಟ್ಟ. ದೇಶವು ದಾಸ್ಯದಲ್ಲಿ ಸಿಕ್ಕು. ಬ್ರಿಟಿಶ್ ಆಡಳಿತ. ದೇಶೀ ಅರಸರ ದರ್ಪ-ದಬ್ಬಾಳಿಕೆ. ಪ್ರಜೆಗಳನ್ನು ದಾಸರನ್ನಾಗಿ ಪರಿವರ್ತಿಸಿದ ರೀತಿ ಪ್ರಭುವಿಗೆ ತುಂಬ ನೋವನ್ನುಂಟುಮಾಡಿತು. ಇದನ್ನು ಪ್ರತಿರೋಧಿಸುವುದಕ್ಕಾಗಿ ದಾರಿಕಾಯುತ್ತಿದ್ದ. ಈ ಮಧ್ಯ ರಾವಸಾಹೇಬನ ಬಾಡಿಗೆ ಗೂಂಡಾಗಳು ರಾತ್ರಿಹೊತ್ತಿನಲ್ಲಿ ಸ್ತ್ರೀಯೊಬ್ಬಳಿಗೆ ಹೆರಿಗೆ ನೋವೆಂದು ಹೇಳಿ ಮೋಸದಿಂದ ಚಕ್ಕಡಿಯಲ್ಲಿ ಕರೆದೊಯ್ದು ಮರಣಾಂತಿಕ ಹಲ್ಲೆ ನಡೆಸಿದರು. ಬೆಂಗಾವಲಿಗಿದ್ದ ತುಕಾರಾಮ ಅವರೊಂದಿಗೆ ಹೋರಾಡಿ ಪ್ರಭುವಿನ ಜೀವ ಕಾಪಾಡಿದ್ದ. ಅನಂತರ ಸರ್ಕಾರಿ ಸೇವೆಗೆ ಸಲಾಮು ಹೊಡೆದು ಉಪ್ಪಾರ ಪರಪ್ಪನ ಮನೆಯಲ್ಲಿ ಖಾಸಗಿ

ದವಾಖಾನೆ ತೆರೆದ. ಅವನ ಬೆನ್ನಹಿಂದೆಯೇ ತುಕಾರಾಮ. ಮೇರಿ ಬಂದದ್ದು ತುಂಬ ಉಪಕಾರವಾಯಿತು. ಮುಂದೆ ಶೋಷಿತರನ್ನು. ಸಮಾನ ಮನಸ್ಕರನ್ನು. ಒಂದುಗೂಡಿಸಿ ಅವರಿಗೆ ಆಳರಸರಿಂದ ನಡೆಯುತ್ತಿರುವ ಶೋಷಣೆ-ಅನ್ಯಾಯ. ಅತ್ಯಾಚಾರಗಳನ್ನು ತಿಳಿಸಿ ಹೇಳಿ. ವ್ಯವಸ್ಥಿತ ರೀತಿಯಲ್ಲಿ ಅವರ ವಿರುದ್ಧ ಬಂಡೆದ್ದ. ದಿಡ್ಡಿಮನಿ ದಾನಪ್ಪನನ್ನು ಜೈಲಿನಿಂದ ಹೊರತರುವಲ್ಲಿ ಯಶಸ್ವಿಯಾದ. ಇದೇ ಕಾರಣಕ್ಕಾಗಿ ಅವನನ್ನು ಬಂಧಿಸಿ ಸಾಂಗಲಿ ಜೈಲಿಗೆ ಅಲ್ಲಿಂದ ಪುಣೆಯ ಜೈಲಿಗೆ ಹಾಕಿದರು. ಬಿಡುಗಡೆಯಾಗಿ ಬಂದ ಪ್ರಭು ಊರವರ ಸ್ವಾಗತ-ಪ್ರೀತಿ-ಆದರಕ್ಕೆ ಮೂಕವಿಸ್ಮಿತನಾದ. ಸಿದ್ಧೇಶ್ವರ ಗುಡಿಯಲ್ಲಿ ನಡೆದ ಊರಿನ ಮಹಾಸಮ್ಮೇಳನದಲ್ಲಿ ' ಆನಂದವಾಡಿ ಸಂಸ್ಥಾನದ ಪ್ರಜಾಪರಿಷತ್ ' ನ್ನು ಸ್ಥಾಪಿಸಿದ್ದಲ್ಲದೆ. ಜನರ ಒತ್ತಾಯಕ್ಕೆ ಅವನೇ ಅದರ ಅಧ್ಯಕ್ಷನೂ ಆದ. ಪ್ರಜೆಗಳ ಹಕ್ಕು-ಬಾಧ್ಯತೆಗಳಿಗಾಗಿ ಹೋರಾಡಲು ಬಲವಾದ ಸಿದ್ಧತೆ ನಡೆಸಿದ.

ರಾವ್‌ಸಾಹೇಬ ತನ್ನ ತಂದೆ ರಾಘೋಜಿರಾವ್ ತೀರಿದ ನಂತರ ಆನಂದವಾಡಿಯ ಸಿಂಹಾಸನವನ್ನೇರಿದ. ಗುಜರಾತಿನ ದೇವಗಡ ಸಂಸ್ಥಾನಿಕ ಬೀರೇಂದ್ರಸಿಂಗನ ಮಗಳು ರೋಹಿಣಿಯನ್ನು ಮೂರು ಲಕ್ಷಕ್ಕೆ ಮರುಳಾಗಿ ಮದುವೆಯಾದ. ವಿವಾಹದ ಆರಂಭದಲ್ಲಿ ಆತನಿಗೆ ತನ್ನ ಹೆಂಡತಿಯಲ್ಲಿ ಯಾವ ಕೊರತೆ ಕಂಡಿರಲಿಲ್ಲ. ಅನಂತರ ಅತ್ತಿತ್ತ ಮೈದುಂಬಿದ ಸುಂದರಿಯರನ್ನು ಕಂಡಂತೆ ಹೆಂಡತಿಯಲ್ಲಿ ಏನೋ ಅಭಾವ ಕಾಣಿಸತೊಡಗಿತ್ತು. ಅಸಂಖ್ಯ ತರುಣಿಯರ ಸಂಗದಲ್ಲಿ ಕಾಲಕಳೆದಂತೆ ಹೆಂಡತಿ ಕಾಲಕಸವಾದಳು. ಮದ್ಯ - ಮಾನಿನಿಯರ ದಾಸನಾದ ರಾವಸಾಹೇಬ ಪ್ರಜಾಪಾಲಕನಾಗಿರದೆ; ಪ್ರಜಾಕಂಟಕನಾಗಿದ್ದ. ಸಂಸ್ಥಾನಿಕ ಸರ್ವಾಧಿಕಾರಿಯಾದ ರಾವ್‌ಸಾಹೇಬನನ್ನು ಯಾರೂ ಪ್ರಶ್ನಿಸುವಂತಿಲ್ಲ. ಬ್ರಿಟಿಷ್ ಅಧಿಕಾರಿಗಳಿಗೆ ದೂರು ಸಲ್ಲಿಸುವ ಧೈರ್ಯವನ್ನು ಯಾರೂ ಮಾಡುತ್ತಿರಲಿಲ್ಲ. ಅವನ ಸುತ್ತ ಗೊತ್ತಿರುವ. ಗೊತ್ತಿರದ ಅನೇಕ ಕಥೆ-ವ್ಯಥೆಗಳು ಹೆಣೆದುಕೊಂಡಿದ್ದವು. ಸ್ತ್ರೀ ಲಂಪಟನಾದ ರಾವ್‌ಸಾಹೇಬ ಹೆಂಡತಿ-ರೋಹಿಣಿಯಿಂದ ಸದಾ ದೂರ ಉಳಿಯುತ್ತಿದ್ದ. ಹೀಗಾದಾಗ ರೋಹಿಣಿ ಸಹಜವಾಗಿಯೇ ವಾಡೆಯ ಸಿಪಾಯಿ ಪಾಂಡುನೊಂದಿಗೆ ಮಗ್ಗುಲಹಚ್ಚಿದಳು. ಇದು ತಿಳಿದಾಗ ರಾವಸಾಹೇಬ ಒಂದೇ ರಾತ್ರಿಯಲ್ಲಿ ಅವಳನ್ನು ಪರಲೋಕಕ್ಕೆ ಕಳಿಸಿದ. ಈ ಹಿಂದೆ ತುಳಸಿ-ನೀಲವ್ವರನ್ನು ಬೇಟೆಯಾಡಿದ್ದನ್ನು ಮರೆತುಬಿಟ್ಟಿದ್ದ. ರೋಹಿಣಿಯ ಸಾವು ಊರಲ್ಲಿ ಗುಲ್ಲೆಬ್ಬಿಸಿದರೂ ಕಿವಿಗೊಡದ ರಾವಸಾಹೇಬ ಅದನ್ನು ಸ್ವಾಭಾವಿಕ ಮರಣವೆಂದು ವಿದೇಶಿ ವೈದ್ಯ ಡಾ. ಮಾರ್ಟಿನ್‌ರಿಂದ ಸರ್ಟಿಫಿಕೇಟನ್ನೇ ಪಡೆದಿದ್ದ. ಉನ್ಮತ್ತ ಕಾಮಪಿಪಾಸಿಯಾಗಿ, ಪರಸ್ತ್ರೀಯರ. ನಿರಪರಾಧಿ ತರುಣಿಯರ ಶೀಲಭಂಗ ಮಾಡಿ ಕೌಮಾರ್ಯ ಕಸಿದುಕೊಂಡು ಅಟ್ಟಹಾಸಗೈಯುತ್ತಿರುವಾಗ. ಪ್ರಜಾಸಂರಕ್ಷಕನಾದ ಅವನೇ ತನ್ನ ಕರ್ತವ್ಯಗಳಿಗೆ ಬೆಂಕಿಹಚ್ಚಿ ಹಾರಾಡುತ್ತಿರುವ ರಾವಸಾಹೇಬನಿಗೆ ರೋಹಿಣಿಯ ನಡತೆ ಸರಿಕಂಡಿರಲಿಲ್ಲ.

ಹೊನವಾಡಕರ ಆನಂದವಾಡಿ ಸಂಸ್ಥಾನದ ಉನ್ನತ ಪೋಲಿಸ ಅಧಿಕಾರಿ. ರಾವಸಾಹೇಬನಿಗೆ ' ತಲೆಹಿಡುಕ 'ನಾದ ಈತ ಹೊಸ-ಹೊಸ ' ಬೇಟೆ 'ಗಳನ್ನು ತಂದೊಪ್ಪಿಸುವುದೇ ತನ್ನ ಸರಕಾರಿ ಕೆಲಸವೆಂದರಿತವ. ಸರಕಾರಕ್ಕೆ ಒಳ್ಳೆಯ ಪೋಲಿಸ ಅಧಿಕಾರಿಯೂ ಆಗದ: ಹೆಂಡತಿಗೆ ತಕ್ಕ ಗಂಡನೂ ಆಗದ ಹೊನವಾಡಕರ ತನ್ನ ಒಡೆಯ ರಾವಸಾಹೇಬ ಮೀಸಲು ಮುರಿದ ಹೆಣ್ಣುಗಳನ್ನು ತಾನು ಅನುಭವಿಸುವುದು ತಪ್ಪಲ್ಲವೆಂಬ ಸಿದ್ಧಾಂತವನ್ನು ಚಾಚೂ

ತಪ್ಪದೆ ಪಾಲಿಸಿಕೊಂಡು ಬಂದಿದ್ದ. ಇವನೊಬ್ಬ ಭ್ರಷ್ಟ. ದುಷ್ಟ ಹಾಗೂ ಸ್ತ್ರೀಲಂಪಟ ಅಧಿಕಾರಿಯೆಂಬುದು ಆನಂದವಾಡಿಯ ಪ್ರತಿ ಗೋಡೆಗಳಿಗೂ ಗೊತ್ತು. ಹೀಗಿದ್ದರೂ ಅವನ ಕೈಕಟ್ಟಲು ಯಾರಿಗೂ ಬಲವಿರಲಿಲ್ಲ. ದಿವಾಣ ಉಮೇಶ ಕೂಡ ನಿಸ್ಸಹಾಯಕನಾಗಿದ್ದ. ಸಂಸ್ಥಾನಿಕ ರಾವಸಾಹೇಬನೊಂದಿಗೆ ಕುಡಿತ. ಬೇಟೆ. ಆಟಗಳೊಂದಿಗೆ ಕಾಲಕಳೆವ ಹೊನವಾಡಕರ ಕೈಹಿಡಿದ ಹೆಂಡತಿಗೇ ಹೆಂಡಕುಡಿಸಿ ಮಜಾ ಮಾಡುವ ಕಾಮಾಂಧನಾಗಿದ್ದ. ತುಳಸಿಯನ್ನು ಅನುಭವಿಸಿ ಕೆರೆಯಲ್ಲಿ ಚೆಲ್ಲಿದ್ದು. ನೀಲವ್ವನನ್ನು ಪಶುವಿನಂತೆ ಭೋಗಿಸಿದ್ದು. ಲಮಾಣಿ ಜನಾಂಗದ ಹುಡುಗಿಯನ್ನು ರಾವಸಾಹೇಬನಿಗೆ ತಂದುಕೊಟ್ಟಿದ್ದು. ಪ್ರಭುವಿನ ಮೇಲೆ ಹಲ್ಲೆಮಾಡಿಸಿ ಅವನನ್ನು ಮುಗಿಸಲು ಪ್ರಯತ್ನಿಸಿದ್ದು. ಹೊನವಾಡಕರನಂಥ ತಲೆಹಿಡುಕ ಪೋಲಿಸ ಅಧಿಕಾರಿಗೆ ನೀರು ಕುಡಿದಷ್ಟು ಸುಲಭವಾಗಿತ್ತು.

ಉಮೇಶ ಆನಂದವಾಡಿಯ ಅಸಹಾಯಕ ದಿವಾಣ. ನಂದಾ ಇವನ ಹೆಂಡತಿ. ತಂಗಿ ಪ್ರೀತಿಯ ಮೇಲೆ ಅಪಾರ ಪ್ರೀತಿಯನ್ನಿರಿಸಿದಾತ. ಉಮೇಶ-ನಂದಾ ಹೊಸ ವಿಚಾರದವರಾಗಿದ್ದುದರಿಂದ ಪ್ರಭು-ಪ್ರೀತಿಯರ ಅಲೆದಾಟ-ಒಡನಾಟಗಳಲ್ಲಿ ಪ್ರಮಾದಗಳನ್ನೇನೂ ಲೆಕ್ಕಹಾಕಿದ್ದಿಲ್ಲ. ಸಂಸ್ಥಾನದಲ್ಲಿ ನಡೆಯುವ ಅನ್ಯಾಯ-ಅತ್ಯಾಚಾರ, ಕೊಲೆಗಳು. ಗೊತ್ತಿದ್ದರೂ ಉಮೇಶ ಏನೂ ಮಾಡದವನಾಗಿದ್ದ. 'ಬೇಲಿಯೇ ಹೊಲಮೆಯ್ದರೆ' ದೂರುವುದು ಯಾರನ್ನು ಎಂದು ಕಂಡೂ ಕಾಣದಂತೆ ಸುಮ್ಮನಿದ್ದ. ಆದರೆ ರಾವಸಾಹೇಬನ ಹಾರಾಟ ಆಕಾಶಕ್ಕೇರಿದಾಗ ಪ್ರಭುವಿನ ದಾರಿ ಸರಿಯೆಂದರಿತಾಗ, ತಂಗಿಯ ಕಳಕಳಿಯನ್ನರಿತು. ತನ್ನ ಹುದ್ದೆಗೆ ರಾಜೀನಾಮೆ ನೀಡಿ. 'ಆನಂದವಾಡಿ ಸಂಸ್ಥಾನದ ಪ್ರಜಾಪರಿಷತ್'ನ ಕಾರ್ಯದರ್ಶಿಯಾಗಿ ಪ್ರಭುವಿನ ಹೋರಾಟಕ್ಕೆ ಬೆಂಗಾವಲಾದ.

ದಾನಪ್ಪ ಹಾಗೂ ಹೊನವಾಡಕರನ ಪತ್ನಿ ತಾರಾ ಇಬ್ಬರೂ ಬಿಜಾಪುರ ಪ್ರೌಢಶಾಲೆಯಲ್ಲಿದ್ದಾಗ ಸಮಾನಮನೋಧರ್ಮದ ಸಹಪಾಠಿಗಳು. ಆ ದೇಶಿ ಶಾಲೆಯಲ್ಲಿ ಸ್ವಾತಂತ್ರ್ಯಾಂದೋಲನದ ಪಾಠ ತಿಳಿದವನಾಗಿದ್ದ ದಾನಪ್ಪ. ಒಬ್ಬ ಚಾಣಾಕ್ಷ ಚಳುವಳಿಗಾರನಾದ ದಾನಪ್ಪ ತಲೆಮರಿಸಿಕೊಂಡು ಭೂಗತವಾಗಿದ್ದುಕೊಂಡೇ ತನ್ನ ಗುರಿಯನ್ನು ಸಾಧಿಸುತ್ತಿದ್ದ. ತಾರಕ್ಕನ ಸಹಾಯದಿಂದ ಪ್ರಭುವಿನ ಸೋದರಮಾವನ ವೇಷದಲ್ಲಿ ಆನಂದವಾಡಿಯನ್ನು ಪ್ರವೇಶಿಸಿದ ದಾನಪ್ಪ ಅಲ್ಲಿದ್ದುಕೊಂಡೇ ಅನೇಕ ಪ್ರಚೋದನಾತ್ಮಕ ಬರವಣಿಗೆಗಳನ್ನು ಬರೆದು ಎಲ್ಲೆಡೆ ರವಾನಿಸುತ್ತಿದ್ದ. ಭೂಗತವಾಗಿದ್ದುಕೊಂಡೇ. ಗುರುವಾರ ಪೇಟೆಯಲ್ಲಿ 'ವಿದೇಶಿ ಬಟ್ಟೆಗಳ ಹೋಳಿಹಬ್ಬ'. ಪೋಲಿಸಠಾಣೆಗೆ ಬೆಂಕಿ. ಅನೇಕ ತಂತಿಮಾರ್ಗಗಳನ್ನು ಕತ್ತರಿಸುವಂತಹ ಉಗ್ರಹೋರಾಟಗಳಿಗೆ ಕಾರಣೀಭೂತನಾದ. ಪಾದರಸದಷ್ಟು ಚುರುಕಾದ ದಾನಪ್ಪ ಪೋಲಿಸರ ಕೈಗೆ ಸಿಕ್ಕದೆ ಸದಾ ನುಣುಚಿಕೊಳ್ಳುತ್ತಿದ್ದ. ಸಾಂಗಲಿ ಜೈಲಿನಲ್ಲಿದ್ದ ಪ್ರಭುವನ್ನು ಆತ ಮನಸ್ಸು ಮಾಡಿದ್ದರೆ ಒಂದೇ ರಾತ್ರಿಯಲ್ಲಿ ಹೊರತರಲು ಸಿದ್ಧನಾಗಿದ್ದ. ಆದರೆ ಅದಕ್ಕೆ ಪ್ರಭು ಅಸಮ್ಮತಿಸಿದ. ದಾನಪ್ಪನನ್ನು ಹಿಡಿಯಲು ಒಂದು ವಿಶೇಷ ಪೋಲಿಸದಳವೇ ನಿರ್ಮಾಣಗೊಂಡಿದ್ದರೂ. ಯಾರ ಕಣ್ಣಿಗೂ ಬೀಳದಂತೆ ತಲೆಮರೆಸಿಕೊಂಡಿದ್ದ.

ಸಂಸ್ಥಾನದಲ್ಲಿ ಅರಾಜಕತೆ. ದೊಂಬಿ. ಹಲ್ಲೆ. ಚಳುವಳಿಗಳು ದಿನೇ-ದಿನೇ ಹೆಚ್ಚಾಗುತ್ತಲಿದ್ದವು. ಹೊನವಾಡಕರನ ಮೇಲಧಿಕಾರಿಯೊಬ್ಬ ಪುಣೆಯ ಪುಸಾಳಕರನನ್ನು ಕರೆಸಿಕೊಂಡಿದ್ದರು. ಅದರೊಂದಿಗೆ ಹೆಚ್ಚಿನ

ಪೋಲಿಸ ಪಡೆ ಕೂಡ ಆನಂದವಾಡಿಯಲ್ಲಿ ಬೀಡುಬಿಟ್ಟಿತು. ಇಷ್ಟಿದ್ದಾಗ್ಯೂ ಜನರ ಅಸಹಕಾರವನ್ನು ಹತೋಟಿಯಲ್ಲಿಡುವುದು ರಾವಸಾಹೇಬನಿಗೆ ಅಸಾಧ್ಯವೆನಿಸತೊಡಗಿತು. ಅಲ್ಲದೆ. ರಾಜಾಸಾಹೇಬನ ಬಗ್ಗೆ ಅನೇಕ ದೂರುಗಳು ಪುನಾ-ಮುಂಬಯಿ ತಲುಪಿದವು. ಸಂಸ್ಥಾನದಲ್ಲಿ ನಡೆಯುತ್ತಿರುವ ಬಡಸ್ತ್ರೀಯರ ಮಾನಾಪಹರಣ. ಪ್ರಾಣಾಪಹರಣ. ರಾಜಕೀಯ ಕಾರ್ಯಕರ್ತರ ಕೊಲೆಯ ಯತ್ನ. ಬಡವರ ಮೇಲೆ ದಬ್ಬಾಳಿಕೆ. ಅಧಿಕಾರಿಗಳ ದುರ್ವರ್ತನೆ. ಮಹಾರಾಣಿಯ ಆಕಸ್ಮಿಕ ಸಾವು. ಇವುಗಳ ಬಗ್ಗೆ ವಿಚಾರಣೆ ನಡೆಸಿ ಎರಡುವಾರಗಳಲ್ಲಿ ವರದಿ ಮುಂಬಯಿ ತಲುಪುವಂತೆ ಕಳಿಸಬೇಕೆಂದು ಹಾಗೂ ರಾಜಾಸಾಹೇಬ ಮತ್ತು ಇತರ ಅಧಿಕಾರಿಗಳು ತಪ್ಪಿತಸ್ಥರೆಂದು ಕಂಡು ಬಂದರೆ ಅವರ ಮೇಲೆ ಶಿಸ್ತುಕ್ರಮ ಜರುಗಿಸಲಾಗುವುದೆಂದು ಎಂಬ ಎಚ್ಚರಿಕೆಯ ಪತ್ರ ತನ್ನ ಕೈತಲುಪಿದಾಗ ರಾವಸಾಹೇಬ ಕೆಂಡಮಂಡಲನಾದ. ಬಾಯಿಗೆ ಬಂದಂತೆ ಒದರಾಡಿದ. ಮಾನಸಿಕ ಸಮತೋಲನವನ್ನೇ ಕಳೆದುಕೊಂಡ. ಬಲವಂತವಾಗಿ ಹೊನವಾಡಕರ ಅರಸನಿಗೆ 'ಜಾನಿವಾಕರ' ನ್ನು ತುಟಿಗಟ್ಟಿಸಿ ತಾನೇ ಕುಡಿಸಿ ಲವಾಣಿ ಹುಡುಗಿಯೊಂದಿಗೆ ಅರಸನನ್ನು ಬಿಟ್ಟು ಹೊನವಾಡಕರ ಸಂತೃಪ್ತನಾದ.

ಅದೇ ವೇಳೆಗೆ ಕಾರುಚಾಲಕ ಬದ್ರುದ್ದೀನ ಬಂದು 'ಬಡಿ ಬೇಗಂ ಸಾಹಿಬಾ ಕೋ ಬಹುತ್ ತಕಲೀಫ್' ಎಂದು ಕರೆದಾಗ ಅವನ ಬೆನ್ನ ಹಿಂದೆ ನಡೆದ ರಾವಸಾಹೇಬ. ಬದ್ರುದ್ದೀನ ನೇರ ಬಾಯಿಸಾಹೇಬಳ ಶಯ್ಯಾಗ್ರಹದತ್ತ ಕರೆದೊಯ್ದು: ಕಿಟಕಿಯಿಂದ ಚಾರ್ಟ ಬೆಳಕು ಬಿಟ್ಟ. ಅಲ್ಲಿನ ದೃಶ್ಯ ಕಂಡು ರಾವಸಾಹೇಬನ ಎದೆ ಒಡೆದು ಹೋಗಿತ್ತು ! ಜರ್‍ರನೇ ಆತನ ಮತ್ತು ಇಳಿದೂ ಹೋಯಿತು. ಬಾಯಿಸಾಹೇಬ ಮತ್ತು ಹೊನವಾಡಕರ ಸಂಪೂರ್ಣ ಬೆತ್ತಲೆಯಾಗಿ ಪರಸ್ಪರ ಬೆಸೆದುಕೊಂಡಿದ್ದರು. ತಾಯಿಯ ಕಥೆಯನ್ನು ನೋಡಿದ ಮಗ ರಾವಸಾಹೇಬ ತನ್ನ ಕಣ್ಣನ್ನೇ ತಾನು ನಂಬದಾದ. ಈ ಹಿಂದೆ ಹೆಂಡತಿ ಕಥೆಯನ್ನು ಕಣ್ಣಾರೆ ಕಂಡಂತೆ ಈಗ ತಾಯಿಯ ವಾಸ್ತವಿಕ ಚರಿತ್ರೆಯನ್ನು ನೋಡುತ್ತಲಿದ್ದ. ಕೊನೆಯ ಈ ದೃಶ್ಯದಿಂದ ಕಾದಂಬರಿ ಹೊಸತಿರುವನ್ನೇ ಪಡೆದು. ರಾವಸಾಹೇಬನ ಆತ್ಮಹತ್ಯೆಯೊಂದಿಗೆ ದುಃಖಾಂತವಾಗುತ್ತದೆ.

ಕೊಲೆಯೊಂದಿಗೆ ತನ್ನ ಮೈಬಿಚ್ಚಿಕೊಂಡು. ರಾವಸಾಹೇಬನ ಆತ್ಮಹತ್ಯೆಯೊಂದಿಗೆ ಕೊನೆಗೊಳ್ಳುವ ಈ ಕಾದಂಬರಿ ದೇಶಿ ಅರಸುಮನೆತನಕ್ಕೆ ಸೀಮಿತವಾದ ಕುಟುಂಬದ ಕಥೆಯೋ. ದೇಶಪ್ರೇಮದ ಚಳುವಳಿಯ ಪ್ರತಿಪಾದನೆಯೋ. ಅಥವಾ ಸಂಸ್ಥಾನದಲ್ಲಿ ತುಂಬಿಕೊಂಡ ಸಾಮಾಜಿಕ ಶೋಷಣೆ. ದಬ್ಬಾಳಿಕೆ. ಅತ್ಯಾಚಾರ-ಅನಾಚಾರಗಳನ್ನು ಹೊರಗೆಳೆಯುವುದೋ. ಎಂದು ನಿರ್ಧರಿಸುವಲ್ಲಿ ತುಂಬ ಗೊಂದಲವನ್ನುಂಟು ಮಾಡುತ್ತದೆ. ಹೀಗಿದ್ದರೂ ಸಂಸ್ಥಾನದಲ್ಲಿ ನಡೆಯುವ. ಮಾನ-ಪ್ರಾಣಗಳ ಅಪಹರಣ. ಕೊಲೆಗಳ ಯತ್ನ. ಬಡ-ಮುಗ್ಧರ ಮೇಲಿನ ದೌರ್ಜನ್ಯ. ವೈದ್ಯನಾದ ಪ್ರಭು ನಿಸ್ವಾರ್ಥದಿಂದ ಸಂಸ್ಥಾನಕ್ಕೆ ಸಲ್ಲಿಸುವ ಸೇವೆ. ಸಾಮಾಜಿಕ ನೀತಿ-ಅನೀತಿಗಳನ್ನೂ. ಸಾಮಾಜಿಕ ಮೌಲ್ಯಗಳನ್ನೂ ಚೆನ್ನಾಗಿ ಪ್ರತಿಪಾದಿಸುವ ಪ್ರಸ್ತುತ ಕಾದಂಬರಿ ದೇಶಿ ಆಳರಸರ ಕಾಲದ ಸಾಮಾಜಿಕ ಸ್ಥಿತಿ-ಗತಿಗಳನ್ನು ಪ್ರತಿಪಾದಿಸುವಲ್ಲಿ ಯಶಸ್ವಿಯಾದ ಒಂದು ಉತ್ತಮ ಸಾಮಾಜಿಕ ಕಾದಂಬರಿ.

ದೇಶದೆಲ್ಲೆಡೆ ಚಳುವಳಿ. ಸ್ವಾತಂತ್ರ್ಯಪ್ರಜ್ಞೆ. ತಮ್ಮ ಭಾಷಣ-ಸಂಚಾರದಿಂದ ಗಾಂಧೀಜಿ ಮೊದಲಾದ ದೇಶದ ಮುಖಂಡರು ಜನರಲ್ಲಿ ದೇಶಾಭಿಮಾನ. ಸ್ಥಳೀಯ ಆಳರಸರ ಶೋಷಣೆಯನ್ನು ಪ್ರತಿಭಟಿಸುವ ಕಾರ್ಯ

ನಡೆಯುತ್ತಿತ್ತು. ಈ ರೀತಿ ದೇಶದಲ್ಲಿ ಸ್ವಾತಂತ್ರ್ಯಕ್ಕಾಗಿ ಹಬ್ಬುತ್ತಿರುವ ಚಳುವಳಿಗೆ ಆನಂದವಾಡಿ ಸಂಸ್ಥಾನದಲ್ಲಿ ಇಲ್ಲಿಯವರೆಗೆ ಪ್ರವೇಶ ದೊರೆತಿರಲಿಲ್ಲ. ಇಂಥ ಸಮಯದಲ್ಲಿ ಪ್ರಭು ಒಬ್ಬ ಆದರ್ಶವೈದ್ಯನಾಗಿ ಆನಂದವಾಡಿಗೆ ಬಂದ. ದೇಶಪ್ರೇಮ. ತ್ಯಾಗ. ಅನುಕಂಪ. ಸಹಕಾರ-ಸಹಭಾಗಿತ್ವಗಳ ಪ್ರತೀಕನಾದ ಪ್ರಭುವಿಗೆ ಅನ್ಯಾಯ-ಅಧರ್ಮಗಳೆಂದರೆ ಆಗದು. " ಸಂಸ್ಥಾನದ ಸರ್ವಾಧಿಕಾರಿಯಾದ ರಾವಸಾಹೇಬನನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ. ಬ್ರಿಟಿಷ್ ಅಧಿಕಾರಿಗಳಿಗೆ ದೂರು ಸಲ್ಲಿಸುವ ಧೈರ್ಯವನ್ನು ಈ ಹಿಂದೆ ಯಾರೂ ಮಾಡಿರಲಿಲ್ಲ. ಹೀಗಾಗಿ ಕೇಳಿದ ಕಥೆಗಳಿಗಿಂತ ಕೇಳದ. ಕಾಣದ ಕಥೆಗಳು ಎಷ್ಟು ಪ್ರಮಾಣದಲ್ಲಿದ್ದವೋ ಅಂದಾಜು ಹತ್ತುತ್ತಿರಲಿಲ್ಲ "[೫೦] ವಾದರೂ ಪ್ರಭು ಅಂದಾಜು ಹಚ್ಚಲು ಮುಂದಾಗಿ. ರಾವಸಾಹೇಬನ ಅನೇಕ ಭಾನಗಡಿಗಳನ್ನು ಕುರಿತು ದಿವಾಣ ಉಮೇಶನ ಮುಂದೆ ಅವನ ಅಸಹಾಯಕತೆ ಗೊತ್ತಿದ್ದರೂ ಹೇಳುತ್ತಲಿದ್ದ: ಅದು ತನ್ನಿಂದ ಅಸಾಧ್ಯವಾದ ಕೆಲಸವೆಂದರಿತರೂ ಉಮೇಶ ಭರವಸೆಗಳನ್ನು ಕೊಡುತ್ತಲಿದ್ದ. " ಹೀಗೆ ಉಮೇಶನ ಅನೇಕ ಭರವಸೆಗಳು ಬೆಳಕನ್ನೇ ಕಂಡಿರಲಿಲ್ಲ"[೫೧] ವಾರದರೂ ಇದ್ದಸ್ಥಿತಿಯಲ್ಲಿಯೇ ಉಮೇಶ ಕಾಳಜಿಯಿಂದ ಕೆಲಸ ಮಾಡುತ್ತಿದ್ದು. ತನ್ನ ಒಡೆಯನ ವೈಯಕ್ತಿಕ ಬದುಕಿನತ್ತ ಕುರುಡನಾಗಿದ್ದ. ಪ್ರಭು ಒಬ್ಬ ಒಳ್ಳೆಯ ಸಂಘಟಕ. ನೀಲವ್ವ. ತುಳಸಿಯ ತಂದೆ. ದಾದು. ಅವನ ಹೆಂಡತಿ ಅಕ್ಕಾತಾಯಿ. ಉಪ್ಪಾರ ಪರಪ್ಪ. ಮೊದಲಾದ ಆನಂದವಾಡಿಯ ಶೋಷಿತರನ್ನೆಲ್ಲ ಒಂದೇ ವೇದಿಕೆಯಡಿ ತಂದು 'ಆನಂದವಾಡಿ ಸಂಸ್ಥಾನದ ಪ್ರಜಾಪರಿಷತ್' ನ್ನು ಕಟ್ಟಿ ಅದರಡಿಯಲ್ಲಿ ಪ್ರತಿಭಟನೆ ನಡೆಸಿದ್ದು. ಅದೂ ಸಂಯಮದಿಂದಲೇ ಚಳುವಳಿಗಳಲ್ಲಿ ಭಾಗಿಯಾಗಿದ್ದು. ಅವನ ವ್ಯಕ್ತಿತ್ವಕ್ಕೆ ನಿದರ್ಶನವಾಗಿದೆ. ತುಳಸಿ. ನೀಲವ್ವ. ರಾಣಿ ರೋಹಿಣಿಯ ಆಕಸ್ಮಿಕ ಮರಣಕ್ಕೆ ಮರುಜೀವಕೊಟ್ಟ ಪ್ರಭು ಅನೇಕ ಗಂಡಾಂತರಗಳನ್ನು ಎದುರಿಸಲು ಎದೆಗೊಟ್ಟು ನಿಂತ. ತನ್ನ ಮೇಲೆ ಮಾರಣಾಂತಿಕ ಹಲ್ಲೆ ನಡೆದರೂ ಲೆಕ್ಕಿಸದ ಪ್ರಭು ದಿಟ್ಟನದಿಂದ ರಾವಸಾಹೇಬ ಹಾಗೂ ತಲೆಹಿಡುಕ ಹೊನವಾಡಕರನ ಭಾನಗಡಿಗಳನ್ನು ಹೊರಗೆಳೆಯುತ್ತಿದ್ದ. ಸಿದ್ಧೇಶ್ವರ ಗುಡಿಯಲ್ಲಿನ ಪ್ರಭುವಿನ ಭಾಷಣದಿಂದ ಜನರೆಲ್ಲ ಮಂತ್ರಮುಗ್ಧರಾಗಿ ಪ್ರಭುವಿನ ಹಿಂಬಾಲಕರಾಗಿದ್ದು. ರಾವಸಾಹೇಬನ ದರ್ಪಕ್ಕೆ ಹಿನ್ನಡೆಯುಂಟಾಯಿತು.

ಸದ್ದಿಲ್ಲದೆ ಗದ್ದಲವೆಬ್ಬಿಸುವ ದಾನಪ್ಪ ಕಾದಂಬರಿಯಲ್ಲಿ ಎಲೆಮರೆಯ ಕಾಯಿಯಂತೆ. ದೇಶಪ್ರೇಮ. ರಾಜರ ಅನ್ಯಾಯಕ್ಕೆ ತಲೆಯೆತ್ತದ ಆನಂದವಾಡಿಯ ಜನರನ್ನು ಭೂಗತವಾಗಿದ್ದುಕೊಂಡೇ ಎಚ್ಚರಿಸಿದಾತ. ವಿದೇಶಿ ಬಟ್ಟೆಗಳನ್ನು ಸುಟ್ಟುಹಾಕುವುದು. ಟೆಲಿಫೋನ ತಂತಿಗಳನ್ನು ಕಡಿದು ಹಾಕುವುದು, ಪೋಲಿಸ ಠಾಣೆಗಳಿಗೆ ಬೆಂಕಿಯಿಡುವುದು. ಮುಖ್ಯ ದಾಖಲೆಗಳನ್ನು ಸುಟ್ಟುಹಾಕುವುದು. ಇಂಥ ಹೋರಾಟಗಳಲ್ಲಿ ಎತ್ತಿದಕೈ ದಾನಪ್ಪನದು. ಕಾದಂಬರಿಯಲ್ಲಿ ಸೌಮ್ಯವಾಗಿಯೇ ಸಹೃದಯರ ಮನದಲ್ಲಿ ಉಳಿಯುವ ಈ ಪಾತ್ರವನ್ನು ಲೇಖಕರು ಚೆನ್ನಾಗಿಯೇ ಚಿತ್ರಿಸಿದ್ದಾರೆ. ಪಾದರಸದಂತೆ ಚುರುಕಾದ ದಾನಪ್ಪನ ಚಟುವಟಿಕೆಗಳು ಮೆಚ್ಚುಗೆಯಾಗುತ್ತವೆ.

ದಿವಾಣ ಉಮೇಶನದು ಧರ್ಮಸಂಕಟದ ಸ್ಥಿತಿ. ರಾಜನನ್ನು ವಿರೋಧಿಸಲೂ ಆಗದೆ. ಅನುಸರಿಸಲೂ ಆಗದೆ. ಎಲ್ಲದಕ್ಕೂ ಮೌನವಾಗಿಯೇ ಕಾಲನೂಕುತ್ತಿದ್ದ ಉಮೇಶನಿಗೆ. " ಅಣ್ಣ ಪ್ರಭು ಅವ್ರಿಗೆ ಏನಾದ್ರೂ ಆದ್ರ. ನಾನು

---

೫೦. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೨೨

೫೧. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೨೩

ಜೇಂವಾ ಇಡೂದಿಲ್ಲ" [೫೨] ಎಂದು ಕಣ್ಣೀರಿಟ್ಟ ತಂಗಿ ಹೇಳಿದ್ದು ತುಂಬ ನೋವಾಗಿತ್ತು. ಅದಕ್ಕಾಗಿ ರಾಜನ ಭಾನಗಡಿಗಳಿಗೆ ಬೇಸತ್ತು ದಿವಾಣಗಿರಿಗೆ ರಾಜೀನಾಮೆಯಿತ್ತು 'ಆನಂದವಾಡಿಯ ಸಂಸ್ಥಾನದ ಪ್ರಜಾಪರಿಷತ್ತಿ'ನ ಕಾರ್ಯದರ್ಶಿಯಾಗಿ. ಪ್ರಭುವಿಗೆ ಬೆಂಬಲ ನೀಡಿದ್ದು. ಆನಂದವಾಡಿಯ ಅವಸಾನಕ್ಕೆ ವ್ಯಾಖ್ಯಾನ ಬರೆದಂತಿದೆ.

ಸ್ತ್ರೀಲಂಪಟ. ಸದಾ ಮದಿರೆಯ ದಾಸನಾದ ರಾವಸಾಹೇಬನ ಅನೇಕ 'ಅನ್ಯಾಯ'ಗಳ ಸುತ್ತ ಕಾದಂಬರಿ ಸುತ್ತುತ್ತದೆ. ಇಲಿಯೊಂದಿಗೆ ಚೆಲ್ಲಾಟವಾಡುವ ಬೆಕ್ಕಿನಂತೆ ರಾಜ ಸಂಸ್ಥಾನದ ಹೆಣ್ಣುಮಕ್ಕಳ ಶೀಲದೊಂದಿಗೆ ಚೆಲ್ಲಾಟವಾಡುತ್ತಾನೆ. ಆದರೆ. ತನ್ನ ಸಿಪಾಯಿ ಪಾಂಡು ರಾಣಿ ರೋಹಿಣಿಯೊಂದಿಗೆ ಚೆಲ್ಲಾಟವಾಡಿದ್ದನ್ನು ಕಂಡ ರಾಜ ಅವಳನ್ನು ಮುಗಿಸಿ ಬಿಟ್ಟ. "....ಉನ್ಮತ್ತ ಕಾಮಪಿಪಾಸಿಯಾಗಿ. ಪರನಾರಿಯರ. ನಿರಪರಾಧಿ ತರುಣಿಯರ ಶೀಲಭಂಗ ಮಾಡಿ ಕೌಮಾರ್ಯಹರಣಮಾಡಿ. ಅಟ್ಟಹಾಸಗೈಯುತ್ತಿರುವ ಅವನಿಗೆ ಯಾವ ರೀತಿ-ನೀತಿ. ನ್ಯಾಯ-ಧರ್ಮ ಅನ್ವಯಿಸುವುದಿಲ್ಲವೆ ?" [೫೩] ಎಂದೆನ್ನುವ ಲೇಖಕರು. ಸಾಮಾಜಿಕ ಆವರಣದಲ್ಲಿಯ ಭ್ರಷ್ಟತೆಯನ್ನು ತಮ್ಮ ಹಲವಾರು ಕಾದಂಬರಿಗಳಲ್ಲಿ ಬಗೆದುತೋರಿಸಿದ ಬೆಳಗಲಿಯವರು ಈ ಕಾದಂಬರಿಯಲ್ಲಿಯೂ ಮತ್ತೆ ಅದನ್ನೇ ಮಾಡಿದ್ದಾರೆ. ರೋಹಿಣಿಯ ಸಾವಿನ ಹಿಂದಿರುವ ಕಥೆಯನ್ನು ಮುಚ್ಚಿಹಾಕುವಲ್ಲಿ ಹೊನವಾಡಕರ ಕೂಡ ಕೈಜೋಡಿಸಿದ. ಈ ಹೊನವಾಡಕರ ಕಾದಂಬರಿಯುದ್ದಕ್ಕೂ ಪಾಶವೀಕೃತ್ಯಗಳ ಪ್ರತಿನಿಧಿಯಾಗಿ ಕಂಡುಬರುತ್ತಾನೆ. ರಾಜನಿಗೆ ತಲೆಹಿಡುಕನಂತಿದ್ದು ಸದಾ ಅವನ ಬೆನ್ನಿಗಂಟಿಕೊಂಡೇ ಸಾಗುವ ಈತ ಸರಕಾರಕ್ಕೆ ಒಳ್ಳೆಯ ಅಧಿಕಾರಿಯೂ ಆಗಲಿಲ್ಲ: ಹೆಂಡತಿಗೆ ತಕ್ಕ ಗಂಡನೂ ಆಗಲಿಲ್ಲ. ರಾವಸಾಹೇಬನ ಅನಾಚಾರ-ಅತ್ಯಾಚಾರಗಳಿಗೆ ಕೋಟೆಕಟ್ಟಿ ಸಂರಕ್ಷಿಸುವ ಸರ್ಕಾರಿ ಸಂಬಳದ ಅಧಿಕಾರಿ ಹೆಂಡತಿಗೆನೇ ಹೆಂಡಕುಡಿಸಲು ಪ್ರಯತ್ನಿಸಿದಂತಹ ಘಟನೆಗಳೆಲ್ಲ ಇವನ ಖಾಕಿ ಹಿಂದಿರುವ ಕ್ರೂರತೆಗಳನ್ನೆಲ್ಲ ಬಯಲಿಗೆಳೆದಿವೆ. ಇದಕ್ಕಿಂತ ಕ್ರೂರ ಹಾಗೂ ಭಯಂಕರವಾದುದೆಂದರೆ. ಬಾಯಿಸಾಹೇಬಳೊಂದಿಗಿರುವ ಅವನ ಅನೈತಿಕ ಸಂಬಂಧ.

ತಾರಾ. ಬದ್ರುದ್ದೀನ. ತುಕಾರಾಮ. ಮೇರಿ. ಇವುಗಳೆಲ್ಲ ಕಾದಂಬರಿಯಲ್ಲಿನ ಆಪ್ಯಾಯಮಾನವಾದ ಪಾತ್ರಗಳು. ರಾಷ್ಟ್ರಪ್ರಜ್ಞೆಯುಳ್ಳ ತಾರಾ ತಾನೊಬ್ಬ ಪೋಲಿಸ ಅಧಿಕಾರಿಯ ಹೆಂಡತಿಯಾಗಿದ್ದರೂ ಕೂಡಾ ಭೂಗತ ಚಳುವಳಿಯ ದಾನಪ್ಪನಿಗೆ ಆಶ್ರಯ ಕೊಡಿಸಿದ್ದು ಸೆರಗಿನಲ್ಲಿ ಕೆಂಡ ಕಟ್ಟಿಕೊಂಡಂತಾಗಿದ್ದರೂ. ಹಿಂಜರಿಯಲಿಲ್ಲ. ಗಂಡನ ಪಾಶವೀಕೃತ್ಯಗಳಿಗೆ ಬೇಸತ್ತುಹೋದ ತಾರಾ 'ಗಂಡ'ನೆಂಬ ಶಬ್ದಕ್ಕೆ ಬೆಲೆಕೊಟ್ಟಿದ್ದಳೇ ಹೊರತು ಇನ್ನಾವುದಕ್ಕೂ ಅಲ್ಲ. ಪ್ರಭುವಿನ ಅನುಕಂಪನಾಶೀಲ ಗುಣಕ್ಕೆ ಮಾರುಹೋದ ಕಾರುಚಾಲಕ ಬದ್ರುದ್ದೀನ 'ವಾಡೆ'ಯ ಅನೇಕ ಅನಾಚಾರಗಳನ್ನು ತಂದು ಒಪ್ಪಿಸುತ್ತಿದ್ದ. ತುಕಾರಾಮ ಸರಕಾರಿ ಕೆಲಸಕ್ಕೆ ರಾಜೀನಾಮೆ ನೀಡಿ. ಪ್ರಭುವಿಗೆ ಸಹಾಯಕನಾಗಿ ನಿಂತುದು. ಮೇರಿ ಕೂಡ ಸರಕಾರಿ ಸಂಬಳಕ್ಕೆ ಸಲಾಮು ಹೊಡೆದು ಪ್ರಭುವಿನೆಡೆ ಬಂದುದು ಇವೆಲ್ಲ ಓದುಗರಿಗೆ ಮೆಚ್ಚುಗೆಯಾಗುತ್ತವೆ.

---

೫೨. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೨೭

೫೩. ದು. ನಿಂ. ಬೆಳಗಲಿ : ಅಂಧೇರಿರನಗರಿ. ಪುಟ ೧೧೦

ಕಾದಂಬರಿ ಕುತೂಹಲಕಾರಿಯಾದ ಸನ್ನಿವೇಶದೊಂದಿಗೆ ದುಃಖಾಂತವಾಗುತ್ತದೆ. "…. ಬಡಸ್ತ್ರೀಯರ ಮಾನಾಪಹರಣ. ಪ್ರಾಣಾಪಹರಣ. ರಾಜಕೀಯ ಕಾರ್ಯಕರ್ತರ ಕೊಲೆ ಪ್ರಯತ್ನ. ಬಡವರ ಮೇಲೆ ದಬ್ಬಾಳಿಕೆ. ಅಧಿಕಾರಿಗಳ ದುರ್ವರ್ತನೆ. ಮಹಾರಾಣಿಯ ಆಕಸ್ಮಿಕ ಸಾವು ಇವಗಳ ಬಗ್ಗೆ ದಿವಾಣರು ಎಲ್ಲ ರೀತಿಯಿಂದ ಚೌಕಾಸಿ ಮಾಡಿ ಮುಂಬಯಿಗೆ ವರದಿ ಕಳಿಸಬೇಕು. ಒಂದು ವೇಳೆ ಕಳಿಸಿದ ವರದಿಯಲ್ಲಿ ಸತ್ಯಾಂಶ ಕಂಡು ಬಂದರೆ. ಸ್ವತಃ ಪೊಲಿಟಿಕಲ್ ಏಜಂಟರನ್ನು ಆನಂದವಾಡಿಗೆ ಕಳಿಸಿ ವಿಚಾರಣೆ ನಡೆಸಲಾಗುವುದು. ರಾಜಾಸಾಹೇಬ ಹಾಗೂ ಇತರ ಅಧಿಕಾರಿಗಳು ತಪ್ಪಿತಸ್ಥರೆಂದು ಕಂಡುಬಂದರೆ. ಅಧಿಕಾರಿಗಳನ್ನು ಶಿಕ್ಷೆಗೆ ಗುರಿಪಡಿಸಿ. ರಾಜಾಸಾಹೇಬನಿಗೆ ಈ ಸಲ ತನ್ನ ನಡತೆಯನ್ನು ತಿದ್ದಿಕೊಳ್ಳಲು ಅವಕಾಶಕೊಡಲಾಗುವುದು…." [೫೪] ಎಂಬ ಪತ್ರ ರಾವಸಾಹೇಬನ ಕೈತಲುಪಿದಾಗ– "ಈ ಕತ್ತೇ ಮಗಾ ಯಾರು? ನನ್ನ ಸಂಸ್ಥಾನ…. ನಾ ರಾಜಾ! ಇಂವಗ ಕೇಳೋ ಹಕ್ಕೇನು?" [೫೫] ಎಂದು ಹುಚ್ಚು ಹಿಡಿದವರಂತೆ ಒದರಾಡಿದ. ಈ ಹುಚ್ಚಿಗೆ ಹೊನವಾಡಕರ ಪ್ರೀತಿಯಿಂದ 'ಜಾನಿವಾಕರ'ನ್ನು ತುಟಿಗಚ್ಚಿ ಕುಡಿಸಿ ಮೊದಲೇ ಮಾನಸಿಕ ರೋಗಿಯಂತಾಗಿದ್ದ ರಾಜನಿಗೆ ಮತ್ತಷ್ಟು ಮತ್ತೇರಿಸಿದ. ಸಾಲದೆಂಬಂತೆ ಲಂಬಾಣಿ ಹುಡುಗಿಯೊಂದನ್ನು ಮೀಸಲು ಮುರಿಯಲು ಒಡೆಯನಿಗೆ ಸಲ್ಲಿಸಿದ. ಆದರೆ ರಾಜನಿಗೆ ಆ ಹುಡುಗಿಯಲ್ಲಿ ನೀಲವ್ವ. ತುಳಸಿ. ಇನ್ನೂ ಅನೇಕ ಅಬಲೆಯರ ಕ್ರೂರದೃಷ್ಟಿಗಳು ಕಂಡಂತಾದಾಗ ಬೆಚ್ಚಿಬಿದ್ದು. "ನೀ ಅರವಿ ಹಾಕ್ಕೊಂಡು ಹೊರಗ ಹೋಗು…." [೫೬] ಎಂದು ಚೀರಿದ!

ಇದೇ ವೇಳೆಗೆ ಕಾರುಚಾಲಕ ಬದ್ರುದ್ದೀನ ಬಂದು "ಬಡೀ ಬೇಗಂ ಸಾಹಿಬಾ ಕೋ ಬಹುತ ತಕಲೀಫ್" [೫೭] ಎಂದು ಹೇಳಿ ಬಂಗಲೆಯತ್ತ ಕರೆದುಕೊಂಡು ಹೋದ. ಬಾಯಿಸಾಹೇಬಳ ವಸತಿಯ ಶಯ್ಯಾಗೃಹಕ್ಕೆ ಕರೆತಂದ ಬದ್ರುದ್ದೀನ ಟಾರ್ಚಿನ ಬೆಳಕು ಬೀರಿ ಅಲ್ಲಿನ ದೃಶ್ಯ ತೋರಿಸಿದ. ಅಲ್ಲಿನ ದೃಶ್ಯ ಕಂಡು ರಾವಸಾಹೇಬನ ಎದೆ ಒಡೆದು ಹೋಗಿತ್ತು! ಜರ್ರನೆ ಆತನ ಮತ್ತು ಇಳಿದೂ ಹೋಗಿತ್ತು. "ಬಾಯಿಸಾಹೇಬಳ ಮತ್ತು ಹೊನವಾಡಕರ ಸಂಪೂರ್ಣ ಬೆತ್ತಲೆಯಾಗಿ ಪರಸ್ಪರ ಬೆಸೆದುಕೊಂಡು ಮಂಚದ ಮೇಲೆ ಬಿದ್ದಿದ್ದಾರೆ! ಮಗ. ತಾಯಿಯ ಕಥೆಯನ್ನು ನೋಡಿದ. ಹಿಂದೆ ಹೆಂಡತಿಯ ಕಥೆಯನ್ನು ಕಣ್ಣಾರೆ ಕಂಡಂತೆ ಈಗ ತಾಯಿಯ ವಾಸ್ತವಿಕ ಚರಿತ್ರೆಯನ್ನು ಕಾಣುತ್ತಲಿದ್ದ" [೫೮] ರಾವಸಾಹೇಬನಿಗೆ ಭ್ರಾಂತು ಹಿಡಿದಂತಾಗಿ ಮಾನಸಿಕ ಸ್ತಿಮಿತವನ್ನೇ ಕಳೆದುಕೊಂಡು 'ರಾಜವಾಡೆ' ತನ್ನಲ್ಲಿ ಬಚ್ಚಿಟ್ಟುಕೊಂಡಿದ್ದ 'ನಗ್ನ ಸತ್ಯ'ವೊಂದನ್ನು ರಾಜನಿಗೆ ತೋರಿಸಿತ್ತು. ರಾವಸಾಹೇಬ ಮಾಡಿದ್ದನ್ನೇ ಕಂಡಿದ್ದ; ಅದನ್ನೇ ಉಂಡಿದ್ದ. "ನನ್ನ ಸಾವಿಗೆ ನಾನೇ ಕಾರಣ. ಯಾರೂ

---

೫೪. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೨೮

೫೫. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೨೮

೫೬. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೩೧

೫೭. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೩೨

೫೮. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೩೨

ಅಲ್ಲ"[೫೯] ಎಂದು ಬರೆದಿಟ್ಟು ಪಿಸ್ತೂಲಿನಿಂದ ತನಗೆ ತಾನೇ ಗುಂಡು ಹಾರಿಸಿಕೊಂಡು ಆತ್ಮಹತ್ಯೆ ಮಾಡಿಕೊಂಡ. ಹೀಗೆ ಅಂಧೇರಿನಗರಿಯ ಅಂದಾದುಂದಿ ಆಡಳಿತಕ್ಕೆ ಕೊನೆಯಾಯಿತು.

ವೈಧವ್ಯದ ಸೋಗುಹಾಕಿದ್ದ ಬಾಯಿಸಾಹೇಬಳ, ಸೋಗಲಾಡಿತನವನ್ನು ಹಾಗೂ ಹೊನವಾಡಕರನ ಗೋಮುಖ ವ್ಯಾಘ್ರತೆಯನ್ನು ಕಾದಂಬರಿ ಚೆನ್ನಾಗಿ ಚಿತ್ರಿಸಿದೆ. ಚಿಕ್ಕಸಂಸ್ಥಾನವೊಂದರ ದೊಡ್ಡ ಭಾನಗಡಿಗಳನ್ನು ಹೊರಗೆಡಹುವಲ್ಲಿ ಲೇಖಕರು ಸಫಲರಾಗಿದ್ದಾರೆ. "ದೇಶಿಯ ಆಳರಸರ ಭದ್ರಗೋಡೆಯ ರಾಜವಾಡೆಗಳಲ್ಲಿ ಎಂಥೆಂಥ ಅದ್ಭುತ ಪ್ರಸಂಗಗಳು. ಗೂಢಪ್ರಕರಣಗಳು. ವಿವಿಧ ಭಾನಗಡಿಗಳು. ನಂಬಲಸಾಧ್ಯವಾದ ಕಥೆಗಳು ಜರುಗುತ್ತವೆ ಎಂಬ ಸಂಗತಿಯ ಎಲ್ಲ ವಿವರಗಳನ್ನು ಅಲ್ಲಿಯ ಕಿಟಕಿ. ಬಾಗಿಲು. ಕಂಬ. ಗೋಡೆಗಳಿಗೆ ಜೀವವಿದ್ದು. ಅವುಗಳು ಬಾಯಿಬಿಡುವಂತಿದ್ದರೆ. ಅದ್ಭುತ ಸಂಗತಿಗಳ ಸಾವಿರಾರು ಪುಟಗಳ ಮಹಾಗ್ರಂಥ ಹೊರಬರಹುದಿತ್ತು"[೬೦] ಎಂಬ ಲೇಖಕರ ಮಾತು ಉಪೇಕ್ಷೆಯದೇನಲ್ಲ.

ಪ್ರಭು-ಪ್ರೀತಿಯರ ಪ್ರೇಮ. ಆಳರಸರ ಹಾಗೂ ಅಧಿಕಾರಿಗಳ ದುರ್ವರ್ತನೆ. ದಬ್ಬಾಳಿಕೆ ಮತ್ತು ದೇಶಪ್ರೇಮದ ಚಳುವಳಿ. ಈ ಮೂರು ಸ್ತರಗಳಲ್ಲಿ ನಡೆದು ಬಂದ ಕಾದಂಬರಿ. ನೇರವಾಗಿ ಓದಿಸಿಕೊಂಡು ಹೋಗದೆ. ಅಲ್ಲಲ್ಲಿ ತಡೆಯೊಡ್ಡಿದಂತೆ ಓದುಗನನ್ನು ನಿಲ್ಲಿಸುತ್ತ ಹೋಗುತ್ತದೆಯಾದರೂ ಕಥಾಹಂದರಕ್ಕೇನೂ ಧಕ್ಕೆ ಬಂದಿಲ್ಲ. ಸಹಜ-ಸಮಂಜಸ-ಸಮರ್ಥವಾದ ಹೋಲಿಕೆಗಳು. ವರ್ಣನೆಗಳಲ್ಲಿ ಹಿತ-ಮಿತ. ಕುತೂಹಲಕ್ಕೆ ಎಡೆಮಾಡಿಕೊಡುವ ಘಟನೆಗಳು. ವಸ್ತುವಿನ ವಾಸ್ತವಿಕ ಚಿತ್ರಣ. ತಿಳಿಹಾಸ್ಯ. ಈ ಎಲ್ಲ ಕಾರಣಗಳಿಂದಾಗಿ 'ಅಂಧೇರಿನಗರಿ' ಒಂದು ಸುಂದರ ಕಾದಂಬರಿಯಾಗಿದೆ.

## ದಾಕ್ಷಾಯಣಿ (೧೯೭೪) :

ಭಾರತ ಪುರುಷ ಪ್ರಧಾನ ಕುಟುಂಬಪದ್ಧತಿಯನ್ನು ಹೊಂದಿದ್ದು; ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರು ಶೋಷಣೆಗೆ ಒಳಗಾಗುವ ಉದಾಹರಣೆಗಳೇ ಹೆಚ್ಚು. ಪುರುಷನ ಲೈಂಗಿಕ ಆಸಕ್ತಿಗೆ ತುತ್ತಾಗಿ ತನ್ನ 'ಶೀಲ'ವನ್ನೇ ಕಳೆದುಕೊಂಡ ಸ್ತ್ರೀಗೆ ಭಾರತದಲ್ಲಿ ಜೀವನ ನಡೆಸುವುದು ತೀರ ದುಸ್ತರ; ಅವಳನ್ನು 'ನಾಯಿಮುಟ್ಟಿದ ಗಡಿಗೆ'ಯೆಂದು ದೂರವಿರಿಸಿ ಅಸ್ಪೃಶ್ಯಳಂತೆ ಕಾಣುತ್ತಾರೆ. 'ಕನ್ನಡ ಪ್ರಭ' ದಲ್ಲಿ ದೈನಿಕ ಧಾರಾವಾಹಿಯಾಗಿ ಮೆಚ್ಚುಗೆ ಪಡೆದ ಪ್ರಸ್ತುತ ಕಾದಂಬರಿ. ೧೯೮೪ ರಲ್ಲಿ ಪರಿಷ್ಕರಣಗೊಂಡು 'ವಾತ್ಸಲ್ಯಮಯಿ'ಯಾಯಿತು. ಇದು ಒಂದು ಸುಂದರ ಸಾಮಾಜಿಕ ಕಾದಂಬರಿಯಾಗಿದ್ದು. ಬದುಕಿನ ಸಂಕೀರ್ಣ ಸಂಬಂಧಗಳನ್ನು ಎಳೆ-ಎಳೆಯಾಗಿ ಬಿಚ್ಚಿ ತೋರಿಸಿದೆ. ಹೆಣ್ಣು ಪ್ರೀತಿ-ತ್ಯಾಗಗಳ ಪ್ರತೀಕ; ತಾನೇನನ್ನೂ ಬಯಸದೆ. ತನ್ನ ಬಯಕೆಗಳನ್ನು ಬಚ್ಚಿಟ್ಟುಕೊಂಡಾದರೂ ಸರಿ. ಕೌಟುಂಬಿಕ-ಸಾಮಾಜಿಕ ಸ್ವಾಸ್ಥ್ಯಕ್ಕೆ ಚಿಂತಿಸುವ ದಾಕ್ಷಾಯಣಿಯ ಬದುಕು ಆದರ್ಶನೀಯ.

---

೫೯. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೩೩

೬೦. ದು. ನಿಂ. ಬೆಳಗಲಿ : ಅಂಧೇರಿನಗರಿ. ಪುಟ ೧೧೧

ಕಾಡಪ್ಪ ಬಿಜಾಪುರದ ಜವಳಿ ವ್ಯಾಪಾರಸ್ಥ. ಈತನ ಮೊದಲನೇ ಮಗ ಶಂಕರ ಕಾಲೇಜಿನಲ್ಲಿ ಉಪನ್ಯಾಸಕನಾಗಿದ್ದವ. ಕಿರಿಯಮಗ ಮಲ್ಲಿಕಾರ್ಜುನ ಅಂಗಡಿಯ ಉಸ್ತುವಾರಿ ನೋಡುವವ. ಮುಕ್ತಾ ಏಕೈಕ ಪುತ್ರಿ. ಸ್ವಂತ ಮನೆ. ಅಂಗಡಿ. ಆಳು-ಕಾಳು ಒಟ್ಟಿಗೆ ಸುಖಕ್ಕೆ ಕೊರತೆಯಿಲ್ಲದ ಸಂಸಾರ. ಆದರೆ ಹೆಂಡತಿಯನ್ನು ಬಹುಬೇಗ ಕಳೆದುಕೊಂಡ ಕೊರತೆ ಮಾತ್ರ ಅವನ ಮನಸ್ಸಿನ ಮೂಲೆಯೊಂದರಲ್ಲಿ ನೋವನ್ನುಂಟು ಮಾಡಿತ್ತು. ತಂದೆಯ ಮರಣಾನಂತರ ಮಲ್ಲಿಕಾರ್ಜುನನೇ ವ್ಯಾಪಾರದ ಹೊಣೆಹೊತ್ತುಕೊಂಡ. ಮಲ್ಲಿಕಾರ್ಜುನ ಅತ್ತಿಗೆ ದಾಕ್ಷಾಯಣಿಗೆ ಮಗನಂತೆಯೇ ಇದ್ದ. ತಂಗಿಗೆ ಪ್ರೀತಿಯ ಅಣ್ಣನೂ ಆಗಿದ್ದ. ತಂದೆ ತೀರಿದ ಮೇಲೆ ಮನೆಯನ್ನು ಅಚ್ಚುಕಟ್ಟಾಗಿ. ಸುಖ-ಸಂತೋಷದಿಂದ ಸಾಗಿಸುವ ಈತ ಉಳಿದವರಿಗೆ ಮಾದರಿ ವ್ಯಾಪಾರಸ್ಥನೇ ಸರಿ. ತನ್ನ ಜವಳಿ ಖರೀದಿಗಾಗಿ ಮುಂಬೈಗೆ ಹೋದಾಗ ಸ್ನೇಹಿತ ಶಾಂತೇಶನ ಆಫೀಸಿನಲ್ಲಿ ಟೈಪಿಸ್ಟ ಆಗಿದ್ದ ಸ್ನೇಹಲತಾಳನ್ನು ಮೆಚ್ಚಿದ-ಮದುವೆಯಾಗಲೂ ನಿರ್ಧರಿಸಿದ. ಇದರಿಂದ ದಾಕ್ಷಾಯಣಿಗೆ ತುಂಬ ಸಂತೋಷವಾಯಿತು. ಮೈದುನ ಅನೇಕ ಕಡೆ ವಧುಗಳನ್ನು ನೋಡಿದರೂ ಒಪ್ಪದವ ತಾನೇ ತಾನಾಗಿ ಮದುವೆಯಾಗಲು ನಿರ್ಧರಿಸಿದ್ದು ಅವಳ ಸಂತೋಷಕ್ಕೆ ಕಾರಣವಾಗಿತ್ತು. ಸ್ನೇಹಲತಾಳನ್ನೇ ಮನಸ್ಸಿನಲ್ಲಿ ತುಂಬಿಕೊಂಡು ಬಂದ ಮಲ್ಲಿಕಾರ್ಜುನ ಅತ್ತಿಗೆಯ ಒಪ್ಪಿಗೆ ಪಡೆದು. ಮುಂಬೈಗೆ ಪತ್ರ ಬರೆದು ತಿಳಿಸಿದ. ಆದರೆ ಅಲ್ಲಿಂದ ನಕಾರಾತ್ಮಕ ಉತ್ತರ ಬಂದಾಗ ವಿಚಿತ್ರವೆನಿಸಿತು; ಅದರಿಂದ ಮನಸ್ಸಿಗೆ ನೋವೂ ಆಯಿತು. ಈ ಮಧ್ಯೆ ಅತ್ತಿಗೆಯ ಚಿಕ್ಕಮ್ಮನ ಮಗಳು ಸ್ಮಿತಾ ವಿಜಾಪುರಕ್ಕೆ ಬಂದಾಗ. ತನ್ನ ಮೇಲೇ ಕಣ್ಣಿಟ್ಟು ಮದುವೆಯಾಗುವ ಬಯಕೆ ವ್ಯಕ್ತಪಡಿಸಿದ್ದು ಅದೇಕೋ ಮಲ್ಲಿಕಾರ್ಜುನನಿಗೆ ಅವಳ ನಡೆ-ನುಡಿ. ಹಾವ-ಭಾವಗಳು ಸರಿಕಾಣಲಿಲ್ಲ. ಅವಳ ಸ್ವಚ್ಛಂದ ಪ್ರವೃತ್ತಿ ಮಲ್ಲಿಕಾರ್ಜುನನಿಗೆ ಹಿಡಿಸದೆ ಅತ್ತಿಗೆಗೆ ತಿಳಿಸಿ. ಅವಳಿಂದ ಮುಕ್ತಿ ಪಡೆದುಕೊಂಡ. ಗೋಲಗುಮ್ಮಟದ ಗವಿಯಲ್ಲಿ ಸ್ಮಿತಾ ಕೊಟ್ಟ ಮುತ್ತು ಫಲಕಾಣದೆ ಅರ್ಧಕ್ಕೇ ಕಮರಿಹೋದುದು ಮಲ್ಲಿಕಾರ್ಜುನನಿಗೆ ನೆಮ್ಮದಿಯನ್ನೇ ತಂದಿತು.

ಅಣ್ಣ ಶಂಕರನ ಆಚಾರ-ವಿಚಾರಗಳು ಮಲ್ಲಿಕಾರ್ಜುನನಿಗೆ ಹಿಡಿಸದು. ಮನೆಯಲ್ಲಿ ಚಿನ್ನದಂತಹ ಹೆಂಡತಿಯಿದ್ದು. ಅವಳ ತ್ಯಾಗ-ಪ್ರೀತಿಗಳಿಗೆ ಕವಡೆ ಕಿಮ್ಮತ್ತುಕೊಡದೆ. ಮನೆ-ಮಡದಿ-ಮಕ್ಕಳು ಎಂದೆನ್ನುವ ಪ್ರಜ್ಞೆಯಿಲ್ಲದೆ. ಸದಾ 'ಆನಂದಪ್ರಭು' ಎಂದು ಜಪಿಸುತ್ತ ಕೂಡುವುದು ಮಲ್ಲಿಕಾರ್ಜುನನಿಗೆ ವಿಚಿತ್ರವೆನಿಸುತ್ತದೆಯಲ್ಲದೆ ಅಣ್ಣನ ಈ ರೋಗಕ್ಕೆ ಮದ್ದಿಲ್ಲವೆಂದು ಅತ್ತ ಹೆಚ್ಚು ಗಮನಹರಿಸದೆ. ತಾನಾಯಿತು ತನ್ನ ಉದ್ಯೋಗವಾಯಿತೆಂದು ಸುಮ್ಮನಿದ್ದುಬಿಡುತ್ತಾನೆ.

ದಾಕ್ಷಾಯಣಿ ಪ್ರೊಫೆಸರ್ ಶಂಕರನ ಹೆಂಡತಿ. ರೂಪ-ಗುಣ. ನಡೆ-ನುಡಿಗಳಲ್ಲಿ ಸರಿಸಾಟಿಯಲ್ಲದವಳು. ಮಲ್ಲಿಕಾರ್ಜುನ-ಮುಕ್ತಾರಿಗಾಗಿ ತನ್ನ ಬದುಕನ್ನೇ ಸವೆಸಿದವಳು. ಮುಕ್ತಾಳನ್ನು ತನ್ನ ತೊಡೆ ಮೇಲೆ ಮಲಗಿಸಿಕೊಂಡು ಮಗಳಂತೆ ಬುದ್ಧಿ ಹೇಳಿ ಅವಳ ಬದುಕಿಗೆ ರೂಪಕೊಟ್ಟವಳು. ಮಲ್ಲಿಕಾರ್ಜುನಿಗಾಗಿ ಹಗಲಿರುಳು ಚಿಂತಿಸುತ್ತ. ಅವನ ಶ್ರೇಯಸ್ಸನ್ನೇ ಬಯಸಿದವಳು: ಆ ಮನೆಗೆ ತಾಯಿಯಂತಿದ್ದವಳು. ಗಂಡಸಿಗೆ

ಹಿಡಿದ ಆಧ್ಯಾತ್ಮಿಕ ಹುಚ್ಚಿಗಾಗಿ ಪರಿತಪಿಸುತ್ತ. ತಿದ್ದಲು ಪ್ರಯತ್ನಿಸಿ ಕೈಸುಟ್ಟುಕೊಂಡು. ಅವನಂತೆಯೇ ಯಾಂತ್ರಿಕವಾಗಿ ಮುನ್ನಡೆದು. ಅವನ ಮನಸ್ಸಿಗೆ ನೆಮ್ಮದಿ ನೀಡಿದ ದಾಕ್ಷಾಯಣಿಗೆ ತವರಿನ ಶ್ರೀಮಂತಿಕೆಯ ಬಿಗುಮಾನವಿಲ್ಲ. ದಾಂಪತ್ಯ ಧರ್ಮಕ್ಕನುಗುಣವಾಗಿ ಅವಳ ಬದುಕು ಸಾಗಿದ್ದರೆ. ಹರಕು ಚಾಪೆಯಾದರೂ. ಬರೀ ನೆಲವಾದರೂ ಅಲ್ಲಿ ಸಂತೋಷದಿಂದ ಮಲಗಬಹುದಿತ್ತು. ಆ ಹರಕು ಚಾಪೆಯಾಗಲಿ. ಬರೀ ನೆಲವಾಗಲಿ ಆಕೆಗೆ ಪಾವನವಾಗಬಹುದಿತ್ತು. ತನ್ನ ಸೌಭಾಗ್ಯದ ದಿನವಾದ ಪ್ರಥಮ ರಾತ್ರಿಯಲ್ಲಿಯೇ ತಾನೊಂದು ಯಂತ್ರದ ಜೊತೆ ಲಗ್ನವಾಗಿದ್ದೆನೆಂದರಿತು. ಸುಮ್ಮನಾಗಿ ಆ ಮನೆಯ ಸುಖ-ಸಂತೋಷಕ್ಕಾಗಿ ತನ್ನ ದಾಂಪತ್ಯ ಜೀವನವನ್ನು ತ್ಯಾಗಮಾಡಿದ ಸ್ತ್ರೀ ಇವಳಾಗಿದ್ದಳು.

ಸ್ನೇಹಲತಾ ತಂದೆ ತೀರಿಹೋದ ಮೇಲೆ. ತಾನೇ ಅವನ ಸ್ಥಾನದಲ್ಲಿ ನೇಮಕಗೊಂಡು ತಾಯಿಯ ಪಾಲನೆಯ ಹೊಣೆಹೊತ್ತಳು. ಬದುಕಿನ ಭರದಲ್ಲಿ ಬಣ್ಣದ ಮಾತುಗಳಿಗೆ ಮರುಳಾಗಿ ತನ್ನನ್ನೇ ಮದುವೆಯಾಗುವೆನೆಂದು ಹೇಳಿದ ವ್ಯಕ್ತಿಯೊಂದಿಗೆ ತನ್ನ 'ಶೀಲ'ವನ್ನು ಹಂಚಿಕೊಂಡಳು. ಆದರೆ ಅವನು ಕೈಕೊಟ್ಟಾಗ ದಾರಿತೋಚದೆ. ತಾಯಿಗಾಗಿ ಬದುಕುಳಿದಳಷ್ಟೇ. ಮಲ್ಲಿಕಾರ್ಜುನನ್ನು ಕಂಡಾಗ. ಅವನಿಂದ ಮದುವೆಯಾಗುವ ಪ್ರಸ್ತಾಪ ಬಂದಾಗ. ನೈತಿಕ ಧೈರ್ಯವಾಗದೆ ಸಹಜವಾಗಿಯೇ ಅದಕ್ಕೆ ನಿರುತ್ತರಳಾದಳು. ಇದು ಮಲ್ಲಿಕಾರ್ಜುನನಿಗೆ ತೀವ್ರ ನಿರಾಶೆಯನ್ನುಂಟುಮಾಡಿತ್ತು: ಅದಕ್ಕಾಗಿ ಆತ ಮುಂಬೈಗೆ ಬಂದಾಗ ಹಿಂದಿನದೆಲ್ಲ ಮರೆತು ಹೊಸಜೀವನಕ್ಕೆ ಕಾಲಿಡೋಣವೆಂದು ತಿಳಿಸಿ. ಅವಳ ಚಾರಿತ್ರ್ಯ ಗೊತ್ತಾದರೂ ಅವಳನ್ನೇ ಮದುವೆಯಾಗಲು ಒಪ್ಪಿಕೊಂಡ. ಮಲ್ಲಿಕಾರ್ಜುನನ ಈ ನಿರ್ಧಾರ ಮೊದ-ಮೊದಲು ದಾಕ್ಷಾಯಣಿಗೆ ವಿಚಿತ್ರವೆನ್ನಿಸಿ. ಆಸ್ತಿ-ಅಂತಸ್ತು. ಗುಣ-ಸ್ವಭಾವಗಳಲ್ಲಿ ಸರಿಸಾಟಿಯಿಲ್ಲದ ಮೈದುನನಿಗೆ ಹೆಣ್ಣು ಕೊಡದವರಾರು ? ಎಂದೆನಿಸಿ ಕೋಪವೂ ಬಂತು. ಆದರೆ ಸ್ನೇಹಲತಾಳ ಆಕಸ್ಮಿಕ ತಪ್ಪಿಗೆ ಶಿಕ್ಷೆಕೊಡುವುದು ಸರಿಯಲ್ಲವೆನಿಸಿ ಇಂಥ ಮದುವೆಗೆ ಸಮ್ಮತಿಯನ್ನು ನೀಡಿ. ಸರಳಮದುವೆ ಮಾಡಿ ಸ್ನೇಹಲತಾಳನ್ನು ಮನೆತುಂಬಿಸಿಕೊಂಡಳು. ನವದಂಪತಿಗಳ ಸುಖ-ಸಂತೋಷಗಳನ್ನು ಕಂಡು ಸಂತುಷ್ಟಗೊಂಡಳು. ಮದುವೆಯಾದ ಹೊಸದರಲ್ಲಿ ಮಲ್ಲಿಕಾರ್ಜುನ ಹೆಂಡತಿಯೊಂದಿಗೆ ಪನ್ಹಾಳಕ್ಕೆ ಹೋದ. ಸ್ನೇಹಲತಾಳಿಗೆ ಹಿಂದೆ ಮೋಸ ಮಾಡಿದವ ಅವಳನ್ನೇ ಅನುಸರಿಸುತ್ತ ತಿರುಗುತ್ತಿದ್ದುದನ್ನು ಹೆಂಡತಿಯಿಂದರಿತು. 'ಮುಳ್ಳನ್ನು ಮುಳ್ಳಿನಿಂದಲೇ ತೆಗೆವಂತೆ' ಬಂದ ಕಷ್ಟವನ್ನು ನಿವಾರಿಸಿದ.

ಶಾಂತೇಶನ ಹೆಂಡತಿ ಅನ್ನಪೂರ್ಣಳಿಗೆ 'ಕುಬಸದ' ಕಾರಣವಿದ್ದ ದಿನ ತನ್ನ ಕೋಣೆಯಲ್ಲಿ ಮಲಗಿದ ಅತ್ತಿಗೆಯನ್ನು ತನ್ನ ಹೆಂಡತಿಯೆಂದು ಭಾವಿಸಿ. ಅಲ್ಪ ಚೇಷ್ಟೆಯೊಂದಿಗೆ ಮಾತನಾಡುತ್ತಾನೆ. ಮೂರ್ಛೆಹೋಗಿದ್ದ ಅತ್ತಿಗೆಗೆ ಚಿಕಿತ್ಸೆ ಕೊಡಿಸುತ್ತಾನೆ. ಈ ಘಟನೆಯಿಂದ ಮನಸ್ಸು ವ್ಯಾಕುಲಗೊಂಡು ಸ್ವಲ್ಪದಿನ ಬೇರೆ ವಾತಾವರಣದಲ್ಲಿದ್ದು ಬರೋಣವೆಂದು ಹೆಂಡತಿಯೊಂದಿಗೆ ಮೈಸೂರು-ಬೆಂಗಳೂರುಗಳಿಗೆ ಪ್ರವಾಸ ಹೋಗುತ್ತಾನೆ. ಋಣಭಾರ ಹೊರಿಸುತ್ತಿರುವ ಅತ್ತಿಗೆಗೆ ಯಾವ ಬಗೆಯಿಂದ ಮುಖತೋರಿಸಬೇಕು ?

ಮಲ್ಲಿಕಾರ್ಜುನನ ಕಣ್ಣೆದುರು ಅದೇ ದೃಶ್ಯ ! ಮಹಾಪಾತಕ ಕೈಗೊಂಡವರು ಪಾಪಕ್ಷಾಲನಕ್ಕಾಗಿ ತೀರ್ಥಯಾತ್ರೆ ಮಾಡುವಂತೆ ಅವನೂ ಮೈಸೂರು-ಬೆಂಗಳೂರುಗಳಿಗೆ ಬಂದಿದ್ದು. ಸ್ನೇಹಲತಾಳ ಜೊತೆ ಅವೇ ತೀರ್ಥಕ್ಷೇತ್ರಗಳಾಗಬಹುದಾದರೂ ಒಂದಿಷ್ಟು ಆ ಘಟನೆಯನ್ನು ಮರೆತಂತೆ ಆಗುತ್ತದೆಂದೂ ಭಾವಿಸಿದ್ದ.

ಇತ್ತ ತಂದೆಯೊಂದಿಗೆ ಬಂದ ನಿಪ್ಪಾಣಿಯ ಸದಾನಂದಪ್ಪ ತನ್ನ ಚಿರಂಜಿವಿ ವಿವೇಕಗೆ ಮುಕ್ತಾಳನ್ನು ನೋಡಿ ಒಪ್ಪಿಗೆ ಸೂಚಿಸಿದ್ದು. ದಾಕ್ಷಾಯಣಿಗೆ ಎಲ್ಲಿಲ್ಲದ ಸಂತೋಷ ತಂದಿತು. ತಾಯಿಯಿಲ್ಲದ ಮುಕ್ತಾಳಿಗೆ ತಾನೇ ತಾಯಿಯಾಗಿದ್ದು. ಅವಳ ಬದುಕೂ ಒಂದು ನೆಲೆ ತಲುಪುತ್ತಿರುವುದನ್ನು ಕಂಡು ಓರಿಹಿರಿ ಹಿಗ್ಗಿದಳು. ನಾದಿನಿಯ ಲಗ್ನದ ಮಾತು ಇಷ್ಟು ಸುಲಭದಲ್ಲಿ ನಡೆಯಬಹುದೆಂದು ದಾಕ್ಷಾಯಣಿ ಕನಸಿನಲ್ಲಿಯೂ ಎಣಿಸಿರಲಿಲ್ಲ. ಆಕೆ ಈ ಹಿಂದೆ ತಂದೆಗೆ ಮುಕ್ತಾಳಿಗಾಗಿ ವರ ಸಂಶೋಧನೆಯ ಬಗೆಗೆ ಅನೇಕ ಸಲ ಹೇಳಿದ್ದುಂಟು. ಆದರೆ ಇಂಥ ಪ್ರಸಂಗದಲ್ಲಿ ಮಲ್ಲಿಕಾರ್ಜುನನೊಬ್ಬ ಮನೆಯಲ್ಲಿಲ್ಲದುದು ಸ್ವಲ್ಪ ಚಿಂತೆಗೀಡು ಮಾಡಿತು.

ಇದ್ದಕ್ಕಿದ್ದಂತೆಯೇ ಒಂದು ದಿನ ಸಂಜೆ ಗಂಡನ ಸ್ನೇಹಿತ ದಿನೇಶ ಗೋಯಲ್ ಎಂಬಾತ ಬಂದುದು. ಅವನೂ ಆನಂದಪ್ರಭುಗಳ ಶಿಷ್ಯರಲ್ಲೊಬ್ಬನಾಗಿದ್ದ. ಆ ಮನೆಯಲ್ಲಿ 'ಮಲ್ಲಿಕಾರ್ಜುನ-ಸ್ನೇಹಲತಾಳ' ಜೊತೆಯಾಗಿದ್ದ ಭಾವಚಿತ್ರ ಕಂಡು. ಸ್ನೇಹಲತಾಳ ಹಿಂದಿನ ಚಾರಿತ್ರ್ಯವನ್ನೆಲ್ಲ ಶಂಕರನಿಗೆ ತಿಳಿಸಿಯೇ ಹೋದ. ಇದರಿಂದ ಕ್ರುದ್ಧನಾದ ಶಂಕರ ಹೆಂಡತಿಯನ್ನು ನೇರವಾಗಿ ಕೇಳಿಯೇ ಬಿಟ್ಟ. ಆದರೆ ವಿಚಲಿತಳಾಗದ ದಾಕ್ಷಾಯಣಿ ಅದಕ್ಕೆ. ಅದೆಲ್ಲ ಹಳೆಕಥೆ. ಈಗ ಅವರ ದಾಂಪತ್ಯಸುಖದಲ್ಲಿರುವಾಗ ಮತ್ತೇಕೆ ಕೆದರುವುದೆಂದೂ. ತಾವು ಸುಮ್ಮನಿರಬೇಕೆಂದೂ ಬೇಡಿಕೊಂಡಳು. ನೀತಿ - ಧರ್ಮ - ಮಾನ - ಮರ್ಯಾದೆ - ಶೀಲ ಎಲ್ಲ ಬಿಟ್ಟವರ ಮಧ್ಯದಲ್ಲಿ ನಾನಿರಲಾರೆ. ನೀನೂ ಅಷ್ಟೇ ಇಲ್ಲಿ ಇರಕೂಡದು. ಈ ಮನೆ ಭಾಗವಾಗಿ. ಮಲ್ಲಿಕಾರ್ಜುನ ಬೇರೆಯಿರಲಿ ಎಂದು ಪಟ್ಟು ಹಿಡಿದಾಗ ದಾಕ್ಷಾಯಣಿಗೆ ಆಕಾಶವೇ ಕಳಚಿ ಮೇಲೆ ಬಿದ್ದ ಅನುಭವವಾಯಿತು. ಇಷ್ಟಲ್ಲದೆ. ಯಾವುದೋ ಹಿಂದಿನ ಪತ್ರವನ್ನು ತೋರಿಸಿ. ನಿನಗೂ-ಮಲ್ಲಿಕಾರ್ಜುನನಿಗೂ ಇರುವ ಸಂಬಂಧವೇನು ? ಎಂದು ನಿರ್ವಿಕಾರವಾಗಿಯೇ ಕೇಳಿದ ಗಂಡನ ಮಾತುಗಳು ದಾಕ್ಷಾಯಣಿಗೆ ಬರೆಕೊಟ್ಟಂತಾಗಿತ್ತು. ಮನೆಯಲ್ಲಿ ಜ್ವರದ ತಾಪದಿಂದ ಬಳಲುತ್ತ ಬಿದ್ದ ಮುಕ್ತಾಳನ್ನು ಲೆಕ್ಕಿಸದೆ 'ಸಂಶಯದ ಹುಚ್ಚು ಹಿಡಿದು' ಒದರಾಡುತ್ತಿರುವ ಗಂಡನ ರೀತಿಗೆ ದಾಕ್ಷಾಯಣಿ ರೋಸಿಹೋದಳು. ಅದು ಸ್ಮಿತಾ ಮಲ್ಲಿಕಾರ್ಜುನನಿಗೆ ಬರೆದ ಪತ್ರವೆಂದೂ. ಅದನ್ನು ಮರೆತು ಇಟ್ಟಿರಬಹುದೆಂದೂ ಹೇಳಿದರೆ. ಅದನ್ನು ನಂಬದೆ ಶಂಕರ ಅವಳಿಂದ ಪುಸ್ತಕ ಮುಟ್ಟಿಸಿ ಆಣೆಯನ್ನು ಮಾಡಿಸಿದ; ಆದರೂ ತೃಪ್ತನಾಗಲಿಲ್ಲ. ಸಂಶಯದ ಹುಳಹೊಕ್ಕ ಶಂಕರನಿಗೆ 'ದಾಕ್ಷಾಯಣಿ-ಮಲ್ಲಿಕಾರ್ಜುನರ' ಅನ್ಯೋನ್ಯತೆ ಅಪಾರ್ಥವಾಗಿ ಕಂಡಿತ್ತು. ಆದರೆ ದಾಕ್ಷಾಯಣಿಗೆ ಇದು ತಾಳಲಾರದ ಆಘಾತ. ಮನೆ-ಮನಗಳೆರಡೂ ಇಬ್ಭಾಗವಾದರೆ. ತನ್ನ ತ್ಯಾಗಕ್ಕೇನು ಬೆಲೆಯೆಂದು ಮಮ್ಮಲ ಮರುಗಿದಳು.

ಮಲ್ಲಿಕಾರ್ಜುನ ಸ್ನೇಹಲತಾ ಇಬ್ಬರೂ ಕಂಡ-ಕಂಡ ದೇವರಿಗೆಲ್ಲ ಕೈಮುಗಿದು ಅತ್ತಿಗೆಯ ದಾಂಪತ್ಯವನ್ನು ಸರಿಪಡಿಸುವಂತೆ ಬೇಡಿಕೊಳ್ಳುವುದೇ ಅವರಿಗೆ ಪ್ರವಾಸವಾಯಿತು. ಮಲ್ಲಿಕಾರ್ಜುನನಿಗೆ ತನ್ನ ಅಪರಾಧಪ್ರಜ್ಞೆ ಸದಾ ಕಾಡುತ್ತಿದ್ದು. ಊರಿಗೆ ಹೋಗಿ ಮೊದಲು ಅತ್ತಿಗೆಯ ಪಾದಗಳ ಮೇಲೆ ಬಿದ್ದು ಕ್ಷಮೆ ಯಾಚಿಸಬೇಕೆಂದುಕೊಂಡ. ಅದಕ್ಕೆ ಸ್ನೇಹಲತಾ ಕೂಡ ಒಪ್ಪಿಕೊಂಡಳು. ಒಂದೆಡೆ ಮೂರ್ಛೆರೋಗ. ಇನ್ನೊಂದೆಡೆ ಕಲ್ಲು ಹೃದಯದ ಗಂಡ ಇವರ ಮಧ್ಯೆ ದಾಕ್ಷಾಯಣಿ ಬದುಕುವುದಾದರೂ ಹೇಗೆ? ಮಕ್ಕಳಂತೆ ಮುಕ್ತಾ-ಮಲ್ಲಿಕಾರ್ಜುನರನ್ನು ಕಂಡು. ಅವರ ಸುಖ-ದುಃಖಗಳೇ ತನ್ನವುಗಳೆಂದು ಹಗಲಿರುಳೂ ಗಂಡನ ಸೇವೆ ಮಾಡಿ. ಇಡೀ ಮನೆತನದ ಶ್ರೇಯಸ್ಸಿಗೆ ತನ್ನ ಬದುಕನ್ನೇ ತೇದು. ಮಲ್ಲಿಕಾರ್ಜುನ ಬರುವ ಮೊದಲೇ ಅವರಿಗಾಗಿ ಹಂಬಲಿಸಿ ಕಾದು-ಕಾದು ದಾಕ್ಷಾಯಣಿಯ ಪ್ರಾಣಪಕ್ಷಿ ಹಾರಿಹೋಗುವ ಮುಖಾಂತರ ಕಾದಂಬರಿ ದುಃಖಾಂತವಾಗುತ್ತದೆ.

ಅಪ್ಯಾಯಮಾನವಾದ ಶೀರ್ಷಿಕೆಯುಳ್ಳ 'ವಾತ್ಸಲ್ಯಮಯಿ'ಗೆ ದಾಕ್ಷಾಯಣಿಯೇ ಕಥಾನಾಯಕಿ. ಮೈದುನನನ್ನು ಮಗನಂತೆ. ನಾದಿನಿಯನ್ನು ಮಗಳಂತೆ ಕಾಣುವವಳು. ಅವರಿಗಾಗಿ ತನ್ನ ನೀರಸ ದಾಂಪತ್ಯವನ್ನು ಲೆಕ್ಕಿಸದೆ ಹಗಲಿರುಳೂ ಅವರನ್ನೇ ನೆನೆಯುವ ಅಪರೂಪದ ಹೆಣ್ಣುಮಗಳು: ಪ್ರೀತಿ-ವಾತ್ಸಲ್ಯಕ್ಕೆ ಇನ್ನೊಂದು ಹೆಸರೇ ದಾಕ್ಷಾಯಣಿ; ಕಾದಂಬರಿಯುದ್ದಕ್ಕೂ ಗೋಚರಿಸುತ್ತಾಳೆ. ತಾನು. ತನ್ನ ಗಂಡ. ತನ್ನಮಕ್ಕಳು. ತನ್ನಮನೆ. ಬರೀ 'ತನ್ನದೇ' ಎಂದು ಹಪಹಪಿಸುತ್ತಿರುವ ಇಂದಿನ ಹೆಣ್ಣುಮಕ್ಕಳಲ್ಲಿ ದಾಕ್ಷಾಯಣಿಯಂಥ ವಾತ್ಸಲ್ಯಮಯಿಯೊಬ್ಬಳನ್ನು ಓದುಗರಿಗೆ ನೀಡಿದ ಕಾದಂಬರಿಕಾರರು ಓದುಗರ ಮನಸ್ಸನ್ನು ಗೆದ್ದಿದ್ದಾರೆ. ಕೌಟುಂಬಿಕ ಹಾಗೂ ಸಾಮಾಜಿಕ ಸ್ವಾಸ್ಥ್ಯಗಳೆರಡನ್ನು ಏಕಕಾಲಕ್ಕೆ ಸಾಧಿಸಿದ ಶ್ರೇಯಸ್ಸು ಲೇಖಕರಿಗೆ ಸಲ್ಲುತ್ತದೆ.

ಕಾದಂಬರಿಯ ಬಹುಮುಖ್ಯ ಆಕರ್ಷಣೆಯೆಂದರೆ. ಅರಿಯದೆ ತಪ್ಪು ಮಾಡಿ 'ಶೀಲ' ಕಳೆದುಕೊಂಡ ಸ್ನೇಹಲತಾಳಿಗೆ ಮಲ್ಲಿಕಾರ್ಜುನ ಬಾಳುಕೊಟ್ಟ ಪ್ರಸಂಗ. ಉದಾರನೀತಿಯ ಹೊಸದೃಷ್ಟಿಕೋನದವನಾದ ಸ್ನೇಹಲತಾಳ ಹಿಂದಿನ ಚಾರಿತ್ರ್ಯವೆಲ್ಲ ಗೊತ್ತಾದರೂ ಮಲ್ಲಿಕಾರ್ಜುನ ಅವಳನ್ನು ಮನಸಾರೆ ಒಪ್ಪಿ ಮದುವೆಯಾಗಲು ನಿರ್ಧರಿಸಿದ್ದು. ಅವನ ಈ ನಿರ್ಧಾರಕ್ಕೆ "ಶ್ರೀರಾಮಚಂದ್ರ ತನ್ನ ಪಾದಸ್ಪರ್ಶದಿಂದ ಅಹಲ್ಯೆಯ ಶಾಪವಿಮೋಚನೆಗೈದಂತೆ. ತಾನೇಕೆ ಸ್ನೇಹಲತೆಯನ್ನು ಶಾಪದಿಂದ ಬಿಡುಗಡೆಗೊಳಿಸಬಾರದು? ಇದೇನು ಪಾಪಕಾರ್ಯವಲ್ಲ. ಒಂದು ಶಾಪಗ್ರಸ್ತ ಹೆಣ್ಣಿನ ಬದುಕಿಗೆ ಮರುಜನ್ಮ ಕೊಟ್ಟಂತಾಗುವುದಿಲ್ಲವೆ? ತಾನೂ ಹೆಣ್ಣು. ಮುಕ್ತಾ ಹೆಣ್ಣು. ತಾವೂ ಕೂಡ ಅದೇ ಸ್ನೇಹಲತಾಳಂತೆ ಆಗಿದ್ದರೆ? ಮನೆ ತುಂಬಿದರೆ ಸ್ನೇಹಲತಾ ಕೂಡ ತನ್ನ ತಂಗಿಯಲ್ಲವೆ? ಬೇಡ. ಸ್ನೇಹಲತಾಳ ಬದುಕಿನಲ್ಲಿಯೂ ಹಾಲು-ಜೇನಿನ ಹೊಳೆ ಹರಿಯಲಿ. ಮೈದುನನ ರಸಿಕಜೀವನ ಆಕೆಯಿಂದ ಪರಿಪೂರ್ಣವಾಗಲಿ. ತಾನು ರಾಮಚಂದ್ರನಂತೆ ದೈವತ್ವ ಪಡೆಯದಿದ್ದರೂ. ಒಂದು ಸಾಮಾನ್ಯ ಹೆಣ್ಣಿನ ಕರ್ತವ್ಯ ಪಾಲಿಸಿದರೆ ಸಾಕು. ಮನುಷ್ಯಧರ್ಮ

ಕ್ಷಮಾಗುಣದಲ್ಲಿದೆ. ಅದನ್ನು ದೇವರೇ ಗುತ್ತಿಗೆ ಓಡಿದಿಲ್ಲ"[೬೧] ವೆಂದು ಬೆಂಬಲ ನೀಡಿ ದಾಕ್ಷಾಯಣಿ ಸ್ನೇಹಲತಾಳನ್ನು ಮನೆ ತುಂಬಿಸಿಕೊಂಡಿದ್ದು. ಹೆಣ್ಣೊಂದು ಬಾರಿ ಕಾಲು ಜಾರಿದರೆ ಸಾಕು ಅವಳಿಗೆ ನಮ್ಮ ಸಮಾಜದಲ್ಲಿ ಸ್ಥಾನವಿಲ್ಲ. ಮಾನವ ಸಹಜ ದೌರ್ಬಲ್ಯಗಳಿಗೆ ತುತ್ತಾದ ಅನೇಕ ಅಬಲೆಯರು ಇಂದಿಗೂ ನಮ್ಮ ಸಮಾಜದಲ್ಲಿ ದಿನನಿತ್ಯ ಸಾಯುತ್ತಿದ್ದಾರೆ: ಸತ್ತಂತೆ ಬದುಕುತ್ತಿದ್ದಾರೆ. ಆದರೆ ಅದೇ ಗಂಡು ತಪ್ಪುಮಾಡಿದರೆ ಲೆಕ್ಕಕ್ಕಿಲ್ಲ. ಇಂಥ ಸಾಮಾಜಿಕ ಸಂಕೀರ್ಣತೆಯ ತೊಡಕನ್ನು 'ದಾಕ್ಷಾಯಣಿ-ಮಲ್ಲಿಕಾರ್ಜುನ'ರು ಸಹಜ-ಸಂತೋಷದಿಂದ ಬಿಡಿಸಿದ್ದು. ಕಾದಂಬರಿಯ ಘನತೆಯನ್ನು ಹೆಚ್ಚಿಸಿದೆ. 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬುದಿಲ್ಲಿ ಕೈಸೋತು. ಹೆಣ್ಣು ಮಾತ್ರ ಹೆಣ್ಣಿನ ಅಂತರಂಗವನ್ನು ಅರಿಯಬಲ್ಲಳೆಂಬುದು ಸಾಬೀತಾಗಿದೆ.

ಮರುಜನ್ಮ ಪಡೆದ ಸ್ನೇಹಲತಾ ಪತ್ನೀ ಧರ್ಮವನ್ನು ಸ್ವೀಕರಿಸಿ ಪತಿಯೊಡಗೂಡಿ ನೆಗಣ್ಣಿಯ ಪಾದಮುಟ್ಟಿ ನಮಸ್ಕರಿಸಿದ್ದಲ್ಲದೆ. ಅವಳನ್ನು ಅಕ್ಕನಂತೆ: ದೇವರಂತೆ ಕಂಡು ಕೃತಜ್ಞಳಾಗಿಯೇ ನಡೆದುಕೊಂಡಳು. ಅಲ್ಲದೆ ಅಕ್ಕನ ದಾಂಪತ್ಯದ ಬಿರುಕುಗಳನ್ನರಿತ ಲತಾ ಅದನ್ನು ಸರಿಪಡಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಾಳೆ. 'ಆನಂದಪ್ರಭು'ವಿನಲ್ಲಿಯೇ ಮುಳುಗೇಳುವ ಭಾವನ ವಿಚಿತ್ರ ಮನೋಧರ್ಮವನ್ನು. "ಅದೇನ ಮೋಕ್ಷವೋ. ಅದೇನ ಆತ್ಮಸಂತೋಷವೋ. ಅವ್ರಿಗೇ ಗೊತ್ತು. ಒಂತಾಸ ನಿಮ್ಮ ಕೂಡ ಹೊರಗೆ ಅಡ್ಡಾಡಿ ಬಂದ್ರೆ ಅದಕ್ಕೂ ಹೆಚ್ಚಿನ ಆತ್ಮಸಂತೋಷ ಇನ್ನೇನಿದೆ ? ಈ ಜನ ಮೋಕ್ಷಕ್ಕೆ ಯಾಕ ಬಡಕೊಳ್ಳುವರೋ ನನಗೂ ತಿಳೀದು. ಸತ್ತದ್ದೇ ಮೋಕ್ಷ ! ಅಕ್ಕ...."[೬೨] ಎಂದು ಪ್ರತಿಭಟಿಸುತ್ತಾಳೆ. ದಾಕ್ಷಾಯಣಿಗೂ ಓಗನ್ನಿಸದೇ ಇಲ್ಲ. ಆದರೆ ಪಾಲಿಗೆ ಬಂದದ್ದು ಪಂಚಾಮೃತವೆಂದು ತಿಳಿದು ತನ್ನ ಆಸೆ-ಆಕಾಂಕ್ಷೆಗಳಿಗೆಲ್ಲ ಬೆಂಕಿಯಿಟ್ಟು ಬದುಕುತ್ತಿದ್ದಳು. ಇದನ್ನರಿತ ಮಲ್ಲಿಕಾರ್ಜುನ ಕೂಡ ಅನೇಕ ಸಲ. "ಅಳಬೇಡ ವೈನಿ. ಅಣ್ಣನ ಸ್ವಭಾವಕ್ಕೆ ಯಾವ ಔಷಧಿಯೂ ಇಲ್ಲ. ಉಪಾಯವೂ ಇಲ್ಲ"[೬೩] ವೆಂದು ಅತ್ತಿಗೆಗೆ ತಿಳಿಸುತ್ತ ಕಣ್ಣೀರಿಡುತ್ತಿದ್ದ.

ಕುಟುಂಬದಲ್ಲಿ ಎಲ್ಲರೂ ಅನ್ಯೋನ್ಯವಾಗಿದ್ದರೆ ಮಾತ್ರ ನೆಮ್ಮದಿ. ಒಬ್ಬರಿಗೊಬ್ಬರು ಪರಿಸ್ಪರ ಕಷ್ಟ-ಸುಖ. ನೋವು-ನಲಿವುಗಳನ್ನು ಸಮನಾಗಿ ಹಂಚಿಕೊಳ್ಳಬೇಕು: ಪರಸ್ಪರ ಒಳಿತಿಗಾಗಿ ಶ್ರಮಿಸಬೇಕು. 'ಮಲ್ಲೇಶಿ ನನ್ನ ದೈವ' ವೆಂದು ತನಗೆ ಬದುಕುವ ಆಸೆ ಹುಟ್ಟಿಸಿದ ಮಲ್ಲೇಶಿ-ಮುಕ್ತಾರನ್ನು ತನ್ನ ಮಕ್ಕಳಂತೆ ದಾಕ್ಷಾಯಣಿ ಕಂಡರೆ. ಮುಕ್ತಾಳಿಗೆ ದಾಕ್ಷಾಯಣಿಯೇ ತಾಯಿಯಾಗಿದ್ದಳು. ಇದಲ್ಲದೆ ಸ್ನೇಹಲತಾ ಕೂಡ ಅಕ್ಕನಂತೆ, ದೇವರಂತೆ ಕಂಡು ಸದಾ ಅಕ್ಕನ ಬದುಕನ್ನು ಶುದ್ಧಗೊಳಿಸುವಲ್ಲಿಯೇ ತನ್ನ ಚಿಂತನೆಯನ್ನಿಟ್ಟುಕೊಂಡವಳು. "ಅಕ್ಕನದೂ ಒಂದ ದೈವ ಅನ್ನಬೇಕು. ಆಕೆ ಎಂಥಾ ದುರ್ದೈವಿ ! ಒಮ್ಮೆಯಾದರೂ ಮುಂದೆ ಶಂಕರ ಮಾಮಾನ ಕೂಡ ಬರಬಹುದೇ ? ಇಂಥಾ ಸಂತೋಷ ಪಡೀಬಹುದೆ....?"[೬೪] ಪ್ರವಾಸದಲ್ಲಿದ್ದರೂ ಸ್ನೇಹಾಗೆ ಅದೇ

---

೬೧. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೮೧

೬೨. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೨೧

೬೩. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೩೭

೬೪. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೫೬

ವರ್ಷಾತು ನಾ ಈ ಮನೆಗೆ ಬಂದ. ಇನ್ನಾs ನನ್ನ ಮನಸ ತಿಳಿದಿಲ್ಲಂದ್ರ ? ತಮ್ಮನಕ್ಕಿಂತ ಹೆಚ್ಚಿಗೆ ಮಗ.... ಅಂತ ಮಲ್ಲೇಶಿನ ನೋಡಿಕೊಂಡ ಬಂದ್ರೂ ಎದೆ ಇರಿಯುವ ಎಂಥಾ ಮಾತ ಹೇಳ್ತಿರಿ ? ನೀವ ಹೇಳಿದ್ದ ಕೇಳಿಕೊಂಡ ಕತ್ತೆಗಿಂತ ಕಡೆಯಾಗಿ ದುಡದ್ರೂ ನಿಮಗ ಕರುಣಾ ಬರಲಿಲ್ಲ ಉಪವಾಸ ವನವಾಸದಿಂದಿದ್ರೂ ಒಬ್ಬ ಭಿಕಾರಿ ಹೆಂಗಸು ತನ್ನ ಗಂಡನ ಕೂಡ ನಕ್ಕೋತ. ಕಲಕೋತ ಸಂತೋಷದಿಂದ ಇರುವಾಗ. ನನಗ ಆ ಸುಖಾನೂ ಇಲ್ಲಂದ್ರ ? ಯಾವ ಜನ್ಮದ ಪಾಪ ! ಅದೆಲ್ಲ ಸಹನ ಮಾಡಿ ನಿಮ್ಮ ಉಗಳ ದಾಟದಿದ್ರೂ. ಬಾಯಿಂದ ಆಡಬಾರದಂತ ಅಪವಾದ ತಂದ ನನ್ನ ಯಾಕೆ ಕೊಲ್ತಿರಿ ? ಒಮ್ಮೆ ನನ್ನ ಕುತ್ತಿಗಿ ಹಿಸುಕಿಕೊಂದ ಬಿಟ್ರ ನಿಮಗ ಸುಖಾ ! ಹಾಗೆ ಒಮ್ಮೆ ಮಾಡಿ ಬಿಡ್ರೆಲ್ಲ....! "[೬೮] ಎಂದು ನುಡಿದ ಮಾತುಗಳು ಸಹಜವಷ್ಟೇ ಅಲ್ಲದೆ. ದಾಕ್ಷಾಯಣಿಯ ಬದುಕನ್ನೇ ಅನಾವರಣಗೊಳಿಸಿದಂತಿವೆ. ಚಿನ್ನಕ್ಕೆ ಚಿನ್ನವೇ ಸಾಟಿಯೆಂಬಂತಿದ್ದ ಹೆಂಡತಿಯ ಪಾವಿತ್ರ್ಯದ ಬಗ್ಗೆ ಸಂಶಯಗೊಂಡ ಶಂಕರ ತಾನೆಷ್ಟು ಪವಿತ್ರ ? ಎಂಬುದು ಹಾಸ್ಯಾಸ್ಪದ. ಹೆಂಡತಿಯ ತಾಪ-ಅನುತಾಪಗಳಿಗೆ ಅನುಕಂಪ ತೋರದ ಶಂಕರ. "ಅನೀತಿಯವಳಾದ ಸ್ನೇಹಲತಾ. ಸಂದೇಹಕ್ಕೆ ಒಳಗಾದ ಸಹೋದರ. ಇವರ ಜತೆಯಲ್ಲಿ. ಇನ್ನೂ ಸಂಶಯದ ಸುಳಿಯಲ್ಲಿದ್ದ ಹೆಂಡತಿಯನ್ನು ಕಟ್ಟಿಕೊಂಡು ಬಾಳುವುದೆ ? ಹೇಗೆ ಸಾಧ್ಯ ....?"[೬೯] ವೆಂದು ಭ್ರಾಂತನಂತೆ ವಟಗುಟ್ಟುತ್ತಲೇ ಇದ್ದ. "ಅದೇನ ಇರ್ಲಿ ! ಈಗ ಅಂಥಾದ್ದೇನಾಗಿಲ್ಲ. ನಾವ ಕ್ಷುಲ್ಲಕರಾಗದೆ ದೊಡ್ಡ ಮನಸಮಾಡಿ ಸ್ನೇಹಲತಾಳನ್ನು ಕ್ಷಮಿಸಿ ಇರ್ಲಿಕ್ಕೆ ಆಗೂದಿಲ್ಲೇನು ? ಒಂದಿಷ್ಟು ಮನುಷ್ಯರಾಗಿ ವಿಚಾರ ಮಾಡೋಣ. ಮಾನವತೆ ಮನುಷ್ಯರಲ್ಲೇ ಇರಬೇಕು "[೭೦] ಎಂದ ಹೆಂಡತಿಯ ಮಾತಿಗೆ "ಅದೆಲ್ಲಾ ಅಸಾಧ್ಯದ ಮಾತು ! ನಿನ್ನ ಗೊಡ್ಡುವೇದಾಂತ ನನಗ್ಗೊತ್ತಿಲ್ಲ ! ನಾ ಹೇಳಿದ್ದ ಕೇಳಿಕೊಂಡ ನಾಯಿಯಂತೆ ಇರು. ಎಂದು ತನ್ನ ಹಟವನ್ನೇ ಸಾಧಿಸಿದ ಶಂಕರನ ಓದು ಹೊಳೆಯಲ್ಲಿ ಹುಣಸೆಹಣ್ಣು ತೊಳೆದಂತಾಗಿತ್ತು. ಪಾಪಿಗಳ ದರ್ಶನವೂ ಪಾಪಕ್ಕೆ ಮೂಲ "[೭೧] ವೆಂದೆನ್ನುವ ಆತನಿಗೆ ತನ್ನ ಪಾಪದ ಅರಿವೇ ತನಗಿಲ್ಲದಿರುವುದು ದುರ್ದೈವವಲ್ಲದೆ ಬೇರೇನು ?

ಕಾದಂಬರಿ ಅನೇಕ ಹೃದಯಂಗಮ ಘಟನೆಗಳನ್ನು ಹೊಂದಿದೆ. ಸ್ನೇಹಲತಾ ಮುಂಬೈ ಬಿಟ್ಟು ಬರುವಾಗ ಕಾಣುವ ವಾಮನರಾವ್ ಗೋಖಲೆಯವರ ಹೃದಯಶ್ರೀಮಂತಿಕೆ. ಮಲ್ಲಿಕಾರ್ಜುನ ಸ್ನೇಹಲತಾ ಶೀಲಗೆಟ್ಟವಳೆಂದರಿತೂ ಮದುವೆಯಾಗಲು ಒಪ್ಪಿ. ಅತ್ತಿಗೆಯನ್ನು ಒಪ್ಪಿಸಿದ್ದು. ಮುಕ್ತಾ ತನಗರಿಯದಂತೆ ಎಡವುತ್ತಿರುವಲ್ಲಿ ದಾಕ್ಷಾಯಣಿ ಮಗಳಿಗೆ ಬುದ್ಧಿಹೇಳುವಂತೆ ಹೇಳಿ ತಿದ್ದಿರುವ ಪ್ರಸಂಗ. ಮಲ್ಲೇಶಿ-ಲತಾರಿಗೋಸ್ಕರ ತನ್ನ ಅನಾರೋಗ್ಯದ ನಡುವೆಯೂ ದಾಕ್ಷಾಯಣಿ ಬುತ್ತಿ ಮಾಡಿ ಕಟ್ಟಿದ್ದು. ಇದೆಲ್ಲಕ್ಕಿಂತ ಮಿಗಿಲಾಗಿ ಕಾದಂಬರಿಯ ಕೊನೆಯ ಸನ್ನಿವೇಶ ಓದುಗರ ಹೃದಯವನ್ನು ಹಿಂಡುತ್ತದೆ. 'ಮಾಮಾ ನನ್ನ ತಾಯಿ

---

೬೮. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೪೭

೬೯. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೫೨

೭೦. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೫೩

೭೧. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೪೯

ಎಲ್ಲಿ ?" ಎಂದು ಚೀರುತ್ತಿರುವ ಅಣ್ಣನಿಗೆ ಮುಕ್ತಾ. "ಅಣ್ಣಾ. ವೈನಿ ನಿಮ್ಮ ಹಾದಿ ಬಹಳ ನೋಡಿ ಹೋದಳು ! ಅಣ್ಣಾ ಇನ್ನ ನಾವ ಅನಾಥರು !" [೭೨] ಎಂದು ದುಃಖಿಸುವಲ್ಲಿ ಎಂಥ ಕಲ್ಲುಹೃದಯಗಳೂ ಕೂಡ ಕಣ್ಣೀರಿಡುತ್ತವೆ.

ಕಾದಂಬರಿಯುದ್ದಕ್ಕೂ ದಾಕ್ಷಾಯಣಿಯ ವಾತ್ಸಲ್ಯದ ಹೊಳೆಯೇ ಹರಿದಿದೆ. ಅವಳು ತಾಯ್ತನದ ಹಂಬಲವನ್ನು ಮುಕ್ತಾ-ಮಲ್ಲೇಶಿಯರಲ್ಲಿ ಕಂಡುಂಡು. ಜೀವನದಲ್ಲಿ ತಾಳ್ಮೆ. ಪ್ರೀತಿ-ತ್ಯಾಗ-ಅನುಕಂಪ-ಸಂಯಮಗಳಿಗೆ ಬೆಲೆಯೆಷ್ಟಿದೆಯೆಂಬುದನ್ನು ಪ್ರಚುರಪಡಿಸುತ್ತಾಳೆ. ಇಷ್ಟಿದ್ದಾಗ್ಯೂ ದಾಕ್ಷಾಯಣಿ ಅಲ್ಲಲ್ಲಿ ಮಾನವ ಸಹಜ ದೌರ್ಬಲ್ಯಗಳಿಗೆ ಒಳಗಾಗಿರುವುದು ಕಂಡುಬರುತ್ತದೆ. ಮನಸ್ಸಿನಲ್ಲಿ ದಾಕ್ಷಾಯಣಿ ಅದೇಕೋ ಮಲ್ಲೇಶಿಯ ಕಾಟಿನ ಮೇಲೆ ಮಲಗಿದಾಗ ಕಾಣುವ ತೃಪ್ತಿ ಹಾಗೂ ಅತ್ತ ಸೆಳೆವ ಮನಸ್ಸು. ಶಂಕರನಂಥ ಕಲ್ಲುಹೃದಯದ ಗಂಡನನ್ನು ಕಟ್ಟಿಕೊಂಡು ಬಳಲುವ ಅವಳಿಗೆ ಸಾಂಗಲಿಯಲ್ಲಿ ತನ್ನ ಓದಿನ ಸಹಪಾಠಿ ಅಶೋಕನ ನೆನಪಾಗದೇ ಇರಲಿಲ್ಲ. ಆದರೂ ಕಲ್ಲುಮನಸ್ಸು ಮಾಡಿಕೊಂಡು ಗಾಣದೆತ್ತಿನಂತೆ ಒಂದೇ ಗತಿಯಲ್ಲಿ ಸುತ್ತುತ್ತಿರುವದು ಅವಳ ಕರ್ಮ. ಶಾಂತೇಶನ ಹೆಂಡತಿಯ ಕುಬಸದ ದಿನ ಮಲ್ಲಿಕಾರ್ಜುನ ಹೆಂಡತಿಯ ಕೋಣೆಯಲ್ಲಿ ಮಲಗಿದ್ದ-ಮೂರ್ಛೆ ರೋಗದಿಂದ ಬಳಲಿ ಪ್ರಜ್ಞೆಯಿಲ್ಲದ ಅತ್ತಿಗೆಯನ್ನು ಎಬ್ಬಿಸಿದ ಘಟನೆಯನ್ನೇ ಲೇಖಕರು ಅಸ್ಪಷ್ಟಗೊಳಿಸಿದ್ದಾರೆ. ಕೇವಲ ಮಲಗಿದ ಅತ್ತಿಗೆಯನ್ನು ಎಬ್ಬಿಸಿದ್ದು ತಪ್ಪೆ ? ಇದಕ್ಕಿಂತ ಹೆಚ್ಚಿನ ಅಚಾತುರ್ಯವೇನೂ ನಡೆದಿಲ್ಲವೆಂದ ಮೇಲೆ ಮಲ್ಲಿಕಾರ್ಜುನ ಅಷ್ಟೊಂದು ದುಃಖಿಸುವ ಕಾರಣವೇನಿದೆ ? "ಲತಾ ನನ್ನಿಂದ ಒಂದು ಅಪರಾಧ ಆಗೇದ ನೀ ಕ್ಷಮಿಸಬೇಕು" [೭೩] ಎಂದು ಹೆಂಡತಿಯಲ್ಲಿ ಗೋಗರೆದುದಲ್ಲದೆ. ಮನೆಬಿಟ್ಟು ಸುಮಾರು ದಿನ ಸುತ್ತುವ ಕಾರಣವೇನಿದೆ ? ಕಾದಂಬರಿಕಾರರು ಸಾಮಾನ್ಯವಾದ ಘಟನೆಗೆ ಇಲ್ಲದ ಪ್ರಾಮುಖ್ಯತೆ ಕೊಟ್ಟಂತೆನಿಸುತ್ತದೆ. ಬಹುಶಃ ಕಾದಂಬರಿಯ ಮುಕ್ತಾಯದ ಭರದಲ್ಲಿ ಅವರಿಗೆ ಮಲ್ಲಿಕಾರ್ಜುನನನ್ನು ಮನೆಯಿಂದ ಹೊರಗೆ ಕಳಿಸಲಿಕ್ಕೆಂದು ಈ ಘಟನೆಗೆ ಹೆಚ್ಚು ಜೋತುಬಿದ್ದಂತೆ ಕಾಣುತ್ತದೆ. ಆದರೆ ಕಾದಂಬರಿಗೆ ಹೆಚ್ಚಿನ ಗಾಂಭೀರ್ಯ ಬಂದಿರುವುದು ಅದರ ಕೊನೆಯ ದೃಶ್ಯದಿಂದಲೇ. ಪಾಪಪ್ರಜ್ಞೆಯಿಂದ ಬಳಲಿ ಬೆಂಡಾಗಿ ಅತ್ತಿಗೆಯಲ್ಲಿ ಕ್ಷಮೆಕೇಳಬೇಕೆಂದು ಓಡೋಡಿ ಬಂದ ಮಲ್ಲಿಕಾರ್ಜುನನಿಗೆ ಅತ್ತಿಗೆ ಶಾಶ್ವತವಾಗಿಯೇ ಅಗಲಿಹೋದುದು ತುಂಬಲಾರದ ನಷ್ಟವಾಗಿತ್ತು.

ಕಲ್ಪನೆ ಅಥವಾ ವೈಭವೀಕರಣವಿಲ್ಲದ ವಸ್ತುವಿನಿಂದಾಗಿಯೇ 'ದಾಕ್ಷಾಯಣಿ' ಒಂದು ಆಕರ್ಷಕ ಕಾದಂಬರಿಯೆನಿಸಿಕೊಂಡಿದೆ. ಕಾದಂಬರಿಗೆ ಬೇಕಾದ ಉಳಿದೆಲ್ಲ ಪರಿಕರಗಳು ವಸ್ತುವಿನೊಂದಿಗೆ ಸೇರಿ. ಅದಕ್ಕೆ ಪೂರಕವಾಗುವ ರೀತಿಯಲ್ಲಿ ಕೆಲಸ ಮಾಡಿರುವುದರಿಂದ ಅದನ್ನೊಂದು ಉತ್ತಮ ಕಾದಂಬರಿಯನ್ನಾಗಿಸಿವೆ. ಸರಳ ಭಾಷೆ. "ಯಂತ್ರವತ್ತಾದ ಮುಂಬೈ ಮಹಾನಗರದಲ್ಲಿ ಮಾನವೀಯತೆ ಕಳೆದುಕೊಂಡು ಎಲ್ಲರೂ ನಿರ್ಜೀವ

---

೭೨. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೬೫

೭೩. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೧೬೦

ಯಂತ್ರವೇ ಆಗುತ್ತಾರೇನೋ ಎಂಬ ಸಂದೇಹ! ನಿರ್ಜೀವ ಕಂಪ್ಯೂಟರ್ ಕೂಡ ಕೇಳಿದರೆ ಉತ್ತರ ಕೊಡಬಲ್ಲುದು. ಕೆಟ್ಟುನಿಂತ ಕಂಪ್ಯೂಟರ್‌ನಂತೆ ಇವರೆಲ್ಲರ ಭಾವನೆಗಳು "[೭೪] ಎಂಬಂತಹ ಔಚಿತ್ಯಪೂರ್ಣವಾದ ಹೋಲಿಕೆಗಳಿಂದ ಕಾದಂಬರಿ ಇನ್ನಷ್ಟು ಸೊಗಸಾಗಿ ಕಾಣುತ್ತದೆ. ಶಂಕರ ಆನಂದಪ್ರಭುವಿನ ಆಧ್ಯಾತ್ಮ ಕೇಂದ್ರಕ್ಕೆ ಐದುಸಾವಿರ ರೂಪಾಯಿಗಳನ್ನು ದಾನವಾಗಿ ಕೊಡಲು ಸೂಟಕೇಸನಲ್ಲಿ ತುರುಕುವುದನ್ನು ಕಂಡು. "....ಸಾವಿರಗಟ್ಟಲೆ ಹಣಕೊಡಬೇಕೆಂದಾಗ ಬರಗಾಲ ನಿಧಿಯಿಲ್ಲವೆ? ಶಾಲಾ ಸಂಸ್ಥೆಗಳಿಲ್ಲವೆ? ಮನೆಯಿಲ್ಲದ ಬಡವರಿಲ್ಲವೆ? ಗಂಡ ಹಣವೆಚ್ಚ ಮಾಡಲು ಆಕೆಯ ಆತಂಕವಿಲ್ಲ. ಆದರೆ ಹಣದ ಸದ್ವಿನಿಯೋಗವಾಗಬೇಕೆಂದು ಅವಳ ಆಶಯ "[೭೫] ಇಂಥ ಅನೇಕ ಸಮಾಜಪರ ಚಿಂತನೆಗಳನ್ನು ಹೊಂದಿದ ಈ ಕೃತಿ ಒಂದು ಉತ್ತಮ ಸಾಮಾಜಿಕ ಕಾದಂಬರಿಯಾಗಿದ್ದು. ಧರ್ಮ - ಸಾಮಾಜಗಳೆರಡರ ಸಂಬಂಧವನ್ನು ಗೆರೆಕೊರೆದು ತೋರಿಸಿದೆ. "ಕಣ್ಣಿಗೆ ಪಟ್ಟಿಕಟ್ಟಿಕೊಂಡಿದ್ದರೂ ಟಾಂಗಾದ ಕುದುರೆ ದಾರಿಯ ಸುಳಿವಿನಿಂದ ಓಡಾಡುತ್ತಿತ್ತು. ಮಾರ್ಗ ತಪ್ಪುತ್ತಿರಲಿಲ್ಲ. ಕಣ್ಣಿಗೆ ಯಾವ ಪಟ್ಟಿಯಿಲ್ಲದ ಶಂಕರ...."[೭೬] ಮಾರ್ಗತಪ್ಪುತ್ತಿರುವ ಬಗ್ಗೆ ಹೇಳುವ ಮಾತುಗಳು ತುಂಬ ಔಚಿತ್ಯಪೂರ್ಣವೆನಿಸುತ್ತದೆ. 'ಸತಿಪತಿಯೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ಮಾತು ಶಂಕರನಲ್ಲಿ ಅರ್ಥಕಳೆದುಕೊಂಡಿತ್ತು. ಸಹಜ-ಸರಳ ಶೈಲಿಯಲ್ಲಿರುವ ಕಾದಂಬರಿ ಅಡತಡೆಯಿಲ್ಲದೆ ಓದಿಸಿಕೊಂಡು ಹೋಗುತ್ತದೆ. ನೇರನಡೆ. ಹೆಚ್ಚುಗೊಂದಲಕ್ಕೆಡೆಯಾಗದ ಘಟನೆಗಳು. ಪಾತ್ರಗಳು ತಮ್ಮಷ್ಟಕ್ಕೆ ತಾವು ನೋವು-ನಲಿವುಗಳಿಗೆ ಸ್ಪಂದಿಸುವ ರೀತಿ ತುಂಬ ಅನನ್ಯವಾದುದಾಗಿದೆ. ಭಾವ-ಭಾಷೆಗಳ ಅರ್ಥಪೂರ್ಣ ಹೊಂದಾಣಿಕೆಯನ್ನು ಪಡೆದ ಕಾದಂಬರಿ ತನ್ನ ಗುರಿಮುಟ್ಟುವುದರಲ್ಲಿ ಯಶಕಂಡಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಅದರಂತೆ ಲೇಖಕರು ತಾವು ನೀಡಬೇಕಾದುದನ್ನು ನೀಡಿ ಸಂತೃಪ್ತರಾಗಿದ್ದಾರೆ.

ಕೇವಲ ಸಾಮಾಜಿಕ ಸಮಸ್ಯೆಗಳನ್ನು ಎತ್ತಿ ಹೇಳುವುದಷ್ಟೇ ಸಾಹಿತ್ಯದ ಗುರಿಯಲ್ಲ; ಅದಕ್ಕೆ ತಕ್ಕ ಪರಿಹಾರವನ್ನೂ ಸೂಚಿಸಿ. ಸಾಮಾಜಿಕ ಸಂಕೀರ್ಣಗಳ ನಿರೂಪಣೆಯ ಜೊತೆ ಜೊತೆಯಲ್ಲಿ ಸಾಮಾಜಿಕ ಚಿಂತನೆಯನ್ನು ನಡೆಸಿ ಪರಿಹಾರ ಸೂಚಿಸುವುದು ಲೇಖಕನ ಆದ್ಯಕರ್ತವ್ಯ. ಈ ಹಿನ್ನೆಲೆಯಲ್ಲಿ ಬೆಳಗಲಿಯವರು ಸಾಮಾಜಿಕ ಕ್ರೌರ್ಯ. ದುಷ್ಟತನ. ದಬ್ಬಾಳಿಕೆ. ಮೋಸ-ವಂಚನೆಗಳಿಗೆ ಬಲಿಯಾದವರ ಚಿತ್ರಣವನ್ನು ಕೊಡುತ್ತ, ಅದರ ಬೆನ್ನಹಿಂದೆಯೇ ಅದನ್ನು "ಹಣದ ಜತೆ ಒಂದು ಹೆಣ್ಣಿನ ಸರ್ವಸ್ವವೇ ಆದ ಶೀಲಸಂಪತ್ತನ್ನೂ ದೋಚಿಕೊಂಡು ಹೋದ...."[೭೭] ಎಂದು ತನ್ನ ಬದುಕನ್ನೇ ನಿರ್ನಾಮ ಮಾಡಿಕೊಂಡೆನೆಂದು ಪರಿತಪಿಸುವ ಸ್ನೇಹಲತಾಳಿಗೆ. "....ನಿಮ್ಮ ಹಿಂದಿನ ವಿಷಯ ಕೆಟ್ಟ ಕನಸಂತ ಮರ್ತು ಬಿಡಬೇಕು. ಈ ಲಗ್ನಕ್ಕ ನಮ್ಮ ವೈನಿ ಒಪ್ಪಿದ್ರೆ ಆಯ್ತು. ಆಕೆ ದೇವ್ರಂಥವಳು. ಒಪ್ಪಿಸು ಹೊಣೆ ನನ್ನದು. ಮೊದಲು ನಿಮ್ಮ ಸಮ್ಮತಿ ಬೇಕಾಗಿತ್ತು. ಖರೆ

---

೭೪. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೩

೭೫. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೨೭

೭೬. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೨೮

೭೭. ದು. ನಿಂ. ಬೆಳಗಲಿ : ವಾತ್ಸಲ್ಯಮನಿ. ಪುಟ ೬೪

ಹೇಳಬೇಕಂದ್ರ ಈಗ ಖರೀದಿ ನೆವ ಮಾಡಿ ಇದಕ್ಕs ನಾ ಬಂದದ್ದು"[೭೮] ಎಂದೆನ್ನುವ ಮಲ್ಲಿಕಾರ್ಜುನನ ಮಾತುಗಳು ಸಮಾಜದಲ್ಲಿ ಸ್ನೇಹಲತಾಳಂತಿರುವ ಅನೇಕ ಅಬಲೆಯರಿಗೆ ದಾರಿದೀಪವಾಗಿದೆ. ಇದು ಕಾದಂಬರಿಯ ಗುಟ್ಟೂ ಹೌದು - ಯಶಸ್ಸೂ ಹೌದು. ಈ ನಿಟ್ಟಿನಲ್ಲಿ ಕಾದಂಬರಿ ಯಶಸ್ವಿಯಾಗಿದೆ. ಇಂಥ ಸಂಬಂಧಕ್ಕೆ ದಾಕ್ಷಾಯಣಿ ಒಪ್ಪಿ ಸ್ನೇಹಲತಾಳನ್ನು ಮನೆತುಂಬಿಸಿಕೊಂಡಿದ್ದೊಂದು ಕಾದಂಬರಿಯ ಸಾರ್ಥಕತೆಗೆ ಒಡಿವ ಕನ್ನಡಿ. ಒಂದೆಡೆ ಶೀಲಗೆಟ್ಟ ಹೆಣ್ಣಿಗೆ ಬಾಳ ಆಸರೆಯಾಗಿ ಅವಳನ್ನೇ ವರಿಸಿದ ಮಲ್ಲಿಕಾರ್ಜುನ ಮಹಾನುಭಾವನಂತೆ ಕಂಡರೆ. ಇನ್ನೊಂದೆಡೆ ಪತಿಯ ಗೆರೆಯನ್ನು ದಾಟದೆ. ಮದುವೆಯಾದ ತಪ್ಪಿಗೆ ತೆಪ್ಪಗೆ ಬದುಕನ್ನು ನೂಕುವ ಹೆಂಡತಿಯ ಮೇಲೆಯೇ 'ಸಂಶಯ' ತಾಳುವ ಶಂಕರ ಮಹಾಘಾತುಕನಂತೆ ಗೋಚರಿಸುತ್ತಾನೆ. ಇಬ್ಬರೂ ಒಂದೇ ತಾಯಿಯ ಮಕ್ಕಳಾದರೂ ಎಷ್ಟೊಂದು ವ್ಯತ್ಯಾಸ! ಎಷ್ಟೊಂದು ವಿಚಿತ್ರ! ಎರಡು ಪಾತ್ರಗಳ ಮುಖಾಂತರ ಧರ್ಮ. ವಿದ್ಯೆ. ಪ್ರೀತಿ-ಸಹಬಾಳ್ವೆ. ಅನುಕಂಪ. ಕ್ಷಮಾಗುಣಗಳಿಗೆ ಕಾದಂಬರಿಕಾರರು ಮರುವಿಮರ್ಶೆ ಬರೆದಂತೆ ರಚನೆಗೈದಿದ್ದಾರೆ. "ಆನಂದದ ಮೂಲ ಬೇರೆ ಜೀವನವನ್ನು ಅರಿತು ಅದರ ಜೊತೆ ಸೇರುವುದರಲ್ಲಿದೆ"[೭೯] ಎಂಬುದು ದಾಕ್ಷಾಯಣಿಯ ದಿನಚರಿ. ಅವಳು ಹರಿಸುವ ಪ್ರೀತಿ. ವಾತ್ಸಲ್ಯ. ಅನೇಕ ಸಂಕೀರ್ಣತೆಗಳ ಮಧ್ಯದಲ್ಲಿಯೂ ಸಮಚಿತ್ತಳಾಗಿರುವ ಕ್ರಮ-ಇವುಗಳೆಲ್ಲ ಅವಳಿಗೆ ಆನಂದವನ್ನೇ ತಂದುಕೊಟ್ಟವು. ಇನ್ನೊಬ್ಬರ ಬದುಕನ್ನು ಅರಿತುಕೊಂಡು ಅದರೊಂದಿಗೆ ತಾನೂ ಒಂದಾಗಿ ಅವರ ಸುಖ-ಸಂತೋಷಗಳೇ ತನ್ನವೆಂಬ ಭಾವನೆಯ ದಾಕ್ಷಾಯಣಿ. ಸ್ವಂತ ಜೀವನ ಬರಡಾಗುತ್ತಿದ್ದರೂ. ಇನ್ನೊಂದು ಬದುಕಿಗೆ ಜೀವರಸ ಕೊಟ್ಟ ಜೀವದಾತೆ.

ಸಮಾಜದಲ್ಲಿ ನಡೆಯುವ ಸಂಘರ್ಷದ ಸ್ವರೂಪ ಕಾದಂಬರಿಯಲ್ಲಿ ಇನ್ನಷ್ಟು ಗಂಭೀರತೆ ಪಡೆಯಬಹುದಿತ್ತೆನಿಸಿದರೂ ಒಟ್ಟಾರೆ ಅದು ಪರಿಣಾಮಕಾರಿಯಾಗಿಯೇ ಮೂಡಿಬಂದಿದೆ. ನಮ್ಮ ಸಮಾಜದ ರೀತಿ-ನೀತಿ. ಅಲ್ಲಿ ಮುಖ್ಯವಾಗಿ ಮೋಸಕ್ಕೊಳಗಾದ ಸ್ತ್ರೀಯರು. ಧರ್ಮದ ಹೆಸರಿನಲ್ಲಿ ಮೋಸಹೋಗುವವರು. ಅಬಲೆಯರಿಗೆ ಸಿಗಬೇಕಾದ ಸ್ಥಾನಮಾನ. ಪ್ರೀತಿ-ವಾತ್ಸಲ್ಯಗಳಿಂದ ಏನನ್ನಾದರೂ ಗೆಲ್ಲಬಹುದೆಂಬ ಛಲ ಇವುಗಳನ್ನೆಲ್ಲ ವಾಸ್ತವವಾಗಿ ಒಡಿದಿಟ್ಟ 'ದಾಕ್ಷಾಯಣಿ' ಕಾದಂಬರಿ ಆ ಜೀವನದ ಕೈಗನ್ನಡಿಯಂತಿದೆ; ಅದು ಕಲಾತ್ಮಕ ಕನ್ನಡಿಯೂ ಆಗಿದೆ. ಬೆಳಗಲಿಯವರ ಉತ್ತಮ ಕಾದಂಬರಿಗಳಲ್ಲಿ 'ದಾಕ್ಷಾಯಣಿ' ಕೂಡ ಒಂದೆಂದು ಹೇಳಬಹುದು.

**ಸೀಮೆಗಳು (೧೯೭೯) :**

'ಪ್ರಜಾಮತ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾದ 'ಸೀಮೆಗಳು' ಮಾನವ ದೌರ್ಬಲ್ಯಗಳನ್ನು. ಬದುಕಿನ ಸಂಕೀರ್ಣತೆಗಳನ್ನು ಬಿಚ್ಚಿಡುವ ಕರುಳು ಒಂಡುವ ಕಥೆಯನ್ನು ಹೊಂದಿದ ಸುಂದರ-

---

೭೮. ದು. ನಿಂ. ಬೆಳಗಲಿ : ವಾತ್ಸಲ್ಯಮಯಿ. ಪುಟ ೭೦-೭೧

೭೯. ಜಿ. ಎಸ್. ಆಮೂರ : ಕನ್ನಡ ಕಥನ ಸಾಹಿತ್ಯ. ಕಾದಂಬರಿ. ಪುಟ ೬೫

ಬಂಧುರ ಉತ್ತಮ ಸಾಮಾಜಿಕ ಕಾದಂಬರಿ. ಕಾದಂಬರಿ ಮುನ್ನಡೆದಂತೆ ತನ್ನ ವಸ್ತು-ಭಾವ-ಭಾಷೆ-ಘಟನೆಗಳಲ್ಲಿ ಗಟ್ಟಿಗೊಳ್ಳುತ್ತ ಸಾಗಿ ಬೆಳಗಲಿಯವರು ಉತ್ತಮ ಕಾದಂಬರಿಗಳನ್ನು ಬರೆಯಬಲ್ಲರೆಂಬುದನ್ನು ಸಾಬೀತುಪಡಿಸುವುದಕ್ಕೆ ನಿದರ್ಶನವಾಗಬಲ್ಲ ಕೃತಿ.

ನೀಲಕಂಠ ಮುಂಬಯಿ ಮಹಾನಗರದ ಮಲಾಡದಲ್ಲಿ ಕೋಣೆಯೊಂದನ್ನು ಬಾಡಿಗೆಗೆ ಹಿಡಿದು. ಅಲ್ಲಿಂದಲೇ ಬಟ್ಟೆ ವ್ಯಾಪಾರ ನಡೆಸುವವ. ಊರಲ್ಲಿ ಯಾಂತ್ರಿಕ ಮಗ್ಗಗಳಿದ್ದು. ಸೀರೆ ಅಂಗಡಿ. ಕೈಮಗ್ಗಗಳು. ವೀವಿಂಗ್ ಫ್ಯಾಕ್ಟರಿ ಇದೆ. ಅಣ್ಣ-ಅತ್ತಿಗೆ ಹಾಗೂ ತಮ್ಮ ಇವರು ಅವುಗಳ ಉಸ್ತುವಾರಿ ನೋಡುತ್ತಾರಲ್ಲದೆ. ಹತ್ತೆಂಟು ಆಳುಗಳೂ ಇವೆ. ಮಗ್ಗಗಳಿಗೆ ಬೇಕಾದ ಚಮಕಾ. ಜರಿ. ನೂಲು. ರೇಯಾನ್. ಪಡಿತರ ಧಾರಣೆಯಲ್ಲಿ ಮುಂಬಯಿಯಲ್ಲಿ ಖರೀದಿಸಿ ಊರಿಗೆ ಕಳಿಸುವುದು ಹಾಗೂ ಊರಿಂದ ಬಂದ ಸೀರೆಗಳನ್ನು ಉತ್ತಮ ರೇಟಿಗೆ ಮಾರಿ ಊರಿಗೆ ಹಣಕಳಿಸುವುದು ನೀಲಕಂಠನ ಕೆಲಸ. ನೀಲಕಂಠ ಮುಂಬಯಿವಾಸಕ್ಕೆ ಅಂತರಂಗದಲ್ಲಿಯೇ ಅವಿತುಕೊಂಡಿರುವ ಇನ್ನೆರಡು ಪ್ರಬಲ ಕಾರಣಗಳೂ ಇವೆ. ತಲೆಗೆ ಓದು ಹತ್ತದೆ. ಬೆಳಗಾವಿಯ ಕಾಲೇಜಿಗೆ ಶರಣು ಹೊಡೆದು ನೀಲಕಂಠ ಮರಳಿ ಊರಿನ ದಾರಿ ಹಿಡಿದ. ಇದರಿಂದ ಅಣ್ಣನಿಗೆ ಉದ್ಯೋಗದಲ್ಲಿ ಹೆಗಲಿಗೆ ಹೆಗಲಾಯಿತು. ಪಕ್ಕದ ಮನೆಯ ಉಮಾಳನ್ನು ಪ್ರೀತಿಸಿದ; ನೆರೆಹೊರೆಯ ಸಲಿಗೆಯಿಂದ ತೀರ ಹತ್ತಿರದವರಾದರು. ಇದಕ್ಕೆ ಎರಡೂ ಮನೆಯ ಸಮ್ಮತಿ ಸಿಕ್ಕು ನಿಶ್ಚಿತಾರ್ಥವೂ ಮುಗಿಯಿತು. ಅನಾಮಧೇಯ ಪತ್ರವೊಂದು ಈ ಮದುವೆಯು ನಡೆಯದಂತೆ ಮಾಡಿತು. ಇದಕ್ಕಾಗಿ ನೀಲಕಂಠ ತುಂಬ ವ್ಯಥೆಪಟ್ಟಿದ್ದೂ ಆಯಿತು. ಕ್ರಮೇಣ ಶಾಂತವಾದದ್ದೂ ಆಯಿತು. ಇದಕ್ಕಿಂತ ಭಯಂಕರ ಗಾಯವೊಂದಿತ್ತು. ಮೂರು ಮಕ್ಕಳ ತಾಯಿಯಾದ ಅತ್ತಿಗೆಯೇ ತನ್ನ ಮಾದಕ ಸೌಂದರ್ಯದಿಂದ ಹುಚ್ಚುಹಿಡಿಸಿ ತನ್ನತ್ತ ಸೆಳೆಯಲು ಪ್ರಯತ್ನಿಸಿದ್ದು. ಅಪ್ಪಿಕೊಂಡು ತನ್ನದಾಹವನ್ನು ತೀರಿಸಿಕೊಳ್ಳಲು ಹವಣಿಸಿದ್ದು. ತಾನೆಲ್ಲಿ ಅವಳ ಮುಂದೆ ಮುದುಡಿ-ಮುದ್ದೆಯಾಗಿ ಅವಳ ದಾಹಕ್ಕೆ ಈಡಾಗುತ್ತೇನೋ ಎಂದು ನೀಲಕಂಠ ಭಯಪಟ್ಟಿದ್ದ. ನೀಲಕಂಠ ಅತ್ತಿಗೆಯನ್ನು 'ಅಕ್ಕ' ಎಂದೇ ಕರೆಯುತ್ತಿದ್ದ. ಆ 'ಅಕ್ಕ' ಎಂಬ ಸಂಬೋಧನೆಗೆ ಮಣ್ಣು ಬಿದ್ದು ಅದರಲ್ಲಿ ಹುತ್ತ ನಿರ್ಮಾಣವಾಗಿ. ಒಳಗಿನ ಹಾವು ತಲೆಯೆತ್ತಿ ನಿಲ್ಲುತ್ತದೆ. ಅದಕ್ಕೆ ಆಕೆ ಪುಂಗಿ ಬಾರಿಸುತ್ತ ತನ್ನ ಮೈಮೇಲೆ ಎಚ್ಚರವಿರದಂತೆ ಮನೆಯಲ್ಲಿ ತನ್ನ ಅಂಗಾಂಗಗಳನ್ನು ಪ್ರದರ್ಶಿಸುತ್ತಾಳೆ. ತಂದೆ-ತಾಯಿ ತೀರಿದ ಮೇಲೆ ಅಣ್ಣ-ಅತ್ತಿಗೆಯರೇ ಜೋಪಾನಮಾಡಿದವರು. ಅತ್ತಿಗೆ ತಾಯಿಯ ಸ್ಥಾನದಲ್ಲಿದ್ದವಳು; ಅವಳೇ ಆ 'ಸೀಮೆ'ಯನ್ನು ದಾಟಿ ಸಂಬಂಧಕ್ಕೆ ಬೆಂಕಿಯಿಟ್ಟಾಗ ನೀಲಕಂಠ ಮುಂಬಯಿ ಸೇರಿಕೊಂಡ: ಇದಕ್ಕೆ ವ್ಯಾಪಾರದ ನೆಪ ಕೂಡ ದೊರೆತದ್ದು ರೋಗಿಗೆ ಹಾಲು-ಹಣ್ಣು ಸಿಕ್ಕಂತಾಯಿತು. ಇಲ್ಲಿ ಅತ್ತಿಗೆಯ ಅಪ್ಪುಗೆಯಿಂದ ನುಣುಚಿಕೊಂಡ ನೀಲಕಂಠ ಅಲ್ಲಿ ಮೀತಾಳ ಮೋಹದಲ್ಲಿ ಸಾವಕಾಶವಾಗಿ ಬೀಳುತ್ತಿದ್ದ-ಬಿದ್ದ.

ಮೀತಾ ಬೇನ್ ಗುಜರಾತಿ ಕುಟುಂಬದ ಸಂಪ್ರದಾಯಸ್ಥ ವಿವಾಹಿತಳು: ಆದರೆ ದಾಂಪತ್ಯ ಸುಖವನ್ನು ಅನುಭವಿಸದ ನಿರ್ಭಾಗ್ಯ 'ಸತಿಮಣಿ'. ತಾಯಿ ಜಾನಕಿ ಬೇನ್. ಅಣ್ಣ ಪ್ರಮೋದ ಬೇನ್. ಅತ್ತಿಗೆ ಗೀತಾ. ತಮ್ಮ

ರವಿಚಂದ್ರರಿಗೆ ಅಕ್ಕರೆಯವಳಾಗಿದ್ದಳು. ನೀಲಕಂಠನು ಅವರ ಮನೆಯ ಕೆಳಅಂತಸ್ತಿನಲ್ಲಿ ಬಾಡಿಗೆಗಿದ್ದ. ಪ್ರಮೋದ ನೀಲಕಂಠನಿಗೆ ಆತ್ಮೀಯ ಸ್ನೇಹಿತ ಬೇರೆ. ಮೀತಾಳನ್ನು ಸಮೀಪದ ಸೋನಗಢದ ಒಂದು ಒಳ್ಳೆಯ ಮನೆತನಕ್ಕೆ ಕೊಟ್ಟಿದ್ದರು: ಅದರಲ್ಲಿಯೂ ಒಬ್ಬಳೇ ತಂಗಿಯೆಂದು ಪ್ರಮೋದ ಇಪ್ಪತ್ತು ಸಾವಿರದಷ್ಟು ವರದಕ್ಷಿಣೆ ಕೊಟ್ಟು ಅದ್ದೂರಿಯಿಂದಲೇ ಮದುವೆ ಮಾಡಿಕೊಟ್ಟಿದ್ದ. ವಿವಾಹಪೂರ್ವದಲ್ಲಿ ಅದು ಒಳ್ಳೆಯ ಮನೆತನವೇ ಆಗಿತ್ತು. ಆದರೆ ಅವರಿಗೆ ಮಾನವರ ಬದುಕಿಗಿಂತ ಹಣವೇ ಪ್ರಾಮುಖ್ಯವಾಗಿತ್ತು. ಮೀತಾಳ ಅತ್ತೆಯ ಮನೆಯವವರೇನೂ ಬಡವರಲ್ಲ. ಧನಪಿಶಾಚಿಗಳಾದ ಮೀತಾಳ ಅತ್ತೆ-ಮಾವ. ಹೆಸರಿಗೆ ಮಾತ್ರನಾದ ಗಂಡ ಇವರ ಮಧ್ಯದಲ್ಲಿ ಮೀತಾಳಿಗೆ ತ್ರಿಶಂಕು ಸ್ವರ್ಗವಾಯಿತು. ಊಟದಲ್ಲಿ ವಿಷಹಾಕಿ ಮೀತಾಳನ್ನು ಕೊಲ್ಲಲು ಹವಣಿಸಿದ ದಿನವೇ ಕಾಕತಾಳೀಯವೆಂಬಂತೆ ಪ್ರಮೋದ ಸೋನಗಢಕ್ಕೆ ಹೋದ. ಅಣ್ಣ ಸಾಯುತ್ತೇನೆ. ಸಾಯುತ್ತೇನೆ ಎಂದು ಒದ್ದಾಡುತ್ತಿರುವ ತಂಗಿಯನ್ನು ಆಸ್ಪತ್ರೆಗೆ ಸೇರಿಸಿ. ಮಲಾಡಕ್ಕೆ ಕರೆತಂದವ ಮತ್ತೆ ಸೋನಗಢದ ದರ್ಶನ ಮಾಡಿಸಲೇ ಇಲ್ಲ. ಮಾನವರ ಬದುಕಿಗಿಂತ ಹಣವೇ ಪ್ರಾಮುಖ್ಯವಾದ ಸೋನಗಢದವರಿಗೆ. ಮೀತಾಳನ್ನು ಕೊಂದು ಹೆಚ್ಚಿನ ವರದಕ್ಷಿಣೆ ಪಡೆದು ಮಗನಿಗೆ ಮತ್ತೊಂದು ಮದುವೆ ಮಾಡುವ ಹವಣಿಕೆಯಿತ್ತು. ಇದು 'ಮೀತಾಳ ದೈವ'. ನೀಲಕಂಠನ ಆಗಮನದಿಂದ ಮೀತಾಳಿಗೆ ಸಂತೋಷವಾಗುತ್ತದೆ. ಒಲವು ಮೂಡುತ್ತದೆ. ಅದಕ್ಕೆ ನೀಲಕಂಠನೂ ಪ್ರಚೋದಿಸುತ್ತಾನೆ. ಪ್ರಮೋದನಿಲ್ಲದ ವೇಳೆಯಾಗಲಿ. ಅನೇಕ ಸಲ ಅಣ್ಣ-ನೀಲಕಂಠರೊಂದಿಗೆ ಸೀನೆಮಾ ನೋಡಲು ಹೋದಾಗಾಗಲಿ ಪರಸ್ಪರರು ಸಂಕೇತಗಳಲ್ಲಿಯೇ ಸ್ಪಂದಿಸುತ್ತಾರೆ. ನೀಲಕಂಠ ತನ್ನ ಮನದಲ್ಲಿರುವುದನ್ನು ಬಾಯಿಬಿಟ್ಟು ಹೇಳದಿದ್ದರೂ ಮೀತಾ ತಿಳಿಯುತ್ತಾಳೆ. ಮತ್ತಷ್ಟು ಚೇತನಗೊಳ್ಳುತ್ತಾಳೆ. ತನಗರಿಯದಂತೆ ನೀಲಕಂಠನನ್ನು ಪ್ರೀತಿಸುತ್ತಾಳೆ. ಆದರೆ ಪರಸ್ಪರರು ಒಂದೆಡೆ ಕೂತು ಆ ಬಗ್ಗೆ ವಿಚಾರಿಸದೆ ಮನದಲ್ಲಿಯೇ ಮಂಡಿಗೆ ತಿನ್ನುತ್ತಾರೆ. ಅವಳ ಸಾಮಿಪ್ಯ ಸುಖದ ಹಕ್ಕು ಆಕೆಯ ಗಂಡನದು ಮಧ್ಯದಲ್ಲಿ ನಾನಾರು ? ಎಂದು ಪ್ರಬಲವಾಗಿ ತನ್ನನ್ನೇ ತಾನು ಪ್ರಶ್ನಿಸಿಕೊಳ್ಳುವ ನೀಲಕಂಠ ಅದೇ ಸುಖಕ್ಕಾಗಿ ಹಗಲಿರುಳು ಚಡಪಡಿಸುತ್ತಾನೆ. ಮೀತಾಳಿಗೆ ಕನ್ನಡ ಬರದು. ನೀಲಕಂಠನಿಗೆ ಗುಜರಾತಿ ತಿಳಿಯದು. ಹಿಂದಿ ಇಬ್ಬರಿಗೂ ಆಸರೆ ನೀಡುತ್ತದೆ. ಭಾಷೆ ತಿಳಿಯದಿದ್ದರೂ ಭಾವಬಂಧದಲ್ಲಿದ್ದರು; ಬಾಹುಬಂಧನವೊಂದು ಬಾಕಿಯುಷ್ಟೇ. ಅದಕ್ಕೊಂದು ಸೀಮೆಯೇನೋ ಇದೆಯಾದರೂ. ದಾಟಲು ಮನಗಳೆರಡೂ ಒಳ-ಒಳಗೆ ಹಾತೊರೆಯುತ್ತವೆ.

ಈ ಮಧ್ಯೆ ಗೆಳೆಯ ವಿಜಯನ ಭೇಟಿಗೆಂದು ಅಣುಶಕ್ತಿನಗರಕ್ಕೆ ಹೋದ ನೀಲಕಂಠ. ಸ್ನೇಹಿತನಿಗೆ ಆಪರೇಶನ್ ಎಂದು ತಿಳಿದು ಆಸ್ಪತ್ರೆಗೆ ಹೋಗುತ್ತಾನೆ. ಹಿಂದೆ ಎಲಿಫಂಟಾದಲ್ಲಿ ಯಾತ್ರಿಕಳಾಗಿ ಪರಿಚಿತಳಾದವಳೇ ಆ ಆಸ್ಪತ್ರೆಯಲ್ಲಿ 'ಬೆಸ್ಟ ನರ್ಸ'. ಅವಳ ಹೆಸರು ಅರುಣಾ. ಅರುಣಾ ನೋಡಿದಾಕ್ಷಣ ಇವನನ್ನು ಪ್ರೀತಿಯಿಂದ ಮಾತನಾಡಿಸುತ್ತಾಳೆ. ಅರುಣಾಳ ಸರಳ. ನೇರ-ನುಡಿ. ಕರ್ತವ್ಯಪ್ರಜ್ಞೆ. ಪ್ರೀತಿ-ಆದರಗಳಿಗೆ ಮನಸೋತ ನೀಲಕಂಠನಿಗೆ ಆಕರ್ಷಣೆಯೋ. ತನ್ನತನವೋ. ದೌರ್ಬಲ್ಯವೋ. ಒಂದೂ ತಿಳಿಯದಂತೆ ಅರುಣಾಳ

ಪ್ರೀತಿಯ ಬಂಧನದಲ್ಲಿ ಬಿದ್ದ. ಅವಳ ಜಾತಿ-ಧರ್ಮ ಬೇರೆಯಾಗಿದ್ದರೂ ಅವಳನ್ನೇ ಮದುವೆಯಾಗಲು ನಿರ್ಧರಿಸಿಯೂ ಬಿಟ್ಟ. ಪರಸ್ಪರರು ತುಂಬ ಅನ್ಯೋನ್ಯತೆಯಿಂದ, ಪ್ರೀತಿಯಿಂದ, ತೀರ ಹತ್ತಿರದವರಾಗುತ್ತಾರೆ. ಆದರೆ ದೈಹಿಕ ಬಯಕೆಯ ಸೀಮೆ ದಾಟದೆ, ಸಮಾಂತರ ರೇಖೆಗಳಾಗುತ್ತಾರೆ. ತಮ್ಮ ತಾರುಣ್ಯದ ಹಸಿವನ್ನು ತಣಿಸಲು ಒಂದು 'ಸೀಮೆ' ಕೊರೆದು ಅಷ್ಟರಲ್ಲಿಯೇ ತೃಪ್ತಿ ಪಡೆಯುತ್ತಾರೆ.

ಮೈ-ಮನಸುಗಳಲ್ಲೆಲ್ಲ ಅರುಣಾಳನ್ನೇ ತುಂಬಿಕೊಂಡು ಮಲಾಡಕ್ಕೆ ಬಂದ ನೀಲಕಂಠನಿಗೆ ಮೀತಾಳ ಸ್ವಾಗತ ಹಾಗೂ ಸ್ವಂತಿಕೆಯ ಮಾತುಗಳನ್ನು ಕಂಡು ಆಶ್ಚರ್ಯವಾಗುತ್ತದೆ. ನಿಮಗೆ ಹೊಟ್ಟೆಯ ಚಿಂತೆಯೂ ಇಲ್ಲ, ಎಂದೆನ್ನುತ್ತ ಕೈಹಿಡಿದು ಮನೆಗೆ ಕರೆದುಕೊಂಡು ಹೋಗಿ ಸಿಹಿ-ಕಾರಗಳನ್ನು ತಿನಿಸುತ್ತ, ಹೀಗೆ ನೀವು ನಿಷ್ಕಾಳಜಿಯಿಂದ ಸಿಕ್ಕಂತೆ ತಿರುಗಾಡುವುದು ನನಗೆ ಸರಿಹೋಗುವುದಿಲ್ಲವೆನ್ನುತ್ತ ಗಂಡನನ್ನು ಹದ್ದುಬಸ್ತಿನಲ್ಲಿಡುವ ಹೆಂಡತಿಯ ಧಾಟಿಯಲ್ಲಿ ನುಡಿದದ್ದು ಇನ್ನೂ ಆಶ್ಚರ್ಯವೆನಿಸುತ್ತದೆ. ಮೀತಾಳ ಪ್ರೀತಿಯ ಒತ್ತಾಯಕ್ಕೆ ತಾನಾಗಿಯೇ ಕೊಡುತ್ತಿರುವ ಮುತ್ತಿಗೆ ಮೂಕನಾಗಿ ಹೋದ. ನೀಲಕಂಠನಿಗೆ ಅರುಣಾ ಮುಂದೆ ಬಂದು ನಿಂತಂತೆನಿಸುತ್ತದೆ. ತಾನಾಗಿಯೇ ಹಂಬಲಿಸಿದ್ದು ಸಿಗುತ್ತಿರುವಾಗ ಬೇಡವೆನ್ನಿಸಿತು. ಹೇಗಾದರೂ ಇವಳಿಂದ ದೂರವಿರಬೇಕೆಂದು ನಿರ್ಧರಿಸಿ ಆ ಕ್ಷಣ ಮೀತಾಳೆಷ್ಟು ಬೇಡವೆಂದರೂ ನೆಪಹೇಳಿ ವಿನೋದಲಾಲನ ಅಂಗಡಿಗೆ ಹೋಗುತ್ತಾನೆ. ವಿನೋದಲಾಲನ ಕಿರಿಮಗನ ಹುಟ್ಟುಹಬ್ಬದ ಆಚರಣೆಗೆಂದು ಅವನ ಒತ್ತಾಯಕ್ಕೆ ಮಣಿದು ನೀಲಕಂಠ ಅವರ ಮನೆಗೆ ಹೋಗುತ್ತಾನೆ. ಭವ್ಯಬಂಗಲೆ, ಮುಟ್ಟಿದರೆ ಮಾಸುವಂಥ ನೆಲ, ಸಿನೇಮಾದಲ್ಲಿನ ಸೆಟ್‌ನಂತೆ ಆಕಾರಗಳು. ಅಲ್ಲಿನ ವೈಭವ, ಜನ, ಶೃಂಗಾರ, ಬಣ್ಣಬಣ್ಣದ ಬಟ್ಟೆಗಳಲ್ಲಿ ಗುಲಾಬಿ, ಬಿಳಿ, ಹಳದಿ, ಕೆಂಪು, ಮೈ ಬಣ್ಣದ ಸ್ತ್ರೀ ಪುರುಷರು. ಅವರು ಧರಿಸಿದ ಬಟ್ಟೆ-ಬರೆ, ಅವರು ಬಂದಿರುವ ಕಾರುಗಳು. ಇದನ್ನೆಲ್ಲ ಕಂಡು ನೀಲಕಂಠನಿಗೆ ಕೀಳರಿಮೆಯುಂಟಾಗುತ್ತದೆ. ಇಲ್ಲಿಗೆ ಬರಬಾರದೆನ್ನಿಸಿತು; ಆದರೆ ಬಂದಾಗಿತ್ತು. ಕೇಕು ಕತ್ತರಿಸಿದಾಗ ಎಲ್ಲೆಡೆ ಕೇಕೆ ಕಾಣಿಸಿತು. ಅನಂತರ ಭಕ್ಷ್ಯ-ಭೋಜ್ಯಗಳ ಭಕ್ಷಣೆ. ತಿಂದದ್ದಕ್ಕಿಂತ ಚೆಲ್ಲಿದ್ದೇ ಹೆಚ್ಚಾಯಿತು. ವಿನೋದಲಾಲನ ಒತ್ತಾಯಕ್ಕೆ ಉಂಡು ರೂಮೊಂದನ್ನು ಸೇರಿದ ನೀಲಕಂಠನಿಗೆ ಹೊರಗಿನ ಕುಡಿತ-ಕುಣಿತಗಳು ಕೇಳುತ್ತಲೇ ಇದ್ದವು. ಅರ್ಧರಾತ್ರಿ ಕಳೆಯುವಷ್ಟೊತ್ತಿಗೆ ಸೇಬುಹಣ್ಣಿನಂಥ ಹೆಣ್ಣೊಬ್ಬಳು ರೂಮೊಳಗೆ ಬರುತ್ತಾಳೆ. ಅವಳು ಮಾಡಿದ ವಾಂತಿಯನ್ನು ಬಕೆಟ್ಟಿನಲ್ಲಿ ಹಿಡಿದು ಚೆಲ್ಲುತ್ತಾನೆ. ಶಾಂತವಾಗಿ ಬಿದ್ದ ಆ ಸೇಬುಹಣ್ಣಿನಂಥ ಸ್ತ್ರೀ ಮತ್ತೆ ಎಚ್ಚರಗೊಂಡು ಆಕೆ ತನ್ನ ಮೈಹಸಿವಿನಿಂದ ನೀಲಕಂಠನನ್ನು ಎಳೆದುಕೊಂಡು ತನ್ನ ದಾಹವನ್ನು ತೀರಿಸಿಕೊಳ್ಳುತ್ತಾಳೆ. ಆಕೆಯ ಕಾತರದ ಬಯಕೆಗೆ ಈಡಾದ ನೀಲಕಂಠ ಆ ಕ್ಷಣದಲ್ಲಿ ಹೆಳವನಂತಾಗಿದ್ದ. ಅತ್ತಿಗೆಯ ಬದಲಾಗಿ ಈಗ ಕೆಂಪುಸೇಬಿನವಳ ಪುಂಗಿಗೆ ತಲೆದೂಗಿ, 'ಸೀಮೋಲ್ಲಂಘನೆ ಮಾಡಿ ಬಿಟ್ಟಿದ್ದ. ಹುಲಿಯ ಬಾಯಿಂದ ಪಾರಾಗಿ ಸಿಂಹದ ಬಾಯಿಗೆ ಬಿದ್ದಂತಾಗಿತ್ತು. ನೀಲಕಂಠನ ಸ್ಥಿತಿ. ಮೀತಾಳಿಂದ ತಪ್ಪಿಸಿಕೊಳ್ಳಲು ಹೋಗಿ, ಸೇಬಿನಂಥವಳಿಗೆ ಸಿಕ್ಕಿಬಿದ್ದಿದ್ದ. ಮಾನವನ ಸಹಜ ದೌರ್ಬಲ್ಯದ ದಾಸನಾಗಿ ಆಗಲೇ 'ಸೀಮೆ' ದಾಟಿದ ನೀಲಕಂಠನಿಗೆ ಮೀತಾಳ ಅತೃಪ್ತ ಕಾಮನೆಗಳು, ಅರುಣಾಳ ಅಚಲ ಪ್ರೀತಿ ಕಣ್ಣುಮುಂದೆ

ಕಟ್ಟಿದಂತಾಗುತ್ತದೆ. ಆದರೇನು ? ಕನಸಿನಂತೆ ತನ್ನತನವನ್ನೇ ಕಳೆದುಕೊಂಡು ಬಿಟ್ಟಿದ್ದ. ಮತ್ತೊಮ್ಮೆ ಸೇಬಿನಂಥ ಜ್ಯೋತಿರ್ಲತಾಳ ಮನೆಗೆ ವಿನೋದಲಾಲ ನೀಲಕಂಠನನ್ನು ಕರೆದುಕೊಂಡು ಹೋಗುತ್ತಾನೆ. ಅವಳು ಮತ್ತೆ-ಮತ್ತೆ ಮನೆಗೆ ಬರುವಂತೆ ಮಾದಕ ಕಣ್ಣುಗಳಿಂದಲೇ ಆಹ್ವಾನವಿಡುತ್ತ ತನ್ನ ಮನೆ-ಮನಗಳ ದರ್ಶನಮಾಡಿಸುತ್ತಾಳೆ. 'ಮಜಾ ಕರೋ ಯಾರ್' ಎಂದ ವಿನೋದಲಾಲ ಅದಕ್ಕೆ ಆಸ್ಪದ ಕೊಡುತ್ತಲೇ ಇದ್ದ. ಒಮ್ಮೆ ಸೆಳವಿಗೆ ಸಿಕ್ಕು ಜಾರಿದ ನೀಲಕಂಠನಿಗೆ ಮತ್ತೆ ಅದೇ ಸೆಳವಿನಲ್ಲಿ ಬಿದ್ದು ಒದ್ದಾಡುವುದು ಬೇಡವೆನಿಸುತ್ತದೆ.

ಮಾಹಿಂ ಕೊಳಚೆ ಪ್ರದೇಶದ ಮೇಲೆ ದಾಟಿಹೋಗುವಾಗ, ಬಸ್ಸಿನ ಕಿಟಕಿಯಿಂದಲೇ ಕಂಡ ದೃಶ್ಯವೊಂದು ನೀಲಕಂಠನ ಹೃದಯ ಹಿಂಡಿತು. ಹೋಗಿ ನೋಡುತ್ತಾನೆ. ಸ್ತ್ರೀಯೊಬ್ಬಳಿಂದ, ಶ್ರೀಮಂತ, ತಾಮ್ರದ ಕೊಡವನ್ನು ತಾ ಕೊಟ್ಟ ಅಸಲು ಬಡ್ಡಿಯಲ್ಲಿ ಕಸಿದುಕೊಳ್ಳುತ್ತಿರುವ ದೃಶ್ಯ ಕಂಡು ಕರಗಿಹೋಗುತ್ತಾನೆ. ಕೊನೆಗೆ ತಾನೇ ಆ ಹಣಕೊಟ್ಟು ಯಮುನಾಳನ್ನು ಅವಳ ಗುಡಿಸಲವರೆಗೆ ಬಿಟ್ಟು ಬರುತ್ತಾನೆ. ಅವರ ಬಡತನ, ಬದುಕು - ಭವಣೆ, ಹಸಿದ ಹೊಟ್ಟೆ, ಮಕ್ಕಳ ಅನಾರೋಗ್ಯಗಳನ್ನು ಕಂಡು ನೀಲಕಂಠ ಯಮುನಾಳಿಗೆ ಸಹಾಯಕನಾಗಿ ನಿಂತುಕೊಳ್ಳುತ್ತಾನೆ. ಯಮುನಾಳ ಚಿಕ್ಕಮಗು ಸತ್ತಾಗ ತಾನೇ ಮುಂದೆನಿಂತು ಸಂಸ್ಕಾರ ಮಾಡುತ್ತಾನೆ. ಅಲ್ಲಿಂದ ಮರಳಿ ಬರುವಷ್ಟೊತ್ತಿಗೆ ಅವಳ ಗುಡಿಸಲಿಗೆ ಬೆಂಕಿ ಬಿದ್ದು ಗುಡಿಸಲಿನೊಂದಿಗೆ ಗಂಡ, ದೊಡ್ಡಮಗ, ಎಲ್ಲರೂ ಸುಟ್ಟು ಕರಕಾಗಿ ಹೋಗಿದ್ದರು. ಯಮುನಾ ಅನಾಥಳಾದುದು, ಅವಳ ಬದುಕಿಗೆ ನೀಲಕಂಠನೇ ಊರುಗೋಲಾಗಿ, ಅವಳನ್ನು ಅರುಣಾಳ ಮನೆಗೆ ಕರೆತಂದು ಪರಚಯಿಸಿದಾಗ ತುಂಬು ಹೃದಯದಿಂದ ಸ್ವಾಗತಿಸುತ್ತ ಯಮುನಾಳನ್ನು ತನ್ನಲ್ಲಿಯೇ ಇಟ್ಟುಕೊಂಡು, ಅಡಿಗೆ ಮಾಡಿದರೆ ಸಾಕೆಂದಾಗ ನೀಲಕಂಠನಿಗೆ ಹೆಣ್ಣು-ಹೆಣ್ಣಿನ ಭಾವನೆಗಳ ಮಧ್ಯ ಅಂತಸ್ತು, ಅಧಿಕಾರ, ಶಿಕ್ಷಣ, ಸಂಸ್ಕಾರ, ಯಾವುದೂ 'ಸೀಮೆ'ಯಾಗಿ ತಡೆ ಹಾಕದು. ಎಲ್ಲವೂ ಗಡಿಮೀರಿದ 'ಅಸೀಮ' ಹಾರ್ದಿಕ ಸಂಬಂಧಗಳೆಂದು, ಅರುಣಾಳ ಹೃದಯಶ್ರೀಮಂತಿಕೆಗೆ ಕೃತಜ್ಞತೆ ಸಲ್ಲಿಸುತ್ತಾನೆ.

ಇತ್ತ ಮೀತಾಳನ್ನು ದುಷ್ಕರ್ಮಿಗಳು ಅಪಹರಿಸಿ ಶೀಲಹರಣ ಮಾಡಿ ಆಭರಣಗಳನ್ನೆಲ್ಲ ದೋಚಿ ಅವಳನ್ನು ಸಮುದ್ರದ ದಂಡೆಗೆ ಬಿಸಾಕಿ ಹೋಗುತ್ತಾರೆ. ಇನ್ಸಪೆಕ್ಟರ್ ಹಳೆಮನಿಯವರ ನಿಸ್ವಾರ್ಥ, ಸಹಾಯ-ಸಹಕಾರದಿಂದ, ನೀಲಕಂಠ ಅವಳನ್ನು ಪತ್ತೆಹಚ್ಚಿ ಆಸ್ಪತ್ರೆಗೆ ಸೇರಿಸಿ, ಚಿಂತಾಕ್ರಾಂತರಾದ ಮೀತಾಳ ಅಮ್ಮ-ಅಣ್ಣಂದಿರಿಗೆ ಸಾಂತ್ವನ ಹೇಳುತ್ತಾನೆ. ಅವಳ ಆರೈಕೆಗಾಗಿ ಯಮುನಾಳನ್ನು ತಂದಿಡುತ್ತಾನೆ. ಕ್ರಮೇಣ ಮೀತಾಳ ಆರೋಗ್ಯ ಸುಧಾರಿಸುತ್ತಿದ್ದಂತೆ ಪ್ರಮೋದ ಅವಳಿಗೆ ಮರುಮದುವೆ ಮಾಡಬೇಕೆಂಬ ಹಂಬಲ ವ್ಯಕ್ತಪಡಿಸುತ್ತಾನೆ. ಸಂಪ್ರದಾಯದ ಕಟ್ಟು-ಕಟ್ಟಳೆಗಳನ್ನು ಕಳಚಿಹಾಕಿ ಜಾನಕಿ ಬೇನ್ ಕೂಡ ಅದಕ್ಕೆ ಸಿದ್ಧಳಾಗಿ ಯಾರೇ ಆಗಲಿ ಆದರ್ಶ ವ್ಯಕ್ತಿ ಸಿಕ್ಕರೆ ಸಾಕು. ಜಾತಿ-ಮತ-ಪಂಥಗಳನ್ನು ಲೆಕ್ಕಿಸದೆ ಮದುವೆ ಮಾಡಿಕೊಡಲು ಸಿದ್ಧಳಾಗುತ್ತಾಳೆ. ಅದು ತನ್ನನ್ನೇ ಕುರಿತಾಗಿರುವ ಮಾತುಗಳೇನೋ ಎಂದು ನೀಲಕಂಠ ಸಂಶಯಿಸುತ್ತಾನೆ. ಮೀತಾಳ ಆರೈಕೆಗೆ ನಿಂತ ಯಮುನಾ ಅವಳ ಅಂತರ್ಯವನ್ನು ಸಹಜವಾಗಿಯೇ ತಿಳಿದುಕೊಳ್ಳುತ್ತಾಳೆ. ಅವಳ ಚೇತರಿಕೆಗೆ ನೀಲಕಂಠನ

ಸಾನಿಧ್ಯವೇ ಕಾರಣವೆಂದರಿತ ಅವಳು. ಹೊರಗೆನಿಂತ ನೀಲಕಂಠನಲ್ಲಿಗೆ ಬಂದು. ನೀವಿಲ್ಲದೆ ಮೀತಾ ಬದುಕಲಾರಳೆಂದೂ. ನೀವೇ ಮೀತಾಳನ್ನು ಬದುಕಿಸಬೇಕೆಂದೂ ಪ್ರಾಮಾಣಿಕ ಕಳಕಳಿಯನ್ನು ವ್ಯಕ್ತಪಡಿಸುತ್ತಾಳೆ. ಆಗ ಅಣುಶಕ್ತಿ ಉಪನಗರದ 'ಸೀಮೆ' ನೀಲಕಂಠನಿಗೆ ಮಂಜು-ಮಂಜಾಗಿ ಕಾಣುವುದರೊಂದಿಗೆ ಕಾದಂಬರಿ ಸಾಂಕೇತಿಕ ಮುಕ್ತಾಯ ಕಾಣುತ್ತದೆ.

ಔಚಿತ್ಯಪೂರ್ಣ ಶೀರ್ಷಿಕೆಯುಳ್ಳ 'ಸೀಮೆಗಳು' ಕಾದಂಬರಿಗೆ ನೀಲಕಂಠನೇ ಕಥಾನಾಯಕ. ಕಥಾನಾಯಕನೇ ಕಥೆಯನ್ನು ಹೇಳುತ್ತ ಹೋಗುವ ಈ ಕಾದಂಬರಿ ತನ್ಮಯತೆಯಿಂದ ಓದಿಸಿಕೊಂಡು ಹೋಗುತ್ತದೆ. ಏನೆಲ್ಲ ವೈಯಕ್ತಿಕ ಆಶೋತ್ತರಗಳಿದ್ದರೂ. ಆಳದಲ್ಲಿ ತುಡಿಯುವ ಮಾನವೀಯ ಗುಣವೊಂದು ಮನುಷ್ಯ ಸಂಬಂಧಗಳನ್ನು ಗಟ್ಟಿಯಾಗಿ ಬೆಸೆಯುವಲ್ಲಿ ಮಹತ್ವದ ಧಾತುವಾಗುತ್ತದೆಂಬುದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸುತ್ತದೆ. ಇದೊಂದು ಏಕವ್ಯಕ್ತಿಕೇಂದ್ರಿತ ಕಾದಂಬರಿ; ಕಾದಂಬರಿಯ ಘಟನೆಗಳೆಲ್ಲ ನೀಲಕಂಠನ ಸುತ್ತಲೇ ಸುತ್ತುತ್ತವೆ. ನೀಲಕಂಠನನ್ನು ಬಿಟ್ಟು ಯಾವೊಂದು ಘಟನೆಯೂ ಕಾದಂಬರಿಯಲ್ಲಿಲ್ಲ. ಕಾದಂಬರಿಯಲ್ಲಿ ನೀಲಕಂಠಮಯವಾಗಿದೆ. ಮಾನವನ ಸಹಜ ದೌರ್ಬಲ್ಯ. ವಿಲಾಸಿ ಬದುಕಿನ ಹಿಂದಿರುವ ಮುಖವಾಡ ಹಾಗೂ ಬಡತನದ ವಿರಾಟ್‌ದರ್ಶನ– ಈ ಮೂರು ಸ್ತರಗಳಲ್ಲಿ ಕಾದಂಬರಿ ತನ್ನ ಮೈಬಿಚ್ಚಿಕೊಳ್ಳುತ್ತದೆ. ಈ ಮೂರೂ 'ಸೀಮೆ' ಗಳನ್ನು ದಾಟಿರುವ ದಾಟುತ್ತಿರುವ-ದಾಟಲಿರುವ ಮನಸ್ಸುಗಳ ರೇಖಾಚಿತ್ರವನ್ನು ಕಾದಬಂರಿಕಾರರು ಚೆನ್ನಾಗಿ ಚಿತ್ರಿಸಿದ್ದಾರೆ.

ನೀಲಕಂಠನ ಅತ್ತಿಗೆ ತನ್ನ ನಗು. ಚೆಲ್ಲು-ಚೆಲ್ಲಾದ ಸಲುಗೆ. ತನ್ನು ಮಾದಕ ಸೌಂದರ್ಯದಿಂದ-ಉನ್ಮಾದದಿಂದ ಅಂಗಾಂಗಗಳನ್ನು ತೋರಿಸುತ್ತ ಉನ್ಮತ್ತಳಾಗಿ ಮೈದುನನೆಂಬ 'ಸಂಬಂಧ'ಕ್ಕೆ ತಿಲಾಂಜಲಿಯನ್ನಿಟ್ಟು ತನ್ನ ಸಂಬಂಧದ 'ಸೀಮೆ' ಯನ್ನು ದಾಟಲು ಸದಾ ಹಂಬಲಿಸುತ್ತಾಳೆ. ನೀಲಕಂಠ ಅತ್ತಿಗೆಯನ್ನು "ಅಕ್ಕನೆಂದೇ ಕರೆಯುತ್ತಿರುತ್ತಾನೆ. 'ಅಕ್ಕ' ನೆಂಬ ಸಂಬೋಧನೆಗೆ ಮಣ್ಣುಬಿದ್ದು ಅದರಲ್ಲಿ ಹುತ್ತ ಬೆಳೆದು. ಒಳಗಿನ ಹಾವು ತಲೆಯೆತ್ತಿ ನಿಂತಿರುತ್ತದೆ"[೮೦] ಅದಕ್ಕೆ ಅತ್ತಿಗೆಯ ಪುಂಗಿನಾದ ಬೇರೆ. ಲಂಗು-ಲಗಾಮಿಲ್ಲದ ಮನಸ್ಸು ಅತ್ತಿಗೆಯ ಮಾದಕತೆಗೆ ಮರುಳಾಗಿ ತನ್ನ 'ಶೀಲ'ವನ್ನು ಅವಳಿಗೆ 'ಆಹುತಿ' ನೀಡುವ ಮುಂಚೆಯೇ ನೀಲಕಂಠ ತನ್ನ 'ಸೀಮೆ'ಯನ್ನರಿತು. ಮುಂಬಯಿಯಲ್ಲಿರಲು ಪ್ರಾರಂಭಿಸಿದ. ಆದರೆ ಅಲ್ಲಿ ಮೀತಾಳ ಸ್ನೇಹ - ಪ್ರೀತಿ - ಸ್ಪರ್ಶಕ್ಕೆ ಹಾತೊರೆಯುತ್ತಿದ್ದುದು ವಿಪರ್ಯಾಸವೇ ಸರಿ. ಅದೂ ವಿವಾಹಿತಳಾದ ಮೀತಾಳನ್ನು ಆಸೆಪಟ್ಟಿದ್ದು. ಮಾನವದೌರ್ಬಲ್ಯದ ಸಹಜದರ್ಶನ ಮಾಡಿಸಿದಂತಿದೆ.

ದೈವಕ್ಕೆ ತುತ್ತಾದ ಮೀತಾಳ ಬದುಕಿನ ಕರ್ಮಕಥೆಯನ್ನು. "…. ಸಂಪ್ರದಾಯದ ಕೊಳಚೆಯಲ್ಲಿ ಕುತ್ತಿಗೆಯವರೆಗೆ ಸಿಕ್ಕಿಹಾಕಿಕೊಂಡಿರುವ ನಾವು ಈ ರೊಜ್ಜಿನಿಂದ ಪಾರಾಗುವುದು ಸಾಧ್ಯವೇ ಇಲ್ಲ. ನಮ್ಮ ಸುಖ-

---

೮೦. ಮು. ನಿಂ. ಬೆಳಗಲಿ : ಸೀಮೆಗಳು. ಪುಟ ೨೦

ಸಂತೋಷ. ಬಯಕೆ. ಆಸೆ. ಬೇಡಿಕೆಗಳನ್ನೆಲ್ಲ ಬೆಂಕಿಗೆ ಒಡ್ಡಿ. ಅದರಲ್ಲಿ ಬೇಯುವಂತೆ ಹಿಂಸೆಗೆ ಒಳಗಾಗಿ ವಿಲಿವಿಲಿ ಒದ್ದಾಡುತ್ತೇವೆಯೇ ಹೊರತು ಪಾರಾಗಿ ಬರದಂತೆ ನಿತ್ರಾಣಗೊಂಡಿದ್ದೇವೆ. ಸುಟ್ಟು ಹೋಗುತ್ತಲಿದ್ದೇವೆ. ಅಷ್ಟೇ"[೮೧] ಎಂದೆನ್ನುತ್ತ ಸಾವತ್ರೀಕರಣಗೊಳಿಸಿದ್ದಾರೆ. ಪ್ರಸ್ತುತ ಸಮಾಜದ ಅತ್ತೆ-ಸೊಸೆಯರ ಸಂಕೀರ್ಣ ಸಂಬಂಧವನ್ನು ಬಿಚ್ಚಿಡುತ್ತ– "ಸೊಸೆಯರ ಮೇಲೆ ಲಕ್ಷಗಟ್ಟಲೆ ವಿಮೆ ಇಳಿಸಿ ಅವರನ್ನು ಕೊಂದುಹಾಕುವ ರೂಢಿ ನಿನ್ನೆಮೊನ್ನೆವರೆಗೂ ಅಲ್ಲಿತ್ತು. ಸ್ತ್ರೀವಿಮಾ ಪದ್ಧತಿ ನಿಂತಿದ್ದು. ಈಗ ವರದಕ್ಷಿಣೆಯ ಆಸೆಗಾಗಿ ಕೊಲ್ಲುತ್ತಿರುವ ಉದಾಹರಣೆಗಳು ಅಲ್ಲಲ್ಲಿ ಕಾಣಿಸಿಗುತ್ತವೆ"[೮೨] ಎಂದೆನ್ನುವ ಲೇಖಕರ ಮನದಾಳದಲ್ಲಿರುವ ವಿಷಾದ ಅರ್ಥವಾಗದಿರದು. ಸಂಪ್ರದಾಯಸ್ಥ ಕುಟುಂಬದ ಕಟ್ಟು-ಕಟ್ಟಳೆಗಳಲ್ಲಿ ಪಂಜರದ ಪಕ್ಷಿಯಂತೆ ಕೂತಿದ್ದ ಮೀತಾ. ಹತ್ತಿಕ್ಕಲಾಗದ ಯೌವ್ವನದ ಬಯಕೆಗಳಿಗೆ ನೀಲಕಂಠನಲ್ಲಿ ಆಸರೆ ಪಡೆಯಲು ಬಯಸಿದ್ದು ಮಾನವನ ಸಹಜದೌರ್ಬಲ್ಯ. ಮರುಭೂಮಿಯಲ್ಲಿ ಓಯಸಿಸ್ ಆರಿಸಿದಂತೆ ನೀಲಕಂಠನ ಒಲವನ್ನು ಆರಿಸಿದ ಮೀತಾ ವಿವಾಹಿತ ಸ್ತ್ರೀ. ಜಾತಿ ಧರ್ಮಗಳೂ ಕೂಡ ಬೇರೆ ಬೇರೆ. ಆಕೆಯೊಂದಿಗಿನ ಲಗ್ನ ಅಸಾಧ್ಯದ ಮಾತು. ತಮ್ಮಿಬ್ಬರ ಮಧ್ಯ ಆಕಾಶದೆತ್ತರದ ಬಲವಾದ-ಭದ್ರವಾದ ಕೋಟೆಯಿದೆಯೆಂದರಿತೂ. ನೀಲಕಂಠ ಅವಳ ಸಾಮಿಪ್ಯಸುಖ ಬಯಸುತ್ತಿರುವುದೂ ಕೂಡ ಸಹಜದೌರ್ಬಲ್ಯವೇ. ಈ ಎರಡೂ ದೌರ್ಬಲ್ಯಗಳು 'ಸೀಮೆ' ದಾಟದಿರುವುದೇ ಸ್ವೀಕಾರ್ಹ.

ಎಲಿಫಂಟಾದಲ್ಲಿ ಯಾತ್ರಿಕಳಾಗಿ ಪರಿಚಯವಾದ ಅರುಣಾಳ ಗುಣ-ಸ್ವಭಾವಕ್ಕೆ ಮರುಳಾದ ನೀಲಕಂಠ ಅವಳನ್ನೇ ಮದುವೆಯಾಗಲು ನಿರ್ಧರಿಸುತ್ತಾನೆ. ಅರುಣಾಳ ಬಾಹುಬಂಧನದಲ್ಲಿದ್ದ ನೀಲಕಂಠನಿಗೆ, "ಅಹ್ಮದಾಬಾದಿನ ಬಹುದೊಡ್ಡ ಬಟ್ಟೆಗಿರಣಿಯ ಮಾರಾಟದ ಅಂಗಡಿಯಲ್ಲಿ ನಿಲ್ಲಿಸಿದ ಅತ್ಯಂತ ಸುಂದರ ಪ್ಲಾಸ್ಟರ ಸ್ತ್ರೀಮೂರ್ತಿಯಾಗಿ ಮೀತಾ ಕಾಣುತ್ತಾಳೆ. ಆದರೆ ಅರುಣಾ ಮಾತ್ರ ಮನುಷ್ಯಳು. ರಕ್ತ-ಮಾಂಸ-ಮಜ್ಜೆ-ತ್ವಚೆ-ಮೃದುತ್ವ-ಮಾದಕತೆ-ಮೋಹ-ಆತ್ಮೀಯತೆ ಇದ್ದ ಜೀವಂತ ಹೆಣ್ಣು.... ಮೀತಾ ಭದ್ರವಾದ ಕೋಟೆಯ ಮೇಲಿನ ಮಾವಿನ ಮರದ ಫಲ. ನಾನು ಕಂದಕದ ಕೆಳಗೆ ಅಂಗವಿಕಲನಂತೆ ನಿಂತವನು. ನಾವು ಪರಸ್ಪರ ಸಂಧಿಸುವುದಕ್ಕೆ ಸಾಧ್ಯವೆಲ್ಲಿ ? ಹಸಿದವನಿಗೆ ಹಣ್ಣು ದೊರೆಯುವ ಬಗೆ ಹೇಗೆ ? ನ್ಯಾಯ-ನೀತಿ-ಧರ್ಮದ ಉಪದೇಶ ಹಸಿವೆಯನ್ನು ಎಂದಾದರೂ ನೀಗಿಸಬಹುದೆ ?"[೮೩] ಎಂದೆನಿಸಿದ್ದು ಅವನ ವ್ಯಕ್ತಿತ್ವಕ್ಕೆ ಸಾಕ್ಷಿ ನುಡಿದಂತಿದೆ. ಹಸಿದವನು ಹಳಸಿದನ್ನವನ್ನು ತಿನ್ನಬಾರದೆಂಬುದು ಲೋಕರೂಢಿಯಷ್ಟೇ.

ಅರುಣಾಳ ಸ್ನೇಹದಿಂದಾಗಿ. ಮೀತಾಳನ್ನು ದೂರವಿರಿಸಲು ಪ್ರಯತ್ನಿಸಲು ಹೋಗಿ ಜೋತಿರ್ಲತಾಳ ಸಂಗದಲ್ಲಿ 'ಸೀಮೆ' ದಾಟಿ ತನ್ನತನವನ್ನೇ ಕಳೆದುಕೊಂಡ ನೀಲಕಂಠ ಆ ಸಂದರ್ಭದಲ್ಲಿ ಮಾನವ ಸಹಜದೌರ್ಬಲ್ಯಕ್ಕೆ

---

೮೧. ದು. ನಿಂ. ಬೆಳಗಲಿ : ಸೀಮೆಗಳು, ಪುಟ ೮

೮೨. ದು. ನಿಂ. ಬೆಳಗಲಿ : ಸೀಮೆಗಳು, ಪುಟ ೯

೮೩. ದು. ನಿಂ. ಬೆಳಗಲಿ : ಸೀಮೆಗಳು, ಪುಟ ೫೩

ತುತ್ತಾಗಿ ಅತೀ ದುರ್ಬಲನಂತೆ ಕಂಡುಬರುತ್ತಾನೆ. ಅತ್ತಿಗೆಯಿಂದ ರಕ್ಷಿಸಿಕೊಂಡು ಬಂದ ತನ್ನ ' ಶೀಲ '. ಮೀತಾ-ಅರುಣಾಳರಲ್ಲಿ ದಾಟಿದ ' ಸೀಮೆ 'ಯನ್ನು ದಾಟಿ ಮಾನಸಿಕವಾಗಿ ಒದ್ದಾಡುತ್ತಾನೆ. ತನ್ನ ಧರ್ಮಸಂಕಟವನ್ನು ವಿನೋದಲಾಲನಿಗೆ ಹೇಳಿದರೆ " ಯಾವ ದೋಸ್ತನ ಹೆಂಡತಿಯಾದರೂ ಇರಬೇಕು. ಇದಕ್ಕೆ ಅಷ್ಟು ಚಿಂತೆಯಾಕೆ ? ನಿನ್ನೆ ರಾತ್ರಿ ಎಷ್ಟೋ ಅದಲು-ಬದಲಾಗಿವೆ "[೮೪] ಎಂದು ಇದೇನು ಸಹಜವೆಂಬಂತೆ ಹಗುರಾಗಿ ಉತ್ತರಿಸಿದ್ದನ್ನು ಕಂಡು ನೀಲಕಂಠನಿಗೆ. ".... ಅರಿಸ್ಟೋಕ್ರಾಟ ಶ್ರೀಮಂತ ವಿಲಾಸಿಗಳಿಗೆ ಯಾವ ಗೆಳೆಯನ ಹೆಂಡತಿಯಾದರೇನು ? ಅಷ್ಟೇ ! ಅಲ್ಲವೆ ? ಇದಕ್ಕೆ ಅರಿಸ್ಟೋಕ್ರಸಿ ಎನ್ನಬೇಕೆ ? ವಿಷಯ ಎಷ್ಟು ಹಗುರಾಗಿ ಹೋಗಿದೆ ! ಇವರಲ್ಲಿ ಅದಲು-ಬದಲು ಮಾಡುವ ಸಂಪ್ರದಾಯವೇ ಇದ್ದಿರಬೇಕು "[೮೫] ಎಂದು ವಿಚಿತ್ರವೆನ್ನಿಸುತ್ತದೆ: ಮೈ ಜುಂ ಎನ್ನುತ್ತದೆ. ವಿಲಾಸಿಬದುಕಿನ ಹಿಂದಿನ ಮುಖವಾಡೊಂದನ್ನು ಸರಿಸುವಲ್ಲಿ ಕಾದಂಬರಿಕಾರರು ಯಶಸ್ವಿಯಾಗಿದ್ದಾರೆ. ಮತ್ತೆ-ಮತ್ತೆ ಸೇಬುಹಣ್ಣಿನಂತವಳಾದ ಜ್ಯೋತಿರ್ಲತಾಳ ' ಸುಖ ' ಸಿಗುವ ಅವಕಾಶಗಳು ದೊರೆತರೂ ನೀಲಕಂಠ ಅದರಿಂದ ನುಣಿಚಿಕೊಳ್ಳುತ್ತಾನೆ.

ಮೀತಾ - ಅರುಣಾ ಇವರ ದರ್ಶನ. ಸಾಮೀಪ್ಯ. ಪ್ರಾಮಾಣಿಕವಾದ ಪ್ರೇಮವೋ. ಕಾಮವೋ ಯಾವ ನಿರ್ಧಿಷ್ಟ ಅರ್ಥವನ್ನೀಯದ ಗೊಂದಲದಲ್ಲಿ ಅದರ ಸೌಂದರ್ಯ - ಸಂಗಸುಖವನ್ನು ಬಯಸಿದ ನೀಲಕಂಠನ ಹುಚ್ಚು ಮನಸ್ಸು ಗಿಡದಿಂದ ಗಿಡಕ್ಕೆ ಹಾರಾಡುವ ಮಂಗನಂತೆ ಅತ್ತ ಅರುಣಾಳತ್ತ. ಇತ್ತ ಮೀತಾಳತ್ತ ಜಿಗಿದಾಡುತ್ತಿರುವ ಸಂದರ್ಭದಲ್ಲಿಯೇ ಯಮುನಾ ಕಾಣಿಸಿಕೊಳ್ಳುತ್ತಾಳೆ. ಕಾದಂಬರಿಯಲ್ಲಿ ಯಮುನಾಳ ಪ್ರವೇಶದಿಂದಾಗಿ ಅದು ತನ್ನ ಗತಿಯನ್ನೇ ಬದಲಿಸಿಕೊಂಡು. ಕಾದಂಬರಿ ಅವಳ ಬದುಕನ್ನು ಚಿತ್ರಿಸುತ್ತ ಗಟ್ಟಿಗೊಳ್ಳುತ್ತ ಹೋಗುತ್ತದೆ. ಮನುಷ್ಯತ್ವದ ಕಲ್ಪನೆಗೂ ಕೂಡ ಕೀಳಾದ ಅವಳ ಬದುಕನ್ನು ಕಂಡು ಮರಗುವ ನೀಲಕಂಠ. ಕೇವಲ ಸಹಾನುಭೂತಿಯನ್ನಷ್ಟೇ ತೋರಿಸದೆ. ಅವಳ ಹಿಂದಿರುವ ಊನಗೊಂಡ ಗಂಡ. ರೋಗಿಷ್ಠ ಮಕ್ಕಳನ್ನು ಕಂಡು ಕೇವಲ ಮರುಕಪಟ್ಟು ಸುಮ್ಮನಿರದೆ ಸಹಾಯಮಾಡುವುದಕ್ಕೆ ಮುಂದಾದುದು. ಹಸಿದ ಹೊಟ್ಟೆಗಳಿಗೆ ನಾಲ್ಕು ತುತ್ತು ನೀಡಿದ ಅವನ ಗುಣ ಮೆಚ್ಚಬೇಕಾದುದೇ. ಇದರಿಂದ ಅವನಿಗಾಗಿರುವ ತೃಪ್ತಿ ಸೇಬಿನಂಥ ಜ್ಯೋತಿರ್ಲತಾಳ ಸಂಗದಿಂದಾದ ತೃಪ್ತಿಗಿಂತ ಮೇಲೆಂದು ಹೇಳುವ ಲೇಖಕರ ಮಾತು. ಇದೊಂದು ಗಟ್ಟಿಗೊಂಡ ಸಾಮಾಜಿಕ ಕಾದಂಬರಿಯೆಂಬುದಕ್ಕೆ ನಿದರ್ಶನವಾಗಿದೆ.

ಬೆಳಗಲಿಯವರು ಯಮುನಾಳ ಬಡತನದ ಕರ್ಮಕಥೆಯನ್ನು ಕರುಳುಹಿಂಡುವಂತೆ ಚಿತ್ರಿಸುವುದರ ಮುಖಾಂತರ ಪರಿಹಾರವನ್ನೂ ಕಂಡುಕೊಂಡಿದ್ದಾರೆ. ಈವರೆಗೆ ಕಾದಂಬರಿ ಕೇವಲ ವಿಲಾಸಜೀವನ ಮಾನವನ ದೌರ್ಬಲ್ಯಗಳ ಸುತ್ತಲೇ ಸುತ್ತಾಡಿದರೂ ಯಮುನಾಳ ಬದುಕಿನ ಚಿತ್ರದೊಂದಿಗೆ ಮತ್ತಷ್ಟು ಸಪುಷ್ಟಗೊಂಡು ಒಂದು ಸದೃಢ ಕೃತಿಯೆಂಬುದನ್ನು ಸಾಬೀತುಪಡಿಸುತ್ತದೆ. ಊನಗೊಂಡ ಗಂಡನ ಹಾಗೂ ರೋಗಿಷ್ಠ ಮಕ್ಕಳ ಮತ್ತು ತನ್ನ ತುತ್ತಿನ ಚೀಲವನ್ನು ತುಂಬಿಕೊಳ್ಳಲು ' ಮೈಮಾರಲೂ ' ಸಿದ್ಧಳಾಗಿರುವ ಯಮುನಾಳ ಬದುಕು ಬಡತನಕ್ಕೆ ಬರೆದ

---

೮೪. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೮೭

೮೫. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೮೭

ವ್ಯಾಖ್ಯಾನವಿದ್ದಂತಿದೆ. ಹೊಟ್ಟೆಗಿಲ್ಲದೆ-ಔಷಧಿಯಿಲ್ಲದೆ ಸತ್ತುಹೋದ ಯಮುನಾಳ ಕಿರಿಯ ಮಗ. " ಯಾವಾಗ ಸತ್ತೈತೋ ಗೊತ್ತಿಲ್ಲ ! ಕಡ್ಡಿಪೆಟ್ಟಿಗಿ ನೋಡಾಕ ಒಳಗ ಹ್ವಾದಾಗ ಗೋಣ ಚೆಲ್ಲಿತ್ತು" ೮೬ ಎಂದು ಹಡೆದ ತಂದೆಯೇ ಮಗನ ಸಾವನ್ನು ಹೇಳಿದಾಗ. ಸತ್ತ ಆ ಮಗುವನ್ನು ನೀಲಕಂಠ ತಾನು ತಂದ ಹೊಸಬಟ್ಟೆಯಲ್ಲಿಯೇ ಸುತ್ತಿಕೊಂಡು ಹೊರಟ ಪ್ರಸಂಗ ಹೃದಯದಲ್ಲಿ ಸೂಜಿಯಾಡಿಸಿದಂತಾಗುತ್ತದೆ. ಅದನ್ನು ಸಮುದ್ರದಲ್ಲಿ ಎಸೆದು ಬರುವಷ್ಟರಲ್ಲಿ ಇಡೀ ಗುಡಿಸಲಿಗೆ ಬೆಂಕಿಬಿದ್ದು. ಸುಟ್ಟುಕರಕಾದ ಗಂಡ-ದೊಡ್ಡಮಗ-ಹೀಗೆ ಯಮುನಾಳ ಬದುಕೇ ಬರುಡಾದ ಪ್ರಸಂಗವನ್ನು ಓದುತ್ತಿದ್ದಂತೆ ಎಂಥ ಕಲ್ಲೆದೆಯವನೂ ಕೂಡ ಕಣ್ಣೀರಿಡಬಲ್ಲ. ' ಕರುಳ ಹಿಂಡುವ ಕಥೆ 'ಯನ್ನು ನೀಡಿದ ಬೆಳಗಲಿಯವರಿಗೆ ಓದುಗ ಎಂದೆಂದೂ ಕೃತಜ್ಞ. ದುರ್ಭಾಗಿನಿಯಾದ ಯಮುನಾಳಿಗೆ ಸಹಾಯ-ಸಹಕಾರಗಳು. ಅಲ್ಲದೆ ಅವಳ ಬದುಕಿಗೊಂದು ಹೊಸದಿಕ್ಕನ್ನು ತೋರಿಸುವಲ್ಲಿ ಯಶಸ್ಸು ಪಡೆದ ನೀಲಕಂಠ. ಕಾದಂಬರಿಯ ಯಶಸ್ಸಿಗೂ ಮೂಕಸಾಕ್ಷಿಯಾಗುತ್ತಾನೆ. ಎಲ್ಲವನ್ನು ಕಳೆದುಕೊಂಡು ಬೀದಿಗೆ ಬಿದ್ದ ಯಮುನಾಳನ್ನು ತನ್ನೊಂದಿಗೆ ಕರೆದಾಗ. " ಬ್ಯಾಡ್ರೀ ಎಲ್ಲಾದ್ರೂ ಹೋಗ್ತನು ಎನ್ನುವ ಅವಳಿಗೆ ನೀಲಕಂಠ. ಹುಚ್ಚು ಓದಿದವ್ರಂಗ ಮಾತಾಡಬ್ಯಾಡಾ ಸುಮ್ಮನಡೀ " ೮೭ ಎಂದು ಆಕೆಯನ್ನು ಮುಂದೆಹಾಕಿಕೊಂಡೇ ಆ ನರಕದಿಂದ ಪಾರುಮಾಡಿರುವುದು. ತನ್ನ ' ಸೀಮೆಯ ' ಪರಿವೆಯಿಲ್ಲದೆ ತನ್ನ ಮನೆಗೇ ಕರೆತಂದುದು ಸಹಜವೆನಿಸುತ್ತದೆ.

ಮೀತಾಳ ಅಪಹರಣದಿಂದಾಗಿ ಕಾದಂಬರಿ ಮತ್ತಷ್ಟು ಗಾಢವಾಗುತ್ತ ತನ್ನ ದಿಕ್ಕನ್ನೇ ಬದಲಾಯಿಸುತ್ತಿದ್ದಂತೆ ಕಾಣುತ್ತದೆ. ಅವಳ ಒಡವೆಗಳೊಂದಿಗೆ ' ಶೀಲ 'ವನ್ನು ಅಪಹರಿಸಿದ ದುಷ್ಟರು ಸಮುದ್ರದಂಡೆಗೆ ಬಿಸಾಕಿದ್ದರು. ಅವಳನ್ನು ಹುಡುಕಲು ಪ್ರಯತ್ನಿಸಿದ ಪೋಲಿಸ ಅಧಿಕಾರಿ ಹಳೇಮನಿ. ನೀಲಕಂಠ. ಪ್ರಮೋದರ ಅಲೆದಾಟ ಮುಂಬಯಿನಗರದ ಚಿತ್ರವಿಚಿತ್ರಗಳನ್ನೇ ಕಾಣಿಸುತ್ತದೆ. ಮಗಳಿಗಾದ ಆಘಾತದಿಂದಾಗಿ ಜಾನಕಿ ಬೇನ್ ತನ್ನ ಗುಜರಾತಿ ಸಂಪ್ರದಾಯದ ಕಟ್ಟು-ಕಟ್ಟಳೆಗಳನ್ನು ಕಳಚಲು ತಯಾರಾದುದು. ಮಗಳನ್ನು ಮರುಮದುವೆಮಾಡಿಕೊಡಲೂ ಸಿದ್ಧಳಾದುದು ಕಾದಂಬರಿಯ ಗುಣಾತ್ಮಕ ಅಂಶ. ಇಂಥ ಅನೇಕ ಸಾಮಾಜಿಕ ಸಂಕೀರ್ಣತೆಗಳನ್ನು ಸಡಿಲುಗೊಳಿಸುವಲ್ಲಿ ಕಾದಂಬರಿ ದಿಟ್ಟ - ಸ್ವಚ್ಛ ಹೆಜ್ಜೆಯನ್ನೇ ಇಟ್ಟಿದೆ. ಸಾಂಕೇತಿಕ ಮುಕ್ತಾಯವನ್ನು ಕಾಣುವ ಕಾದಂಬರಿ ಮೀತಾಳ ದುರ್ಘಟನೆಗೆ ಸಾಂತ್ವನವನ್ನೇ ಹೇಳುತ್ತ ಅಣುಶಕ್ತಿನಗರದ ಅರುಣಾಳತ್ತ ನೀಲಕಂಠನ ನೆನಪನ್ನು ಮಸಕು-ಮಸಕಾಗಿಸಿದೆ.

ಜೀವನದ ವಿವರಣೆಯೇ ಮುಖ್ಯವಾಗಿದ್ದು ಅದರ ನಿರೂಪಣೆಯನ್ನೇ ಬೆಂಬತ್ತಿದ ಕಾದಂಬರಿ ಕಲಾತ್ಮಕ ದೃಷ್ಟಿಯಿಂದ ಅಲ್ಪ ಸೊರಗಿದಂತೆ ಕಾಣುತ್ತದೆ. ಎಲಿಫಂಟಾ ವಿವರಣೆಯಲ್ಲಾಗಲಿ. ಮಾನವಸಹಜದೌರ್ಬಲ್ಯಗಳಿಂದ ಚಡಪಡಿಸುವ ಅತೃಪ್ತ ಮನಸ್ಸುಗಳ ವರ್ಣನೆಯಲ್ಲಾಗಲಿ. ಮುಂಬಯಿಯಂಥ ಮಹಾನಗರದ ಸಂಚಾರವ್ಯವಸ್ಥೆಯಲ್ಲಿನ ಸತ್ಯದರ್ಶನದ ವರ್ಣನೆಯಲ್ಲಾಗಲಿ. ಸ್ವಲ್ಪ ಅತೀ ಎನಿಸುವಂಥ ವಿವರಣೆ

---

೮೬. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೧೪೨

೮೭. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೧೫೧

ಬಂದಿದೆಯಾದರೂ. "…. ಅಲ್ಲಿ ಇಲ್ಲಿ ಹಾಸುಗಲ್ಲು. ಬಂಡೆಗಲ್ಲು. ಆಶ್ರಯಿಸುತ್ತಾರೆ. ನಮ್ಮಂತೆ ಕೆಲವರು ಅವಿವಾಹಿತರಿರಬೇಕು. ಹಲವಾರು ವಿವಾಹಿತ ದಂಪತಿಗಳಾಗಿರಬೇಕು. ಇನ್ನು ಬೇರೆಯವರು ವಿವಾಹಿತರಾದರೂ ಒಬ್ಬನ ಹೆಂಡತಿಯ ಜತೆ. ಇನ್ನೊಬ್ಬ ಗಂಡ ಎಂಬಂತೆ ಜತೆಗೂಡಿ ಬಂದಿರಬೇಕು. ಹಲ-ಕೆಲವರು ಮಾಲಿಕ - ಸೇವಿಕೆ. ಸೇವಕ - ಮಾಲಿಕಳು ಹೀಗೆ ಜತೆಯಾಗಿರಬೇಕು. ಒಟ್ಟಿಗೇನು ? ಹೆಣ್ಣಿಗೊಂದು ಗಂಡು. ಗಂಡಿಗೊಂದು ಹೆಣ್ಣು ಸೇರಿಕೊಂಡು ಬಂದಿರುತ್ತಾರೆ "[೮೮] ಎಂಬ ಮಾತುಗಳಾಗಲಿ. "…. ಅನತಿ ದೂರದಲ್ಲಿ ಬಂಡೆಗಲ್ಲುಗಳ ಮೇಲೆ ಅತ್ತಿತ್ತ ಬಟ್ಟೆಗಳ ಗುಂಪು ಕಾಣುತ್ತದೆ. ಶರ್ಟ್. ಪ್ಯಾಂಟ್. ಸೀರೆ. ರವಿಕೆ. ಲಂಗ. ಬ್ರೇಸಿಯರ್. ಲಂಗು-ಲಗಾಮಿಲ್ಲದೆ ತೆಕ್ಕೆಮುಕ್ಕಿ ಬಿದ್ದಿರುತ್ತವೆ. ನೆಲ -ನೀರಿನ ಮೇಲೆ ಕತ್ತಲೆ ತನ್ನ ಸೆರಗನ್ನು ಹಾಸುವುದನ್ನೇ ಕಾಯುತ್ತಲಿರುವ ಹಲವರು. ಬಂಡೆಗಲ್ಲಿನಡಿಗಳಲ್ಲಿಯೂ ಸೆರಗು ಹಾಸುತ್ತಾರೆ. ಮುಚ್ಚುಮರೆಯಲ್ಲಿ ಎಲ್ಲವೂ ತೆರೆದ ಚಿತ್ರ. ಮಹಾನಗರದ ಗಜಿಬಿಜಿ ಬದುಕಿನಲ್ಲಿ ಮುಕ್ತವಾದ ಅರೆಗತ್ತಲ ಆ ಸ್ಥಳವೇ ಅವರಿಗೆ ಮರ್ಯಾದಿತ ಏಕಾಂತವಾಗಿರುತ್ತದೆ. ಅಲ್ಲಲ್ಲೇ ಮಗ್ನಲಾಗುತ್ತಾರೆ. ಕಲ್ಲು ಬಂಡೆ. ಹಾಸು. ಸಂದುಗೊಂದು ಇವೆಲ್ಲ ಅವರ ಪಾಲಿಗೆ ಹೂವಿನ ಹಾಸಿಗೆ. ಫೋಮುಗಾದಿಗಳಾಗಿರುತ್ತವೆ…."[೮೯] ಎಂಬ ವರ್ಣನೆಯಾಗಲಿ. ಮಹಾನಗರದ ಅಂತರಂಗದ-ಬಹಿರಂಗಗಳೆರಡನ್ನೂ ತಿಳಿಸುವಲ್ಲಿ ಯಶಸ್ವಿಯಾಗಿವೆ.

ಕಣ್ಣಿಗೆ ನಿದ್ರೆಯೇ ಬಾರದ ನೀಲಕಂಠನ ಕಣ್ಣೆದುರು. "ಯಮುನಾಳ ಚಿಕ್ಕಕೂಸಿನ ಅಂತ್ಯ. ಅದರ ಅಂತ್ಯಕ್ರಿಯೆಯ ರೀತಿ. ಸುಟ್ಟುಗುಡಿಸಲಿನಲ್ಲಿ ಇನ್ನೊಂದು ಕೂಸಿನ ಕರಕಾದ ದೇಹ. ಆಕೆಯ ಗಂಡನ ನಿರ್ಜಿವ ಶರೀರ. ದಾರುಣವಾದ ಹೃದಯವಿದ್ರಾವಕ ದೃಶ್ಯ. ಹರಕು ಸೀರೆಯಲ್ಲಿ ಏಕಾಂಗಿಯಾಗಿ ನಿಂತ ಯಮುನಾ. ಇವೆಲ್ಲ ಸುತ್ತಿ-ಸುಳಿಯುವಲ್ಲಿ. ಈ ಸುಳಿಯ ಅಕ್ಕ-ಪಕ್ಕ ಯಾವ ಜ್ಯೋತಿರ್ಲತಾಳೂ ಇಲ್ಲ; ಅರುಣಾಳೂ ಇಲ್ಲ. ಅಲ್ಲಿಯೇ ಮೇಲೆ ಇದ್ದ ಮೀತಾಳೂ ಇಲ್ಲ. ದೂರದ ಊರಿನ ಅತ್ತಿಗೆಯೂ ಇಲ್ಲ. ಉಮಾಳೂ ಇಲ್ಲ. ಅದೇ ಯಮುನಾಳ ದೌರ್ಭಾಗ್ಯ. ದಾರುಣಸ್ಥಿತಿ ಕಣ್ಣಿಗೆ ಕಟ್ಟಿದ ಭೀಕರ ದೃಶ್ಯ…."[೯೦] ಕಾಣುತ್ತಿರುವುದು ಲೇಖಕರ ಸಾಮಾಜಿಕ ಪ್ರಜ್ಞೆ ಸದಾ ಜಾಗೃತವಾಗಿದೆಯೆಂಬುದಕ್ಕೆ ನಿದರ್ಶನವಾಗಿದೆ.

ಸಂಬಂಧದ ' ಸೀಮೆ ' ದಾಟಲು ಹವಣಿಸಿದ ಅತ್ತಿಗೆ. ಸಂಪ್ರದಾಯದ ' ಸೀಮೆ ' ದಾಟಲು ನಿಂತಿದ್ದ ಮೀತಾ. ಅಂತಸ್ತಿನ ಅಂತರದ ' ಸೀಮೆ ' ದಾಟಿದ ಜ್ಯೋತಿರ್ಲತಾ. ಬಡತನದ ' ಸೀಮೆ ' ದಾಟಿ ಮೈಮಾರಿಯಾದರೂ ತುತ್ತಿನ ಚೀಲ ತುಂಬಿಕೊಳ್ಳುವ ಯಮುನಾ. ಅಧಿಕಾರದ ' ಸೀಮೆ ' ದಾಟಿ ಸಹಕಾರ ನೀಡಿದ ಪೋಲಿಸ ಅಧಿಕಾರಿ ಹಳೇಮನಿ. ಭಾವಾವೇಶದ ' ಸೀಮೆ ' ದಾಟದೆ ಪ್ರೀತಿಸುವ ಅರುಣಾ. ಹೀಗೆ ಬದುಕು ಅನೇಕ ' ಸೀಮೆಗಳ ' ಸಂಕೀರ್ಣವನ್ನು ಹೊಂದಿದೆ. ಇಂಥ ಸಂಕೀರ್ಣ ' ಸೀಮೆ 'ಗಳನ್ನು ದಾಟಲು ಚಡಪಡಿಸುವ ಪಾತ್ರಗಳನ್ನು ಲೇಖಕರು ಕಣ್ಣಿಗೆ ಕಟ್ಟುವಂತೆ

---

೮೮. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೫೭

೮೯. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೫೮

೯೦. ದು. ನಿಂ. ಬೆಳಗಲಿ : ಸೀಮೆಗಳು. ಪುಟ ೧೫೪

ಚಿತ್ರಿಸಿದ್ದಾರೆ. ಮನಮಿಡಿಯುವ ದೃಶ್ಯಗಳು. ಹದವರಿತು ಓಂದಿಭಾಷೆಯ ಬಳಕೆ. ಮುಂಬಯಿ ಪಟ್ಟಣದಲ್ಲಿನ ಸಮಾಜದ ವಿವಿಧ ಸಂಕೀರ್ಣ-ಸಮಸ್ಯೆಗಳನ್ನು ಎತ್ತಿ ತೋರಿಸುತ್ತ ಹೊರಟ ಬೆಳಗಲಿಯವರು 'ದಾಕ್ಷಾಯಣಿ'ಯಲ್ಲಿ ಅತ್ತಿಗೆ ಮೈದುನನನ್ನು ಮಗನಂತೆ ಕಂಡರೆ. ಇಲ್ಲಿ ನೀಲಕಂಠನ ಅತ್ತಿಗೆ ಅತೃಪ್ತ ಕಾಮದ ಕಣ್ಣುಗಳಿಂದ ಕಾಣುತ್ತಾಳೆ. ಬದುಕಿನ ಎರಡೂ ಮುಖಗಳನ್ನು ಚಿತ್ರಿಸುವಲ್ಲಿ ಕಾದಂಬರಿಕಾರರು ತಮ್ಮದು ಪಳಗಿದ ಕೈ ಎಂಬುದನ್ನು ಸಾಬೀತು ಪಡಿಸಿದ "ಅವರ ಗದ್ಯ ಹಿತ. ಮಿತ. ಹೃದ್ಯ. ಗದ್ಯದಲ್ಲಿ ಕಾವ್ಯದ ಮೋಹಕತೆ ಇದೆ. ಉದ್ದಕ್ಕೂ ವರ್ತಮಾನ ಕಾಲದಲ್ಲಿ ಕಥೆಯನ್ನು ಹೇಳುವ ಜಾಣ್ಮೆ ಅವರ ಬರವಣಿಗೆಯ ಮತ್ತೊಂದು ಗುಣ"[೯೧] ಇವೆಲ್ಲವುಗಳಿಂದಾಗಿ ಕಾದಂಬರಿ ಮತ್ತಷ್ಟು ಗಟ್ಟಿಗೊಂಡು ಸದೃಢವಾದಂತೆ ಕಂಡುಬರುತ್ತದೆ. ಚಿಕ್ಕಪುಟ್ಟ ನ್ಯೂನತೆಗಳ ಮಧ್ಯದಲ್ಲಿಯೂ ಕಾದಂಬರಿ ತನ್ನ ಗುರಿಮುಟ್ಟುವದರಲ್ಲಿ ಯಶಸ್ಸು ಕಂಡಿದೆ.

**ರಣಹದ್ದುಗಳು - ಖೂನೀಜನ (ಜೋಡಿಕಾದಂಬರಿ) (೧೯೮೬) :**

'ರಣಹದ್ದುಗಳು' ನಾಗರಿಕ ಪತ್ರಿಕೆಯ ದೀಪಾವಳಿ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಮಿನಿಕಾದಂಬರಿ ರೂಪದ ಒಂದು ನೀಳ್ಗತೆ. 'ಇಂಚರ' ದಲ್ಲಿ ಪ್ರಕಟವಾದ 'ಖೂನೀಜನ' ಬೆಳಗಲಿಯವರ ಮತ್ತೊಂದು ನೀಳ್ಗತೆ. ಇವೆರಡನ್ನು ಜೋಡಿಸಿ ೧೯೮೬ ರಲ್ಲಿ ವಿಶೇಷರೀತಿಯ ಮುದ್ರಣದಂತೆ 'ಜೋಡಿಕಾದಂಬರಿ' ಎಂದು ಪ್ರಕಟಿಸಿದರು; ಒಂದೇ ಹೊತ್ತಿಗೆಯಲ್ಲಿ ಅವರು ಹೇಳುವಂತೆ ಎರಡು ಕಾದಂಬರಿಗಳು ಪ್ರಕಟಗೊಂಡವು. ಇವೆರಡೂ ಮಿಡಿಕಾದಂಬರಿಗಳೆನ್ನುವುದಕ್ಕಿಂತ ನೀಳ್ಗತೆಗಳೆಂದರೆ ಹೆಚ್ಚು ಸೂಕ್ತ. ಒಂದಕ್ಕಿಂತ ಮತ್ತೊಂದು ಇನ್ನೂ ಚಿಕ್ಕದು. ಗಾತ್ರದಲ್ಲಿ ಇವೆರಡೂ ನೀಳ್ಗತೆಗಳಂತಿದ್ದರೂ. ಪರಿಣಾಮದಲ್ಲಿ ಅಷ್ಟೇ ದೊಡ್ಡ ಕಾದಂಬರಿಗಳಂತಿವೆ.

**ರಣಹದ್ದುಗಳು :**

ರೈತನೊಬ್ಬನ ಶೋಷಣೆಗಳನ್ನೇ ವಸ್ತುವಾಗಿರಿಸಿಕೊಂಡ ಕಾದಂಬರಿ. ಅರಿಕೆಯಲ್ಲಿ ಲೇಖಕರೇ ಹೇಳುವಂತೆ. 'ರೈತ ಚಳುವಳಿಯ ಹಿನ್ನೆಲೆಗಿಂತ ಇಲ್ಲಿ ಒಬ್ಬ ಸಾಮಾನ್ಯ ರೈತ ತನ್ನ ಸುತ್ತಮುತ್ತಲಿನ ಪರಿಸ್ಥಿತಿಯ ಶೋಷಣೆಗೆ ಹೇಗೆ ಒಳಗಾಗುತ್ತಾನೆ....' ಎಂಬುದನ್ನು ಚಿತ್ರಿಸಿರುವೆಯೆಂಬ ಮಾತು. 'ರೈತನ ಕಷ್ಟ-ಕಾರ್ಪಣ್ಯಗಳನ್ನು ಇದ್ದಕ್ಕಿದ್ದಂತೆ ಹಿಡಿದಿಡುವಲ್ಲಿ ಯಶ ಕಂಡ ದೃಷ್ಟಿಗೆ ಸಾಕ್ಷಿಯಾಗಿ ನಿಂತಿದೆ. ಭಾರತ ಹಳ್ಳಿಗಳ ದೇಶ. ಕೃಷಿಯೇ ಹಳ್ಳಿಗರ ಬೆನ್ನೆಲುಬಾದರೆ. ಭಾರತಕ್ಕೆ ರೈತನೇ ಬೆನ್ನೆಲುಬು. ಅವನ ಬೆನ್ನೆಲುಬನ್ನೇ ಮುರಿಯುವ ಅನೇಕ ಕರಾಮತ್ತುಗಳು ಅವನನ್ನು ಸುತ್ತಿ ಮುತ್ತಿಕೊಂಡು ಅವನ ಬದುಕನ್ನೇ ಹಿಂಡಿಹಿಪ್ಪಿ ಮಾಡುತ್ತಿವೆ. ಇದೊಂದು ಅಸಂಗಿ ರೈತನ ಕಥೆಯಾದರೂ ಇಂಥ ರೈತ ಯಾವ ಊರಲ್ಲಾದರೂ ಇರಬಹುದು.

ರೇವಣಪ್ಪ ಓದುಬರಹಬಾರದ ಒಬ್ಬ ಸಾಮಾನ್ಯ ರೈತ. ಪಾರ್ವತಿ ಅವನ ಹೆಂಡತಿ. ಕಷ್ಟ - ಸುಖಗಳಲ್ಲಿ ಗಂಡನ ಹೆಗಲಿಗೆ ಹೆಗಲುಕೊಟ್ಟು ಬದುಕುವ ಸತಿ-ಸಾಧ್ವಿ. ಹಿರಿಯಮಗ ಸದಾನಂದ ಜಮಖಂಡಿಯಲ್ಲಿ ಕಾಲೇಜು

---

೯೧. ಸಿ. ಎಚ್. ಪ್ರಹ್ಲಾದ : ಅಂತಸ್ತಿನ ಮನೆ ಕಾದಂಬರಿಯ ಬೆನ್ನುಪುಟದಿಂದ.

ಕಲಿಯುವವ: ಕಲಿಯುವವನೆಂದರೆ ತಪ್ಪಾದೀತು ಕಾಲಕಳೆಯುವವ. ಅದೂ ಬಾರುಗಳಲ್ಲಿ. ಅಶೋಕ ರೇವಣಪ್ಪನ ಎರಡನೇ ಮಗ. ಪಬ್ಲಿಕ್ ಪರೀಕ್ಷೆಯಲ್ಲಿ ತಾಲೂಕಿಗೆ ಪ್ರಥಮ ರ್‍ಯಾಂಕ್ ಪಡೆದವ. ಆದರೆ ದನಕಾಯುತ್ತ ಜೀತದಾಳಾಗಿ ತನ್ನ ಪ್ರತಿಭೆಯನ್ನೆಲ್ಲ ದೇಸಾಯರ ಹಟ್ಟಿಯಲ್ಲಿ ಹೆಂಡಿ - ಕಸ ಬಳಿಯುವುದಕ್ಕೆ ಉಪಯೋಗಿಸುತ್ತಿದ್ದನು. ಶಾಂತಾ ಕಿರಿಯ ಮಗಳು: ಹಸಿಬಿಸಿ ರೊಟ್ಟಿ ಬಡೆಯುವ ಪಾರ್ವತಿಗೆ ಏಕೈಕ ಆಧಾರ. ತನಗಿರುವ ಹತ್ತು ಎಕರೆ ಒಣಭೂಮಿಯೇ ರೇವಣಪ್ಪನ ಜೀವನಾಧಾರ.

ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿನಿಂದ ಬಾವಿ ತೆಗೆಸಲು ಐದು ಸಾವಿರ ರೂಪಾಯಿ ಸಾಲ ತೆಗೆದ: ಸಾಲದ ಮೊತ್ತವೇನೋ ಐದು ಸಾವಿರ ಕೈಗೆ ಸಿಕ್ಕಿದ್ದು ಮೂರೇ ಸಾವಿರ. ಮಿಕ್ಕಿದ್ದು ಏಜೆಂಟರ ಪಾಲಾಗಿತ್ತು. ನೀರು ಬಿದ್ದ ನಂತರ ಉಳಿದ ಕಂತುಗಳಲ್ಲಿ ಸಾಲಮಂಜೂರಾಗುವುದಿತ್ತು. ಅದನ್ನು ಗೆಳೆಯ ಪೀರಾಜಿ ಕೊಡಿಸಲು ತುದಿಗಾಲು ಮೇಲೆ ನಿಂತಿದ್ದರೂ. ನೀರು ಬೀಳದ ಬಾವಿ ಅದನ್ನು ಸ್ವೀಕರಿಸಲು ಅಸಮರ್ಥವಾಗಿತ್ತು. ಪ್ರತಿಫಲವಾಗಿ ಭೂಮಿ ಒಣಭೂಮಿಯಾಗಿಯೇ ಉಳಿದರೆ. ನಾಲ್ಕು ವರ್ಷಗಳಲ್ಲಿ ಸಾಲದ ಹಣ ಬಡ್ಡಿ ಸೇರಿಸಿಕೊಂಡು ಹತ್ತು ಸಾವಿರದಷ್ಟಾಗಿ ರೇವಣಪ್ಪನ ತಲೆಮೇಲೆ ನಿಂತಿತ್ತು. ಪಿ.ಎಲ್.ಡಿ. ಬ್ಯಾಂಕಿನ ಸಾಲವಲ್ಲದೆ. ಖಾಸಗಿಯವರಲ್ಲಿಯೂ ಅಷ್ಟಿಷ್ಟು ತಂದಿದ್ದ. ಬಾವಿಯಂತೂ ಕನಸಿನ ಮಾತಾದರೆ. ಮಳೆಯಾಗದ ಬಂಜರು ಭೂಮಿ ಬೀಜಪಡೆದಷ್ಟೂ ಮರಳಿ ಕೊಟ್ಟಿರಲಿಲ್ಲ. ಸಾಲದೆಂಬಂತೆ ಎರಡು ಸಾವಿರದಷ್ಟು ಭೂಕಂದಾಯ ಬೇರೆಯಿತ್ತು.

ಮನೆಯ ಅಡುಖರ್ಚು ಪಾರ್ವತಿಯ ಹಾಲು-ಹೈನಿನಿಂದ ಹೇಗೋ ಸಾಗುತ್ತಿತ್ತು. ಆಸಂಗಿಯಿಂದ ದಿನನಿತ್ಯ ಬನಹಟ್ಟಿಗೆ ಹೋಗಿ ಹಾಲು ಮಾರಿ ಬರುವ ಪಾರ್ವತಿ ಮನೆಖರ್ಚಿಗಾಗಿ ಗಂಡನೆದುರು ಎಂದೂ ಕೈ ಚಾಚಿದವಳಲ್ಲ. ಓಂಡುವ ಆ ಒಂದು ಎಮ್ಮೆಯೇ ಅವಳಿಗೆ ದೈನಂದಿನ ಬದುಕಿನ ಉಸಿರಾಟವಾಗಿತ್ತು. ತಲೆಯ ಮೇಲೆ ಹಾಲಿನ ಗಡಿಗೆಯನ್ನು ಹೊತ್ತುಕೊಂಡು ನಿತ್ಯ ಬನಹಟ್ಟಿಯ ದಾರಿ ತುಳಿಯುತ್ತಿದ್ದರೂ. ತಲೆಯಲ್ಲಿ ಮಾತ್ರ ಮನೆತನದ ಚಿಂತಯೇ ತುಂಬಿರುತ್ತಿತ್ತು. ವೃತ್ತಿಗೆಳತಿಯಾದ ಕಾಶವ್ವ ಕಷ್ಟಕಾಲದಲ್ಲಿ ಅಷ್ಟಿಷ್ಟು ಕೈಹಚ್ಚುವ ಆತ್ಮೀಯಳು. ಅವಳಿಗೆ ಯಾವಾಗಲೂ ಮುಗ್ಧ ಗಂಡನ ಚಿಂತೆ. ಬೆಳ್ಳಗಿರುವುದೆಲ್ಲ ಹಾಲೆಂದು ಭಾವಿಸುವ ರೇವಣಪ್ಪನಿಗೆ ಮೋಸ, ವಂಚನೆಗಳೊಂದೂ ಗೊತ್ತಿಲ್ಲ. ಪೀರಾಜಿ ಗೆಳೆಯನಂತೆ ನಟಿಸುತ್ತ ರೇವಣಪ್ಪನಿಗೆ ಸದಾ ಮೋಸ ಮಾಡುವ ಕ್ರಮ ಪಾರ್ವತಿಗೆ ಗೊತ್ತಿದ್ದರೂ ಹೇಳಲು ಧೈರ್ಯಸಾಲದು. ಯಾವುದಾದರೂ ಕುಂಟ ನೆಪ ಹಿಡಿದು ಮನೆ ಹೊಲಗಳಿಗೆ ಬಂದಾಗಲ್ಲೆಲ್ಲ ಹರಿದುತಿನ್ನುವಂತೆ ತನ್ನನ್ನೇ ನೋಡುವ ಪೀರಾಜಿ ಠಕ್ಕ ಮನಸ್ಸನ್ನು ಪಾರ್ವತಿ ಅರಿತವಳೇ ಆಗಿದ್ದಳು. "ಇದೊಂದು ಮತ್ತು ಆ ಕೆಂಚ್ಯಾ ಊರಾಗಿಂದ ಎಂದ ಸೆಟದ ಹೋಗತಾವೋ ! ನೇಸೂರ ಬ್ಯಾಡ್ರು ಹೆಂಗ್ಸರ ಕೂಡಿ ಆ ಮಸಿಮುರ್ಕ ಯಮನ್ಯಾನ ಜಜ್ಜಿ ಕೊಂದಾಂಗ ಇವರ್‍ನ ಎಂದ ಕೊಲ್ತಾರೋ...." [೯೨] ಎಂದು ಆಗಾಗ ಅಂದದ್ದೂ ಉಂಟು.

---

೯೨. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೩

ಪಾರ್ವತಿಯ ಮಾತನ್ನೂ ಮೀರಿ ರೇವಣಪ್ಪ ಸದಾನಂದನನ್ನು ಜಮಖಂಡಿಯ ಕಾಲೇಜಿಗೆ ಸೇರಿಸಿದ್ದು; ಜೀವ ಒತ್ತೆ ಇಟ್ಟು ಅವನು ಕೇಳಿದಷ್ಟು ಹಣ ಕೊಡುತ್ತಿದ್ದ. ಆದರೆ ಸದಾನಂದ ತಂದೆಗೆ ತಕ್ಕ ಮಗನಾಗಿರಲಿಲ್ಲ. ಬಡವನಾಗಿದ್ದರೂ ಶ್ರೀಮಂತರ ಶೋಕಿ ಅವನಿಗಿತ್ತು. ತಂದೆ-ತಾಯಿಯರನ್ನು ಹೆದರಿಸಿ ಹಣ ಕೀಳುವ ಗತ್ತು ಅವನಿಗೆ ಗೊತ್ತಿತ್ತು. ಅನೇಕ ಸಲ ತಗಣಿ ಎಣ್ಣೆ ಕುಡಿಯುತ್ತೇನೆಂದು ಭಯಪಡಿಸಿ ನೂರಾರು ರೂಪಾಯಿ ಕಿತ್ತುಕೊಂಡಿದ್ದ; ಆದರೆ ಕುಡಿದದ್ದು ಮಾತ್ರ ವ್ಹಿಸ್ಕಿ-ರಮ್ಮು. ಕಾಲೇಜು ಚುನಾವಣೆಗೆ ನಿಂತು ಸಹಪಾಠಿ ಪಾಟೀಲನೆದುರು ಸೋತುಸುಣ್ಣಾದರೂ. ಗೋಡೆಗಳ ಮೇಲೆ ತನ್ನ ಹೆಸರು ಕಂಡು ಅದರಲ್ಲಿಯೇ ತೃಪ್ತಿಯಿಂದ ಬೀಗುತ್ತಿದ್ದ. ಚುನಾವಣೆಯ ಖರ್ಚಿಗಾಗಿ ತಾಯಿಯ ಬೋರಮಾಳ ಮಾರಿದ ಭೂಪ! ಕಿರಿಯ ಮಗ ಅಶೋಕ ಜಾಣನೆಂಬುದು ರೇವಣಪ್ಪನಿಗೆ ಗೊತ್ತಿದ್ದರೂ ಶಾಲೆಬಿಡಿಸಿದ್ದ. ಇದನ್ನರಿತ ಅಶೋಕನ ಗುರುಗಳು ರೇವಣಪ್ಪ ದಾರಿಯಲ್ಲಿ ಕಂಡಾಗಲೊಮ್ಮೆ. " ಏನಪ್ಪಾ ನಿನಗೂ ಬುದ್ಧಿ ಬರ್‍ಲಿಲ್ಲ. ಅಶೋಕ ಭಾಳ ಶಾಣ್ಯಾ. ಮುಂದ ಕಲ್ತಿದ್ರ ಊರಿಗೆ ಹೆಸರು ತರ್‍ತಿದ್ದ ಅಂತಾ ಹುಡುಗನ ಸಾಲಿ ಬಿಡಿಸಿ ದನಾ ಕಾಯ್ಯಾಕ ಹಚ್ಚೀರಿ! ಧಡ್ಡ ಮಗನ್ನ ಮುಂದ ಕಲಿಸ್ತಿರಿ! ಜಮಖಂಡ್ಯಾಗ ಬೇಕಾದ್ದ ಮಾಡ್ಕೋತ ಲಫಂಗ್ ಆದ ಮಗಾನಃ ನಿಮಗ ಚಲು ಆದ್ರ...."[೯೩] ಎಂದು ತಮ್ಮ ಅಸಹಾಯಕತೆ ಅನುಕಂಪ ತೋರಿಸಿದರೂ ಅವರಿಗಿಂತ ರೇವಣಪ್ಪ ಹೆಚ್ಚು ಅಸಹಾಯಕನಾಗಿದ್ದನು. ಶಾಲೆ ಬಿಟ್ಟರೂ ಇದ್ದಬಿದ್ದ ಕಾಗದದ ಚೂರುಗಳಲ್ಲಿನ ಅಕ್ಷರಗಳನ್ನು ಓದುತ್ತ ಅಶೋಕ ತನ್ನ ಓದಿನ ಆಸೆಯನ್ನು ಈಡೇರಿಸಿಕೊಳ್ಳುತ್ತಿದ್ದುದೊಂದು ವಿಪರ್ಯಾಸ.

ಇದ್ದ ಜೋಡಿ ಎತ್ತುಗಳಲ್ಲಿ ಒಂದು ಎತ್ತು ರಾಚಪ್ಪನ ಕಣಿಕೆ ತರಲು ಬಾಡಿಗೆಗೆ ಹೋದಾಗ ಕಾಲು ಮುರಿದುಕೊಂಡು ಮನೆಯ ಮೂಲೆಹಿಡಿಯಿತು. ಮಗನ ಕಾಲೇಜು. ಬೀಜ-ರಸಗೊಬ್ಬರ. ಮೇವು-ಮಿಡಚಿ. ನೀರಿನ ಕರ. ಭೂಕಂದಾಯ. ಇವುಗಳ ಜೊತೆಗೆ ಸಾಲದಹೊರೆ. ಅದರ ಬಡ್ಡಿಯ ಭಾರ. ಏನೇ ಕಷ್ಟಪಟ್ಟರೂ ಬಡತನ ಬಕಾಸುರನಂತೆ ಬಾಯ್ದೆರೆದೇ ಇರುತ್ತಿತ್ತು. ಇಂಥದ್ದರಲ್ಲಿ ಎಮ್ಮೆಯೊಂದು ಹಿಂಡುವುದನ್ನು ನಿಲ್ಲಿಸಿತು. ಪಾರ್ವತಿಯ ಕೈಯೇನೋ ನಿಂತಂತಾದರೂ ಅಲ್ಲಲ್ಲಿ ಕೂಲಿ - ನಾಲಿ ಮಾಡುತ್ತ ಗಂಡನಿಗೆ ಸಹಕರಿಸುತ್ತಿದ್ದಳು. ಒಂದು ದಿನ ಕಂತೆಭಿಕ್ಷೆಯ ಶಿವಬಸಯ್ಯ ಸೈಪಾಕ ಭಿಕ್ಷೆಗೆ ಬಂದವ. ಪಡಸಾಲೆಯಲ್ಲಿ ನಿಂತು ಒಮ್ಮೆ ತುಂಬೆಲ್ಲ ದೃಷ್ಟಿ ಹಾಯಿಸಿದಾಗ. ಗೋಡೆಗೆ ಆನಿಸಿಟ್ಟ ಗೊಂಜ್ಯಾಳ ತುಂಬಿದ ಚೀಲವೊಂದು ಕಣ್ಣಿಗೆ ಬಿದ್ದಾಗ. ಥಟ್ಟನೇ ಎಚ್ಚತ್ತವನಂತೆ. " ಅಲ್ಲ ಪಾರವ್ವಾ! ನೀವು ಐಗೊಳ್ಗಿ ಮಾಡ್ಸಿ ಭಾಳ ವರ್ಷಾತು. ಈಗ ಹೆಂಗೂ ಸೋಣಸೋಮಾರಾ. ಕಡೀಸ್ವಾಮಾರಾ ಯಾಕ ಮಾಡ್ಸಿ ಬಿಡಬಾರ್ದು....? ಈ ಸಲ ಐಗೊಳ್ಗಿ ಮಾಡ್ಸೇ ಬಿಡ್ರಿ. ಚಲೂ ಆಗತೈತಿ ದೇವ್ರು ಚಲೂ ಮಾಡ್ತಾನು. ಕಾಡೂ ಕಾಟ ಹೋಗತೈತಿ...."[೯೪] ಎಂದು ತನ್ನ ಬಲೆಬೀಸಿದ್ದ. ಅದರಲ್ಲಿ ಯಶಸ್ವಿಯೂ ಆಗಿದ್ದ. ಭವಿಷ್ಯದ ಕಲ್ಯಾಣದ ಕನಸನ್ನು ಕಾಣುತ್ತ ರೇವಣಪ್ಪ ಸುತ್ತೂ ಬಳಗಕ್ಕೆಲ್ಲ ಊಟೋಪಚಾರ. ಜಂಗಮರಿಗೆ ಕಾಣಿಕೆ ಹಾಗೆ ಹೀಗೆ ಎಂದು

---

೯೩. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೬

೯೪. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೯

ಎರಡುನೂರರಷ್ಟು ಸಾಲಮಾಡಿಕೊಂಡುದೇ ಅವನಿಗೆ ದಕ್ಕಿದ ಪ್ರತಿಫಲ. ಸಾಲದ ಶೂಲವನ್ನು ಸುತ್ತಿಕೊಂಡು. ಚಿಂತೆಯ ಸಂತೆಯಲ್ಲಿ ಹಗಲು ರಾತ್ರಿ ಕಳೆಯುತ್ತಿದ್ದ ರೇವಣಪ್ಪ ಕಿರಿಯ ಮಗ ಅಶೋಕನನ್ನು ದೇಸಾಯಿ ಮಲ್ಲಪ್ಪನಲ್ಲಿ ವಾರ್ಷಿಕ ನಾಲ್ಕುನೂರಾಐವತ್ತು ರೂಪಾಯಿ ಸಂಬಳಕ್ಕೆ ಜೀತವಾಗಿಟ್ಟ: ಸ್ವಲ್ಪದಿನದಲ್ಲಿಯೇ ಅಶೋಕ ಗೂಳಿಯಿರಿತದಿಂದ ಪಕ್ಕೆಲುಬು ಸಿಳಿಸಿಕೊಂಡು ಜಮಖಂಡಿ ಸರಕಾರಿ ಆಸ್ಪತ್ರೆ ಸೇರಿದ. ಅದಕ್ಕಾಗಿ ದೇಸಾಯರ ಮೊರೆ ಹೊಕ್ಕರೆ. ಸ್ವಜಾತಿಯವನೇ ಆದ ದೇಸಾಯಿ ಮಲ್ಲಪ್ಪ ತನ್ನ ಜಾತಿಬಾಂಧವ್ಯಕ್ಕಿಂತ ಅಂತಸ್ತಿನ ಗುಂಗಿನಲ್ಲಿಯೇ ಇದ್ದ: ಜೊತೆಗೆ ಮದಿರೆಯ ಮತ್ತು ಮಾನಿನಿಯ ಉನ್ಮತ್ತೂ ಸೇರಿಕೊಂಡಿದ್ದ. ತ್ರಿವೇಣಿಯ ಸಂಗಮದಲ್ಲಿ ತೇಲುತ್ತ " ಅಲ್ಲೋ ತ್ವಾಟದಾಗ ನಿನ್ನ ಮಗಾ ಕತ್ತಿಕಾಯ್ತಿದ್ದೇನ ? ಸಾವಿರಾರ ರೂಪಾಯಿ ಗೊಂಜ್ಯಾಳಫಡಾ ಹಾಳಾತು. ದನಗೋಳ ಹಾಳ ಮಾಡಿದ್ವು. ಅದರ ಲುಕ್ಸಾನ ಯಾರು ತುಂಬಿಕೊಡಬೇಕು ? ಮೂವತ್ತು ಚೀಲದಷ್ಟು ಗೊಂಜ್ಯಾಳ ಹಾಳಾಗೇತಿ....! ಅದೇನಿಲ್ಲ. ಪಾಪ ನಿ ಬಡೂಮನುಸ್ಯಾ ಅಂತ ನಿನಮ್ಯಾಲ ದಯಾ ತೋರ್ಸತೇನ. ಈ ಲುಕ್ಸಾನದಾಗ ನಿನ ಮಗಾ ಮುಂದಿನ ಎಡ್ಡವರ್ಸ ಪುಕ್ಕಟ ದುಡೀಬೇಕು. ಹಾಂಗ ನೋಡಿದ್ರ ಪತ್ತಾರ ವರ್ಷ ದುಡದ್ರೂ ಲುಕ್ಸಾನ ಭರಪಾಯಿ ಆಗೂದುಲ್ಲ. ಈಗ ಹೋಗ. ಹುಡುಗ ಚಲೂ ಆಗಾನಾ ಕೆಲ್ಸಕ್ಕ ಕಳ್ಸಿಕೊಡು.... ಅಲ್ಲಿ ದನಕರು. ಮೇವು-ಮಿಡಚಿ ತ್ರಾಸ ಆಗ್ಲಾಕ ಹತ್ತೇತಿ...." [೯೫] ಎಂದು ಬೈದು ಕಳಿಸಿದ್ದ.

ಕಾರ್ಯದರ್ಶಿ ಕಾಡೇಶಿಯ ಕೈಕಾಲು ಹಿಡಿದು ಲಂಚಕೊಟ್ಟು ರಿಯಾಯಿತಿ ದರದಲ್ಲಿ ಬೀಜ-ರಸಗೊಬ್ಬರ ತಂದು ರೇವಣಪ್ಪ ಭೂಮಿಗೇನೋ ಬಿತ್ತಿದ. ಆದರೆ ಅದೂ ನಾಟದೆ ಕೊಳೆತು ಹೋದಾಗ ಪಾತಾಳಕ್ಕಿಳಿದು ಹೋದ. ಏನೋ ಸುದೈವಕ್ಕೆ ಚೆನ್ನಾಗಿ ಬೆಳೆದ ಗೊಂಜ್ಯಾಳಫಡಾ ರಟಗಳ್ಳಿ ಕೆಂಚನ ಕಳ್ಳನಕ್ಕೆ ಈಡಾದಾಗ ಬನಹಟ್ಟಿ ಪೋಲಿಸರ ಮೊರೆಹೊಕ್ಕ. ಕಳ್ಳನಿಗೆ ಶಿಕ್ಷೆ ಕೊಡಬಹುದೆಂಬ ಆಸೆಯಲ್ಲಿದ್ದ ರೇವಣಪ್ಪನ ಕಿಸೆ ತಡಕಾಡಿ. ಅಲ್ಲಿದ್ದ ಎರಡು ರೂಪಾಯಿಯನ್ನೂ ಕಿತ್ತುಕೊಂಡು ಅವರೂ ಹೊರದಬ್ಬಿದರು. ಕಾನೂನು ರಕ್ಷಕರೇ ಭಕ್ಷಕರಾಗಿದ್ದರು. ಸಾಲದೆಂಬಂತೆ ಎಮ್ಮೆಯೊಂದು ಕಂದಹಾಕಿತು. ಹಾಲುಕೊಡದೆ ಸಂಕಷ್ಟಕ್ಕೀಡುಮಾಡಿತ್ತು. ಘಾಟಕಾರನಿಗೆ ನೀರು ಬಿಡುವಂತೆ ಕೇಳಿದರೆ. ಐವತ್ತು ರೂಪಾಯಿ ಲಂಚ ಕೇಳಿದ್ದ. ತಲಾಠಿಯಲ್ಲಿ ತನ್ನ ಭೂಕಂದಾಯದ ತಕಾರಾರು ಹೇಳಿದರೆ ಅವನೂ ಕ್ಯಾರೇ ಎನ್ನಲಿಲ್ಲ. ಈ ಮಧ್ಯ ಸದಾನಂದ ಬೇರೆ ಕಾಡಿ-ಬೇಡಿ-ಹೆದರಿಸಿ ಮುನ್ನೂರು ಕಿತ್ತುಕೊಂಡಿದ್ದ. ಅನಿವಾರ್ಯವಾಗಿ ಮತ್ತೆ ಸಂಗಪ್ಪ ಶೆಟ್ಟಿಯಲ್ಲಿ ಮೊರೆಹೊಕ್ಕು ಮನೆ ಒತ್ತೆಯಿಟ್ಟು ಸಾಲಪಡೆದ.

ಸಂಗಪ್ಪ ಶೆಟ್ಟಿ ಆಸಂಗಿಯ ಶ್ರೀಮಂತರಲ್ಲಿ ಒಬ್ಬ. ಅಂಗಡಿ ವ್ಯಾಪಾರವೇ ಅವನ ವೃತ್ತಿಯಾಗಿದ್ದರೂ. ಅದಕ್ಕಿಂತ ಹೆಚ್ಚು ಲಾಭತರುವ ವೃತ್ತಿಯೆಂದರೆ ಬಡ್ಡೀ ವ್ಯವಹಾರ. ಅವನು ದಯೆ - ಮಾಯೆ - ಕರುಳು - ಕನಿಕರ - ಕಣ್ಣೀರು - ಕಳವಳ ಎಂದು ಸಾಲಪಡೆದವನ ಸ್ಥಿತಿ-ಗತಿ ನೋಡುತ್ತ ಕುಳಿತಿದ್ದರೆ ಸಂಗಪ್ಪನ ಸಂಪತ್ತು ಅಷ್ಟು ಬೆಳೆಯುತ್ತಿರಲಿಲ್ಲ. ಬಡ್ಡಿಗೆ ಮಹಾಬಡ್ಡಿ ಸುಲಿಯುತ್ತಿದ್ದ. ಇಷ್ಟೆಲ್ಲ ಆತ ಸುಲಿದು ಗಳಿಸುವುದು ತನಗಿರುವ ಏಕೈಕ ಹುಚ್ಚನಂತಿರುವ

---

೯೫. ದು. ನಿಂ. ಬೆಳಗಲಿ : ರಣಹದ್ದುಗಳು, ಪುಟ ೩೨

ಪುತ್ರಸಂತಾನಕ್ಕಾಗಿ. ಸಂಗಪ್ಪನಿಗೆ ಹೆಂಡತಿ. ಮಗ ಎಂಬ ಪರಿವೆಗಿಂತ ಸಂಪತ್ತನ್ನು ಕೂಡಿಹಾಕುವ ಧ್ಯಾನವೇ ಮುಖ್ಯವಾಗಿತ್ತು. ಅದೊಂದು ಹುಚ್ಚು: ಹಣದ ಹುಚ್ಚು. ತನ್ನ ಈ ಹುಚ್ಚಿಗೆ ಪೀರಾಜಿಯಂತವರನ್ನು ಏಜಂಟರನ್ನಾಗಿ ಬಳಸಿಕೊಳ್ಳುತ್ತಿದ್ದ.

ಪೀರಾಜಿ ಆಸಂಗಿಯ ತಗಣಿಗಳಲ್ಲಿ ಒಬ್ಬ. ರೇವಣಪ್ಪನ ಸ್ನೇಹಿತನಂತೆ ನಟಿಸುತ್ತ. ಅವನ ಅಂತರಂಗ-ಬಹಿರಂಗಗಳೆರಡಕ್ಕೂ ಅಪಚಾರ ಬಗೆಯುತ್ತಿದ್ದ. "ರೂಪಸಿಯಾದ ಹೆಂಗಸರನ್ನು ಕಂಡು ಜೊಲ್ಲು ಸುರಿಸುತ್ತ ಕಾಲುಕೆದರಿ ಮಾತನಾಡಿಸುವುದೆಂದರೆ. ಪೀರಾಜಿಗೆ ಎಲ್ಲಿಲ್ಲದ ಸಂತೋಷ: ಅದು ಅವನ ಖಯಾಲಿ. ರೇವಣಪ್ಪನ ಪ್ರತಿ ಕೆಲಸಗಳಲ್ಲಿ ಮಧ್ಯಸ್ಥಿಕನಾಗಿ ಸಾಧ್ಯವಾದಷ್ಟು ಅವನನ್ನು ಸುಲಿಯುತ್ತಲೇ ಇದ್ದ. ಅದರೊಂದಿಗೆ ರೂಪವತಿಯಾದ ಪಾರ್ವತಿಯನ್ನು ಕಂಡು ಜೊಲ್ಲು ಸುರಿಸುತ್ತಲೂ ಇದ್ದ. ಆತ್ಮೀಯ ಗೆಳೆಯ ಅನುವುದಕ್ಕಿಂತ ತನ್ನ ಶೋಷಣೆಗಳಿಗೆ ಒಳಗಾದ ಮರುಳ ರೇವಣಪ್ಪನ ಹೆಂಡತಿಯನ್ನು ಮಾತನಾಡಿಸಿದರೆ ಅದಾವ ದೋಷ....?"[೯೬] ಎಂಬುದು ಅವನ ತರ್ಕ. ಆದರೆ ಬೆನ್ನಹಿಂದಿನ ಚೂರಿ ಇರಿತ ರೇವಣಪ್ಪನಿಗೆ ತಿಳಿದಿರಲೇ ಇಲ್ಲ.

ತನ್ನ ಮನೆಯನ್ನೇ ಸಂಗಪ್ಪನಿಗೆ ಖರೀದಿ ಬರೆದುಕೊಟ್ಟು. ಐವತ್ತು ರೂಪಾಯಿ ಬಾಡಿಗೆ ತೆತ್ತು ಅಲ್ಲಿರುವ ಸ್ಥಿತಿಗೆ ಬಂದ ರೇವಣಪ್ಪ. ಸ್ವಂತ ಮನೆಗೆ ಬಾಡಿಗೆ ಕೊಡುವ ಸ್ಥಿತಿ ಅವನನ್ನು ಹುಚ್ಚನಂತಾಗಿಸಿತು. ಪಾರ್ವತಿಗೆ ದಾರಿ ತೋಚದಾಯಿತು. ಸಂಗಪ್ಪ ಸುಣ್ಣ-ಬಣ್ಣ ಮಾಡಿಸುವ ನೆಪದಲ್ಲಿ ಮನೆ ಖಾಲಿಮಾಡುವಂತೆ ಎಚ್ಚರಿಕೆ ನೀಡುತ್ತಿದ್ದ. ಹೊಲದ ಮೇಲೆ ಕಣ್ಣಿಟ್ಟ ಸಂಗಪ್ಪನಿಗೆ ಅದು ದಕ್ಕದಾದಾಗ ಈ ರೀತಿ ಅಂಜಿಸುತ್ತಿದ್ದ. ರೇವಣಪ್ಪನಿಗೆ ಬದುಕು-ಭವಿಷ್ಯಗಳೆರಡೂ ಶೂನ್ಯವಾದವು. ಇಂಥ ಸ್ಥಿತಿಯಲ್ಲಿಯೇ ಸದಾನಂದ ಆಸಂಗಿಗೆ ಮರಳಿ ಬಂದಿದ್ದ; ಹಿಂದಿನ ಹಿಪ್ಪಿಜೀವನಕ್ಕೆ ಬೇಸತ್ತಿದ್ದ. ಪಾಶ್ಚಾತ್ತಾಪ ಪಟ್ಟಿದ್ದ; ಅವನ ಮನಪರಿವರ್ತನೆಯಾಗಿತ್ತು. ಊರಲ್ಲಿನ ಅನೇಕರ ಹೀಯಾಳಿಕೆಗೆ ಮತ್ತಷ್ಟು ಬೇಸತ್ತೂ ಹೋಗಿದ್ದ. ಮನೆಮುಂದೆ ನಿಂತು ಮನೆ ಖಾಲಿ ಮಾಡುವಂತೆ ಒದರಾಡುತ್ತಿದ್ದ ಸಂಗಪ್ಪನಿಗೆ. "....ಇದ ನಮ್ಮ ಮನೀ. ಬಾಡಿಗಿ ಇರ್ಲಿ ಏನಾರೇ ಇರ್ಲಿ ಇಲ್ಲಿಂದ ನೀವ ನಮ್ಮನ ಬಿಡ್ಸಾಕ ಸಾಧ್ಯ ಇಲ್ಲ. ಕಾಯ್ದೆ ಪ್ರಕಾರ ಏನ್ ಮಾಡ್ತಿರೋ ಮಾಡ್ಕೊ ಹೋಗ್ರಿ. ಸ್ಪಷ್ಟ ಮಾತುಗಳಲ್ಲಿ ಈ ಮನಿ ನಾವ ಬಿಡೂದುಲ್ಲ...."[೯೭] ಎಂದು ಹೇಳಿ ಅವನನ್ನು ಹೊರದಬ್ಬಿದ್ದ. ಅಷ್ಟರಲ್ಲಿ ಬಂದ ದೇಸಾಯರ ಆಳಿಗೆ "ಅಂವ ನಿಮ್ಮ ತ್ವಾಟಕ ಮುಂದ ದುಡಿಲಾಕ ಬರುವುದಿಲ್ಲ. ನಾವೇನ ಬಾಕಿ ಕೊಡಬೇಕೋ. ಅದ್ನ ಅನುಕೂಲ ಆದಾಗ ತೀರಸ್ತೀವಂತ ನಿಮ್ಮ ದೇಸಾಯಿರಿಗೆ ಹೇಳ. ಈಗ ನೀ ಹೋಗು"[೯೮] ಸದಾನಂದ ಉಗ್ರವಾಗಿಯೇ ಪ್ರತಿಭಟಿಸುತ್ತ ಹೇಳಿದ್ದು. ಒಂದೆಡೆ ಕಾದಂಬರಿಗೆ ಇನ್ನೊಂದೆಡೆ ರೇವಣಪ್ಪನ ಬದುಕಿಗೆ ಹೊಸದಿಕ್ಕನ್ನೇ ತೋರಿಸುತ್ತದೆ. ಈ ಹೊಸ ಸೆಳಕಿನೊಂದಿಗೆ ಕಾದಂಬರಿ ಅಂತ್ಯಗೊಳ್ಳುತ್ತದೆ.

---

೯೬. ದು. ನಿಂ. ಬೆಳಗಲಿ : ರಣಹದ್ದುಗಳು, ಪುಟ ೩

೯೭. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೪೭

೯೮. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೪೭

ನೀಳ್ಗತೆ ರೂಪದ ಈ ಮಿಡಿ ಕಾದಂಬರಿಗೆ ರೇವಣಪ್ಪನೇ ಕಥಾನಾಯಕ. ಅವನೊಬ್ಬ ಸಾಮಾನ್ಯ ರೈತ. ಅವನಿಗಾದ ಶೋಷಣೆಯೇ ಇದರ ವಸ್ತು. ರೇವಣಪ್ಪ ಪಟಕಾ ಸುತ್ತುತ್ತಿದ್ದರೂ ಅವನ ತಲೆಗೆ ಎಲ್ಲರೂ ಟೊಪ್ಪಿಗೆ ಹಾಕುವವರೇ. ಅದೊಂದು ಟೊಪ್ಪಿಗೆ ಹಾಕಲು ತಕ್ಕಅಳತೆಯ ತಲೆ. ಟೊಪ್ಪಿಗೆ ಹಾಕಿಸಿಕೊಳ್ಳುವವರು ಇರುವವರೆಗೆ ಹಾಕುವವರಿದ್ದೇ ಇರುತ್ತಾರೆಂಬುದೊಂದು ಸಾಮಾನ್ಯ ಸತ್ಯ ಸಂಗತಿ. ಸಾಲದ ಶೂಲ. ಎತ್ತು ಕಾಲು ಮುರಿದುಕೊಂಡುದು. ಅಶೋಕ ಜೀತದಾಳಾದುದು. ಎಮ್ಮೆ ಕಂದಹಾಕಿದ್ದು. ಬಾವಿಗೆ ನೀರು ಬೀಳದಿರುವುದು. ಆಸ್ಪತ್ರೆ ಖರ್ಚು. ತಲಾಠಿಗೆ ಲಂಚ. ಪಾಟಕಾರನಿಗೆ ಲಂಚ. ಕಾಡೇಶಿಗೆ ಲಂಚ. ಬಿತ್ತಿದ ಬೀಜಗಳೆಲ್ಲ ಕೊಳೆತು ಹೋದುದು. ಕೈಗೆ ಬಂದ ಬೆಳೆ ಕಳ್ಳ ಕಾಕರ ಪಾಲಾದುದು.ಲಫಂಗ ಮಗನ ಕಾಲೇಜು ಶೋಕಿಗೆ ಹಣ ಸುರಿದುದು. ಇಷ್ಟವಿಲ್ಲದೆ ಹೆಂಡತಿಯ ಕೊರಳು-ಕಿವಿ ಬರಿದಾದುದು. ಶಾಂತಾಳ ಕಿವಿ ಬಣಬಣಗುಟ್ಟಿದ್ದು. ಜಂಗಮನ ಜೋಳಿಗೆಗೆ ಸಾಲಮಾಡಿ ಸುರುವಿದ್ದು – ಹೀಗೆ ಕಣ್ಣಿಗೆ ಕಟ್ಟಿದಂತಿದೆ. "..... ಹದ್ದುಗಳು; ಸತ್ತ ಪ್ರಾಣಿಗಳನ್ನು ಕಿತ್ತು ತಿನ್ನುವಂತೆ. ಅಸಹಾಯಕ ಚಿಕ್ಕಪ್ರಾಣಿಗಳನ್ನು ಎತ್ತಿ ಒಯ್ದು ತಿನ್ನುವಂತೆ. ರೇವಣಪ್ಪನ ಸ್ಥಿತಿ; ಸತ್ತ ಪ್ರಾಣಿಯಂತೆ ಹಾಗೂ ಅಸಹಾಯಕ ಚಿಕ್ಕ ಪ್ರಾಣಿಯಂತೆ ಆಗಿತ್ತು: ಎಲ್ಲರೂ ಅವನನ್ನು ಕಿತ್ತು ತಿನ್ನುವವರೇ. ಎಲ್ಲರೂ ರಣಹದ್ದುಗಳೇ. ಸರಕಾರಿ ನೌಕರರು. ಸುತ್ತಮುತ್ತಲಿನ ಸಮಾಜ. ನನ್ನವರು. ತನ್ನವರು ಎಲ್ಲರೂ ಅವನ ಪಾಲಿಗೆ ರಣಹದ್ದುಗಳೇ. ಸದಾನಂದ. ಪೀರಾಜಿ. ತಲಾಠಿಗಳು. ಬ್ಯಾಂಕಿನವರು. ನೀರಾವರಿ ಅಧಿಕಾರಿಗಳು. ಪಾಟಕರ. ಸಂಗಪ್ಪಶೆಟ್ಟಿ. ಮಲ್ಲಪ್ಪಶೆಟ್ಟಿ. ಮಠದ ಶಿವಬಸಯ್ಯ. ಹೂಗಾರ ರಾಚಪ್ಪ. ಸೋನಾರ ಶ್ರೀಪತಿ. ಕಾರ್ಯದರ್ಶಿ ಕಾಡೇಶಿ. ರಟಗಳ್ಳಿ ಕೆಂಚ. ಪೋಲಿಸಿನವರು– ಹೀಗೆ ಅವನನ್ನು ಶೋಷಿಸುವವರ ಸಂಖ್ಯೆ ಬೆಳೆಯುತ್ತಲೇ ಹೋಗುತ್ತದೆ. ಅನೇಕ ರೀತಿಯಲ್ಲಿ ಇವರೆಲ್ಲ ಬಡರೇವಣಪ್ಪನ ರಕ್ತ-ಮಾಂಸವನ್ನು ಕಿತ್ತು ತಿನ್ನುವ ರಣಹದ್ದುಗಳೇ. ರೈತನೊಬ್ಬನ ಜೀವನದ ಸುತ್ತ ಹೆಣೆದ ಶೋಷಣೆಯ ಜೇಡರ ಬಲೆಯನ್ನು ಚಿತ್ರಿಸುವಲ್ಲಿ ಬೆಳಗಲಿಯವರು ಯಶಸ್ವಿಯಾಗಿದ್ದಾರೆ. ಹಳ್ಳಿಯ ಜೀವನ ವಿಧಾನವನ್ನು. ಹಳ್ಳಿಗರ ಮನೋಧರ್ಮವನ್ನು. ಅವರ ಕಷ್ಟ-ಕಾರ್ಪಣ್ಯಗಳನ್ನು. ಎಷ್ಟೊಂದು ಸಹಜವಾಗಿ-ಜೀವಂತವಾಗಿ-ವಿಚಾರಪೂರ್ಣವಾಗಿ ಚಿತ್ರಿಸಿದ್ದೀರಿ....."[೯೯] ಎಂಬ ಮಾತಿನ ಉದ್ಗಾರದಲ್ಲಿ ಅತಿಶಯೋಕ್ತಿಯೇನಿಲ್ಲ.

ಅರ್ಥಪೂರ್ಣ ಶೀರ್ಷಿಕೆಯ ಪ್ರಸ್ತುತ ಕೃತಿ ಫ್ಯೂಡಲ್ ವ್ಯವಸ್ಥೆಗೆ ಒಡಿದ ಕನ್ನಡಿ. "ಜೀತಪದ್ಧತಿ ಕಾನೂನಿಗೆ ವಿರೋಧವಾಗಿತ್ತು ! ಆದರೂ ಪರಸ್ಪರ ಸಮ್ಮತಿಯಂತೆ ಇನ್ನೂ ಜಾರಿಯಲ್ಲಿ ಇದ್ದೇ ಇದೆ. ಇಬ್ಬರ ಒಪ್ಪಿಗೆಯಿದ್ದಾಗ ಯಾರದೇನು ಎಂಬಂತೆ ನಡೆದೇ ಇದೆ. ನಮ್ಮ ದೇಶದಲ್ಲಿ ಎಲ್ಲ ಕಾನೂನಿನಂತೆ ಎಲ್ಲಿ ನಡೆದಿದೆ ? ಕಾನೂನು ಇರುವುದು ಪುಸ್ತಕದಲ್ಲಿ"[೧೦೦] ಲೇಖಕರ ವಿಷಾದಪೂರ್ಣ ಈ ಮಾತುಗಳು ಜಮೀನ್ದಾರಿ ಪದ್ಧತಿಗೆ ಹತಾಶ ಪ್ರತಿಕ್ರಿಯೆಯಾಗಿದೆ. 'ಧುಮ್ಮಸ್ಸಿ'ನಂತೆ ಪೆಟ್ಟಿನ ಮೇಲೆ ಪೆಟ್ಟು ತಿನ್ನುತ್ತಿದ್ದರೂ ರೇವಣಪ್ಪ ತನ್ನ ಕಷ್ಟಗಳ ಸರಮಾಲೆಯಲ್ಲಿಯೂ. ಅಂಗವಿಕಲನಾಗಿ ಮನೆಯಲ್ಲಿ ಮೇವಿಗೆ ದಂಡವಾಗಿದ್ದ ಕುಂಟ ಎತ್ತನ್ನು. 'ಬಸವಣ್ಣ'

---

೯೯. ಚೆನ್ನವೀರ ಕಣವಿಯವರು ಬೆಳಗಲಿಯವರಿಗೆ ಬರೆದ ಪತ್ರದಿಂದ ಉದ್ಧೃತ

೧೦೦. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೨೪

ಮನೆಯಲ್ಲಿಯೇ ಇರಲಿ. ಮಾರಿದರೆ ಕಟುಕರ ಪಾಲಾದೀತು....''[೧೧೧] ರೇವಣಪ್ಪನ ಕನಿಕರದ ಅನುಕಂಪದ ಈ ಮಾತುಗಳನ್ನು ಕೇಳಿ ಆಶ್ಚರ್ಯವಾಗದಿರದು. ಓದುಗನ ಮನಸ್ಸೂ ಕರಗುತ್ತದೆ. ಓರಗೆಯ ಮಕ್ಕಳೆಲ್ಲ ಸರ್ಕಸ್ ನೋಡಲು ಹೊಸಬಟ್ಟೆಗಳನ್ನುಟ್ಟು. ಸಂತೋಷದಿಂದ ಹೋಗುತ್ತಿರುವುದನ್ನು ಕಂಡು. ತಾನೂ ನೋಡಬೇಕು. ಹೊಸಬಟ್ಟೆ ಉಡಬೇಕೆಂದು ಶಾಂತಾ ಆಸೆಕಂಗಳಿಂದ ನೋಡಿದ ರೀತಿ ಕರಳುಹಿಂಡುತ್ತದೆ.

ಒಂಜಿ ಒಗ್ಗಿಸುವ ಸಾಧ್ಯತೆಯಿದ್ದರೂ. ಲೇಖಕರು ನೀಳ್ಗತೆಯ ರೂಪದಲ್ಲಿಯೇ ಪ್ರಕಟಿಸಿದ ಪ್ರಸ್ತುತ ಮಿನಿ ಕಾದಂಬರಿ. ಪ್ರಸ್ತುತ ಸಂದರ್ಭದಲ್ಲಿ ವಸ್ತುವಿನ ದೃಷ್ಟಿಯಿಂದಾಗಿ ತೀರ ವಾಸ್ತವವೆನಿಸಿದೆ. ಸಾಲದ ಶೂಲಗಳಿಗೆ ಪ್ರಾಣಾರ್ಪಣೆ ಮಾಡುತ್ತಿರುವ ರೈತರ ಬದುಕು ಇಂದಿಗೂ ಚಿಂತಾಜನಕವಾಗಿದೆ. ಕೃತಿಯುದ್ದಕ್ಕೂ ಶೋಕಿಲಾಲನಾಗಿ ಚಿತ್ರಿಸಲ್ಪಟ್ಟ ಸದಾನಂದ ಮುಳುಗುವವನಿಗೆ ಹುಲ್ಲುಕಡ್ಡಿಯಾಸರೆಯಾಗಿ ನಿಂತು. ಕೃತಿಯ ಗತಿಯನ್ನೇ ಬದಲಾಯಿಸುತ್ತಾನೆ; ' ಮಕ್ಕು. ಬಡವರ್‍ನ ದುರ್ಬಲರ್‍ನ ಹಿಂಡಾಕ ಬರ್‍ತಾರು ! ಸುಲೀತಾರು. ಅದ ಸಿಂವಿs ಹತ್ತೇತಿ....' ಎನ್ನುವ ಮುಖಾಂತರ ಶೋಷಿತರ ಪ್ರತಿನಿಧಿಯಾಗಿ ಶೋಷಕರ ವಿರುದ್ಧ ಸಮರವನ್ನೇ ಸಾರುತ್ತಾನೆ. ಇದು ಶೋಷಿತರ ಆಶಾಜ್ಯೋತಿ. ಮುಂಗೈ ಜೋರಿದ್ದವರೇ ಸಮಾಜದಲ್ಲಿ ಸುಖವಾಗಿರಬಹುದೆಂಬುದು ಮನಗಂಡ ಮಾತು. ಅದಕ್ಕಾಗಿಯೇ ರೇವಣಪ್ಪ-ಪಾರ್ವತಿ. ತಂಗಿ ಶಾಂತಾ ಸದಾನಂದನನ್ನೇ ಪಿಳಿಪಿಳಿ ನೋಡುತ್ತ ನಿಲ್ಲುತ್ತಾರೆ.

ವಸ್ತುವೇನೋ ಮನಮಿಡಿಯುವಂತಿದೆ. ಜೀವಂತವಾಗಿದೆ. ಪ್ರಸ್ತುತವಾಗಿದೆ. ಆದರೆ ಕೃತಿ ಕಾದಂಬರಿಯ ಪರಿಕರಗಳ ಕೊರತೆಯಿಂದಾಗಿ ಕಾದಂಬರಿಯ ಮಟ್ಟಕ್ಕೇರದೆ. ಕೇವಲ ಒಂದು ಉತ್ತಮ ನೀಳ್ಗತೆಯಾಗಿಯೇ ಉಳಿಯುತ್ತದೆ. ಬದುಕು ಕೇವಲ ಕಷ್ಟದ ಕೊಂಪೆಯಲ್ಲ. ಅಲ್ಲಲ್ಲಿ ಸುಖದ ಸೆಳಕುಗಳೂ ಕಾಣಸಿಗುತ್ತವೆ. ಆ ಬಗ್ಗೆ ಬೆಳಗಲಿಯವರು ಗಮನಹರಿಸದೆ. ಕಷ್ಟದ ಸರಮಾಲೆಗಳನ್ನು ಕಟ್ಟುತ್ತ ಹೋಗಿದ್ದಾರೆ. ಕೊನೆಯಲ್ಲಿ ಧುತ್ತೆಂದು ಮನಪರಿವರ್ತನೆಯಾಗಿ ಸದಾನಂದ ಶೋಷಕರ ವಿರುದ್ಧ ಧ್ವನಿಯೆತ್ತಿದ್ದು ಆಶ್ಚರ್ಯದೊಂದಿಗೆ ಆಭಾಸವನ್ನೂ ಉಂಟುಮಾಡಿದೆ. ಇಷ್ಟಿದ್ದರೂ ಸದಾನಂದ ಕಾಲೇಜು ಕಲಿತು ದೊಡ್ಡ ಆಫೀಸರನಾದಂತೆ ಕಾರು-ಬಂಗಲೆ– ಇತ್ಯಾದಿ ಇತ್ಯಾದಿ ಎಂದು ರೇವಣಪ್ಪ ಕನಸಿನಗೋಪುರದ ಸ್ಮರಣತಂತ್ರ ಹಾಗೂ ಅಶೋಕನ ಬದುಕಿನ ಭವಿಷ್ಯದ ಬಗೆಗಿನ ಕನಸಿನ ಗೋಪುರಗಳಲ್ಲಿ ಸ್ಮರಣತಂತ್ರವನ್ನು ಲೇಖಕರು ಚೆನ್ನಾಗಿ ದುಡಿಸಿಕೊಂಡಿರುವುದು ಅವರ ಬರವಣಿಗೆಯ ವಿಶೇಷ ಅಂಶ. ಇಡೀ ಕಾದಂಬರಿ ವಾಸ್ತವದ ಆಧಾರದ ಮೇಲೆಯೇ ತನ್ನ ಹಂದರ ನಿರ್ಮಿಸಿಕೊಂಡಂತಿದ್ದರೂ ಅದರಲ್ಲಿ ಕಾಣಿಸುವುದು ನಮ್ಮ ವ್ಯವಸ್ಥೆಯ ಕೇವಲ ಒಂದು ಮುಖ ಮಾತ್ರ. ಈ ವಿಕೃತ ಮುಖದ ಆಚೆಗಿನ ಇನ್ನೊಂದು ಮುಖವನ್ನು ಅಲ್ಪಸ್ವಲ್ಪವಾದರೂ ತೋರಿಸಿದ್ದರೆ ಕಾದಂಬರಿಗೊಂದು ಸಮಗ್ರತೆ ಪ್ರಾಪ್ತವಾಗಬಹುದಿತ್ತು. ಅಷ್ಟರಮಟ್ಟಿಗೆ ' ರಣಹದ್ದುಗಳು ' ಕೊರತೆಯನ್ನೇ ಅನುಭವಿಸಿದೆ. ಈ ಕೊರತೆಯ ಮಧ್ಯದಲ್ಲಿಯೂ. ಸಮಾಜ ಹಾಗೂ ಒಟ್ಟು ವ್ಯವಸ್ಥೆಯಲ್ಲಿರುವ ಕ್ರೌರ್ಯವನ್ನು ನೇರವಾಗಿ ಬಿಚ್ಚಿ ತೋರಿಸುವ ' ರಣಹದ್ದುಗಳು ' ರೈತನ ಶೋಷಣೆಯನ್ನು ವಾಸ್ತವದ ನೆಲೆಯಲ್ಲಿ ಕಟ್ಟಿಕೊಡುವ ಕಾರಣ ಒಂದು ಸಮಾಜವಾದಿ ಹಾಗೂ ಪ್ರಗತಿಪರ

---

೧೧೧. ದು. ನಿಂ. ಬೆಳಗಲಿ : ರಣಹದ್ದುಗಳು. ಪುಟ ೨೪

ಕೃತಿಯಾಗಿ ಕಾಣುತ್ತದೆ. ಹೀಗಿದ್ದರೂ ಸಾಹಿತ್ಯ ಸಂದರ್ಭದಲ್ಲಿ ಹೇಳುವುದಾದರೆ. ಅನೇಕ ಕೊರತೆಗಳ ಮಧ್ಯದಲ್ಲಿಯೂ. ರೈತನೊಬ್ಬನ ಶೋಷಿತ ಬದುಕನ್ನು ವಾಸ್ತವದ ಪಾತಳಿಯಲ್ಲಿ ಹಿಡಿದಿಟ್ಟ ಒಂದು ಉತ್ತಮ ನೀಳ್ಗತೆ ಇದಾಗಿದೆ.

**ಖೂನೀಜನ :**

ಬೆಳಗಲಿಯವರ ಮತ್ತೊಂದು ನೀಳ್ಗತೆ ಖೂನೀಜನ. ಹಾಗೆಂದು ಲೇಖಕರೇ ಅರಿಕೆಯಲ್ಲಿ " ಎರಡನೆಯ ' ನೀಳ್ಗತೆ '. ' ಇಂಚರ 'ದಲ್ಲಿ ಪ್ರಕಟವಾಗಿ ಇದೂ ಕೂಡ ಓದುಗರಿಂದ ತುಂಬಾ ಮೆಚ್ಚುಗೆ ಪಡೆದಿತ್ತು....'' ಎಂದು ಹೇಳಿದ ಮಾತುಗಳಲ್ಲಿ ಇವೆರಡೂ ಪ್ರತ್ಯೇಕವಾದ ನೀಳ್ಗತೆಗಳೆಂಬುದು ಸುಸ್ಪಷ್ಟ. ಕೇವಲ ಇಪ್ಪತ್ತೊಂದು ಪುಟಗಳಲ್ಲಿ ತನ್ನ ಮೈ ಬಿಚ್ಚಿಕೊಂಡಿರುವ ಪ್ರಸ್ತುತ ' ಖೂನೀಜನ ' ಮುಗ್ಧ ಕನ್ಯೆಯೊಬ್ಬಳು ಕುತಂತ್ರಿಗಳ ಕೈಗೆ ಸಿಕ್ಕು ವೇಶ್ಯಾಜೀವನದ ಬೆಂಕಿಯಲ್ಲಿ ಸುಟ್ಟುಹೋದುದನ್ನು ಚೆನ್ನಾಗಿ ಚಿತ್ರಿಸುತ್ತದೆ.

ವೇಶ್ಯಾಸಮಸ್ಯೆ ನಮ್ಮ ಸಮಾಜಕ್ಕಂಟಿದ ಮಹಾರೋಗ. ತೀರ ಹಿಂದೆ ಧಾರ್ಮಿಕ ಆವರಣದಲ್ಲಿ ಹುಟ್ಟಿಕೊಂಡ ಈ ಅನಿಷ್ಟ. ಕಾಲಕ್ರಮದಲ್ಲಿ ಅನೈತಿಕ ಕಾಮದಾಟವಾಗಿ. ಕೆಲವರ ಹೊಟ್ಟೆತುಂಬುವ ಕೀಳು ವೃತ್ತಿಯಾಗಿ. ಒಟ್ಟಾರೆ ಸಮಾಜದ ಸ್ವಾಸ್ಥ್ಯವನ್ನೇ ಹದಗೆಡಿಸಿದೆ. ಗಂಡು ಹೆಣ್ಣಿನ ಅತೃಪ್ತ ಕಾಮವೇ ಈ ಸಮಸ್ಯೆಗೆ ಕಾರಣವೆನ್ನುಬಹುದಾದರೂ ಹೆಣ್ಣಿನ ಅಭದ್ರ ಜೀವನ ಹಾಗೂ ಆರ್ಥಿಕ ದುಸ್ಥಿತಿ ಅದರ ಪ್ರಮುಖ ಕಾರಣಗಳಾಗಿವೆ. ಈ ಸಮಸ್ಯೆ ಹೆಚ್ಚಾಗುತ್ತ ಹೋದಂತೆ ಹೆಣ್ಣು ಮಾರಾಟದ ಸರಕಿನಂತೆ ಈ ಕೂಪಕ್ಕೆ ತಳ್ಳಲ್ಪಡುತ್ತಿದ್ದಾಳೆ. ಅದೇಷ್ಟೋ ಅಬಲೆಯರು. ಮುಗ್ಧೆಯರು. ನಿಸ್ಸಹಾಯಕರು. ಈ ಕೂಪದಲ್ಲಿ ಬಿದ್ದು. ಅಲ್ಲಿಂದ ಹೊರಬರಲಾಗದೆ ತಮ್ಮ ಬದುಕಿಗೆ ಬೆಂಕಿಯಿಟ್ಟುಕೊಂಡಿದ್ದಾರೆ. ಉತ್ತರ ಕರ್ನಾಟಕದ ಒಂದು ಗ್ರಾಮದ ಮುಗ್ಧ ಕನ್ಯೆಯೊಬ್ಬಳು ವೇಶ್ಯಾಜೀವನದಲ್ಲಿ ಬೆಂದುಹೋದುದನ್ನೇ ವಸ್ತುವಾಗಿರಿಸಿಕೊಂಡ ' ಖೂನೀಜನ ' ಒಂದು ಉತ್ತಮ ನೀಳ್ಗತೆ.

ಬಡವರ ಬದುಕಿನ ನಿಕೃಷ್ಟ-ಸಂಕಷ್ಟದ ಎಳೆಗಳನ್ನು ಹೊತ್ತುಕೊಂಡೇ ಕೃತಿ ಆರಂಭವಾಗುತ್ತದೆ. ಕರಿಲಿಂಗಪ್ಪ ಮಾವಿನಗಿಡದ ವೀರಪ್ಪನ ಸೀರೆಯಂಗಡಿಯಲ್ಲಿ ಗುಮಾಸ್ತನಾಗಿದ್ದವ. ನಾಲ್ಕಾರು ಸಾವಿರ ಬಂಡವಾಳದೊಂದಿಗೆ ಉದ್ಯೋಗದಲ್ಲಿ ಹೆಜ್ಜೆಯಿಟ್ಟ ವೀರಪ್ಪ. ಅಲ್ಪಾವಧಿಯಲ್ಲಿಯೇ ಇಪ್ಪತ್ತು ಲಕ್ಷದ ಕುಳವಾಗಿದ್ದ. ಒಂದು ವಿದೇಶಿ ಮರ್ಸಿಡಿಸ್ ಕಾರು. ಜೊತೆಗೆ ದೇಶೀ ಅಂಬಾಸಿಡರ್. ಹೋಂಡಾ. ಸ್ಕೂಟರ್. ಸೈಕಲ್ಲು. ಭವ್ಯಬಂಗಲೆ– ಹೀಗೆ ಏರುತ್ತ-ಏರುತ್ತಲೇ ಇದ್ದ: ಇವನ ಏರಿಕೆಗೆ ತನ್ನ ಬೆವರಿನ ಜೊತೆ ರಕ್ತ ಸೇರಿಸಿ ದುಡಿದ ಕರಿಲಿಂಗಪ್ಪನನ್ನು ಅಂಗಡಿಯಿಂದ ಹೊರಹಾಕಿದ್ದ ವೀರಪ್ಪನ ಆಸ್ತಿಯನ್ನು ಆಯಕರ (Income Tax) ದವರು ಮುಟ್ಟುಗೋಲು ಹಾಕಿದ್ದರು. ರೋಖ ಹಣ. ಆಭರಣ. ಗಟ್ಟಿಬಂಗಾರ. ಹೀಗೆ ಹಲವು ಹತ್ತು ಮೂಲದ ಆಸ್ತಿಯನ್ನು ಜಪ್ತಿಮಾಡಿ ಬಂಧಿಸಿದ್ದನ್ನು. ಕರಿಲಿಂಗಪ್ಪನ ಮೇಲೆ ಸೇಡುತೀರಿಸಿಕೊಂಡಿದ್ದ; ಕರಿಲಿಂಗಪ್ಪನೇ ಆಯಕರದವರಿಗೆ ಸುಳಿವು ನೀಡಿರಬಹುದೆಂಬ ಸಂಶಯ ವೀರಪ್ಪನಿಗೆ. ಆದರೆ ಪ್ರಾಮಾಣಿಕ ಕರಿಲಿಂಗಪ್ಪನಿಗೆ ಇದೊಂದು ಸಹಿಸದ ಅಪಮಾನ. ಕರಿಲಿಂಗಪ್ಪ ತನ್ನ ಇಡೀ

ಮೂವತ್ತು ವರ್ಷಗಳ ದುಡಿತದಲ್ಲಿ ಗಳಿಸಿದ ಆಸ್ತಿಯೆಂದರೆ ಗುಬ್ಬಿಗೂಡಿನಂಥ ಕಚ್ಚಾ ಮನೆಯೊಂದು. ಹೆಚ್ಚಿಗೆಂದರೆ ಗೂನುಬೆನ್ನು ಮಂದದೃಷ್ಟಿ ಸದಾಕಾಲ ನೆಗಡಿ ಮಾತ್ರ.

ಭಾಗವ್ವ ಕರಿಲಿಂಗಪ್ಪನ ರೋಗಿಷ್ಠ ಹೆಂಡತಿ. ಅವಳ ಆಸ್ಪತ್ರೆಯ ಖರ್ಚಿನಿಂದಾಗಿಯೇ ಕರಿಲಿಂಗಪ್ಪ ಹಣ್ಣಾಗಿದ್ದ. ದೇವಿ ಹಿರಿಯ ಮಗಳಾದರೆ. ಎರಡನೆಯ ಮಗ ಕಾಂತು. ನೀಲಾ ಎಲ್ಲಕ್ಕಿಂತ ಚಿಕ್ಕವಳು. ರೋಗಿಷ್ಠ ಹೆಂಡತಿ. ಒಂದು ಜೋಪಡಿ. ಎರಡು ಹೆಣ್ಣು. ಒಂದು ಗಂಡು ಇವಿಷ್ಟೇ ಕರಿಲಿಂಗಪ್ಪನ ಬದುಕಿನ ಗಳಿಕೆ - ಉಳಿಕೆ. ಕರಿಲಿಂಗಪ್ಪ ವೀರಪ್ಪನ ಅಂಗಡಿಯಿಂದ ಹೊರಬಿದ್ದಾಗ. ಅವರ ಕುಟುಂಬ ಬೀದಿಗೆ ಬಿತ್ತು ! ಕುಟುಂಬದ ಜವಾಬ್ದಾರಿಯೂ ದೇವಿಯ ಮೇಲೆ ಬಿತ್ತು. ಹಾಗಾಗಿ ದೇವಿ ಅಲ್ಲಿಯೇ ಇರುವ ದಾನವಾಡದ ಕಾಡಪ್ಪನ ಯಾಂತ್ರಿಕ ಮಗ್ಗಗಳ ಕಾರ್ಖಾನೆಯಲ್ಲಿ ದುಡಿಯಲು ಹೊರಟಳು. ದೇವಿಯ ದುಡಿತದ ಚೂರುಪಾರು ಗಳಿಕೆಯೇ ಕರಿಲಿಂಗಪ್ಪನ ಮನೆಯ ಆಧಾರ. ಬೆಲೆಯೇರಿಕೆಯ ದಿನದಲ್ಲಿ ಆ ಗಳಿಕೆ ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆಯಾಯಿತಷ್ಟೇ. ದೇವಿ ದುಡಿಯುತ್ತಿದ್ದ ಕಾರ್ಖಾನೆಯಲ್ಲಿಯೇ ಶೇಖರನೆಂಬ ಕಮತಗಿಯ ಯುವಕ ದುಡಿಯುತ್ತಿದ್ದ. ಉಳಿದವರಿಗಿಂತ ಸಂಭಾವಿತನಂತಿದ್ದ. ಆತನಿಗೆ ದೇವಿ ಮನಸ್ಸು ಕೊಟ್ಟಳು. ಮದುವೆಯಾಗಲೂ ಇಚ್ಚಿಸಿದಳು: ಮೈಯೂ ಕೊಟ್ಟಳು. " ತರುಣ ಮನಸ್ಸು ಮಾನಸಿಕ ದಾಹ. ದೈಹಿಕ ಆಕರ್ಷಣೆ. ಸುತ್ತಮುತ್ತಲಿನ ಆಗುಹೋಗುಗಳ ಪ್ರಭಾವ ಎಲ್ಲವುಗಳಿಗೆ ಸೋತು. ದೇವಿ ಮನೆಯವರ. ಗೆಳತಿಯರ. ಕಣ್ಣುತಪ್ಪಿಸಿ ಶೇಖರನ ಸಂಗಸುಖವನ್ನು ಕಂಡವಳಾಗಿದ್ದವಳು; ಆಗ ಆಕೆ ನೀತಿ - ಅನೀತಿ ಎಂಬ ಗೊಡವೆಗೆ ಹೋಗಿರಲಿಲ್ಲ" [೧೦೨] ಆದರೆ. " ಹಣ್ಣನ್ನು ತಿಂದು ಸಿಪ್ಪೆಯನ್ನು ಬೀಸಾಡಿ ಒಗೆದಂತೆ. ಗೋವಿನ ಮುಖದ ಕ್ರೂರಿ ಶೇಖರ. ನಂಬಿದ್ದ ದೇವಿಯನ್ನು ನಡುಬೀದಿಗೆ ತಳ್ಳಿದಂತೆ ಹೊರಟುಹೋಗಿದ್ದ" [೧೦೩] ಆಗ ಮಾತ್ರ ದೇವಿಗೆ ಬದುಕಿನ ಅಂತರಂಗದ ಅರಿವಾಗಿತ್ತು. ಅದಾಗಲೇ ಕಾಲಮಿಂಚಿಹೋಗಿತ್ತು. ಶೇಖರನದಾಗಲೇ ಕೂದಲೆಳೆಯಿಂದ ಗೋಣುಕೊಯ್ದಿದ್ದ. ಉಡಾಪಿಗಳ ಸನ್ನೆ-ಸಿಳ್ಳೆ-ಸಂಕೇತಗಳಿಗೆಲ್ಲ ಜಪ್ಪೆನ್ನದ ದೇವಿ ಶೇಖರನ ದಾಹಕ್ಕೆ ಜಿಂಕೆಯಂತೆ ಬಲಿಯಾಗಿದ್ದಳು. ಈಗ ಮತ್ತೆ ಅನೇಕರ " ನಿಂದೇನ ಬರೋಸ ? ನಾಕ ದಿನಾ ಶೇಕ್ಯಾನಾಂಗ ಮಜಾ ಮಾಡಿ ಕೈ ಬಿಟ್ರೇನ ಗತಿ....? " [೧೦೪] ಎಂಬಂತಹ ಕಿಡಿನುಡಿಗಳಿಗೆ ದೇವಿ ಎದೆಕಲ್ಲುಮಾಡಿಕೊಂಡು ಮೂಕಿಯಾದಂತೆ ಕಿವುಡಿಯಾಗಲೂ ಪ್ರಯತ್ನಿಸುತ್ತಿದ್ದಳು. ಸರಕಾರದ ನೀತಿಯಿಂದಾಗಿ ಕಾರ್ಖಾನೆಯ ಕೆಲಸ ನಿಂತುಹೋದಾಗ ದೇವಿಯ ಒಲೆಯೂ ನಿಂತುಹೋಗುವ ಸೂಚನೆ ಕಂಡಿತ್ತು. ಒಂದೆಡೆ ತಾಯಿಯ ಆಸ್ಪತ್ರೆಯ ಖರ್ಚು. ಕಾಂತೂನ. ನೀಲಾಳ ಓದಿನ ಖರ್ಚು. ತಂದೆಯ ಆರೋಗ್ಯ ಈ ಮಧ್ಯೆ ದೇವಿ ಇಪ್ಪತ್ತರಲ್ಲೂ ಎಪ್ಪತ್ತರಂತೆ ಕಾಣುತ್ತಿದ್ದಳು. ಭಾಗವ್ವ-ಕರಿಲಿಂಗರಿಗೆ ಮನೆಯಖರ್ಚಿನ ಚಿಂತೆ ಒಂದೆಡೆಯಾದರೆ. ಬೆಳೆದು ನಿಂತ ದೇವಿಯ ಮದುವೆಯ ಚಿಂತೆ ಇನ್ನೊಂದೆಡೆಯಲ್ಲಿತ್ತು. ಜಾತಿಯಲ್ಲಿ ಮೇಲ್ವರ್ಗದವನೆನಿಸಿಕೊಂಡ ಕರಿಲಿಂಗಪ್ಪ. ಅಂತಸ್ತಿನಲ್ಲಿ ಅಷ್ಟೇ

---

೧೦೨. ದು. ನಿಂ. ಬೆಳಗಲಿ : ಖೂನೀಜನ. ಪುಟ ೬

೧೦೩. ದು. ನಿಂ. ಬೆಳಗಲಿ : ಖೂನೀಜನ. ಪುಟ ೭

೧೦೪. ದು. ನಿಂ. ಬೆಳಗಲಿ : ಖೂನೀಜನ. ಪುಟ ೭

ಕೆಳದರ್ಜೆಯವನಾಗಿದ್ದ. ಗಂಡುಗಳೇನೋ ಸಾಕಷ್ಟು ಆದರೆ ಮದುವೆಯ ಖರ್ಚು? ಚಿಂತಿಸಿ ಮತ್ತಷ್ಟು ರಕ್ತಸುಟ್ಟುಕೊಳ್ಳುವದೇ ಕರಿಲಿಂಗನ ಪ್ರಯತ್ನವಾಗಿತ್ತು.

ಚಿಮ್ಮಡದ ರತ್ನಿ. ಕರಿಲಿಂಗಪ್ಪನ ಪಕ್ಕದ ಗುಡಿಸಲಿನವಳು. ರತ್ನಿಯ ಗಂಡ ಒಂದು ಚಕ್ಕಡಿಯನ್ನಿಟ್ಟು ಬಾಡಿಗೆಯ ಸಾರಿಗೆ ಮಾಡುವವ. ರತ್ನಿಯೇ ಮನೆಯ ಯಜಮಾನತಿ. ಇವ ಹೆಸರಿಗೊಬ್ಬ ಗಂಡನಾಗಿದ್ದ. ಹಾಗಾಗಿ 'ರತ್ನಿಯ ಮನೆ' ಎಂದು ಕರೆಯುತ್ತಿದ್ದಂತೆ ಆತನಿಗೆ 'ರತ್ನಿಯ ಗಂಡ' ನೆಂದೇ ಜನ ಕರೆಯುತ್ತಿದ್ದರು. ಅವಳ ಖ್ಯಾತಿಗೆ ಇನ್ನೂ ಅನೇಕ 'ಅಂತೆ-ಕಂತೆ'ಗಳ ಪುರಾಣದ ಗರಿಗಳಿವೆ. ಇಂಥ 'ತಲೆಹಿಡುಕ ರತ್ನಿ' ದೇವಿಗಾಗಿ ಮುಂಬೈ ವರವೊಂದನ್ನು ಹುಡುಕಿ ತಂದಿದ್ದಳು. ಅವನ ಹೆಸರು ಕುಮಾರ. ತನ್ನ ದೂರದ ಸಂಬಂಧಿಯೆಂದೂ. ಪಿ.ಯು.ಸಿ. ಕಲಿತವನೆಂದೂ. ಖಾಸಗಿ ಸಾರಿಗೆ ಸಂಸ್ಥೆಯಲ್ಲಿ ಕಾರ್ಕೂನನೆಂದೂ. ಹೀಗೆ ಅನೇಕಾನೇಕ 'ಎಂದೂ....' ಗಳನ್ನು ಕರಿಲಿಂಗ-ಭಾಗವ್ವನ ಕಿವಿಯಲ್ಲಿ ತುಂಬಿ ಅವರನ್ನು ಒಪ್ಪಿಸಿಯೇ ಬಿಟ್ಟಿದ್ದಳು; ಅವಳ ಕೆಲಸ ಹಣ್ಣಾಗಿತ್ತು. ಮರುವಾರವೇ ಮುಂಬೈ ವರ ಪ್ರತ್ಯಕ್ಷನಾಗಿದ್ದ. ಕಂಡವರೆಲ್ಲ ದಂಗಾಗಿ ಹೋಗಿದ್ದರು. "ಆತನ ಬೆಲ್‌ಬಾಟಂ ಪ್ಯಾಂಟ್. ಬಣ್ಣದ ಶೂಜು. ವರ್ಣಮಯ ವಿಚಿತ್ರ ಶರ್ಟು. ಹಿಪ್ಪಿ ಕೂದಲು. ಕಿರುಮೀಸೆ. ಕಾಡಿಗೆ ಕಣ್ಣು ಇವುಗಳನ್ನೆಲ್ಲ ಕಾಣುತ್ತಲಿದ್ದವರು. ಆತನಿಂದ ಹರಿದು ಬರುತ್ತಲಿದ್ದ ಉಗ್ರ ಪರಿಮಳವನ್ನು ಮೂಸದೇ ಇರಲಿಲ್ಲ. ಇಂಥ ಶೋಕಿಲಾಲನನ್ನು ಕಂಡು ಅನೇಕ ಅವಿವಾಹಿತ ತರುಣಿಯರು. ದೇವಿ ನಸೀಬ ಚಲೂ ಐತಿ...." [೧೦೫] ಎಂದುದಲ್ಲದೆ. "ರತ್ನಿ ದೇವಿನs ಅಂವ್ಗ ಯಾಕ ಗಂಟ ಹಾಕ್ತಾಳೋ. ನಮ್ಗೂ ಕೇಳಿದ್ರ ಹ್ಞಂ ಅಂತಿದ್ದೀವಲ್ಲ" [೧೦೬] ಎಂದು ಮೂಗು ಮುರಿದು ತಮ್ಮ ಸಂತಾಪವನ್ನು ತೋಡಿಕೊಳ್ಳುತ್ತಿದ್ದರು. ಅನೇಕ ಯುವಕರು ಇವನನ್ನು ಕಂಡು ದಂಗಾಗಿ. 'ಕುರ್ಬಾನಿಯಲ್ಲಿ ಇಂವ್ನ ನೋಡೇನಿ....' ಎಂದು ಅವನ ಶೋಕಿಯನ್ನು ಮುಕ್ತಕಂಠದಿಂದ ಹೊಗಳುತ್ತ ಶೋಕಿಲಾಲನನ್ನು ಹೀರೋಲಾಲನನ್ನಾಗಿ ಮಾಡಿದ್ದರು. ಆದರೆ ದೇವಿಗೆ ಇದಾವುದೂ ಇಷ್ಟವಾಗಿರಲಿಲ್ಲ. ವರದಕ್ಷಿಣೆಯಿಲ್ಲದೆ. ಬಂಗಾರ. ಬಟ್ಟೆಗಳ ತಾಕಲಾಟವು ಇಲ್ಲದ. ಮದುವೆಯ ವೆಚ್ಚವನ್ನು ತಾನೇ ಭರಿಸುವ ಭರವಸೆಯನ್ನಿತ್ತಾಗ ಕರಿಲಿಂಗ-ಭಾಗವ್ವರಿಗೆ ಮಗಳ ನಿರಾಕರಣೆಯೂ ಕಣ್ಣಿಗೆ ಕಾಣಲಿಲ್ಲ: ಕಿವಿಗೂ ಕೇಳಲಿಲ್ಲ. ಪ್ರತಿಫಲವಾಗಿ ದೇವಿ ನೈಲಾನ್ ಸೀರೆಯನ್ನು ಅದೂ ಜೀವನದಲ್ಲಿ ಮೊದಲಬಾರಿಗೆ ಅಷ್ಟು ಬೆಲೆಯುಳ್ಳ ಸೀರೆ. ಹಣೆಗೆ ಕುಂಕುಮವಿಟ್ಟು ನಿಶ್ಚಿತಾರ್ಥ ಮುಗಿಸಿಕೊಂಡು ಕುಮಾರನ ಭಾವೀಪತ್ನಿಯಾದಳು; ಸ್ವಲ್ಪ ದಿನಗಳಲ್ಲಿಯೇ ಆಸಂಗಿ ಹೊಳೆದಂಡೆಯ ಮೇಲೆ ಅವಸರವಸರವಾಗಿ ಮದುವೆಯನ್ನೂ ಆದಳು. ಅವಸರದಲ್ಲಿಯೇ ರತ್ನಿ ಮನೆಯನ್ನೂ ತುಂಬಿಸಿಕೊಂಡಳು. ಎಲ್ಲವೂ ಅವಸರಮಯವಾಗಿತ್ತು. ಯಾಕೆಂದರೆ. ಮುಂಬೈ ಬದುಕೇ ಅಲ್ಲ. ಮುಂಬೈ 'ದಂಧೆ'ಯೇ ಅವಸರಮಯವಾದುದು. ಅವಸರದಲ್ಲಿ ಕುಮಾರನ ಪತ್ನಿಯಾದ ದೇವಿ ಅವಸರದಲ್ಲಿಯೇ ಗಂಡನಮನೆಗೆ ಹೊರಟುನಿಂತಾಗ ಸಹಜವಾಗಿಯೇ ಕರಿಲಿಂಗಪ್ಪ - ಭಾಗವ್ವರಿಗೆ ಕಣ್ಣುತುಂಬಿ ಬಂದಿದ್ದವು. ತಂಗಿ - ತಮ್ಮಂದಿರಿಗೆ

---

೧೦೫. ದು. ನಿಂ. ಬೆಳಗಲಿ : ಖೂನೀಜನ. ಪುಟ ೧೩

೧೦೬. ದು. ನಿಂ. ಬೆಳಗಲಿ : ಖೂನೀಜನ. ಪುಟ ೧೩

ಇದೆಲ್ಲವೂ ಒಂದು ಮೋಜಿನಂತೆ ಕಂಡಿತು. ಪುಣೆ ಬಸ್ಸು ದೇವಿಯನ್ನು ಬಳಗದಿಂದ ಅಗಲಿಸಿತು; ಮುಂಬೈದಾರಿ ಹಿಡಿಸಿತ್ತು. ಒಲ್ಲದ ಗಂಡನೊಂದಿಗೆ ಮುದ್ದೆಯಾಗಿ ಕುಳಿತ ದೇವಿ ಮುಂಬೈ ಸೇರುವುದರಲ್ಲಿಯೇ ರಾತ್ರಿಯಾಗಿತ್ತು.

ಹೊಲಸು ಕೋಣೆಯೊಂದರಲ್ಲಿ ರಾತ್ರಿಗಳೆದ ದೇವಿ ಬೆಳಗಿನಲ್ಲಿ ಪಕ್ಕದಲ್ಲಿ ಗಂಡನಿಲ್ಲದುದನ್ನು ಕಂಡು ಹೌಹಾರಿದಳು. ಮುಂದೆ ಎದುರಿಗೆ ನಿಂತ ಧಡೂತಿ ಹೆಣ್ಣೊಬ್ಬಳನ್ನು ತನ್ನ ಅತ್ತೆಯೆಂದೇ ಭ್ರಮಿಸಿದ ದೇವಿಗೆ ತಾನಾಗಲೇ 'ಖೆಡ್ಡ'ದಲ್ಲಿ ಬಿದ್ದ ಬಗ್ಗೆ ಅರಿವಿರಲಿಲ್ಲ. ಜಾನಕಿಬಾಯಿ ಮುಂಬೈ ಕೆಂಪುದೀಪದ ದೊಡ್ಡ ಘರವಾಲಿ. ಅವಳು ಕುಮಾರನಿಂದ ಈ ದೇವಿಯನ್ನು ಹಣತೆತ್ತು ಕೊಂಡುಕೊಂಡಿದ್ದಳು. ಖರೀದಿ ಮಾಡಿದವಳ ಮುಂದೆ ದೇವಿಯ ಹಾರಾಟ-ಚೀರಾಟಗಳೆಲ್ಲ ವ್ಯರ್ಥವಾಗಿ ಭೋರ್ಗಲ್ಲ ಮೇಲೆ ನೀರು ಹೊಯ್ದಂತಾಗಿತ್ತು. ಒಂದು ವಾರದಲ್ಲಿ ದೇವಿ ಹಣ್ಣಾಗಿ ಹೋಗಿದ್ದಳು. ಪ್ರತಿದಿನ ಏನಿಲ್ಲವೆಂದರೂ ಏಳೆಂಟು ಜನರ ಸರದಿ ಇದ್ದೇ ಇರುತ್ತಿತ್ತು. ಹೊಸಗಿರಾಕಿಯೆಂದ ಮೇಲೆ ಆ ಸಂಖ್ಯೆ ಇನ್ನು ಹೆಚ್ಚಾಗುತ್ತಲೂ ಇತ್ತು. "ಹೊರಗಿನ ಗಲಾಟೆ. ಕುಡುಕರ ಕೂಗಾಟ. ಕಾವಲಿನವನ ಚೀರಾಟಗಳಿಗೆ ಆಕೆ ಕಿವುಡಿಯಾಗಿದ್ದರೂ. ದೇವಿಯ ನೀಳ್ಗಣ್ಣೆದುರು ತಂದೆ-ತಾಯಿ-ತಮ್ಮ-ತಂಗಿ-ಮನೆ-ಊರು-ಕಾರ್ಖಾನೆ-ಗೆಳತಿಯರು ಎಲ್ಲ ಚಿತ್ರಗಳು ಸುಳಿದು ಹೋಗಿದ್ದವು. ಶೇಖರ. ರತ್ನಿ. ಕುಮಾರ. ಜಾನಕಿಬಾಯಿ. ಇವರೆಲ್ಲ ಆಕೆಯ ಕತ್ತು ಒಸುಕಿದಂತೆ ಖೂನೀಗಳಾದಂತೆಯೂ ಹಳವಂಡ ಕಾಣುತ್ತಲಿದ್ದಳು" [೧೦೭] ಹೊಟ್ಟೆಯಲ್ಲಿ ಎಂಥದೋ ವಿಚಿತ್ರ ನೋವು! ಸಂಕಟ!! ತಳಮಳ!!! ಅದಾಗಲೇ ಏಳೆಂಟು ದಾಳಿಯಿಂದ ತತ್ತರಿಸಿ ಹೋದ ದೇವಿಯ ಎದುರಿಗೆ ಸಿಖ್ಖರ ಲಾಲಾ ಅಜಾನುಬಾಹು ಆಕಾಶದೆತ್ತರದ ವ್ಯಕ್ತಿ ನಿಂತಿದ್ದ. ಕಾಮಪಿಪಾಸುವಾದ ಆತ ಕಾಲ್ಚೆಂಡಿನಂತೆ ಉಪಯೋಗಿಸಿದ! ಹಿಂಡಿ ಹಿಂಡಿ ಹಿಪ್ಪಿ ಮಾಡಿದ್ದ. ಸಾವಕಾಶವಾಗಿ ದೇವಿಯ ಉಸಿರಾಟ ನಿಂತುದನ್ನು ಗಮನಿಸಿದ ಆ ರಾಕ್ಷಸ ನೋಟಿನ ಕಟ್ಟೊಂದನ್ನು ಎಸೆಯುತ್ತ. "ಓ ಜಾನಕಿಬಾಯ್. ಜಾನಕಿಬಾಯ್. ಕ್ಯಾ ವಹ ಲಡ್ಕೀ ಹೈ ಯಾ ಲಾಶ್ ದೇಖೋ ಜರಾ...." [೧೦೮] ಎಂದೆನ್ನುತ್ತ ಅಲ್ಲಿಂದ ಓಡಿಹೋಗಿದ್ದ. ದೇವಿ ಈ ಜಗತ್ತನ್ನೇ ಬಿಟ್ಟು ಶಾಶ್ವತಲೋಕಕ್ಕೆ ಹೋಗಿದ್ದಳೆಂಬ ಸಾಂಕೇತಿಕತೆಯಿಂದ 'ಖೂನೀಜನ' ಕೊನೆಗೊಳ್ಳುತ್ತದೆ.

ಪ್ರಸ್ತುತ ಕೃತಿಗೆ ದೇವಿಯೇ ಕಥಾನಾಯಕಿ. ಆರಂಭದಲ್ಲಿ ಚಳಿಗೆ ನಡುಗುತ್ತ ತನ್ನ ಬದುಕಿನ ಚಿತ್ರಗಳನ್ನು ಬಿಚ್ಚಿಕೊಳ್ಳುತ್ತ ಹೋಗುವ ಈ ಕೃತಿ ಅರ್ಧಭಾಗದವರೆಗೆ ಬರೀ ಸ್ಮರಣತಂತ್ರದಲ್ಲಿಯೇ ಸಾಗುತ್ತದೆ. ಬನಹಟ್ಟಿ. ಮಹಾಲಿಂಗಪುರ. ರಬಕವಿ. ಜಮಖಂಡಿ. ಈ ಭಾಗದಲ್ಲಿ ಸಹಜವಾಗಿಯೇ ಇಂಥ ಅನೇಕ ಘಟನೆಗಳು ವಾಸ್ತವದಲ್ಲಿಯೇ ನಡೆದು ಹೋಗಿವೆಯೆಂಬುದಕ್ಕೆ ಸಾಕಷ್ಟು ಜೀವಂತ ಉದಾಹರಣೆಗಳಿವೆ. ಅಲ್ಲಿನ ಮಧ್ಯಮವರ್ಗದ ಜನರ ಬದುಕನ್ನು ಬಹುಸಮೀಪದಿಂದ ನೋಡಿರುವ ಬೆಳಗಲಿಯವರಿಗೆ ಕುಮಾರನಂಥ ಅನೇಕ

---

೧೦೭. ದು. ನಿಂ. ಬೆಳಗಲಿ : ಖೂನೀಜನ. ಪುಟ ೨೦

೧೦೮. ದು. ನಿಂ. ಬೆಳಗಲಿ : ಖೂನೀಜನ. ಪುಟ ೨೦

ಏಜೆಂಟರು ಕಂಡಿದ್ದು ಸಹಜ. ಕುತಂತ್ರದಿಂದ ಅಸಾಯಕ ಕುಟುಂಬದ ಮುಗ್ಧ ಹೆಣ್ಣೊಂದನ್ನು ಮದುವೆಯಾಗಿಯೂ ಅವಳನ್ನು ಮುಂಬೈಗೆ ಕರೆದೊಯ್ದು ಮಾರಿದ್ದು ವಿಚಿತ್ರವಾದರೂ ಸತ್ಯ. ಆಘಾತಕಾರಿ ಕೂಡ. ಇದಕ್ಕಿಂತ ಆಘಾತಕಾರಿಯೆಂದರೆ. ಪಶುಗಳಂತೆ ದಾಳಿಮಾಡುತ್ತ ಹೋದ ಕಾಮುಕರ ಕೈಯಲ್ಲಿ ಮುದ್ದೆಯಾಗಿ-ಒದ್ದೆಯಾಗಿ ವೇಶ್ಯಾಜೀವನದಲ್ಲಿ ಬಿದ್ದು-ಸುಟ್ಟು ಕರಕಾಗಿ ಹೋದ ದೇವಿಯ ದುರ್ದೈವದ ಬದುಕು. ಗಂಡಿನ ಕ್ರೌರ್ಯ. ವಂಚನೆ. ಪಾಶವೀಕೃತ್ಯಗಳಿಗೆ ಪ್ರಸ್ತುತ ಕೃತಿ ಜೀವಂತ ಸಾಕ್ಷಿಯಾಗಿದೆ. ಕೊನೆಯ ಚಿತ್ರವಂತೂ ಕಣ್ಣಿಗೆ ಕಟ್ಟಿದಂತಿದೆ. ಸಮಾಜಕ್ಕೆ ಶಾಪವಾದ ವೇಶ್ಯಾವಾಟಿಕೆ. ಅದಕ್ಕೆ ಬಲಿಯಾಗುವ ಮುಗ್ಧ ಕನ್ಯೆಯೊಬ್ಬಳ ಬದುಕನ್ನು ಚಿತ್ರಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ದುರಂತ ವಸ್ತುವೊಂದನ್ನು ಚಿತ್ರಿಸುವ ದುರಂತ ಬದುಕಿನ ದುರಂತ ಕೃತಿ ಇದಾಗಿದೆ.

ಪ್ರಸ್ತುತ 'ಖೂನೀಜನ' ಯಾವ ಮಾಪನಗಳಿಂದ ಅಳೆದರೂ ಅದು ಕಾದಂಬರಿಯ ಮಟ್ಟಕ್ಕೇರದೆ. ಒಂದು ನೀಳ್ಗತೆಯಾಗಿಯೇ ಉಳಿಯುತ್ತದೆ. ನೇರ ನಿರೂಪಣೆಯಲ್ಲಿಯೇ ಕಥೆಮುಗಿದು ಹೋಗುತ್ತದೆ. ಸಹಜ ಕಥನ ಶೈಲಿಯಿಂದೊಡಗೂಡಿದ ಇದು. ಕಲಾತ್ಮಕತೆಯ ಕೊರತೆಯಿಂದಾಗಿ ಸೊರಗಿದಂತೆ ಕಾಣುತ್ತದೆ. ಏಕಮುಖದ ವಿವರಣೆಯಲ್ಲಿಯೇ ಕೃತಿ ಅಂತ್ಯಗೊಳ್ಳುತ್ತದೆ. 'ದೇವದಾಸಿ'ಯಂಥ ಉತ್ತಮ ಕಾದಂಬರಿಯನ್ನು ಬರೆದ ಬೆಳಗಲಿಯವರು. ವೇಶ್ಯಾಜೀವನವನ್ನು ಕುರಿತು ಬರೆದ ಒಂದು ಸಾಮಾನ್ಯ ಕಥೆಯಂತೆ ಇದು ಕಾಣುತ್ತದೆಯಲ್ಲದೆ. ಗಾತ್ರ-ಪಾತ್ರ-ಕಥೆಯಹರವೂ ಸಂಭಾಷಣೆ. ಶೈಲಿ-ತಂತ್ರಗಳಾವುವೂ 'ಖೂನೀಜನ'ದಲ್ಲಿ ಕಾಣದೆ. ಇದೊಂದು ಕಾದಂಬರಿಯೆಂದು ನಿರ್ಧರಿಸಲಾಗದೆ. ಒಂದು ಉತ್ತಮ ಕಥೆಯಾಗಿ ಯಶಸ್ಸು ಕಾಣುತ್ತದೆ. ಕೇವಲ ಗಾತ್ರದ ಹೆಚ್ಚಳತೆಗಾಗಿ 'ರಣಹದ್ದುಗಳ' ಜೊತೆಯಲ್ಲಿ ಪ್ರಕಟವಾಗಿ 'ಜೋಡಿಕಾದಂಬರಿ' ಎಂದೆನಿಸಿಕೊಂಡರೂ. ಅವೆರಡೂ ಪ್ರತ್ಯೇಕವಾದ ಎರಡು ನೀಳ್ಗತೆಗಳಂತಿವೆ. ರಣಹದ್ದುಗಳಲ್ಲಿನ ವಸ್ತು ಅಲ್ಪಸ್ವಲ್ಪದರಲ್ಲಿ ತನ್ನ ಹರಹನ್ನು ಹೆಚ್ಚಿಸಿಕೊಂಡೋ. ಬದುಕಿನ ಸಮಾಜದ ಅನೇಕ ಸಂಕೀರ್ಣಗಳನ್ನು ಬಿಚ್ಚಿಡುವುದರಿಂದಲೋ ಅದನ್ನು ಮಿಡಿ ಕಾದಂಬರಿಯೆಂದೋ ಮಿನಿಕಾದಂಬರಿಯೆಂದೋ ಕರೆಯಬಹುದೆನಿಸಿದರೂ. 'ಖೂನೀಜನ' ಮಾತ್ರ ಆ ಮಟ್ಟಕ್ಕೂ ಏರದೆ. ಕೇವಲ ಕಥೆಯಾಗಿಯೇ ನಿಲ್ಲುತ್ತದೆ. ಆದರೆ ಅವೆರಡಕ್ಕೂ ವಾಸ್ತವದ ನೆಲೆಯೇ ಆಧಾರವಾಗಿದೆ. ಪ್ರಸ್ತುತ ಕಾದಂಬರಿಯ 'ತಲೆಬರಹವೇ' ಸೂಚಿಸುವಂತೆ ಇವು ಶೋಷಣೆಯನ್ನು ಪ್ರತಿಬಿಂಬಿಸುವ ಕೃತಿ. ಇವೆರಡೂ ಸೋದ್ದಿಶ್ಯ ಕಾದಂಬರಿಗಳು (Novels of Purpose) ಇವುಗಳ ಸ್ವರೂಪ ಶೋಧನಾತ್ಮಕವಾಗಿದೆ. ನಿರ್ದಿಷ್ಟ ಪ್ರಣಾಳಿಕೆಗೆ ಬದ್ಧವಾದ ಕಾದಂಬರಿಗಳು.

## ಸಾಮಾಜಿಕ-ಪತ್ತೇದಾರಿ ಕಾದಂಬರಿಗಳು

'ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಸಾಪ್ತಾಹಿಕ ಸೌರಭ'ದಲ್ಲಿ ಧಾರಾವಾಹಿಯಾಗಿ ಸಾಕಷ್ಟು ಜನಮೆಚ್ಚುಗೆ ಪಡೆದ ಬೆಳಗಲಿಯವರ 'ಚಂಬಲ್ ಕಣಿವೆಯಲ್ಲಿ' ಒಂದು ಉತ್ತಮ ಕಾದಂಬರಿ. ಕಾದಂಬರಿಯ ಶೀರ್ಷಿಕೆಯ ಜಾಡನ್ನು ಹಿಡಿದು ಹೋದರೆ. ಇದೊಂದು ಪತ್ತೇದಾರಿ (Detective novel) ಕಾದಂಬರಿಯೆಂದು

ಅವಸರ ನಿರ್ಣಯ ಕೈಗೊಳ್ಳುವುದುಂಟು. ಆದರೆ ವಸ್ತುತಃ ಇದು ಭಿನ್ನವಾಗಿದೆ. ಕಥಾನಿರೂಪಕರಾದ ಲೇಖಕರು ಇಲ್ಲಿ ಯಾವುದೇ ರೀತಿಯ ಪತ್ತೇದಾರಿ ಕೆಲಸ ಮಾಡದೆ. ದರೋಡೆಕೋರರ ಗುಂಪಿನಲ್ಲಿ ತಾವೂ ಒಬ್ಬರಾಗಿ ಅವರ ಪ್ರೀತಿ-ವಿಶ್ವಾಸ ಗಳಿಸಿ. ಅವರೊಂದಿಗಿದ್ದುಕೊಂಡೇ. ಅವರ ಬದುಕು-ಬವಣೆ. ಲೂಟಿ. ಅದನ್ನು ಬಡಬಗ್ಗರಿಗೆ ಹಂಚುವ ರೀತಿ. ಹೆಣ್ಣುಮಕ್ಕಳಿಗೆ ಅವರಲ್ಲಿದ್ದ ಗೌರವದ ಭಾವನೆಗಳು ಸಾಮಾಜಿಕ ಸಮಾನತೆಗಾಗಿ ಅನಿವಾರ್ಯವಾಗಿ ಹೋರಾಟದ ಮಾರ್ಗಹಿಡಿದ ಬಗ್ಗೆ. ಅವರ ಮಾನಸಿಕ ತುಮುಲಗಳನ್ನು ಅವರು ಡಕಾಯಿತರಾಗಲು 'ಸಾಮಾಜಿಕ ನೆಲೆ-ಬೆಲೆ. ನೀತಿ-ನಿಯಮಗಳನ್ನು ಹೇಳುವುದರಿಂದ. ಢಕಾಯಿತರ ಪೂರ್ವಬದುಕಿನ ಕರ್ಮಕಾಂಡವನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಹಾಗಾಗಿ ಇದೊಂದು ಕುತೂಹಲಕಾರಿ ಕಾದಂಬರಿಯಾಗಿದ್ದು ಓದುಗರ ಕುತೂಹಲ ಆರಂಭದಿಂದಲೂ-ಅಂತ್ಯದವರೆಗೆ ಎಲ್ಲೂ ನಿಲ್ಲುವುದಿಲ್ಲ. ಡಕಾಯಿತರ ಬದುಕಿನ ಪತ್ತೇದಾರಿ ನಡೆಸಿದುದರಿಂದ ಇದನ್ನು 'ಸಾಮಾಜಿಕ ಪತ್ತೇದಾರಿ' ಕಾದಂಬರಿಯೆಂದು ತಾತ್ಕಾಲಿಕ ಪರಿಗಣನೆ ಮಾಡಬಹುದಷ್ಟೇ.

**ಚಂಬಲ್ ಕಣಿವೆಯಲ್ಲಿ (೧೯೬೯) :**

"ಉತ್ತರ ಭಾರತದ ಚಂಬಲ್ ನದಿ ಕಣಿವೆಯ ಆಸು-ಪಾಸಿನಲ್ಲಿ ಹಿಂದೆ ಆಗಿಹೋದ. ಇಂದು ಜೀವಂತವಾಗಿರುವ ಮುಂದೆಯೂ ಹುಟ್ಟಿಕೊಳ್ಳಬಹುದಾದ ಡಕಾಯಿತ ಪೂರ್ವಾರ್ಧದ ಬದುಕು. ಇಲ್ಲಿಯ ನಾಯಕ ಮಂಗಲಸಿಂಗ್ ಮತ್ತು ಆತನ ಅನುಯಾಯಿಗಿಂತ ಬೇರೆ ಇಲ್ಲ. ನ್ಯಾಯ ಕೈಚೆಲ್ಲಿಕೊಂಡು ಕೂತಾಗ 'ಮಂಗಲಸಿಂಗ್' ಹುಟ್ಟಿಕೊಳ್ಳುವುದು ಅನಿವಾರ್ಯ"[೧೯] ಎಂದೆನ್ನುವಂತೆ ಈ ಕಾದಂಬರಿಗೆ 'ಸಾಮಾಜಿಕ ನ್ಯಾಯ' ವೇ ಕಥಾಬೀಜ. ಅದುವೇ ಕಾದಂಬರಿಯ ಆಕರ. ಸಿಂಧೂರಲಕ್ಷ್ಮಣನ ಜೀವನ-ಹೋರಾಟ ಹಾಗೂ ಆತನ ದರೋಡೆವೃತ್ತಿಗಿಂತ ದೀನದಲಿತರಿಗೆ ನೆರವಾದ ಪ್ರವೃತ್ತಿ ಕೂಡ ಕಾದಂಬರಿಯ ರಚನೆಗೆ ಪ್ರೇರಣೆ.

ರಾಜಸ್ಥಾನದ ಭರತಪುರ ಜಿಲ್ಲೆಯ ಒಂದು ಕಾಡುಹಳ್ಳಿಯೇ ಮಂಗಲಸಿಂಗ್‌ನ ಹುಟ್ಟೂರು. ತಂದೆ ಕೇಸರಸಿಂಗ್ ಮಧ್ಯಮವರ್ಗದ ಕೃಷಿಕ. ಹೊಟ್ಟೆ-ಬಟ್ಟೆಗೆ ಸಾಲುವಷ್ಟು ಉತ್ಪನ್ನ; ಮಂಗಲಸಿಂಗ್‌ನೇ ಹಿರಿಯ ಮಗ. ನಂತರದಲ್ಲಿ ಎರಡು ಹೆಣ್ಣುಮಕ್ಕಳು. ಹಿರಿಯಳಾದ ಪುತಲಿಯ ವಿವಾಹ ನಿಶ್ಚಯವಾಗಿದ್ದು, ಕೊನೆಯವಳು ಇನ್ನು ಚಿಕ್ಕವಳು. ಕೇಸರಸಿಂಗ್ ಒಳ್ಳೆಯ ಮನುಷ್ಯ ಪ್ರಾಮಾಣಿಕ ಬಡವರ ಕಷ್ಟ-ಸುಖಗಳಲ್ಲಿ ಸಹಭಾಗಿಯಾಗುತ್ತಿದ್ದ. ಗ್ರಾಮಸ್ಥರು ಅವನಿಗೆ ತುಂಬ ಬೆಲೆ ಕೊಡುತ್ತಿದ್ದರು. ಹೀಗಾಗಿ ಕೇಸರಸಿಂಗ್ ಎಷ್ಟೋ ವರ್ಷಗಳವರೆಗೆ ಪಂಚಾಯತಿ ಸರಪಂಚನಾಗಿ ಅವಿರೋಧವಾಗಿ ಆಯ್ಕೆಯಾಗುತ್ತಿದ್ದ. ಸದಾಕಾಲ ಗ್ರಾಮಸುಧಾರಣೆಯನ್ನೇ ಚಿಂತಿಸುವುದರಿಂದ ಗ್ರಾಮದಲ್ಲಿ ಶಾಂತಿ ನೆಲಸಿದ್ದು. ತಂಟೆ-ತಕರಾರುಗಳು ಪಂಚಾಯತಿ ಗಡಿ ದಾಟಿ ನ್ಯಾಯಾಲಯದ ಕಟ್ಟೆಯನ್ನು ಏರುತ್ತಿರುಲಿಲ್ಲ. ಅದೇ ಊರಿನ ಸಾಹುಕಾರ ಕಿಸನ್‌ಲಾಲ

---

೧೯ ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ : ಪ್ರಸ್ತಾವನೆ. ಪುಟ VII

ಬಡ್ಡಿಯಿಂದ ಸಾಲಕೊಡುವವ. ಆತನ ಬಡ್ಡಿವ್ಯವಹಾರ ಸುತ್ತ ಹತ್ತೂರಿಗೆ ಪರಿಚಯವಾಗಿತ್ತು. ಹಣದ ತೊಂದರೆಯಿದ್ದವರು ಅನಿವಾರ್ಯವಾಗಿ ಕಿಸನ್‌ಲಾಲನ ಮನೆ ಮುಂದೆ ಕೈಯೊಡ್ಡಿ ನಿಲ್ಲಲೇಬೇಕಾಗಿತ್ತು. ಒಂದಕ್ಕೆ ಹತ್ತರಷ್ಟು ಸುಲಿಯುವ ಈತನ ದಂಧೆ ಕೇಸರಸಿಂಗನಿಗೆ ಸರಿಬರದಿದ್ದರೂ ಆ ತಂಟೆಗೆ ಹೋಗಿರಲಿಲ್ಲ. ಅನೇಕ ಸಲ ಬಡವರ ಸಾಲವನ್ನು ಕೇಸರಸಿಂಗ್‌ನೇ ತೀರಿಸಿದ್ದುಂಟು. ಕೇಸರಸಿಂಗ್‌ನ ಈ ಹೃದಯವೈಶಾಲ್ಯತೆ ಕಿಸನ್‌ಲಾಲನಿಗೆ ಮುಳ್ಳಿನಂತೆ ಚುಚ್ಚಿತು. ಸಾವಕಾಶವಾಗಿ ಕಿಶನ್‌ಲಾಲ ಕೇಸರಸಿಂಗ್‌ನೊಡನೆ ವೈರತ್ವ ಕಟ್ಟಿಕೊಳ್ಳಲು ಪ್ರಾರಂಭಿಸಿದ. ಹಣದ ಹೊಳೆಯನ್ನೇ ಹರಿಸಿ. ಸರಪಂಚನಾದುದಲ್ಲದೆ. ಕೇಸರಸಿಂಗ್‌ನ ಮನೆ ಲೂಟಿ ಮಾಡಿಸಿ. ಹಣ-ಆಭರಣಗಳನ್ನು ಕಳ್ಳತನ ಮಾಡಿಸಿದ ಪೋಲಿಸರ ಕೈಬೆಚ್ಚಗೆ ಮಾಡಿ ಕೇಸನ್ನೂ ಮುಚ್ಚಿಸಿ ಹಾಕಿದ. ಪರಸ್ಪರ ಎರಡೂ ಮನೆತನಗಳ ವೈಷಮ್ಯ 'ಸೂಜಿ ಹೋಗಿ ಕೊಡಲಿಯಾಗಿತ್ತು'.

ತಂದೆಯ ಮಾತುಗಳಿಗೆ ಗೋಣುಹಾಕುತ್ತಿದ್ದ ಮಂಗಲ್ ದ್ವೇಷವನ್ನೆಲ್ಲ ಗಂಟಲಲ್ಲಿಯೇ ಕಟ್ಟಿಟ್ಟುಕೊಂಡಿದ್ದ. ಸಂದರ್ಭಕ್ಕಾಗಿ ಕಾಯುತ್ತಿದ್ದ. ಸಾಲದೆಂಬಂತೆ ಕಿಶನ್‌ಲಾಲ ಸಾಧ್ವಿಯಾದ ಮಂಗಲನ ತಾಯಿಯನ್ನು ಅವಾಚ್ಯವಾಗಿ ಬೈಯ್ದು. ಮಂಗಲನನ್ನು ಗೂಂಡಾಗಳಿಂದ ಮೈಮುರಿಯೇ ಬಡಿಸಿದ. ಈಗ ಮಾತ್ರ ಮಂಗಲಸಿಂಗ್‌ನಿಗೆ ತಡೆಯಲಾಗಲಿಲ್ಲ. ಮನೆಯಲ್ಲಿದ್ದ ಕೋವಿ ಹಿಡಿದು ನೇರ ಕಿಸನಲಾಲನ ಎದೆಸೀಳಿ ಪರಾರಿಯಾದ. ಈ ಮಧ್ಯೆ ಕೇಸರಸಿಂಗ್ ತಂಗಿ-ತಾಯಿಯರನ್ನು ಅರೆಸ್ಟಮಾಡಿಸಿದ ಕಿಸನಲಾಲನ ಮಕ್ಕಳು ಪೋಲಿಸರಿಗೆ ತಮ್ಮ ಭಂಡಾರವನ್ನೇ ಸುರುವಿದರು. ರುಚಿಕಂಡ ಪೋಲಿಸರು ಸಾಕಷ್ಟು ಚಿತ್ರಹಿಂಸೆ ನೀಡಿದ್ದಲ್ಲದೆ. ತಂಗಿ ಪುತಲಿಯನ್ನು ಕಾನೂನು ರಕ್ಷಕ ಪೋಲಿಸ ಅಧಿಕಾರಿ ಠಾಣೆಯಲ್ಲಿಯೇ ಮಾನಭಂಗ ಮಾಡಿದ ಅಪಮಾನ ತಡೆಯಲಾರದೆ ಆ ಸುಂದರಿ ಆತ್ಮಹತ್ಯೆ ಮಾಡಿಕೊಂಡಳು. ಸಹಜ ಭೇಟಿಗೆಂದು ಮನೆಗೆ ಹೋದ ಮಂಗಲಸಿಂಗ್‌ನಿಗೆ ತಂಗಿಯ ಶವ ಸ್ವಾಗತಕೋರಿತು. ಆ ವೇಳೆಯಲ್ಲಿ ಮಂಗಲಸಿಂಗ್ ರುದ್ರನಾಗಿದ್ದ. ಜ್ವಾಲಾಮುಖಿಯಾಗಿದ್ದ. ತಂಗಿಯ ಶವದ ಕಾಲಹತ್ತಿರ ನಿಂತು ಹೆಬ್ಬೆರಳನ್ನು ಕೊರೆದುಕೊಂಡು ಸೋರುವ ರಕ್ತವನ್ನು ತಂಗಿಗೆ ತಿಲಕವಾಗಿಟ್ಟು ಶಪಥಗೈದು. ಹೊರಬಿದ್ದವ ನೇರವಾಗಿ ಪೋಲಿಸ ಅಧಿಕಾರಿಯನ್ನು ಹೆಣವಾಗಿಸಿದ. ಅಂದೇ ಡಕಾಯಿತ ಜೋರಾವರನ ಪಡೆಯನ್ನು ಸೇರಿಕೊಂಡ. ಅಂದಿನಿಂದ ಆತನ ಬದುಕಿನ ದಿಕ್ಕೇ ಬದಲಾಯಿತು. ದರೋಡೆಕೋರ ಜೀವನಕ್ಕೆ ನಾಂದಿಯಾಯಿತು. ಜೋರಾವರನ ಬಲಗೈ ಬಂಟನಾದ. ಅವನ ಮರಣಾನಂತರ ಆ ಪಡೆಗೆ ಅವನೇ ಮುಖಂಡನಾದ. ಡಾಕು ಮಂಗಲಸಿಂಗನಾದ. ಚಂಬಲ್ ಕಣಿವೆಯೇ ಅವರ ಕೇಂದ್ರಸ್ಥಳವಾಯಿತು. ಮಂಗಲಸಿಂಗ್‌ನಂಥ ಅನೇಕ ನಿರ್ಭಾಗ್ಯ ಯುವಕರು ಅವನ 'ಪಡೆ' ಸೇರಿದರು.

ಚನೇಸರ ಮಂಗಲಸಿಂಗ್‌ನ ಬಲಗೈಬಂಟ. ಉತ್ತರಪ್ರದೇಶದ ರಾಜಧಾನಿ ಲಖನೌ ಜಿಲ್ಲೆಯ ಗ್ರಾಮೀಣ ಪ್ರದೇಶದವ. ತಂದೆ-ತಾಯಿಯಿಲ್ಲದ ಮನೆಗೆ ಅಣ್ಣನೇ ಯಜಮಾನ. ಅಕ್ಕತಂಗಿಯರನ್ನೇ ಮದುವೆಯಾಗಿದ್ದ ಕುಟುಂಬದಲ್ಲಿ ಹೊಂದಾಣಿಕೆಯಾಗದೆ. ಚನೇಸರ ತನ್ನ ಹೆಂಡತಿ ಸುಖಿಯಾಳೊಂದಿಗೆ ಬೇರೆಯಾದ. ಅಣ್ಣನ ಸೋಮಾರಿತನ ಆ ಮನೆಯನ್ನು ಭಾಗಮಾಡಿತ್ತು. ಮಕ್ಕಳಿಲ್ಲದ ಕೊರತೆಯೊಂದನ್ನು ಬಿಟ್ಟರೆ ಮೈಮುರಿದು

ಹೊಲದಲ್ಲಿ ದುಡಿದು ಸಂಸಾರ ನಿಭಾಯಿಸುವ ತಾಕತ್ತು ಅವನ ರಟ್ಟೆಯಲ್ಲಿತ್ತು. ನೆರೆಮನೆಯ ಮುರಲಿ ಆಗಾಗ ಮನೆಗೆ ಬರುತ್ತಿರುವುದು ಅಣ್ಣ-ತಮ್ಮಂದಿರಿಗೆ ಸರಿಕಂಡಿರಲಿಲ್ಲ. ಬೇರೆಯಾದ ನಂತರವಂತೂ ಮುರಲಿಯ ಆಗಮನಕ್ಕೆ ಮತ್ತಷ್ಟು ಸ್ವಾತಂತ್ರ್ಯ ಸಿಕ್ಕಂತಾಗಿತ್ತು. ತಾನಿಲ್ಲದಿರುವಾಗ ಮುರಲಿ ಮನೆಗೆ ಬರುತ್ತಿರುವುದು ಸರಿಕಾಣದ ಹೆಂಡತಿಗೆ ಬುದ್ಧಿ ಹೇಳಿದರೆ. 'ಆತ ಧರ್ಮಭಾಯೀ. ಈ ಪವಿತ್ರ ಸಂಬಂಧಕ್ಕೆ ಅಪವಾದ ಕೊಡುವಿರಿ' ಎಂದು ಸುಖಿಯಾ ಗಂಡನ ಮಾತಿಗೆ ಕಣ್ಣುಕಿಸಿದೇ ಎದುರುತ್ತರ ನೀಡಿದ್ದಳು. ಕೊನೆಗೊಂದು ದಿನ ಅವರ ಸಂಬಂಧವನ್ನು ಬಯಲಿಗೆಳೆಯಲೆಂದೇ ಹೊಂಚುಹಾಕಿದ ಚನೇಸರನ ಬಲೆಗೆ ಸುಖಿಯಾ-ಮುರಲಿ ಹಾಡುಹಗಲೇ ಸಿಕ್ಕಿಬಿದ್ದರು. ನಿರ್ದಾಕ್ಷಿಣ್ಯವಾಗಿ ಅವರಿಬ್ಬರ ಗೋಣುಕತ್ತರಿಸಿದ ಚನೇಸರ ಆ ಗ್ರಾಮಕ್ಕೆ ಶರಣುಹೊಡೆದು ಚಂಬಲ್‌ಕಣಿವೆ ಸೇರಿಕೊಂಡಿದ್ದ. ಮುಂದೊಂದು ದಿನ ದುಲಾರಿ ಕಣ್ಣಿಗೆ ಬಿದ್ದಾಗ, ಪರಸ್ಪರರು ನಾಯಕನ ಅನುಮೋದನೆಯಂತೆ ಸತಿ-ಪತಿಗಳಾದರು. ಸುಖಿಯಾಳಿಗಿಂತ ದುಲಾರಿ ಸುಂದರಿ. ಸುಖಿಯಾ ಮೋಸಮಾಡಿ ಬೆಂಕಿಹೊತ್ತಿಸಿದರೆ. ದುಲಾರಿ ಪ್ರೀತಿಸಿ ಆ ಕಿಚ್ಚನ್ನು ಆರಿಸಿ ಶಾಂತಮಾಡಿದಳು.

'ಫಿಲಾತಿ' ಗಾಗಿ ಫೂಲಮತಿ ಮತ್ತು ಅವಳ ಗಂಡ. ಅವರೊಂದಿಗೆ ಇನ್ನೇರಡು ಒತ್ತೆಯಾಳುಗಳು. ಜೊತೆಗೆ ಲೇಖಕರು ಹೀಗೆ ಒಟ್ಟು ಐವರನ್ನು ಲೂಟಿ ಮಾಡಿದ ವಸ್ತುಗಳೊಂದಿಗೆ ಒತ್ತೆಯಾಳುಗಳನ್ನಾಗಿಟ್ಟುಕೊಂಡು ಆ ಡಕಾಯಿತರ ಗುಂಪಿನಲ್ಲಿ ಲೇಖಕರು ಸೇರಿಕೊಂಡುದು ವಿಪರ್ಯಾಸ! ಡಕಾಯಿತರ ಗುಂಪಿನೊಂದಿಗೆ ತಾವೂ ಒಬ್ಬರಾಗಿ ಅಲ್ಪ ದಿನಗಳಲ್ಲಿಯೇ ಅವರ ಪ್ರೀತಿ-ವಿಶ್ವಾಸಗಳನ್ನು ಗಳಿಸಿದರು. ಅದಕ್ಕೆ ಅವರು ದಕ್ಷಿಣಭಾರತದವರೆಂಬುದು ಸಹಕರಿಸಿತ್ತು. ಒಬ್ಬೊಬ್ಬ ಡಕಾಯಿತನ ಬದುಕನ್ನು ಬಿಚ್ಚುತ್ತ ಹೋದ ಲೇಖಕರಿಗೆ ಅದೊಂದು ವಿಚಿತ್ರವಾದ ಅನುಭವವಾಗಿತ್ತು. ಅನೇಕ ದೃಶ್ಯಗಳನ್ನು ಕಣ್ಣಾರೆ ಕಂಡ ಅವರಿಗೆ ಫೂಲಮತಿಯ ಅಪಹರಣವೊಂದು ವಿಚಿತ್ರವಾಗಿ ಕಂಡಿತ್ತು. ಫೂಲಮತಿ ಸಿಥೋಲಿ ಗ್ರಾಮದ ಮುಖಂಡ ಮೇವಾಲಾಲನ ಮಗಳು. ಮೇವಾಲಾಲನಿಗೂ ಮಂಗಲಸಿಂಗನಿಗೂ ಬದ್ಧವೈರತ್ವ. ಪೋಲಿಸರ ಚಮಚಾನಂತಿದ್ದ ಮೇವಾಲಾಲ ಅನೇಕ ಸಲ ಮಂಗಲಸಿಂಗ್‌ನ ಗುಂಪಿಗೆ ಹಾನಿಯುಂಟು ಮಾಡಿದ್ದ. ಅದರ ಸೇಡಿಗಾಗಿಯೇ ಫೂಲಮತಿಯನ್ನು ಸೆರೆಹಿಡಿದಿದ್ದರು. ಪೆದ್ದನಂತಿದ್ದ ಗಂಡನೊಂದಿಗೆ ವಿಚಿತ್ರ ಅಪ್ಸರೆಯಂತೆ ಕಾಣುತ್ತಿದ್ದ ಫೂಲಮತಿ ಒಂದು ದಿನ ಓಡಿಹೋಗಲು ಹವಣಿಸಿ. ಹೆಣವಾದಳು. ಅವಳ ಗಂಡನನ್ನು ಅದೇ ಮಾರ್ಗ ತುಳಿಸಿದ ಮಂಗಲಸಿಂಗ್ ಇಬ್ಬರನ್ನು ಹರಿಯುತ್ತಿದ್ದ ನಾಲೆಗೆಸೆದ ಅವರ ನಿರ್ದಾಕ್ಷಿಣ್ಯತೆ ಕಂಡು ಲೇಖಕರಿಗೆ ಒಳಗೊಳಗೆ ನಡುಕ ಪ್ರಾರಂಭವಾಗಿತ್ತು.

ಮಂಗಲಸಿಂಗ್‌ನನ್ನು ತಂಡದವರೆಲ್ಲ 'ಭಾಯೀಜಿ' ಎಂದೇ ಕರೆಯುತ್ತಿದ್ದರು. ಹೇಮಂತಿ ಹೆಸರಿಗೆ ತಕ್ಕ ಹೆಂಡತಿ ಅವಳನ್ನು ಮದುವೆಯಾಗಲು ಭಾಯೀಜಿ ಸಾಹಸವನ್ನೇ ಮಾಡಬೇಕಾಯಿತು. ಹೇಮಂತಿ ಕೋಟಾ ಜಿಲ್ಲೆಯ ಲಖೇರಿ ಗ್ರಾಮದ ಶ್ರೀಮಂತ ಠಾಕೂರ ಮನೆತನದವಳು. ಪರಸ್ಪರ ಪ್ರೀತಿಯಿಂದಿದ್ದ ಇವರನ್ನು ಹೇಮಂತಿ ಮನೆಯವರು ವಿರೋಧಿಸಿದರು. ಆದರೆ ಮಂಗಲಸಿಂಗನದು ಪ್ರಣಯದಲ್ಲಿಯೂ ಪ್ರಾಮಾಣಿಕ ನಿಷ್ಠೆ.

ಮನಸ್ಸು ಮಾಡಿದರೆ ಹಾರಿಸಿಕೊಂಡು ಹೋಗಬಹುದಾಗಿದ್ದರೂ ನೇರ ಅವರ ಮನೆಗೆ ಹೋಗಿ ಕಳಿಸುವಂತೆ ಕೇಳಿಯೇ ಬಿಟ್ಟ. ಹೇಮಂತಿಯ ಅಣ್ಣ ರಣಬೀರ ಎದುರುನಿಂತ ಆದರೆ ಅದೇನೂ ನಡೆಯಲಿಲ್ಲ. ಅಪ್ಪಾ ನೀವೇನು ಹೇಳಿದರೂ ಸಾಧ್ಯವಿಲ್ಲ. ನನ್ನ ಪತಿ ಇವರೇ ಮಂಗಲಸಿಂಗ್! ಇವರನ್ನು ಬಿಟ್ಟು ಯಾರನ್ನೂ ವರಿಸಲು ಸಾಧ್ಯವಿಲ್ಲ. ಈಗಾಗಲೇ ನಾವು ಪ್ರತಿಜ್ಞೆ ಮಾಡಿದ್ದೇವೆ. ಇವರೇ ನನ್ನ ಪತಿ! ನೀವು ವಿರೋಧಿಸಿದರೆ ಆತ್ಮಾರ್ಪಣೆ ಮಾಡಿಕೊಳ್ಳುತ್ತೇನೆಂದು ತಂದೆಗೆ ಎದೆಗಾರಿಕೆಯಿಂದಲೇ ಹೇಳಿ ಹೊಸ್ತಿಲ ದಾಟಿ ಭಾಯೀಜಿಯ ಕೈಹಿಡಿದಳು. ಮಂಗಲಸಿಂಗ್‌ನಿಗೆ ನೆರಳಾಗಿ ಅವನ ಸುಖ-ದುಃಖಗಳಲ್ಲಿ ಭಾಗಿಯಾದ ವೀರರಜಪೂತರಕ್ತದ ಸ್ವಾಭಿಮಾನಿ! ಮತ್ತೆಂದೂ ತವರಿನೆಡೆಗೆ ಹೆಜ್ಜೆ ತುಳಿಯದ ದಿಟ್ಟೆಯಲ್ಲದೆ. ಧೀರಳೂ ಹೌದು. ಗೆಳತಿ 'ಬೇಬಿ'ಯನ್ನು ವರದಕ್ಷಿಣೆಗಾಗಿ ಪತಿಮನೆಯವರು ಹಿಂಸಿಸತೊಡಗಿದಾಗ ಗಂಡನ ಮುಖಾಂತರ ಧನಪಿಶಾಚಿಗಳಾದ ಬೇಬಿಯ ಅತ್ತೆ-ಮಾವಂದಿರಿಗೆ ಪಾಠ ಕಲಿಸಿದ ಹೃದಯವಂತಿಕೆಯವಳದು.

ಮುನ್ನಾನ ತಂದೆ ಬಡ ಕೃಷಿ ಕಾರ್ಮಿಕ. ತಾಯಿತೀರಿಕೊಂಡ ಮೇಲೆ ಮಲತಾಯಿಯ ಕಾಟಕ್ಕೆ ಬೇಸತ್ತು ಕಲ್ಕತ್ತಾ ಮುಂತಾದೆಡೆ ಅಲೆದಾಡಿ ಕೊನೆಗೆ ಕರೋಲ್‌ದ ಶ್ರೀಮಂತರಲ್ಲಿ ಕೈತುಂಬ ಸಂಬಳ ಪಡೆಯುವ ಆಳಾಗಿ ಸೇರಿಕೊಂಡ ಸುಂದರ ದೃಢಕಾಯನಾದ ಮುನ್ನಾನನ್ನು ಐವತ್ತರ ಮನೆಯೊಡತಿ ತನ್ನ ದೈಹಿಕಹಸಿವು ಹಿಂಗಿಸಿಕೊಳ್ಳಲು ಬಳಸಿಕೊಂಡಳು. ಹಿರಿಸೊಸೆ ಕೂಡ ಅದೇ ಮಾರ್ಗ ಅನುರಿಸಿದಾಗ. ಮುನ್ನಾನಿಗಾಗಿ ಅತ್ತೆ-ಸೊಸೆಯರ ಮಧ್ಯ ಸ್ಪರ್ಧೆಯೇ ಏರ್ಪಟ್ಟಿತು. ಇದರಿಂದ ಮುನ್ನಾನಿಗೆ ಕೈತುಂಬ ಹಣಬರತೊಡಗಿತು. ನಾ ಹೆಚ್ಚು ತಾ ಹೆಚ್ಚು ಎಂಬಂತೆ ಆ ಕಾಮಪಿಪಾಸುಗಳು ಹಣಸುರುವತೊಡಗಿದರು. ಈ ತ್ರಿಶಂಕುಸ್ವರ್ಗದ ಭವಿಷ್ಯ ಭೀಕರವೆಂದರಿತ ಮುನ್ನಾ ಈ ಮನೆಯಿಂದ ಹೊರಹೋಗಿ ಎಲ್ಲಾದರೂ ಒಂದು ಚಹದಂಗಡಿ ತೆರೆದು ಬದುಕು ನಡೆಸಬೇಕೆನ್ನುವಷ್ಟರಲ್ಲಿ ಅಚಾತುರ್ಯ ನಡೆದುಹೋಗಿತ್ತು. ಮನೆಯ ಯಜಮಾನಿತಿ ಕಳ್ಳತನದ ಅಪವಾದ ಹೊರಿಸಿದಾಗ ಸಿಟ್ಟು ತಡೆಯದೆ ಮುನ್ನಾ ಅವಳ ತಲೆಗೆ ಬಲವಾದ ಏಟುಕೊಟ್ಟು ಅಲ್ಲಿಂದ ಬರಿಗೈಯಲ್ಲಿಯೇ ಪರಾರಿಯಾಗಿದ್ದ: ಅವನಿಗೆ ಚಂಬಲ್ ಕಣಿವೆ ಆಸರೆನೀಡಿತು. ಜಗತ್‌ಕುರ್ಮಿ ಆ ತಂಡದ ಇನ್ನೊಬ್ಬ ಸದಸ್ಯ. ಈತನದೂ ಒಂದು ಕಥೆ. ಜಗತ್ ದತಿಯಾ ಹತ್ತಿರದ ಒಂದು ಹಳ್ಳಿಯವ. ಚಿಕ್ಕಂದಿನಿಂದಲೇ ತುಂಟನಾದ ಈತ ಸಣ್ಣಪುಟ್ಟ ಕಳ್ಳತನ ಮಾಡುತ್ತಿದ್ದ. ಬೇಸತ್ತ ತಂದೆ ಮನೆಯಿಂದ ಹೊರಹಾಕಿದ. ಊರವರ ಧಾರ್ಷ್ಟ್ಯಕ್ಕೂ ತುತ್ತಾದ. ಯಾರೂ ಕನ್ಯೆ ಕೊಡದಾದಾಗ. ಅದಕ್ಕಾಗಿ ಸಂಶೋಧನೆಯನ್ನೇ ನಡೆಸಿದ ಜಗತ್‌ಗೆ ಅಂಥದೊಂದು ಕುಟುಂಬ ಸಿಕ್ಕಿತು. ಮದುವೆಯಾದ ಈತ 'ಪ್ರಥಮರಾತ್ರಿ' ಯಂದೇ ಹೆಂಡತಿಯ ನಿಜರೂಪದರ್ಶನವಾಯಿತು. ಮೊದಲು ತೋರಿಸಿದ ಹುಡುಗಿಯನ್ನು ಬಿಟ್ಟು ಕುರೂಪಿಯಾದವಳನ್ನು ಗಂಟುಹಾಕಿದ ಮಾವವನ್ನು ನೇರವಾಗಿ ತರಾಟೆ ತೆಗೆದುಕೊಂಡ. ಫಲ ಕಾಣದೆ ಜಿಗುಪ್ಸೆಗೊಂಡ ಜಗತ್‌ಗೂ 'ಚಂಬಲ್‌ಕಣಿವೆ' ಆಶ್ರಯ ನೀಡಿತು.

ಶರೀಫ್ ಮುಸ್ಲಿಂ ಧರ್ಮದವ. ಗ್ವಾಲಿಯರ್ ಸಮೀಪದ ಹಳ್ಳಿ ಈತನ ಊರು. ಮನೆಯಲ್ಲಿ ಅಣ್ಣ-ಅತ್ತಿಗೆ ತುಂಬ ಪ್ರೀತಿಯ ಸಂಸಾರ. ಊರಲ್ಲಿ ಹಿಟ್ಟಿನಗಿರಣಿಯ ಜವಾಬ್ದಾರಿ ಈತನದು. ಸುಂದರ ದೃಢ

ಕಾಯನಾದ ಶರೀಫ್ ಗಿರಣಿಗೆ ಬರುತ್ತಿದ್ದ ಮಾದೇವಿಯನ್ನು ಕಂಡು ಮೋಹಗೊಂಡ. ಅದು ಮನುಷ್ಯ ಸಹಜದೌರ್ಬಲ್ಯ ಕೂಡ. ಪರಸ್ಪರ ಮದುವೆಯಾಗಲು ಕಟಿಬದ್ಧರಾದರು. ಆದರೆ ಧರ್ಮವೊಂದು ಅಡ್ಡಗಾಲಾಯಿತು. ಅದರಲ್ಲಿಯೂ ಮಾದೇವಿಯ ಅಣ್ಣಂದಿರು ಉಗ್ರವಾಗಿ ಪ್ರತಿಭಟಿಸಿದರು. ಇದರಿಂದಾಗಿ ಶರೀಫ್ ಮಾದೇವಿಯೊಂದಿಗೆ ಊರು ಬಿಟ್ಟ. ಇದನ್ನರಿತ ಮಾದೇವಿಯ ಅಣ್ಣಂದಿರು ಬೆಂಬತ್ತಿದರು. ಕಬ್ಬಿನ ಹೊಲದಲ್ಲಿ ಅವಿತುಕೊಂಡ ಇವರ ಸುಳಿವು ತಿಳಿಯುತ್ತಲೇ ಆ ದುಷ್ಟರು ಕೋವಿಯನ್ನು ಒತ್ತಿಯೇ ಬಿಟ್ಟರು. ಅದಕ್ಕೆ ಬಲಿಯಾದವಳು ಮಾದೇವಿ. ಪ್ರಿಯಕರನ ತೊಡೆಮೇಲೆ ಕೊನೆಯುಸಿರೆಳೆದ ಮಾದೇವಿಯನ್ನೇ ಮನದಲ್ಲಿ ತುಂಬಿಕೊಂಡು ಶರೀಫ್ ಪರಾರಿಯಾದ. ಶರೀಫ್‌ನಿಗೂ ಚಂಬಲ್ ಕಣಿವೆ ಕೈಮಾಡಿ ಕರೆಯಿತು. ಇವರೆಲ್ಲರಿಗಿಂತ ದಾದಾನ ಕಥೆ ಇನ್ನೂ ವಿಚಿತ್ರವಾಗಿದೆ. ಕುಡಿತದ ದಾಸರಾದ ಮಗ-ಸೊಸೆ ದಾದಾನನ್ನು ಮನೆಯಿಂದ ಹೊರಹಾಕಿದಾಗ. ನಾಟೀವೈದ್ಯನಾದ ದಾದಾ 'ಭಾಯೀಜಿ'ಯಲ್ಲಿ ಆಶ್ರಯ ಪಡೆದಿದ್ದ. ಎಪ್ಪತ್ತು ವರ್ಷದ ದಾದಾ ಆ 'ಕುಟುಂಬ'ಕ್ಕೆ (ಪರಿವಾರಕ್ಕೆ) ಯಜಮಾನನೂಹೌದು. ವೈದ್ಯನೂ ಹೌದು. ಹೇಮಂತಿಗೆ ತಂದೆಯೂ ಆಗಿದ್ದ. ಮಗ-ಸೊಸೆಯರನ್ನು ಮರೆತು ನಿಶ್ಚಿಂತನಾಗಿದ್ದ. ಹೀಗೆ ಪ್ರತಿ 'ಬಂದೂಕಿನ' ಹಿಂದೆಯೂ ಒಂದೊಂದು ಮನಮಿಡಿಯುವ ಕಥೆಯಿದೆ.

ಒಂದೊಂದು ನೋವಿನ ಬುತ್ತಿಯನ್ನುಂಡೇ ಕಣಿವೆಸೇರಿದ ಈ ಗುಂಪು 'ಭಾಯೀಜಿ' ಯಲ್ಲಿ ಪಳಗಿ-ಹೆಗಲಿಗೆ ಬಂದೂಕೇರಿಸಿದ್ದರು. 'ಸಾಮಾಜಿಕ ನ್ಯಾಯ' ಕ್ಕಾಗಿ ಕೋವಿ ಒತ್ತುತ್ತಿದ್ದರು. ಹೆಣ್ಣುಮಕ್ಕಳ ಮೇಲಿನ ದೌರ್ಜನ್ಯ. ಬಡವರ ಶೋಷಣೆ. ಶ್ರೀಮಂತರ ಲೂಟಿ ಇವು ಇವರ ದಿನಚರಿಯಾಗಿತ್ತು. ಭಾಯೀಜಿ ಅನೇಕ ಸಂಸಾರಗಳನ್ನು ಸರಿ ಮಾಡಿದ್ದ. 'ಬೇಬಿ'ಯ ಬದುಕನ್ನು ಸರಿಮಾಡಿದ 'ಭಾಯೀಜಿ' ಬಂದೂಕಿನ ಸಪ್ಪಳ ಎಂತ ಸಾಮಾಜಿಕ ಕಾರ್ಯ ಮಾಡಬಹುದೆಂಬುದನ್ನು ತೋರಿಸಿಕೊಟ್ಟಿದ್ದ. ಈ ಮಧ್ಯೆ ಮೂರನೇ ಒತ್ತೆಯಾಳನ್ನು ಬಿಡುಗಡೆ ಮಾಡಲಾಗಿತ್ತು. ಅದೂ ಒಂದು ಲಕ್ಷ 'ಫಿಲಾತಿ' ಪಡೆದ ನಂತರವೇ. ಇನ್ನುಳಿದವನೊಬ್ಬನೇ ಅವನು ಕಾವಲುಗಾರನ ಗುಂಡಿಗೆ ಬಲಿಯಾಗಬೇಕಾಯಿತು.

ಮಗನನ್ನು ಕಳೆದುಕೊಂಡ ಹರಿಜನ ಮುದುಕನಿಗೆ ಹಣ ಕೊಟ್ಟು ಭಾಯೀಜಿ ಬಡ-ಬಗ್ಗರ ಸಹಾಯಕ್ಕಾಗಿ ಅಗರವಾಲನಂಥವರಿಂದ ಸಾಕಷ್ಟು ಸುಲಿಯಲೇಬೇಕಾಯಿತು. ದೆಹಲಿಯಲ್ಲಿ ಮದ್ದು ಗುಂಡುಗಳ ಖರೀದಿ. ಪೋಲಿಸ ಠಾಣೆಗಳ ಮೇಲೆ ದಾಳಿ. ಶ್ರೀಮಂತರ ಮನೆಗಳ ಲೂಟಿ. ಸ್ತ್ರೀಯರ ಮಾನಹಾನಿಗೆ ತಡೆ. ತನ್ನ ತಂಡದವರೇ ಹಾಗೇನಾದರೂ ಮಾಡಿದರೆ ಅವರನ್ನು ನಿರ್ದಾಕ್ಷಿಣ್ಯವಾಗಿ ಸುಟ್ಟು ಹಾಕುವುದು; ಇದಕ್ಕೆ ಬಿಹಾರಿಯೇ ಸಾಕ್ಷಿ. ಅನೇಕ ಸಾಮಾಜಿಕ ಸಂಕೀರ್ಣಗಳ ಮಧ್ಯದಲ್ಲಿ ಭಾಯೀಜಿ ಸದಾ ತತ್ವಬದ್ಧನಾಗಿಯೇ ಆಲೋಚಿಸುತ್ತಿದ್ದ. ಈ ಮಧ್ಯೆ ರಮೇಶಚಂದ್ರನನ್ನು ಶರೀಫ್ ಅವನ ಮನೆಯಲ್ಲಿಯೇ ಸುಟ್ಟುಹಾಕಿದ. ಕೊನೆಯ ಒತ್ತೆಯಾಳುವಿನ 'ದಂಧೆ' ತುಂಬ ವಿಚಿತ್ರವಾಗಿತ್ತು. ಸ್ತ್ರೀದೇವತೆಯೆಂದು ಕರೆಯುವ ನಮ್ಮದೇಶದಲ್ಲಿ ಇದೆಂಥ ಕರ್ಮಕಾಂಡವೆಂದೆನಿಸದಿರದು. ತಾನು ತನ್ನಣ್ಣ. ತಾಯಿ ಮೂವರೂ ಸೇರಿ ಹಳ್ಳಿ-ಪಟ್ಟಣದ ಅನೇಕ

ಮುಗ್ಧ ಹೆಣ್ಣುಮಕ್ಕಳನ್ನು ಮೋಸದಿಂದ ತಂದು ಅವರನ್ನು ಪೋಲಿಸ ಅಧಿಕಾರಿಗಳಿಗೆ, ರಾಜಕಾರಣಿಗಳಿಗೆ ತಲೆಹಿಡಿಯುವವದಲ್ಲದೆ, ದೆಹಲಿ, ಮುಂಬಯಿ ಕೆಂಪುದ್ವೀಪಗಳಿಗೆ ಮಾರಾಟ ಮಾಡಿ ಲಕ್ಷಗಟ್ಟಲೆ ಹಣ ಸಂಪಾದನೆ ಮಾಡಿದ್ದರು. ಸ್ವತಃ ತಾಯಿಯೇ ಸೇಠ ರವಿಲಾಲನಂಥ ಶ್ರೀಮಂತನಿಗೆ ಸೆರಗುಹಾಸುವುದನ್ನು ಕಣ್ಣಾರೆ ಕಂಡ ಇವರು ಸಾಮರ್ದರಾಗಿದ್ದಲ್ಲದೆ, ತಮ್ಮ ಹೆಂಡಂದಿರಿಗೂ ತಾಯಿಯ ಪಾಠವನ್ನೇ ಕಲಿಸಿದ್ದರು. ಇಂಥವರಿಂದ ಹಣಕಸಿದು ಬಡವರಿಗೆ ಹಂಚುವುದು ಭಾಯೀಜಿಯ ಕಾರ್ಯ.

ದುಲಾರಿಯನ್ನು ಪೋಲಿಸರು ಅರೆಸ್ಟ್ ಮಾಡಿದಾಗ, ತಂಡದಲ್ಲಿ ಮಿಂಚಿನ ಸಂಚಾರವಾಗುತ್ತದೆ. ಸಹಜವಾಗಿಯೇ ಹೆಗಲಿಗೆ ಬಂದೂಕುಗಳು ಏರುತ್ತವೆ. ಸಾಕಷ್ಟು ಸಂಗ್ರಹವಿದ್ದ ಮದ್ದುಗುಂಡುಗಳನ್ನು ಕೊಂಡೊಯ್ದು ಪೋಲಿಸರೊಂದಿಗೆ ಎರಡು ದಿನಗಳವರೆಗೆ ಜೀವದ ಹಂಗುದೊರೆದು ಹೋರಾಡುತ್ತಾರೆ. ಕೊನೆಗೂ ಚನೇಸರ ದುಲಾರಿಯನ್ನು ಬಿಡಿಸಿಯೇ ಬಿಟ್ಟಿದ್ದ. ಆದರೆ ಪೋಲಿಸರ ಗುಂಡು ಅವನೆದೆಯನ್ನು ಸೀಳಿಹಾಕಿತ್ತು. ಭಾಯೀಜಿಯ ಬಲಗೈ ಹೋಗಿತ್ತು. ಚಂಬಲ್ ಕಣಿವೆಯಲ್ಲಿ ಸ್ಮಶಾನ ಮೌನ. ಎಲ್ಲೆಲ್ಲಿಯೂ ಮೂಕವೇದನೆ. ಚನೇಸರನನ್ನು ಕಟ್ಟಿಗೆ ರಾಶಿ ಮೇಲೆ ಮಲಗಿಸಿ, ಲೇಖಕರಿಗೆ ಬೆಂಕಿಯಿಡಲು 'ಭಾಯೀಜಿ' ಸಂಕೇತಿಸಿದಾಗ ಮಂಜಾದ ಕಣ್ಣುಗಳಿಂದಲೇ ಕೊಳ್ಳಿಯಿಟ್ಟು ಹಿಂದೆ ಸರಿಯುವಷ್ಟರಲ್ಲಿ ದುಲಾರಿ ಬೆಂಕಿಗೆ ಹಾರಿ 'ಸತಿ' ಹೋಗಿದ್ದಳು. ದುಲಾರಿಯ ಆತ್ಮಾಹುತಿಯೊಂದಿಗೆ ಕಾದಂಬರಿ ಗಾಂಭೀರ್ಯ ಮುಕ್ತಾಯ ಕಾಣುತ್ತದೆ.

ಹಲವು ಉಪಕಥೆಗಳಿಂದ ಸಾಗುವ ಪ್ರಸ್ತುತ ಕಾದಂಬರಿ, ಒಂದು 'ಬೃಹತ್ ಕಥಾಕೋಶ' ವಿದ್ದಂತಿದೆ. ಅದಕ್ಕೆ ಮಂಗಲಸಿಂಗನೇ ಕಥಾನಾಯಕ. "…. ಇದ್ದುಳ್ಳವ, ತುಂಬ ಭ್ರಷ್ಟ, ದುಷ್ಟ, ಕ್ರೂರಿ ಹಾಗೂ ಅನೀತಿವಂತನಿದ್ದರೂ, ಆತನ ಅಧಿಕಾರಬಲ, ಧನಬಲ, ಆತನನ್ನು ಸಂರಕ್ಷಿಸುತ್ತವೆ. ಇಂಥವರೇ ಸಮಾಜದಲ್ಲಿ ಪ್ರತಿಷ್ಠಿತರು ಹಾಗೂ ಪ್ರಭಾವಶಾಲಿಗಳು. ಜನಸಾಮಾನ್ಯರ, ದೀನದಲಿತರ ನ್ಯಾಯಕ್ಕೆ ನೆಲೆ-ಬೆಲೆ ಇಲ್ಲದಂತೆ ಇಂದು ನಮ್ಮೆಲ್ಲ ವ್ಯವಸ್ಥೆಗಳು ಕಣ್ಣಿಗೆ ಪಟ್ಟಿಕಟ್ಟಿಕೊಂಡ ಗಾಂಧಾರಿಯಾಗಿವೆ. ಅನಿವಾರ್ಯವಾಗಿ ಮಂಗಲಸಿಂಗ್‌ನಂಥವರು ತಮ್ಮ ಪ್ರಾಮಾಣಿಕತೆಗೆ ಎಳ್ಳುನೀರು ಬಿಟ್ಟು ಹೋರಾಡಬೇಕಾಗುತ್ತದೆ. ಈ ಎಲ್ಲ ಕಾರಣಗಳು ಈ ಕಾದಂಬರಿಯ ಸೃಷ್ಟಿಗೆ ಮೂಲ"[೧೧೦] ವೆನ್ನುವ ಲೇಖಕರ ಮಾತೇ ಇದೊಂದು 'ಸಾಮಾಜಿಕ ನ್ಯಾಯ'ವನ್ನು ಪ್ರತಿಪಾದಿಸುವ, ಪರಾಮರ್ಶಿಸುವ ಸಾಮಾಜಿಕ ಕಾದಂಬರಿಯೆಂಬುದನ್ನು ಸ್ಪಷ್ಟಪಡಿಸುತ್ತದೆ.

ಕುತೂಹಲಕಾರಿಯಾಗಿಯೇ ತನ್ನ ಮೈಬಿಚ್ಚಿಕೊಂಡ ಕಾದಂಬರಿ ಉದ್ದಕ್ಕೂ ಅದನ್ನು ಕಾಯ್ದುಕೊಂಡೇ ಹೋಗುತ್ತದೆ. ಡಕಾಯಿತರ ಸೆರೆಯಾಳುಗಳಲ್ಲಿ ಲೇಖಕರು ತಾವೂ ಒಬ್ಬರಾಗಿ, ಅವರೊಂದಿಗೆ ಬೆರೆತು, ವರ್ತಮಾನದಲ್ಲಿ ಕಥೆ ಹೇಳುತ್ತ ಹೋದ ಬೆಳಗಲಿಯವರು ಡಕಾಯಿತರ ಪೂರ್ವಬದುಕಿನ ಕರ್ಮಕಾಂಡವನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಮಂಗಲಸಿಂಗ್ ಡಕಾಯಿತನಾಗಬೇಕೆಂದೇನೂ ಬಯಸಿದವನಲ್ಲ. ತಂದೆಯಂತೆ ಊರಿಗೆ

---

೧೧೦. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ : ಪ್ರಸ್ತಾವನೆ, ಪುಟ VIII

ಉಪಕಾರಿಯಾಗಬೇಕೆಂದು ಚಿಂತಿಸಿದವನಿಗೆ ತನ್ನೂರಿನ ಕಿಸನ್‌ಲಾಲನ ಕ್ರೌರ್ಯದ ಕೈಗಳು ಅವನನ್ನು ಅತ್ತ ನೂಕಿದವು. ಕಿಸನಲಾಲನ ಇರ್ಷ್ಯೆ - ದ್ವೇಷ ತಾಯಿಗೆ ನುಡಿದ ಅವನ ಬಿರುನುಡಿಗಳು ತನಗಾದ ಹಲ್ಲೆ ಇವೆಲ್ಲ ಬಿಸಿರಕ್ತದ ಮಂಗಲಸಿಂಗನಿಗೆ ಸರಿಕಾಣದೆ. ಕಿಸನಲಾಲನನ್ನು ಒಂದೇ ಗುಂಡಿನಿಂದ ಸದ್ದಡಗಿಸಿ ಮಾಯವಾದ ಮಂಗಲಸಿಂಗನಿಗೆ ತಂಗಿ ಪುತಲಿಯ ಮೇಲಿನ ಅತ್ಯಾಚಾರ. ಅದೂ ಕಾನೂನು ರಕ್ಷಕನಾದ ಪೋಲಿಸ ಅಧಿಕಾರಿಯೇ ಅವಳ 'ಮಾನ' ಭಂಗಮಾಡಿದ್ದು ತಡೆಯಲಾಗಿರಲಿಲ್ಲ. ಪೋಲಿಸ ಅಧಿಕಾರಿಯನ್ನು ಸುಟ್ಟು ಹಾಕಿ ಅಂದೇ ಮಂಗಲಸಿಂಗ್ ಡಕಾಯಿತ ಜೋರಾವರನ ಪಡೆ ಸೇರಿಕೊಂಡಿದ್ದ. ಅಂದಿನಿಂದ ಅವನ ಬದುಕಿನ ದಿಕ್ಕೇ ಬದಲಾಯಿತು. ಸಮಾಜಿಕ ಶೋಷಣೆಯನ್ನುಂಡ ಚನೇಸರ. ಮುನ್ನಾ. ಶರೀಫ್. ಸೋಮು. ಪುತ್ತು. ಜಗತ್‌ಕುರ್ಮಿ ಮುಂತಾದ ಯುವಕರ 'ದಂಡೇ' ಚಂಬಲ್‌ಕಣಿವೆಯ ದಾರಿಹಿಡಿದುದು ನಮ್ಮ ಸಮಾಜದ ಕ್ರೌರ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಇವರಿಗೆಲ್ಲ ಮಂಗಲಸಿಂಗ್‌ನೇ ನಾಯಕನಾದ. ತಂಡದವರೆಲ್ಲ ಮಂಗಲಸಿಂಗ್‌ನನ್ನು ಪ್ರೀತಿಯಿಂದ 'ಭಾಯೀಜಿ' ಎಂದು ಕರೆಯುವುದು ಅವನ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿತ್ತು. ಚಂಬಲ್ ಕಣಿವೆಯೇ ಇವರ ಕೇಂದ್ರಸ್ಥಳವಾಯಿತು. "ಇನ್ನೂ ಮುವತ್ತರೊಳಗಿನ ಆ ತರುಣ. ಈ ಹಿಂದೆ ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ್ದ. ಶೂರ ರಜಪೂತರ ಕಾಲದಲ್ಲಿ ಹುಟ್ಟಿಬಂದ ಆ ಸಾಹಸಿ ನಾಡಿಗಾಗಿ ತನ್ನ ಕರ್ತವ್ಯ ನಿರ್ವಹಿಸುವುದು ಬಿಟ್ಟು. ರಾಷ್ಟ್ರಘಾತುಕನಾಗಿ. ಸಮಾಜದ್ರೋಹಿಯಾಗಿ. ದುಷ್ಟನಾಗಿ ಹೋರಾಟದ ಬದುಕನ್ನು ನಡೆಸುತ್ತಿರುವುದು ವಿಪರ್ಯಾಸ"[೧೧೧] ಆದರೆ ಆ ವಿಪರ್ಯಾಸಕ್ಕೆ ಆತನ ಕುಟುಂಬಕ್ಕಾದ ಅನ್ಯಾಯ - ಅತ್ಯಾಚಾರಗಳೇ ಕಾರಣ. ಸಮಾಜದ ವ್ಯಕ್ತಿಗಳು ಆತನಲ್ಲಿರುವ ಕ್ರೌರ್ಯವನ್ನು ಹೊಡೆದೆಬ್ಬಿಸದೆ. ಕರುಣೆಗೆ ನೀರೆರೆದು ಬೆಳೆಸಿದ್ದರೆ. ತಂದೆಯಂತೆ ಮಗ ಕೂಡ ಊರಿಗೆ ಉಪಕಾರಿಯಾಗಿ. ಪರೋಕ್ಷವಾಗಿ ದೇಶದ ಒಂದು ಮಹತ್ತರ ಸ್ವತ್ತು ಆಗಬಹುದಿತ್ತು. ಹಾಗಾಗದೆ ನಿರ್ದಾಕ್ಷಿಣ್ಯವಾಗಿ ಕೋವಿಯನ್ನು ಒತ್ತುವ ಡಕಾಯಿತನಾದ. ತನ್ನವರೇ ಇರಲಿ. ಅನ್ಯರೇ ಇರಲಿ. ಅನ್ಯಾಯವಿದ್ದಲ್ಲಿ ಇವನ ಕೋವಿಯ ಗುಂಡುಹಾರುತ್ತಲೇ ಇತ್ತು: ಬಿಹಾರಿ ತನ್ನವನಾದರೂ ನೋಡಲಿಲ್ಲ. ಫೂಲಮತಿಯಂತೆ ಸುಟ್ಟುಹಾಕಿದ್ದ ಭಾಯೀಜಿಯ ರೀತಿ ಸೈದ್ಧಾಂತಿಕ ನೆಲೆಗಟ್ಟಿನ ಕಟ್ಟಾಜ್ಞೆಯಾಗಿತ್ತು.

ಕೈಹಿಡಿದ ಪತ್ನಿಯೇ ಪರಪುರುಷನಿಗೆ ಸೆರಗುಹಾಸಿದಾಗ ಸಹಜವಾಗಿಯೇ ಚನೇಸರ ಅವರಿಬ್ಬರ ರುಂಡ-ಚೆಂಡಾಡಿದ್ದ. "ಇನ್ನು ಚನೇಸರನಿಗೆ ಯಾವ ದೋಷ ಕೊಡಬೇಕು ? ಆತನ ನ್ಯಾಯವಾದ ಅಪರಾಧಕ್ಕೆ ಆತನಿಗೆ ಅನ್ಯಾಯವೇ ಆಗಬಹುದಿತ್ತಲ್ಲವೆ ? ಹೆಂಡತಿ ಮಾಡಿದ ವ್ಯಭಿಚಾರ. ಮಾಡಿದ ಅಪರಾಧ ಕಾನೂನಿನ ಬಲೆಯಲ್ಲಿ ಬೀಳಲಾರದ ವಿಷಯ ಗಂಡನೇ ಆ ಅಪರಾಧಕ್ಕೆ. ಶಿಕ್ಷೆಯನ್ನಿತ್ತರೆ ಆತನಿಗೆ ಗಲ್ಲು ! ಚನೇಸರ ಊರಲ್ಲಿಯೇ ಉಳಿದುಕೊಂಡಿದ್ದರೆ ಇದೇ ಕಥೆ ಆಗಬಹುದಿತ್ತು ! ಅದಕ್ಕಾಗಿ ಆತ ಒಂದೇ ದಾರಿ ಎಂದು. ನೇರವಾಗಿ ಚಂಬಲ್‌ಕಣಿವೆಯ ಮೊರೆಹೊಕ್ಕಿದ್ದು"[೧೧೨] ಸರಿಯೆನಿಸುತ್ತದೆ. ಇಂಥ ಅನೇಕ ದುಃಖದ ಅವಮಾನದ. ಸೇಡಿನ.

---

೧೧೧. ದು. ನಿಂ. ಬೆಳಗಲಿ : ಚೆಂಬಲ್ ಕಣಿವೆಯಲ್ಲಿ. ಪುಟ ೪೮

೧೧೨. ದು. ನಿಂ. ಬೆಳಗಲಿ : ಚೆಂಬಲ್ ಕಣಿವೆಯಲ್ಲಿ. ಪುಟ ೪೮

ಕ್ರೌರ್ಯವ. ಕಥೆಯ ಹಿನ್ನೆಲೆಯುಳ್ಳವರೇ ಭಾಯೀಜಿಯ ಬೆನ್ನಿಗಿದ್ದವರು. ಇವರನ್ನೆಲ್ಲ ಕಟ್ಟಿಕೊಂಡು ಸಾಮಾಜಿಕ ನ್ಯಾಯಕ್ಕಾಗಿ ಬಂದೂಕು ಹಿಡಿದದ್ದು ಹಾಗೆ ವಿಚಾರಿಸಿ ನೋಡಿದರೆ ತಪ್ಪೆನಿಸುವುದಿಲ್ಲ.

"ನೋಡಿರಿ ಭಯ್ಯಾ. ನಮ್ಮ ದೇಶದಲ್ಲಿ ಕಾಯ್ದೆ ಕಾನೂನುಗಳು. ಎಲ್ಲಿವೆ? ಇದ್ದರೂ ಅವು ಹಣವಂತರವು ಹಾಗೂ ರಾಜಕೀಯ ಜನರ ಹಿಡಿತದಲ್ಲಿರುವ ಕಾಯ್ದೆಗಳು ಕೇವಲ ವಕೀಲರ ಕೈಯಲ್ಲಿ ಹಾಗೂ ಪುಸ್ತಕದಲ್ಲಿರುವ ಕಾನೂನುಗಳು. ಕಾಯ್ದೆ-ಕಾನೂನುಗಳನ್ನು ವಕೀಲರು ಬೇಕಾದಂತೆ ತಿರುಚಬಲ್ಲರು. ಅವು ನಮ್ಮ-ನಿಮ್ಮಂಥವರನ್ನು ಮಾತ್ರ ಭೂತದಂತೆ ಭಯಪಡಿಸುತ್ತಿರುತ್ತವೆ"[೧೧೩] ಎಂದೆನ್ನುವ ಮಂಗಲಸಿಂಗನ ಮಾತುಗಳಲ್ಲಿ. "ಬಡವರಿಗಾಗಿ ಕಾಯ್ದೆ ಎಲ್ಲಿದೆ ಹೇಳಿರಿ? ದೇವರಂಥ ನಮ್ಮ ತಂದೆಗೆ ಅನ್ಯಾಯವಾದಾಗ ನಿರಪರಾಧಿಯಾದ ನನಗೆ ಅಪಚಾರವಾದಾಗ. ಹೂವಿನಂತೆ ಪರಿಶುದ್ಧಳಾದ ನನ್ನ ತಂಗಿಯ ಪ್ರಾಣವನ್ನು ಕಾನೂನು ರಕ್ಷಕನೇ ಸಂಹರಿಸಿದಾಗ ನಮ್ಮನ್ನು ರಕ್ಷಿಸುವ ಕಾಯ್ದೆ-ಕಾನೂನು ಎಲ್ಲಿದ್ದವು? ನಮ್ಮ ಪ್ರಜಾಪ್ರಭುತ್ವ ಎಲ್ಲಿ ಮೇಯಲು ಹೋಗಿತ್ತು?"[೧೧೪] ಎಂದೆಸೆಯುವ ಮಂಗಲಸಿಂಗ್‌ನ ಪ್ರಶ್ನೆಗಳಲ್ಲಿ ನಮ್ಮ ದೇಶದ ಇಂದಿನ ಪರಿಸ್ಥಿತಿಯೇ ಅಡಗಿದೆ. ಇದರಿಂದಾಗಿ ಓದುಗರಿಗೆ ಮಂಗಲಸಿಂಗ್‌ನನ್ನು ಕಂಡರೆ. ಸಹಜವಾಗಿಯೇ ಸಹಾನುಭೂತಿ ಬರುವ ಸಾಧ್ಯತೆಯಿದೆ. ಅದು ಲೇಖಕರಲ್ಲಿಯೂ ಇದ್ದುದು ಸ್ಪಷ್ಟ. "ಮಂಗಲಸಿಂಗ್ ಸರಕಾರಕ್ಕೆ ಸಿರಿಮಂತರಿಗೆ ಸಮಾಜದ್ರೋಹಿಗಳಿಗೆ ವಿರೋಧಿಯಾಗಿ ದುಷ್ಟನಾಗಿ ಕಂಡಿರಬಹುದು. ಆದರೆ ಆತನನ್ನು ಪೂಜಿಸುವ ಜನರ ಸಂಖ್ಯೆಯನ್ನು ಅಳೆದರೆ.... ಆತನನ್ನು ಗೌರವದಿಂದ ಮರ್ಯಾದೆಯಿಂದ ಕಾಣುವವರ ಸಂಖ್ಯೆ ಅಗಾಧ ಪ್ರಮಾಣದಲ್ಲಿತ್ತು. ಆ ಪ್ರದೇಶದ ನೂರಾರು ಗ್ರಾಮಗಳಲ್ಲಿ ಮಂಗಲಸಿಂಗ್ ಪೂಜನೀಯ ವ್ಯಕ್ತಿಯಾಗಿದ್ದ. ಕೆಲವರು ತಮ್ಮ ಮನೆಗಳಲ್ಲಿ ಭಾಯೀಜಿಯ ಭಾವಚಿತ್ರ ಹಚ್ಚಿದ್ದು"[೧೧೫] ನೋಡಿದರೆ ಮಂಗಲಸಿಂಗ್‌ನ 'ಸಾಮಾಜಿಕನ್ಯಾಯ' ಅರಿವಾಗದೇ ಇರದು. ಬಡವರಿಗೆ ದೀನದಲಿತರಿಗೆ. ಅನಾಥರಿಗೆ ವೃದ್ಧರಿಗೆ ಅವರಿದ್ದಲ್ಲಿಗೇ ಹೋಗಿ ಸಹಾಯ ಮಾಡುವ ಭಾಯೀಜಿಯ ಕಾರ್ಯವೈಖರಿ ವಿಚಿತ್ರವಾದರೂ ಸತ್ಯ. "ಅವು ನಮ್ಮ 'ಬಗಾವತ್'ದ ಧರ್ಮಕಾರ್ಯಗಳು. ಈಗನೋಡಿರಿ. ನಮ್ಮೆಲ್ಲರ ಸಂಸಾರಗಳನ್ನು ನೋಡಿಕೊಳ್ಳಬೇಕು. ನಮ್ಮ ಪ್ರದೇಶದ ಬಡಬಗ್ಗರಿಗೆ ಅನ್ಯಾಯ-ಅತ್ಯಾಚಾರಕ್ಕೆ ಒಳಗಾದವರಿಗೆ ನೆರವು ನೀಡಬೇಕು. ಇದಕ್ಕೆಲ್ಲ ನಾವು ಹಣಸಂಗ್ರಹಿಸಲೇಬೇಕಲ್ಲವೆ? ಅದೇನು? ಇದ್ದವರಿಂದ ಕಸಿಯುತ್ತೇವೆ. ಇಲ್ಲದವರಿಗೆ ಕೊಡುತ್ತೇವೆ. ಈ ನಡುವೆ ನಾವು ಬದುಕುತ್ತೇವೆ...."[೧೧೬] ಎಂದೆನ್ನುವ ಚನೇಸರನ ಸಮರ್ಥನೆಯಲ್ಲಿ ಮಾರ್ಕ್ಸನ ಸಿದ್ಧಾಂತದ ಬೇರುಗಳಿವೆ.

---

೧೧೩. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೫೧

೧೧೪. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೫೧

೧೧೫. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ, ಪುಟ ೫೮

೧೧೬. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ, ಪುಟ ೯೭

"ಭಾಗಿಗಳಿಗೆ ಪತ್ನಿಯರಿಗಿಂತ ಉಪಪತ್ನಿಯರೇ ಹೆಚ್ಚು"[೧೧೭] ಆದರೆ ಭಾಯೀಜಿ ತಮ್ಮ ತಂಡದವರಿಗೆ ಅಂಥ ಅವಕಾಶ ಕೊಡದೆ ಅಂಥ ಸಂಬಂಧಗಳೇನಾದರೂ ಕಂಡುಬಂದರೆ. ಮದುವೆ ಮಾಡಿಬಿಡುತ್ತಿದ್ದ. ಇದಕ್ಕೆ ದುಲಾರಿಯೇ ಸಾಕ್ಷಿ. ವೃತ್ತಿಯಿಂದ ದರೋಡೆಕೋರರಾದರೂ. ಪ್ರವೃತ್ತಿಯಿಂದ ಸಮಾಜಚಿಂತಕರಾದ ಆ ಡಕಾಯಿತರ ಬದುಕು ವಿಚಿತ್ರವೆನಿಸಿದರೂ ಕೆಟ್ಟದ್ದಾಗಿರಲಿಲ್ಲ. ಇವರು ಹೆಣ್ಣುಮಕ್ಕಳಿಗೆ ಪೂಜ್ಯವಾದ ಸ್ಥಾನಕೊಟ್ಟಿದ್ದು. ಕಾದಂಬರಿಯುದ್ದಕ್ಕೂ ಅಚ್ಚೊತ್ತಿದಂತಿದೆ. ಹೇಮವಂತಿಯಂಥ ಸಾಧ್ವಿಯಿರುವ ಆ 'ಪರಿವಾರ'ದಲ್ಲಿ ವಿವಿಧ ಕೋಮುಗಳಿಂದ ಬಂದವರಿದ್ದರೂ ಅವರಲ್ಲಿ ಪ್ರೀತಿ-ವಿಶ್ವಾಸಕ್ಕೆ ಕೊರತೆಯಿರಲಿಲ್ಲ. ಕಾಯ್ದೆ ಕಾನೂನುಗಳು ಮಾಡಲಾರದ ಕೆಲಸಗಳನ್ನು ಮಂಗಲಸಿಂಗ್‌ನ ಬಂದೂಕು ಮಾಡುತ್ತಿತ್ತು. ಹಣಕ್ಕಾಗಿ ವರದಕ್ಷಿಣೆಗಾಗಿ ಪೀಡಿಸುವ "ಲಗ್ನವಾದ ಬಳಿಕ ತಂದೆ ಹೋಂಡಾ ಮೋಟರ ಸೈಕಲ್. ಸೋಫಾಸೆಟ್. ಗೋದ್ರೇಜ ಕಪಾಟು. ಎಲ್ಲವನ್ನು ಅಳಿಯನಿಗೆ ಸಲ್ಲಿಸಿದ"[೧೧೮] ರೂ ಅಳಿಯ ಬೇಬಿಯನ್ನು ಕಾಡುತ್ತಿದ್ದುದೊಂದು ದೊಡ್ಡ ಸಮಸ್ಯೆಯಾಗಿತ್ತು. ಇನ್ನಷ್ಟು ತಂದೆಯಿಂದ ಕೇಳಬೇಕೆಂಬುದು ಬೇಬಿ ಅತ್ತೆ-ಮಾವಂದಿರ ಹಂಚಿಕೆ. ಇಂಥ ಹಂಚಿಕೆಗಳಿಗೆ ಭಾಯೀಜಿಯ ಬಂದೂಕೇ ಉತ್ತರ ನೀಡುತ್ತಿತ್ತು. "ಕಾನೂನು ತಿದ್ದಲಾರದ ಪರಿಸ್ಥಿತಿಯನ್ನು ಮಂಗಲಸಿಂಗ್‌ನ ಸಾಮರ್ಥ್ಯ ಅದನ್ನು ಸರಿಪಡಿಸಿತ್ತು"[೧೧೯] ಬೇಬಿಯನ್ನು ರಕ್ಷಿಸಿದ ಬಂದೂಕೇ ಪುತ್ತುವಿನ ಸೊಸೆಯನ್ನೂ ರಕ್ಷಿಸಿತ್ತು. ಹೆಣ್ಣುಮಕ್ಕಳ ಮೇಲೆ ನಡೆಯುವ ದೌರ್ಜನ್ಯ ಎಲ್ಲೇ ಇರಲಿ, ಅಲ್ಲಿಗೆ ಭಾಯೀಜಿಯ 'ಬಂದೂಕು' ಹಾಜರು. ಇದು ಕಾದಂಬರಿಗೆ ಒಂದು ನೈತಿಕ ಸ್ಥೈರ್ಯವನ್ನು ತುಂಬಿದೆ. ಹೆಣ್ಣುಮಕ್ಕಳನ್ನು ಮಾರಾಟ ಮಾಡುವುದೇನೂ ನಮ್ಮ ದೇಶದಲ್ಲಿ ಹೊಸದಲ್ಲ. ಅಂಥ ಅನೇಕ ತಲೆಹಿಡುಕರಿಗೆ ಮಂಗಲಸಿಂಗ್ ಪಾಠಕಲಿಸುತ್ತಲೇ ಇದ್ದ. ಕೊನೆಯ ಒತ್ತೆಯಾಳು ಇದಕ್ಕೆ ಸಾಕ್ಷಿಯಾಗಿದ್ದನಷ್ಟೇ ಫರೀದಾಬಾದದ ಅಗರವಾಲನಂಥ ಶ್ರೀಮಂತನ ಹಣವನ್ನು ಕಸಿದು. ಭೂಷಣನಂಥ ದುರ್ವ್ಯಸನಿ ಯುವಕನ ತಂದೆಗೆ ಹಂಚುವುದರಲ್ಲಿ ಯಾವ ತಪ್ಪಿದೆ ?

ಹಾಗೆ ನೋಡಿದರೆ ಭಾರತದಲ್ಲಿ ಡಕಾಯಿತರಿಗೆ ಆಶ್ರಯ ನೀಡುವವರು ರಾಜಕಾರಣಿಗಳೇ. ಚುನಾವಣೆ ಬಂತೆಂದರೆ. ಸಾಕು. ಖಾದಿ ಜುಬ್ಬಾಗಳು ಕಣಿವೆಯತ್ತ ಅಡ್ಡಾಡುತ್ತವೆ. ಇದರಿಂದ ಖಾಕಿಗಳಿಗೂ ಲಾಭ. ಈಸು ಪೋಲೀಸ್‌ನಂತವರು ನೆಪಮಾತ್ರ. ರಜವಾನಂಥ ದುಷ್ಟರು ಎಲ್ಲೆಲ್ಲೂ ಇರಬಹುದು. ಹೆಣ್ಣುಮಕ್ಕಳ ಶೀಲವೆಂದರೆ. ಇವರಿಗೆ ಹುಡುಗಾಟವಾಗಿರಲೂ ಸಾಕು. ಭೂಷಣನಂತವರನ್ನು ಇವರು ತಿಗಣೆಯಂತೆ ಹೊಸಗಿ ಹಾಕಲುಬಹುದು. ಇಂಥವರ ಧಾರ್ಷ್ಟ್ಯಕ್ಕೆ ಹಳ್ಳಿಯ ಮುಗ್ಧರು ಕೇವಲ ಮೂಕಪ್ರೇಕ್ಷಕರು. ಆದರೆ ಭಾಯೀಜಿಯ ಬಂದೂಕು ಮಾತ್ರ ಇಂಥವರಿಗೆ ತಕ್ಕ ಶಾಸ್ತಿ ಮಾಡಲು ಸಾಧ್ಯ. "ಭಾಯೀಜಿ. ದೇವರು ನಿಮಗೆ ಒಳ್ಳೆಯದನ್ನು

---

೧೧೭. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೫೯

೧೧೮. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೬೯

೧೧೯. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೮೫

ಮಾಡಲಿ. ಊರಿಗೆ ದೊಡ್ಡ ಉಪಕಾರ ಮಾಡಿದ್ದಿರಿ. ಒಬ್ಬ ಕೌರವ ಸತ್ತಂತೆ ಆಯಿತು"[೧೨೦] ಎಂದು ಊರಿನ ಜನ ನಿಟ್ಟುಸಿರಿಟ್ಟಿದ್ದೂ ಉಂಟು. "ಈಗ ನಾವು ಮಾಡುತ್ತಿರುವುದು ಅಪರಾಧವೆಂದು ತಿಳಿದಿಲ್ಲ. ಭಾಯೀಜಿ ಕೂಡ ಇದೇ ತತ್ವದವರು ದುಷ್ಟರಿಗೆ ಶಿಕ್ಷೆ-ಶಿಷ್ಟರಿಗೆ ರಕ್ಷೆ. ಇದು ದೇವರು ಮಾಡಬೇಕಾದ ಕೆಲಸ. ಇದು ನಮ್ಮ 'ಭಾಗಿ' ಧರ್ಮದಲ್ಲೂ ಅಪರಾಧವೆ ಅಲ್ಲ...."[೧೨೧] ವೆನ್ನುವ ಚನೇಸರನ ಮಾತುಗಳಲ್ಲಿ ಸತ್ಯಾಂಶವಿಲ್ಲದಿಲ್ಲ. "ಒಂದು ರೀತಿಯಲ್ಲಿ ನೀವು ಧರ್ಮದೇವತೆಗಳು"[೧೨೨] ಎಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುವ ಲೇಖಕರ ಮನಸ್ಸಿನಲ್ಲಿ 'ಸಾಮಾಜಿಕ ನ್ಯಾಯ'ದ ತುಡಿತವಿದ್ದಂತಿದೆ.

ಕಾದಂಬರಿಯಲ್ಲಿ ದುಲಾರಿಯ ಬಂಧನವೊಂದು ಕಾದಂಬರಿಗೆ ಹೊಸದಿಕ್ಕನ್ನೇ ತೋರುತ್ತದೆ. ಪೋಲೀಸ್‌ರ ಮೇಲಿನ ಮಡುಗಟ್ಟಿದ ತ್ವೇಷ-ಅಸೂಯೆಗಳು ಸ್ಫೋಟಗೊಳ್ಳುತ್ತವೆ. ಎರಡು ದಿನಗಳವರೆಗೆ ನಡೆದ ಹೋರಾಟದಲ್ಲಿ ಚನೇಸರ ದುಲಾರಿಯನ್ನು ಬಂಧಮುಕ್ತಳನ್ನಾಗಿ ಮಾಡುವಲ್ಲಿ ಯಶಸ್ವಿಯಾದರೂ. ಪೋಲಿಸರ ಗುಂಡುಗಳು ಅವನ ಎದೆಯನ್ನು ಸೀಳಿಹಾಕಿದ್ದವು. ಅವನ ಶವಕ್ಕೆ ಲೇಖಕರೇ ಬೆಂಕಿಯಿಟ್ಟಿದ್ದು ವಿಚಿತ್ರವೆನಿಸಿದರೂ ಅವರ ಪ್ರೀತಿ-ವಿಶ್ವಾಸಕ್ಕೆ ಸಾಕ್ಷಿಯಾಗಿತ್ತು. ಕೊನೆಗೆ ತನ್ನ 'ಪತಿ'ಯ ಬೆಂಕಿಗೆ ದುಲಾರಿ ತಾನೂ ಹಾರಿ ಪ್ರಾಣ ಬಿಟ್ಟ ಪ್ರಸಂಗ. 'ಸತಿ' ಹೋದ ಅವಳ 'ಅಮರಪ್ರೇಮ'ವನ್ನೇ ಸಾರುತ್ತದೆ. ಕಾದಂಬರಿಯ ಕೊನೆಯಲ್ಲಿ ಭಾವ-ಭಾಷೆಗಳು ಹೆಪ್ಪುಗಟ್ಟಿದಂತಿವೆ. ಎಂಥ ಕಲ್ಲೆದೆಯವನೂ ಕರಗಬಹುದಾದ ಸನ್ನಿವೇಶ. ಡಕಾಯಿತರಲ್ಲಿಯೂ ಎಂಥ ಭಾವಬಂಧ! ಅದೆಂತ ಪ್ರೇಮ! ಅದೆಂತ ವಿಶ್ವಾಸ!

ಹೆಚ್ಚು ಗೊಂದಲವಿಲ್ಲದ ವರ್ಣನೆಯ ವೈಭವೀಕರಣವಿಲ್ಲದ ವಾಸ್ತವ ಸಂಗತಿಗಳನ್ನೇ ಬಿಚ್ಚಿಡುತ್ತ ಹೋಗುವ ಕಾದಂಬರಿ ಒಂದೊಂದು ಶೋಷಿತ ವ್ಯಕ್ತಿ-ಕುಟುಂಬ-ಸಮಾಜಕ್ಕೆ ವ್ಯಾಖ್ಯಾನ ಬರೆದಂತಿದೆ. "ಬಹುಕಾಲ ಮನಸ್ಸನ್ನು ಕೆಣಕುವ ಕಾದಂಬರಿಗಳಲ್ಲಿ ಬೆಳಗಲಿಯವರ ಈ ಕೃತಿಯೂ ಒಂದು"[೧೨೩] ಎನ್ನುವ ಡಾ. ಎ. ಎಸ್. ವೇಣುಗೋಪಾಲರಾವ್ ಅವರ ಮಾತು ಅಕ್ಷರಶಃ ಸತ್ಯವಾದುದು. ವಾಸ್ತವ ಸಂಗತಿಗಳನ್ನು ಹೇಳುವ ಕಾದಂಬರಿ ಉದ್ದಕ್ಕೂ ಕುತೂಹಲಕಾರಿಯಾಗಿಯೇ ಓದಿಸಿಕೊಂಡು ಹೋಗುತ್ತದೆ. ಗಂಭೀರವಾದ ಸಾಮಾಜಿಕ ಸಮಸ್ಯೆಗಳನ್ನು ಎತ್ತಿತೋರಿಸುವುದರೊಂದಿಗೆ ಆ ಸಮಸ್ಯೆಗಳಿಗೆ 'ಬಂದೂಕನ್ನೇ' ಪರಿಹಾರವಾಗಿಸಿಟ್ಟ ರೀತಿ. ಜಡಗಟ್ಟಿದ ಸಮಾಜದಲ್ಲಿ ಉಲ್ಬಣಗೊಳ್ಳುತ್ತಿರುವ ಸಮಸ್ಯೆಗಳನ್ನು ಬಿಡಿಸಿಕೊಳ್ಳುವ ಜವಾಬ್ದಾರಿ ಯುವಕರ ಮೇಲೆಯೇ ಇದೆ. ಆದರೆ ಉತ್ತರಭಾರತದ ಯುವಕರ ರಕ್ತ ದಕ್ಷಿಣದವರಿಗಿಂತ ಹೆಚ್ಚು ಬಿಸಿಯಾಗಿದ್ದು ಹಿಂಸೆಗೆ-ಪ್ರತಿಹಿಂಸೆ ಸಿದ್ಧವಾಗಿಯೇ ಇರುತ್ತದೆ. ಇದಕ್ಕೆ ಮಂಗಲಸಿಂಗ್‌ನೇ ನಿದರ್ಶನ.

---

೧೨೦. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ, ಪುಟ ೧೮೦

೧೨೧. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೧೮೪

೧೨೨. ದು. ನಿಂ. ಬೆಳಗಲಿ : ಚಂಬಲ್ ಕಣಿವೆಯಲ್ಲಿ. ಪುಟ ೧೮೪

೧೨೩. ಎ. ಎಸ್. ವೇಣುಗೋಪಾಲರಾವ್. ಅಂತಸ್ತಿನ ಮನೆ ಕಾದಂಬರಿಯ ಬೆನ್ನುಪುಟದಿಂದ

ಒಂದೊಮ್ಮೆ 'ಚಂಬಲ್ ಕಣಿವೆ' ಯ ಡಕಾಯಿತರು ಭಾರತೀಯ ಜನ-ಮನದಲ್ಲಿ ನಡುಕ ಹುಟ್ಟಿಸಿದವರು. ಅಂಥ ವಸ್ತುವನ್ನೇ ಆಯ್ಕೆ ಮಾಡಿಕೊಂಡ ಬೆಳಗಲಿಯವರು. ರೋಮಾಂಚನಕಾರಿಯಾದ ಕಥೆಯಿಂದ ಸಹಜವಾಗಿಯೇ ಅನೇಕ ಓದುಗರ ಮೆಚ್ಚುಗೆ ಪಡೆದರಲ್ಲದೆ. ಅಂಥ ಡಕಾಯಿತರಿಂದ ನೀವು ಹೇಗೆ ಪಾರಾದಿರಿ ? ಎಂಬಂತಹ ಕುತೂಹಲದ ಪ್ರಶ್ನೆಗಳನ್ನು ಎದುರಿಸಿದರು. ಕಾದಂಬರಿಕಾರರು ಡಕಾಯಿತರೊಂದಿಗೆ ತಾವೂ ಒಬ್ಬರಾಗಿದ್ದುಕೊಂಡೇ ಕಥಾನಿರೂಪಣೆ ಮಾಡಿದುದು ತುಂಬ ಹಿತವಾದ ಶೈಲಿ. ಎಲ್ಲೂ ಕಾದಂಬರಿಯ ಶಕ್ತಿ ಕುಂದಿಲ್ಲ. ಡಕಾಯಿತರು ಬೆಳೆದಂತೆ ಅದೂ ಬೆಳೆದು ಸದೃಢವಾಗುತ್ತಲೇ ಹೋಗಿದೆ. ಸಮಾಜದ ಇನ್ನೊಂದು ಮುಖವನ್ನು ತೋರಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಡಕಾಯಿತರ ಬದುಕನ್ನು ಸಹಾನುಭೂತಿಯಿಂದ ಚಿತ್ರಿಸಿದ್ದಲ್ಲದೆ. ಅವರ ಬದುಕನ್ನು 'ಸ್ಕ್ಯಾನಿಂಗ್' ಮಾಡಿದ್ದಾರೆ. ಕಾನೂನಿನ ದೃಷ್ಟಿಯಲ್ಲಿ ಅವರ ಬದುಕು ಅಪರಾಧವೆನಿಸಿದರೂ. ಅವರ 'ಬಂದೂಕಿನ ಗುರಿ' ಯನ್ನು ಮೆಚ್ಚಲೇಬೇಕಾಗುತ್ತದೆ. ಹಾಗೆಂದು ರಕ್ತದೋಕುಳಿಯೇ ಸಮಾಜದ ಪ್ರತಿಸಮಸ್ಯೆಗೂ ಪರಿಹಾರವೆಂದಲ್ಲ. ಕಾನೂನಿನ ತೊಡಕುಗಳನ್ನು ಸುತ್ತಿಕೊಳ್ಳದೆ. ಸಾಹಿತ್ಯಿಕವಾಗಿ ಹೇಳುವುದಾದರೆ 'ಚಂಬಲ್ ಕಣಿವೆಯಲ್ಲಿ' ಒಂದು ಉತ್ತಮ ಸಾಮಾಜಿಕ ಕಾದಂಬರಿ. ಸಾಮಾಜಿಕ-ಪತ್ತೇದಾರಿ ಕಾದಂಬರಿಯೆನ್ನಬಹುದು.

## ಪ್ರಾದೇಶಿಕ ಕಾದಂಬರಿಗಳು

ಅಧ್ಯಯನದ ಅನುಕೂಲಕ್ಕಾಗಿ ಕನ್ನಡ ಕಾದಂಬರಿಗಳ ವರ್ಗೀಕರಣವನ್ನು ಅವಲೋಕಿಸಿದಾಗ 'ಪ್ರಾದೇಶಿಕ ಕಾದಂಬರಿ' ಎಂಬುದೊಂದು ಪ್ರಕಾರವಾಗಿದೆಯೇ ಹೊರತು ಅದೊಂದು ಪರಂಪರೆಯಾಗಿ ಬೆಳೆದಿಲ್ಲವೆಂಬುದು ಸುಸ್ಪಷ್ಟ. ನವೋದಯ ಘಟ್ಟ ಮೊದಲಗೊಂಡು ದಲಿತ-ಬಂಡಾಯ ಸಾಹಿತ್ಯದವರೆಗಿನ ಎಲ್ಲ ಘಟ್ಟದಲ್ಲಿಯೂ ಪ್ರಾದೇಶಿಕ ಕಾದಂಬರಿಗಳು ರಚನೆಗೊಂಡಿವೆ. ಭಾರತ ಅನೇಕ ಪ್ರಾಂತ. ಧರ್ಮ. ಜಾತಿ. ಭಾಷೆ. ಆಚಾರ-ವಿಚಾರ. ಉಡುಗೆ-ತೊಡುಗೆ. ಆಹಾರ-ವಿಹಾರ. ವಿಭಿನ್ನ ಸಂಸ್ಕೃತಿಗಳ ವಿಶಾಲದೇಶ. ಈ ವಿಭಿನ್ನ ಸಾಮಾಜಿಕ-ಸಾಂಸ್ಕೃತಿಕ ಬದುಕನ್ನೇ ಸಾಹಿತ್ಯದಲ್ಲಿ ಹಿಡಿದಿಡುವ ಪ್ರಯತ್ನಗಳು ನಡೆದಿವೆ. ಕರ್ನಾಟಕವಂತೂ ಭೌಗೋಳಿಕ-ಭಾಷಿಕ-ಸಾಂಸ್ಕೃತಿಕ ವೈವಿಧ್ಯಗಳ ಸಂಗಮಸ್ಥಳ. ಸಹ್ಯಾದ್ರಿ ಬೆಟ್ಟಗಳ ಸಾಲು ಒಂದೆಡೆಯಾದರೆ. ವಿಜಾಪುರ-ಬೀದರನಂಥ ಬಯಲು ಸೀಮೆ ಇನ್ನೊಂದೆಡೆ. ಮತ್ತೊಂದೆಡೆ ಕರಾವಳಿಯ ಭೋರ್ಗರೆತ. ಈ ಭೌಗೋಳಿಕ ವೈವಿಧ್ಯತೆಗಳಿಂದಾಗಿ ಹಾಗೂ ಮರಾಠಿ. ತಮಿಳು. ತೆಲುಗು. ಮಲಯಾಳಂ ಭಾಷೆಗಳ ಸಂಪರ್ಕದಿಂದಾಗಿ ಕನ್ನಡದಲ್ಲಿ 'ಸಾಹಿತ್ಯಿಕ-ಸಾಮಾಜಿಕ' ವಿಭಿನ್ನತೆಗಳು ಸಹಜವಾಗಿಯೇ ತಲೆದೋರಿವೆ: ಕಾದಂಬರಿಗಳಲ್ಲಿಯೂ ಈ 'ವೈವಿಧ್ಯತೆ' ಹಾಸುಹೊಕ್ಕಾಗಿ ಹರಿದು ಬಂದಿದೆ.

## ಪ್ರಾದೇಶಿಕ ಕಾದಂಬರಿಗಳ ಸ್ವರೂಪ-ಲಕ್ಷಣ

'ಪ್ರಾದೇಶಿಕ' ಎಂಬ ಪದ 'ಪ್ರದೇಶ' ಎಂಬ ಪದದಿಂದಲೇ ಬಂದಿರುವುದರಿಂದ "ಲೇಖಕನ ನೆಲೆ ಅವನು ನಿಂತ ತುಂಡು ಭೂಮಿಮಾತ್ರವಲ್ಲ. ಅವನನ್ನು ಯಾವುದು ಎತ್ತಿಹಿಡಿದಿದೆಯೋ, ಹೋಗುವ ಅವನನ್ನು ಹಿಂದೆ ಸರಿಸುತ್ತಿದೆಯೋ, ಮುಂದುವರೆಯಲು ಬೆನ್ನಗಾಳಿ ಆಗುತ್ತಿದೆಯೋ ಅದೆಲ್ಲ ಲೇಖಕನ ನೆಲೆಯಾಗುತ್ತದೆ. ಈ ನೆಲೆಯನ್ನೇ ಸಾಹಿತ್ಯದ ಪರಿಭಾಷೆಯಲ್ಲಿ ನಾವು 'ಪ್ರಾದೇಶಿಕತೆ' ಎಂದು ಗುರುತಿಸುತ್ತೇವೆ"[೧] ಎಂದು ಹೇಳಬಹುದಾದರೂ ಪ್ರಾದೇಶಿಕ ಕಾದಂಬರಿಯ ವ್ಯಾಖ್ಯೆ ಕೊಡವುದು ತುಂಬ ಕಠಿಣ ಕೆಲಸ. ಬ್ರಿಟಾನಿಕಾ ವಿಶ್ವಕೋಶದಲ್ಲಿ – " The regional novel as a serious genere has been developed in many directions since Maria Edgeworth's studies of Irish provincial life and Balzae's category of scences of provincial life in ' La Comede Humane ' There are for example, the American novels of south and many great fictional studies of rural urban and metropolitan communities - Geoge Eliot's ' Middle march ' and Balzac's 'La pere Garriot' "[೨] 'ಪ್ರಾದೇಶಿಕ ಕಾದಂಬರಿಗಳು ಹಳ್ಳಿಯ ಪಟ್ಟಣದ, ಅಂತರ್‌ರಾಷ್ಟ್ರೀಯ ಸಮ್ಮಿಶ್ರ ಶ್ರೇಣಿಯ ಜನಜೀವನವನ್ನು ಬಿಡಿ-ಬಿಡಿಯಾಗಿಯೂ ಇಡಿಯಾಗಿಯೂ ಚಿತ್ರಿಸುತ್ತವೆ' ಎಂಬಂತಹ ವಿವರಣೆಯಿದೆ. ಇದು ಸೂಕ್ತವೂ ಹೌದು.

ಪ್ರಾದೇಶಿಕ ಕಾದಂಬರಿಯನ್ನು ವ್ಯಾಖ್ಯಾನಿಸುತ್ತ ಫೀಲಿಜ್ ಬೆಂಟ್ಲೆ ಅವರು–

" The regional language is the national novel carried to the degree further of sub-division. It is novel which concentration on a particular part, a particular regionett of a nation depicts of the life of that region such a way that the reader is concious of that characteristics from others in that common mother land " ಎಂದು ವ್ಯಾಖ್ಯೆ ನೀಡುತ್ತಾರೆ. ಇದೇ ಅಭಿಪ್ರಾಯಕ್ಕೆ ಸರಿಸಮನಾದ ವಿಚಾರವೊಂದು ಅಮೇರಿಕಾ ವಿಶ್ವಕೋಶದಲ್ಲಿ – " The term regionalism is applied to a variety of literary movements which emphasize the use of unique interests, Language and Culture of each local unit in country as fundamental elements of aggregate national literature "[೩] ಎಂದು ಬಂದಿದೆ. 'ಪ್ರಾದೇಶಿಕತೆ' ಎಂಬುದು ಆಯಾಪ್ರದೇಶಗಳ ವಿಶಿಷ್ಟವಾದ ಭಾಷೆ, ಸಂಸ್ಕೃತಿ, ಮತ್ತು ಅಲ್ಲಿನ ಜನಗಳ ಆಸೆ-ಆಕಾಂಕ್ಷೆಗಳನ್ನು ವಿವರಿಸುವ ಪ್ರಾದೇಶಿಕ ಘಟನೆಗಳನ್ನೊಳಗೊಂಡ ರಾಷ್ಟ್ರೀಯ ಸಾಹಿತ್ಯದ ಭಾಗವಾಗಿಯೇ ಬೆಳೆಯುತ್ತದೆ. ಹೀಗೆ 'ಪ್ರಾದೇಶಿಕ' ವೆಂಬುದು ಒಂದು ರಾಷ್ಟ್ರದ ಚಿಕ್ಕ ಘಟಕವಾಗಿರಬಹುದು. ಅತೀ ವಿಸ್ತಾರವಾದ ಸಮ್ಮಿಶ್ರವರ್ಗಶ್ರೇಣಿಯನ್ನು ಒಳಗೊಂಡಿರಬಹುದು. ಅಂದರೆ ಪ್ರಾದೇಶಿಕ ಕಾದಂಬರಿಗಳು ಇತರ ಕಾದಂಬರಿಗಳಂತೆ ವಿಶಾಲವಾದ 'ಜನಜೀವನ'ವನ್ನೇ ಕುರಿತಾದುವು.

---

೧. ಸಿದ್ದಣ್ಣ ಉತ್ನಾಳ : ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ; ಪುಟ ೨

೨. Encyclopedia Britanica Vol : 16

೩. Encyclopedia America Vol : 17, ಪುಟ. ೪೭೩

'ಮರಳಿ ಮಣ್ಣಿಗೆ' ಕಾದಂಬರಿಯನ್ನು ವಿಮರ್ಶಿಸುತ್ತ ಶ್ರೀ ಗಿರಡ್ಡಿ ಗೋವಿಂದರಾಜ ಅವರು "ಪ್ರಾದೇಶಿಕ ಎಂದರೆ ಬಹುಶಃ ಯಾವುದೇ ಒಂದು ಪ್ರದೇಶದ (ನಗರಪ್ರದೇಶಗಳಲ್ಲಿ) ಜನಜೀವನದ ಚಿತ್ರಣವನ್ನು ಸವಿಸ್ತಾರವಾಗಿ ಕೊಡುವ ಕಾದಂಬರಿ"[೪] ಆದ್ದರಿಂದ ಪ್ರಾದೇಶಿಕ ಕಾದಂಬರಿಗಳೆಂದರೆ, ಹಳ್ಳಿಯ ಜೀವನವನ್ನೇ ಕುರಿತಾದದ್ದಿರಬೇಕೆಂಬ ನಿರ್ಣಯಕ್ಕೆ ಬರುತ್ತಾರೆ. ಆದರೆ ಅವರ ಈ ನಿರ್ಣಯ ಪ್ರಾದೇಶಿಕ ಕಾದಂಬರಿಗಳನ್ನು 'ಸೀಮಿತವಲಯ'ಕ್ಕೆ ನೂಕಿದೆ. ಈ ಬಗ್ಗೆ ಕೀರ್ತಿನಾಥ ಕುರ್ತಕೋಟಿಯವರ 'ನಡೆದು ಬಂದ ದಾರಿ' ಯಲ್ಲಿ ಪ್ರಸ್ತಾಪವಿದೆಯಾದರೂ ಅದೂ ಕೂಡ 'ಸೀಮಿತ ಗ್ರಹಿಕೆ'ಯೇ ಆಗಿದೆ. ಗಂಗೋತ್ರಿಯಲ್ಲಿ 'ಕಾನೂರು ಸುಬ್ಬಮ್ಮ ಹೆಗ್ಗಡತಿ'ಯನ್ನು ವಿಮರ್ಶಿಸುತ್ತ ಶ್ರೀ ಎಂ. ರಾಮರಾವ್ ಅವರು– "....ಅಂತೆಯೇ ಅದು ಪ್ರಾದೇಶಿಕವಾಗಿರುವುದು ಮಾತ್ರವಲ್ಲದೆ ಸಾರ್ವತ್ರಿಕ ಮೌಲ್ಯವನ್ನು ಹೊಂದಿರುವುದಾಗಿದೆ" ಎಂದು ಹೇಳಿದ್ದು ಸಿಂಧುವೆನಿಸುತ್ತದೆಯಲ್ಲದೆ ಪ್ರಾದೇಶಿಕ ಕಾದಂಬರಿಗಳಿಗೆ ಸಾರ್ವತ್ರಿಕ ಮನ್ನಣೆ ತಂದುಕೊಟ್ಟಿದೆ. ಯಾವುದೇ ಕಾದಂಬರಿಯನ್ನು ತೆಗೆದುಕೊಂಡರೂ ಕೂಡ ಅದರಲ್ಲಿ ಒಂದು ಪ್ರದೇಶದ ಕಥೆ ಇರುತ್ತದೆ. ಅಷ್ಟೇ ಅಲ್ಲದೆ ಒಂದು ಭೂಭಾಗದ ಬದುಕಿನ ಜೊತೆಗೆ ಅದು ಸಂಬಂಧ ಪಡೆದಿರುತ್ತದೆ. ಹಾಗೆಂದು ಇಂಥ ಕಾದಂಬರಿಗಳನ್ನೆಲ್ಲ ಪ್ರಾದೇಶಿಕವೆಂದು ಪರಿಗಣಿಸಬಹುದೇ ? ಕೇವಲ ಒಂದು ಪ್ರದೇಶದ ಕಥೆ ಹಾಗೂ ಹಲವು ಘಟನೆಗಳನ್ನು ಹೊಂದಿದ ಮಾತ್ರಕ್ಕೆ ಅದನ್ನು ಪ್ರಾದೇಶಿಕ ಕಾದಂಬರಿಯೆಂದು ಪರಿಗಣಿಸಲಾಗದು.

ಪ್ರಾದೇಶಿಕತೆಯನ್ನು ನಿರ್ಧರಿಸುವ ಖಚಿತ ಮಾನದಂಡಗಳಿಲ್ಲವಾದರೂ ಒಂದು ಅಂದಾಜಿನ ಪ್ರಕಾರ 'ಯಾವ ಒಂದು ಕೃತಿ ತನ್ನ ಭಾಷೆ, ಸಂಸ್ಕೃತಿ, ಕಸಬು-ಕನಸು, ನಂಬಿಕೆಗಳು, ಆಚಾರ-ವಿಚಾರ, ಅಲ್ಲಿಯ ದೃಶ್ಯಗಳು, ನೆಲ-ಜಲ, ವಾಯು, ಉತ್ಸವ ಜನರ ಗುಣ ಸ್ವಭಾವ, ವ್ಯವಹಾರ, ಸ್ಥಳೀಯ ಜನಪದಗೀತೆಗಳು, ಸ್ವೀಕೃತ ನೈತಿಕ ವಿಚಾರಗಳ ಮೂಲಕ ಅಂಥ ಇತರೆಡೆಯ ಸಮಕಾಲೀನವಾದ ಬದುಕಿನ ಯಥಾರ್ಥ ದರ್ಶನಕ್ಕೆ ದಾರಿ ತೋರುತ್ತದೆಯೋ ಅಂಥ ಕಾದಂಬರಿಯನ್ನು 'ಪ್ರಾದೇಶಿಕ'ವೆಂದು ಪರಿಗಣಿಸಬಹುದು. ಹೃದಯಸ್ಪರ್ಶಿ ಪ್ರಾದೇಶಿಕ ವರ್ಣನೆಯು ಕಾದಂಬರಿಕಾರನಿಗೆ ವಿಶೇಷ ಹಿರಿಮೆ ಮತ್ತು ಕಥೆಯ ಸೌಷ್ಠವವನ್ನು ತಂದುಕೊಡುತ್ತದೆ. ಕೇವಲ ಸೀಮಿತ ಭೂಭಾಗವೊಂದರ ಜನಜೀವನವನ್ನು ಹೇಳಿದ ಮಾತ್ರಕ್ಕೆ ಯಾವೊಂದು ಕೃತಿಯೂ 'ಪ್ರಾದೇಶಿಕ' ವಾಗಲಾರದು. ಸಾಮಾಜಿಕ-ಸಾಂಸ್ಕೃತಿಕ-ಧಾರ್ಮಿಕ-ಆರ್ಥಿಕವಾಗಿಯೂ ಪರಿಚಲನಗೊಳ್ಳುವ ಸಮಸ್ತಜೀವನವನ್ನು ಚಿತ್ರಿಸುವ ಕೃತಿ ಮಾತ್ರ ಪ್ರಾದೇಶಿಕವಾಗಿರಲು ಸಾಧ್ಯ. ಇಂಥ ಒಂದು ಪ್ರಾದೇಶಿಕ ಕಾದಂಬರಿಯನ್ನು ಬರೆಯುವುದಕ್ಕೆ ಲೇಖಕನಿಗೆ ದೀರ್ಘವಾದ ಸಿದ್ಧತೆ ಬೇಕಾಗುತ್ತದೆ; ಕೇವಲ ಅಲ್ಲಿನ ಭೌಗೋಳಿಕ ಗೆರೆಗಳನ್ನು ಕೊರೆದ ಮಾತ್ರಕ್ಕೆ ಸಾಲದು. ಆ ಪ್ರದೇಶದ ಗಾಢವಾದ ಅನುಭವ ಬೇಕಾಗುತ್ತದೆ. ಅಲ್ಲದೆ ಅಂಥ ಸಮಾಜದ ತೀರ ಒಳಗಿನ ಸೂಕ್ಷ್ಮಗಳನ್ನು ಚಿತ್ರಿಸುವ ಲೇಖಕನ ಅರಿವಿನ ಜಗತ್ತು ಹಾಗೂ ವಸ್ತುಸ್ಥಿತಿಯ ತಿಳಿವುಗಳೆರಡೂ ಮುಖಾಮುಖಿಯಾದಾಗಲೇ ಪ್ರಾದೇಶಿಕ ಕಾದಂಬರಿಯ ಸಂವಿಧಾನ ಬಿರುಕಿಲ್ಲದೆ

---

೪. ಗಿರಡ್ಡಿ ಗೋವಿಂದರಾಜ: ಕಾದಂಬರಿ ವಸ್ತು ಮತ್ತು ತಂತ್ರ, ಪುಟ ೬೯

ಕಟ್ಟಿಕೊಳ್ಳುತ್ತದೆ-ಗಟ್ಟಿಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ – "ಯಾವ ಕಾದಂಬರಿಗಳಲ್ಲಿ ಯಾವುದೇ ವಿಶೇಷ ಪ್ರದೇಶದ ಜನಜೀವನದ ಸಮಗ್ರ ಚಿತ್ರಣವಿರುತ್ತದೆಯೋ. ಅರ್ಥಾತ್ ಭಾಷೆ. ವೇಷ-ಭೂಷಣ. ಆರ್ಥಿಕ ಜೀವನ. ಜಾತಿಗಳ ಪರಸ್ಪರ ಸಂಬಂಧ. ಸಾಂಸ್ಕೃತಿಕ. ಧಾರ್ಮಿಕ ವಿಕಾಸ. ಶಿಷ್ಟಾಚಾರ. ಚರಿತ್ರ. ಕಲೆ. ಶಿಕ್ಷೆ-ದೀಕ್ಷೆ ಮುಂತಾದವುಗಳ ವಿಸ್ತೃತ ನಿರೂಪಣೆಯಿರುತ್ತದೆಯೋ ಅದು ಪ್ರಾದೇಶಿಕ ಕಾದಂಬರಿ ಎನಿಸುತ್ತದೆ"[೫] ಎಂಬ ಮಾತು ಪ್ರಾದೇಶಿಕ ಕಾದಂಬರಿಯ ಸ್ವರೂಪವನ್ನು ಸ್ಪಷ್ಟಗೊಳಿಸುತ್ತದೆ.

"ಇಂದು ಪ್ರಾದೇಶಿಕ ಕಾದಂಬರಿ ಒಂದು ಪ್ರಕಾರವಾಗಿ ಬೆಳೆದು ಬಂದಿದೆ ಎಂಬ ವಿಷಯದಲ್ಲಿ ಯಾವ ಸಂಸಯವೂ ಇಲ್ಲ"[೬] ಯಾಕೆಂದರೆ. ಎಲ್ಲ ಘಟ್ಟಗಳ ಕಾಲಾವಧಿಯಲ್ಲಿಯೂ ಪ್ರಾದೇಶಿಕ ಕಾದಂಬರಿಗಳ ರಚನೆಯಾಗಿದ್ದು. ಅದು ಪ್ರಪಂಚದ ಬಹುತೇಕ ಭಾಷೆಗಳಲ್ಲಿ ತನ್ನ ವಿಸ್ತಾರವನ್ನು ಪಡೆದಿದೆ.

ಭೌಗೋಲಿಕವಾಗಿ ಸೀಮಿತಕ್ಷೇತ್ರವನ್ನು ಹೊಂದಿರುವ ಇಂಗ್ಲೆಂಡಿನಲ್ಲಿ ಬೇರೆ-ಬೇರೆ ಪ್ರದೇಶಗಳು ತಮ್ಮ ವೈಶಿಷ್ಟ್ಯಗಳನ್ನುಳಿಸಿಕೊಂಡಿದ್ದು: ಇಂಗ್ಲೀಷ ಸಾಹಿತ್ಯದಲ್ಲಿ ಪ್ರಾದೇಶಿಕ ಕಾದಂಬರಿಗಳ ಸುದೀರ್ಘ ಪರಂಪರೆಯೇ ಇದೆ. ಪ್ರಪಂಚದ ಪ್ರಥಮ ಮಹಿಳಾ ಪ್ರಾದೇಶಿಕ ಕಾದಂಬರಿಕಾರ್ತಿಯೆಂಬ ಪ್ರಶಂಸೆಗೆ ಕಾರಣಳಾದ ಮರಿಯಾ ಎಜವರ್ಥ ಕ್ರಿ. ಶ. ಸುಮಾರು ೧೮೦೦ ರಲ್ಲಿ ಅಯರ್ಲೆಂಡಿನ ಒಂದು ಕೃಷಿಕ ಹಳ್ಳಿಯನ್ನು ಕೇಂದ್ರವಾಗಿಟ್ಟುಕೊಂಡು ಕಾದಂಬರಿಗಳನ್ನು ರಚಿಸಿದ್ದಾಳೆ. "ಕ್ರಿ. ಶ. ಸುಮಾರು ೧೮೪೦ ರಿಂದ ೧೯೪೦ ರ ವರೆಗಿನ ಕಾಲಾವಧಿಯನ್ನು ಇಂಗ್ಲೀಷ ಪ್ರಾದೇಶಿಕ ಕಾದಂಬರಿಗಳ ಸುವರ್ಣಕಾಲವೆಂದು ಫೀಲಿಜ್ ಬೆಂಟ್ಲೆ ಕರೆಯುತ್ತಾನೆ"[೭] ಇಂಗ್ಲೀಷ ಕಾದಂಬರಿಕಾರರಲ್ಲಿ ಥಾಮಸ್ ಹಾರ್ಡಿ. ಜಾರ್ಜ್ ಇಲಿಯಟ್. ಚಾರ್ಲಸ್ ಬೆಂಟ್. ಅರ್ನೆಲ್ಡ್ ಜಿನೆಟಿಕ್‌ರ ಕಾದಂಬರಿಗಳು ಪ್ರಾದೇಶಿಕ ಚಿತ್ರಣದಲ್ಲಿ ಅತ್ಯುತ್ತಮವಾದವುಗಳು. ಥಾಮಸ್ ಹಾರ್ಡಿಯ "ದಿ. ರಿಟರ್ನ್ ಆಫ್ ದಿ ನೇಟಿವ್ಹ್" ಎಂಬುದು ಒಂದು 'ಪರಿಪೂರ್ಣ ಪ್ರಾದೇಶಿಕ ಕಾದಂಬರಿ' ಯೆನ್ನಬಹುದು. ಸರ್ ವಾಲ್ಟರ್ ಸ್ಕಾಟ್ ಒಬ್ಬ ಶ್ರೇಷ್ಠ ಐತಿಹಾಸಿಕ-ಪ್ರಾದೇಶಿಕ ಕಾದಂಬರಿಕಾರ. ಅರ್ನಾಲ್ಡ್ ಬೆನೆಟ್ ಕೂಡ ಇದೇ ಸಾಲಿನಲ್ಲಿ ನಿಲ್ಲುವ ಮತ್ತೊಬ್ಬ ಕಾದಂಬರಿಕಾರ.

ಅಮೇರಿಕದಲ್ಲಿಯೂ ಕೂಡ ಪ್ರಾದೇಶಿಕ ಕಾದಂಬರಿಯ ಪರಂಪರೆ ಪ್ರೌಢಾವಸ್ಥೆಯಲ್ಲಿದೆ. ವಿಲಿಯಂ ಪಾರ್ಕರ್. ಸಿಂಕ್ಲೇರ್ ಮೊದಲಾದವರು ಈ ಪರಂಪರೆಯನ್ನು ಶ್ರೀಮಂತಗೊಳಿಸಿದವರಲ್ಲಿ ಆದ್ಯರು. ಅವರ ಕೃತಿಗಳನ್ನು 'ಕ್ಲಾಸಿಕ್ಸ್' ಎಂದು ಪ್ರಶಂಸಿಸಲಾಗಿದೆ. ದಕ್ಷಿಣ ಮತ್ತು ಪೂರ್ವ ಅಮೇರಿಕೆಯ ಪ್ರಾಂತಗಳು ನ್ಯೂಯಾರ್ಕಿನ ದಬ್ಬಾಳಿಕೆ. ಶ್ರೇಷ್ಠತೆಗಳಿಗೆ ಪ್ರತಿಭಟನಾರ್ಥವಾಗಿ ಪ್ರಾದೇಶಿಕ ಸಾಹಿತ್ಯ ಸೃಷ್ಟಿ ವಿಪುಲವಾಗಿ ಬೆಳೆಯಿತು. ಈ ಗುಲಾಮಗಿರಿಯು 'ಅಂಕಲ್ ರಮಸ್' ದಂತಹ ಮಹಾಕಾದಂಬರಿಗೆ ಕಾರಣವಾಯಿತು.

---

೫. ಸಿದ್ದಣ್ಣ ಉತ್ನಾಳ : ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ. ಪುಟ ೮

೬. ಮಹಾದೇವ ಕಣವಿ : ಕನ್ನಡ ಪ್ರಾತಿನಿಧಿಕ ಪ್ರಾದೇಶಿಕ ಕಾದಂಬರಿಗಳು. ಪುಟ ೯೦

೭. ಮಹಾದೇವ ಕಣವಿ : ಕನ್ನಡ ಪ್ರಾತಿನಿಧಿಕ ಪ್ರಾದೇಶಿಕ ಕಾದಂಬರಿಗಳು. ಪುಟ ೯೧

ಅಮೇರಿಕದಲ್ಲಿ 'ಪ್ರಾದೇಶಿಕತೆ' ಎಂಬುದು ಕೇವಲ ಸಾಹಿತ್ಯಕ್ಕಷ್ಟೇ ಸೀಮಿತವಾಗದೆ. ಅದೊಂದು ಚಳುವಳಿಯ ರೂಪದಲ್ಲಿದ್ದುದು ಕಂಡು ಬರುತ್ತದೆ. ಒಟ್ಟಿನಲ್ಲಿ " Regional activity in literature has been varied and wide spread ". Local historical societies, folk societies and literary societies, have fostered research and creative writing concerned with local materials. Centres of such activity in several regions have become nationally known...... Local presses and many literary magazines have been established to promote new movements......"[೮] ಎಂಬುದು ಅಮೇರಿಕಾ ಪ್ರಾದೇಶಿಕ ಕಾದಂಬರಿಗಳ ವಿಚಾರವಾಗಿದೆ. ಪ್ರಥಮ ಯುದ್ಧದ ಅನಂತರ ಅಮೇರಿಕ ಪ್ರಾದೇಶಿಕ ಕಾದಂಬರಿಗಳ ನಿರೂಪಣೆಯಲ್ಲಿ ಒಂದು ಹೊಸ ತಿರುವೇ ಕಾಣಿಸಿಕೊಂಡಿದೆ.

ಕನ್ನಡದಲ್ಲಿ 'ಇಂದಿರಾಬಾಯಿ' ಪ್ರಾದೇಶಿಕ ಸತ್ವದ ಪ್ರಥಮ ಸಾಮಾಜಿಕ ಕಾದಂಬರಿಯೆನ್ನಬಹುದು. ಕನ್ನಡ ಪ್ರಾದೇಶಿಕ ಕಾದಂಬರಿಗಳಲ್ಲಿ ಕುವೆಂಪುರವರದು ಸಿಂಹಪಾಲು. ಅವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಇವು ಪ್ರಾದೇಶಿಕ ಮಹಾಕಾದಂಬರಿಗಳಾಗಿವೆ. ಮರಳಿಮಣ್ಣಿಗೆ. ಚೋಮನ ದುಡಿ. ವೈಶಾಖ. ನಿಸರ್ಗ. ಅಶೋಕಚಕ್ರ. ಗ್ರಾಮಾಯಣ. ಜೋಗಿಮರಡಿ. ದೇವದಾಸಿ. ಒಡಲಾಳ. ಕುಸುಮಬಾಲೆ. ಮುಂತಾದ ವಿಪುಲವಾದ ಪ್ರಾದೇಶಿಕ ಕಾದಂಬರಿಗಳು ರಚನೆಗೊಂಡಿವೆ. ಸಂಖ್ಯೆ-ಸತ್ವಗಳೆರಡರಿಂದಲೂ ಕನ್ನಡ ಪ್ರಾದೇಶಿಕ ಕಾದಂಬರಿಗಳು ಪ್ರಾಮುಖ್ಯತೆಯನ್ನು ಪಡೆದಿವೆ. ಆದರೆ ಇವುಗಳ ವ್ಯವಸ್ಥಿತ ಅಧ್ಯಯನ-ವಿಶ್ಲೇಷಣೆ-ವಿಮರ್ಶೆ ನಡೆದಿಲ್ಲವೆಂದರೆ ಆಶ್ಚರ್ಯವೆನಿಸದು. ಈ ಹಿನ್ನೆಲೆಯಲ್ಲಿ ಡಾ. ಮಹಾದೇವ ಕಣವಿಯವರ 'ಕನ್ನಡ ಪ್ರಾತಿನಿಧಿಕ ಪ್ರಾದೇಶಿಕ ಕಾದಂಬರಿಗಳ ಅಧ್ಯಯನ' ವೊಂದು ಪ್ರಾಮಾಣಿಕ ಪ್ರಯತ್ನವಾಗಿದೆ. ಉಳಿದಂತೆ ಹೆಚ್ಚಿನ ಅಧ್ಯಯನ ನಡೆದಿಲ್ಲವೆಂದೇ ಹೇಳಬಹುದು. ಕನ್ನಡ ಪ್ರಾದೇಶಿಕ ಕಾದಂಬರಿಗಳನ್ನು ಕುರಿತು ವಿಮರ್ಶೆಯನ್ನು ಬರೆದ ನಮ್ಮ ವಿಮರ್ಶಕರ ಹೇಳಿಕೆಗಳನ್ನು ನೋಡಿದಾಗ ಅವುಗಳಲ್ಲಿ ಕಾಣುವ ಕೊರತೆಗಳೆಂದರೆ–[೯]

೧. ಅವರು ಪ್ರಾದೇಶಿಕ ಪ್ರಕಾರವನ್ನು ಕೇವಲ ಹಳ್ಳಿಯ ಕಥಾವಸ್ತುವಿಗಷ್ಟೇ ಸೀಮಿತಗೊಳಿಸಿದ್ದು. 'ಸಮರಸವೇ ಜೀವನ' ದಂತಹ ಸಮ್ಮಿಶ್ರವರ್ಗಶ್ರೇಣಿಯ (Cosmopolitan) ಶ್ರೇಷ್ಠ ಪ್ರಾದೇಶಿಕ ಕಾದಂಬರಿಯನ್ನು ಅವರು ಗಣನೆಗೆ ತಂದುಕೊಳ್ಳಲಿಲ್ಲ.

೨. ಪ್ರಾದೇಶಿಕ ಕಾದಂಬರಿಗಳು ಸಾರ್ವತ್ರಿಕ ಮೌಲ್ಯಗಳನ್ನು ಪ್ರತಿಪಾದಿಸಲಾರವು ಎಂಬ ಆಧಾರವಿಲ್ಲದ ಅವರ ಇನ್ನೊಂದು ಗುಮಾನಿ. 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'. 'ಮರಳಿ ಮಣ್ಣಿಗೆ'. 'ಗ್ರಾಮಾಯಣ'. 'ನಿಸರ್ಗ' ದಂತಹ ಪ್ರಾದೇಶಿಕ ಕಾದಂಬರಿಗಳನ್ನು ಅಭ್ಯಸಿಸಿದಾಗ ಪ್ರಾದೇಶಿಕ ವಲಯದಲ್ಲಿಯೂ ಅವುಗಳ ವ್ಯಾಪಕತೆಯ ಅರ್ಥವಂತಿಕೆಯ ಅರಿಕೆ ಉಂಟಾಗುತ್ತದೆ.

---

೮. Encyclopedia America Vol : 17

೯. ಮಹಾದೇವ ಕಣವಿ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೬೨

೩. ಈ ಸಂಶಯಕ್ಕೆ ಪ್ರತಿಯಾಗಿ ಈ ಪ್ರಕಾರ ಗತಾನುಗತಿಕರಾದ ಶೈಲಿಯ ಏಕತಾನತೆಯನ್ನು ತೊಡೆದು ಹಾಕಿ ಶೈಲಿಯಲ್ಲಿ ತಾಜಾತನ. ಸಂಭಾಷಣೆಯಲ್ಲಿ ಜೀವಂತಿಕೆ. ಪಾತ್ರರಚನೆಯಲ್ಲಿ ನಾಯಕ-ನಾಯಿಕೆಯರನ್ನು ಪ್ರಧಾನವಾಗಿಸದೆ. ಚಿಕ್ಕ ಪಾತ್ರಗಳಿಗೂ ವಿಶಿಷ್ಟತೆಯನ್ನು ತುಂಬಿದ್ದು. ಇವುಗಳ ಓರಿಮೆಯೆನ್ನಬೇಕು.

ವಿಮರ್ಶಕರ ಈ ಎಲ್ಲ 'ತಪ್ಪು ಗ್ರಹಿಕೆ'ಗಳನ್ನು ಸರಿಪಡಿಸಬಹುದಾದ ಸ್ಫುಟ-ಸ್ಪಷ್ಟವಾದ ಪ್ರಾದೇಶಿಕ ಕಾದಂಬರಿಗಳ ಅಧ್ಯಯನದ–ವಿಶ್ಲೇಷಣೆಯ ಅಗತ್ಯವಿದೆ.

ಅನೇಕ ಪ್ರಾದೇಶಿಕ ಕಾದಂಬರಿಗಳಲ್ಲಿ ಗ್ರಾಮೀಣ ಬದುಕಿನ ಚಿತ್ರಣ ಏಕಪಕ್ಷೀಯವಾಗಿದ್ದುಂಟು. ಆದರೆ ಬೆಳಗಲಿಯವರ ಪ್ರಾದೇಶಿಕ ಕಾದಂಬರಿಗಳು ಈ ಅಪವಾದಕ್ಕೆ ಹೊರತಾಗಿವೆ. ಇವರ ಪ್ರಾದೇಶಿಕ ಕಾದಂಬರಿಗಳಲ್ಲಿ ಹಳ್ಳಿಯ ಬದುಕಿನ ಸಂಕೀರ್ಣತೆಯ ಯಥಾವತ್ತಾದ ಚಿತ್ರಣವಿದ್ದು. ಗಾಢವಾದ ಜೀವನಾನುಭವ. ಸೂಕ್ಷ್ಮ ನಿರೀಕ್ಷಣಾದೃಷ್ಟಿ. ಹಾಗೂ ಅಗಾಧವಾದ ಗ್ರಹಣಶಕ್ತಿಗಳಿಂದಾಗಿ ಬೆಳಗಲಿಯವರು ಗ್ರಾಮೀಣ ಬದುಕಿನ ಸಂಕೀರ್ಣತೆಯನ್ನು ಬರಹದಲ್ಲಿ ಹದಗೊಳಿಸಿದ್ದಾರೆ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಹಲವು-ಹತ್ತು ಕಾರಣಗಳಿಂದಾಗಿ ವಿಶಿಷ್ಟವೆನಿಸುವ ಇವರ ಪ್ರಾದೇಶಿಕ ಕಾದಂಬರಿಗಳನ್ನು ಪ್ರಸ್ತುತ ಭಾಗದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಬೆಳಗಲಿಯವರ ಪ್ರಾದೇಶಿಕ ಕಾದಂಬರಿಗಳ ಅವಲೋಕನ-ವಿಶ್ಲೇಷಣೆಯ ನಂತರ ಪ್ರತಿಯೊಂದು ಪ್ರಾದೇಶಿಕ ಕಾದಂಬರಿಯ ಅಧ್ಯಯನದಡಿಯಲ್ಲಿಯೇ ಅವುಗಳ 'ಪ್ರಾದೇಶಿಕತೆ'ಯ ಮುಖ್ಯವಾದ ಅಂಶಗಳನ್ನು ಸೋದಾಹರಣವಾಗಿ ವಿಶ್ಲೇಷಣೆ ಮಾಡುವುದು ಸೂಕ್ತವೆನಿಸುತ್ತದೆ. ಅವರ ಕಾದಂಬರಿಗಳ ಭಾಷಿಕ ಅಧ್ಯಯನಕ್ಕಾಗಿಯೇ ಪ್ರತ್ಯೇಕವಾದ ಅಧ್ಯಾಯವೊಂದನ್ನು ಮಾಡದೆ. ಆಯಾ ಕಾದಂಬರಿಗಳ ಅಧ್ಯಯನದಡಿಯಲ್ಲಿ ವಿಶ್ಲೇಷಿಸುವುದೇ ಸಮಂಜಸವೆಂದು ತಿಳಿದು ಈ ರೀತಿ ಮಾಡಲಾಗಿದೆ. ಭಾಷೆ-ಆಡುನುಡಿ. ರೀತಿ-ನೀತಿ. ಸಂಸ್ಕೃತಿ-ಸಂಸ್ಕಾರ. ಅದೂ ಬೆಳಗಲಿಯವರ ಕಾದಂಬರಿಗಳ ಸಂದರ್ಭದಲ್ಲಿ 'ಭಾಷೆ' ಬಹುಪ್ರಾಮುಖ್ಯವಾದುದು. ಕನ್ನಡಕ್ಕೆ ಎರಡು 'ಭಾಷೆ'ಗಳಿವೆ. ಒಂದು ಗ್ರಾಂಥಿಕ. ಇನ್ನೊಂದು ಆಡುನುಡಿ. ಆ ಆಡುನುಡಿಯಲ್ಲಿಯೇ ಶಿಷ್ಟ ಭಾಷೆ. ಗ್ರಾಮ್ಯಭಾಷೆ ಅಥವಾ ಪ್ರಾದೇಶಿಕ ಭಾಷೆ ಎಂದು ಎರಡು ವಿಧ. ಶಿಷ್ಟ ಭಾಷೆ ಎಂದರೆ ಗ್ರಾಂಥಿಕವೆಂದರ್ಥವಲ್ಲ; ಅರ್ಧ ಗ್ರಾಂಥಿಕ. ಅರ್ಧ ಆಡುಮಾತು ಇರುತ್ತದೆ. ಇದನ್ನೇ ಈ ಕೆಳಗಿನಂತೆ ಗುರುತಿಸಬಹುದು.



ಪ್ರಾದೇಶಿಕ ಬಸಿಕಟ್ಟಿನ ದೇಶೀ ಭಾಷೆಯ ಬಳಕೆಯ ವಿಷಯದಲ್ಲಿ ಬೆಳಗಲಿಯವರದು ಎತ್ತಿದ ಕೈ. ಗ್ರಾಮಪರಿಸರದ ಯಾವೊಂದು ಪಾತ್ರವೂ ಅಪ್ಪಿ-ತಪ್ಪಿ ಕೂಡ ಗ್ರಾಂಥಿಕ ಭಾಷೆಯನ್ನು ಬಳಸುವುದಿಲ್ಲ; ಅದು ಬೆಳಗಲಿಯವರ ವಿಶೇಷತೆ. ಪ್ರಾದೇಶಿಕ ಭಾಷೆಗೇ ಒತ್ತುಕೊಟ್ಟು ಜೀವನ-ಪರಿಸರಕ್ಕೆ ಸಹಜತೆ ಒದಗಿಸಿಕೊಟ್ಟಿದ್ದು ಇವರ ಕಾದಂಬರಿಗಳ ಹೆಚ್ಚುಗಾರಿಕೆ. ಭಾವಕ್ಕೆ ತಕ್ಕರೀತಿಯಲ್ಲಿ ಉಂಟಾಗುವ ಧ್ವನಿಯ ಏರಿಳಿತದ ಸೊಗಸು ಮನಮುಟ್ಟುವಂಥದ್ದು. ಗ್ರಾಮೀಣರ ನಿತ್ಯ ಬದುಕಿಗೆ ಹೀಗೇ ಇರಬೇಕೆಂಬ ಕಟ್ಟಳೆಯಿಲ್ಲ. ಅವರ ಸ್ವಭಾವ-ಸಂಬಂಧಗಳು. ಭಾವ-ಭಾಷೆಗಳು. ನಂಬಿಕೆ-ಸಂಪ್ರದಾಯಗಳು. ತಲೆಮಾರಿನಿಂದ ತಲೆಮಾರಿಗೆ ಮುಂದುವರಿಯುತ್ತವೆ. ಲೇಖಕ ತನ್ನ ಕೃತಿಗಳ ಮೂಲಕ ಗ್ರಾಮೀಣ ಬದುಕಿಗೆ ಪುನರ್‌ಸೃಷ್ಟಿ ನೀಡಲು ಹೆಚ್ಚು-ಕಡಿಮೆ ತನ್ನ ಪರಿಸರ-ಪ್ರದೇಶಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಾನೆ. ತಾನು ದಿನ ನಿತ್ಯ ನೋಡುವ ಪರಿಸರದ ಎಲ್ಲ ಅವಸ್ಥೆಗಳಿಗೆ ಟೀಕೆ-ವಿಶ್ಲೇಷಣೆ-ವಿಮರ್ಶೆ ತನ್ನ ಸ್ವಂತದ ಛಾಪು ಒತ್ತುತ್ತಾನೆ; ಇಂಥಲ್ಲಿ ನೆಲದ ಮೇಲಿನ ಪ್ರೀತಿ ಅವನಲ್ಲಿರುತ್ತದೆ. ಒಟ್ಟಾರೆಯಾಗಿ ಬೆಳಗಲಿಯವರ ಕಾದಂಬರಿಗಳಲ್ಲಿ ಎದ್ದುಕಾಣುವ ಭಾವ-ಭಾಷೆ-ಸಂಪ್ರದಾಯ ಅಂದರೆ ಅವರ 'ಪ್ರಾದೇಶಿಕತೆ'ಯನ್ನು ಈ ಹಿನ್ನೆಲೆಯಲ್ಲಿಯೇ ಪರಿಭಾವಿಸಬೇಕಾಗುತ್ತದೆ.

"ದು. ನಿಂ. ಬೆಳಗಲಿಯವರು ಬೆಳುವಲದ ಮಣ್ಣಿನಲ್ಲಿ ರೂಪುಗೊಂಡವರಾದುದರಿಂದ ಸಹಜವಾಗಿಯೇ ಆ 'ಮಣ್ಣಿನ ವಾಸನೆ'ಯನ್ನು ತಮ್ಮ ಕೃತಿಗಳಲ್ಲಿ ಸೂಸಿ. ಉತ್ತರಕರ್ನಾಟಕದ ಪ್ರಾದೇಶಿಕ ಕಾದಂಬರಿಕಾರರಲ್ಲಿಯೇ ಒಡೆದು ಕಾಣುವ ವಿಶಿಷ್ಟ ವ್ಯಕ್ತಿತ್ವದವರೆನಿಸಿದ್ದಾರೆ"[೧೦] ಆದರೆ, ಬೆಳಗಲಿಯವರು ಉತ್ತರ ಕರ್ನಾಟಕದ "ಏಕಮೇವ ಪ್ರಾದೇಶಿಕ ಕಾದಂಬರಿಕಾರರು"[೧೧] ಎಂದೆನ್ನುವುದು ಅತಿಶಯದ ಮಾತಾಗುತ್ತದೆ. ಹಾಗೆಂದು ಬೆಳಗಲಿಯವರ ಪ್ರಾದೇಶಿಕ ಕಾದಂಬರಿಗಳು ಉನ್ನತಮಟ್ಟದ್ದವಲ್ಲವೆಂದರ್ಥವಲ್ಲ. 'ಹಡೆದವರು'. 'ಜೋಗಿಮರಡಿ'. 'ದೇವದಾಸಿ'. 'ಕಾತ್ರಾಳ ರತ್ನಿಯ ಚಾದಂಗಡಿ' ಮೊದಲಾದವುಗಳು 'ನಿಸರ್ಗ'. 'ಗ್ರಾಮಾಯಣ'ದ ನಂತರದಲ್ಲಿ ಮೂಡಿಬಂದ ಉತ್ತರ ಕರ್ನಾಟಕದ ಉತ್ತಮ ಪ್ರಾದೇಶಿಕ ಕಾದಂಬರಿಗಳು. ಬೆಳಗಲಿಯವರು ಹಳ್ಳಿಗಾಡಿನ ಗಾಢಪರಿಚಯವಿರುವ ಲೇಖಕರು; ಹಳ್ಳಿಯ ವಿವಿಧ ಸ್ತರಗಳ ಜನರ ಗುಣ-ಸ್ವಭಾವಗಳ ಪೂರ್ಣ ಪರಿಚಯವಿರುವುದಕ್ಕೆ ಅವರ ಪ್ರಾದೇಶಿಕ ಕಾದಂಬರಿಗಳೇ ಸಾಕ್ಷಿ.

ಅವರ ಪ್ರಾದೇಶಿಕ ಕಾದಂಬರಿಗಳ ವಸ್ತುವ್ಯಾಪ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಗ್ರಾಮೀಣ ಪರಿಸರದ ಚಿತ್ರಣವುಳ್ಳ ಕಾದಂಬರಿಗಳು ಹಾಗೂ ವೇಶ್ಯಾ ಸಮಸ್ಯೆಯ ಕಾದಂಬರಿಗಳು ಎಂದು ಮರುವಿಂಗಡಣೆ ಮಾಡಲಾಗಿದೆ.

---

೧೦. ಸಿ. ಕೆ. ನಾವಲಗಿ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ. ಪುಟ ೩೮

೧೧. ಸಿ. ಕೆ. ನಾವಲಗಿ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ. ಪುಟ ೩೯

## ಗ್ರಾಮೀಣ ಪರಿಸರದ ಚಿತ್ರಣವುಳ್ಳ ಕಾದಂಬರಿಗಳು :

ಭಾರತ ಹಳ್ಳಿಗಳ ದೇಶ. ಭಾರತದ ಗ್ರಾಮೀಣ ಸಮಸ್ಯೆಗಳನ್ನೇ ತಮ್ಮ ಕಾದಂಬರಿಗಳಿಗೆ ವಸ್ತುವಾಗಿರಿಸಿಕೊಂಡ ಬೆಳಗಲಿಯವರು ಹಳ್ಳಿಗಳ ಹಿತಚಿಂತಕರೂ ಆಗಿದ್ದಾರೆ. ಗಾಂಧೀಜಿಯವರ ಗ್ರಾಮರಾಜ್ಯದ ಕನಸು ನನಸಾಗದಿರುವುದಕ್ಕೆ ಮೂಲಕಾರಣಗಳನ್ನು ಶೋಧಿಸುತ್ತ. ಗ್ರಾಮೀಣ ಸಮಾಜದ ಸಮಸ್ಯೆಗಳ ಚಿತ್ರಣದೊಂದಿಗೆ ಅವುಗಳಿಗೆ ಪರಿಹಾರ ಸೂಚಿಸಿದ್ದೊಂದು ಬೆಳಗಲಿಯವರ ಬರವಣಿಗೆಯ ವೈಶಿಷ್ಟ. ಬೆಳಗಲಿಯವರ ಇಂಥ ಕಾದಂಬರಿಗಳಿಗೆ ಉತ್ತರ ಕರ್ನಾಟಕದ ಗ್ರಾಮೀಣ ಪರಿಸರವೇ ಮುಖ್ಯ ಭೂಮಿಕೆಯಾಗಿದೆ. ಅವುಗಳಲ್ಲಿರುವ ಬದುಕು. ಭಾಷೆ. ಜೀವಸೆಲೆ ಬಹುತೇಕ ಗ್ರಾಮೀಣ ಪರಿಸರದ್ದೇ. ಬನಹಟ್ಟಿಯ ಸುತ್ತಲಿನ ಗಾಢವಾದ ಹಳ್ಳಿಯ ಪರಿಸರದಲ್ಲಿ ಶಿಕ್ಷಕರಾದ ಇವರಿಗೆ ಗ್ರಾಮೀಣ ಪರಿಸರದ ಬದುಕಿನ ದಟ್ಟ ಅನುಭವವಿದೆ. ಅವರ ಸ್ವಾನುಭವವೇ ಕಾದಂಬರಿಗಳಲ್ಲಿ ಎಡೆಪಡೆದಿದೆ. ಗ್ರಾಮೀಣ ಬದುಕು ಯಾವುದೇ ಕೃತ್ರಿಮದ ಸೋಂಕಿಲ್ಲದ್ದು. ನಮ್ಮ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಸಹಕಾರ-ಸೌಹಾರ್ದದ ಬದುಕು ಕಾಣುತ್ತದೆಯಾದರೂ ಆಗಾಗ ಚಿಕ್ಕಪುಟ್ಟ ವಿಷಯಗಳಿಗೆ ಘರ್ಷಣೆಗಳಾಗುವುದುಂಟು: ಈ ಸಣ್ಣಪುಟ್ಟ ಘಟನೆಗಳು. ಈರ್ಷ್ಯೆ. ವೈಮನಸ್ಸು. ಬಡಿದಾಟ. ಹೊಡೆದಾಟಗಳಿಗೂ ಕಾರಣವಾಗುತ್ತವೆ. 'ಜೋಗಿಮರಡಿ' ಯೇ ಇದಕ್ಕೊಂದು ಉತ್ತಮ ನಿದರ್ಶನ.

ಊರನ್ನು ಒಡೆದು ವಿಷಬೀಜ ಬಿತ್ತುವ. ವೈರತ್ವದ ವಿಷತುಂಬುವ ಕ್ರಿಯೆಗಳು ಸಾವಕಾಶವಾಗಿ ನಾಗರಿಕತೆಯ ಹೊಡೆತಕ್ಕೆ ಸಿಕ್ಕುಬಿದ್ದ ಗ್ರಾಮಗಳಲ್ಲಿ ಇಂದು ಸಹಜಗೋಚರವಾಗುತ್ತಿದೆ. ಕ್ಷುದ್ರರಾಜಕಾರಣಿಗಳು. ಸ್ವಾರ್ಥದ ಕಲ್ಯಾಣಕ್ಕೆ ಬಳಸಿಕೊಂಡು ಗ್ರಾಮೀಣ ಜನರನ್ನು ಬದಲಾವಣೆಯ. ಪ್ರಗತಿಯ ಹಾದಿಯಿಂದ ಹಿಂದಕ್ಕೆ ತಳ್ಳುವ ರೀತಿಯನ್ನು. ಎಂಥ ಪ್ರಸಂಗಗಳಲ್ಲಿಯೂ ಎದೆಗುಂದದ ಹಳ್ಳಿಗರ ಬದುಕಿನ ಶೈಲಿಯನ್ನು ಬೆಳಗಲಿಯವರು ತಮ್ಮ ಪ್ರಾದೇಶಿಕ ಕಾದಂಬರಿಗಳಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ. ಬೆಳಗಲಿಯವರು ಪ್ರಾದೇಶಿಕ ಕಾದಂಬರಿಗಳಲ್ಲಿ ಗ್ರಾಮೀಣರ ಬದುಕನ್ನು 'ಯಥಾವತ್' ಎತ್ತಿ ಇಟ್ಟಂತಿದೆ. ಗ್ರಾಮೀಣರ ಬದುಕಿನ ಏಳು-ಬೀಳು. ಎತ್ತರ-ಬಿತ್ತರ. ನೋವು-ನಲಿವುಗಳನ್ನು ತಮ್ಮ ಪ್ರಾದೇಶಿಕ ಮೂಸೆಯಲ್ಲಿ ಚೆನ್ನಾಗಿ ಹಿಡಿದಿಡುವ ಕಲೆಗಾರಿಕೆ ಬೆಳಗಲಿಯವರಿಗೆ ಸಹಜ ಕರಗತವಾದಂತಿದೆ. ಗ್ರಾಮೀಣ ಪರಿಸರದ ದಟ್ಟ ಅನುಭವವನ್ನು ತಂದುಕೊಡುವ ಇವರ ಪ್ರಾದೇಶಿಕ ಕಾದಂಬರಿಗಳಾದ 'ಹಡೆದವರು'. 'ಜೋಗಿಮರಡಿ'. 'ಮೌನಕ್ರಾಂತಿ'. 'ಕಾತ್ರಾಳ ರತ್ನಿಯ ಚಾದಂಗಡಿ' ಇವು ಕನ್ನಡ ಪ್ರಾದೇಶಿಕ ಕಾದಂಬರಿ ಪರಂಪರೆಗೆ ವಿಶಿಷ್ಟ ಕೊಡುಗೆಗಳಾಗಿವೆ.

## ಹಡೆದವರು (೧೯೭೨) :

'ಹಡೆದವರು' ಬೆಳಗಲಿಯವರ ಮಹತ್ವದ ಕಾದಂಬರಿಗಳಲ್ಲೊಂದು. ಮಾನವ ಸಂಬಂಧಗಳ ದುರಂತವನ್ನು ಸಾಮಾಜಿಕ ನೆಲೆಯಲ್ಲಿ ಸೂಕ್ಷ್ಮವಾಗಿ ವಿಶ್ಲೇಷಿಸುವ ಪ್ರಸ್ತುತ ಕಾದಂಬರಿ. ಮಾನವನ ಸಂಬಂಧದ ಎಳೆಗಳನ್ನು ಅಗೆಯುವ ಪಾರದರ್ಶಕ ಕೃತಿ. ದಾಂಪತ್ಯಜೀವನಕ್ಕೆ ವಿವಾಹವೊಂದು ಸಾಮಾಜಿಕ ಧರ್ಮ ನಿಯಮ. ಅನೇಕ ಸಲ ಮದುವೆಯ ಧಾರ್ಮಿಕ ನಿಯಮಕ್ಕೂ ವ್ಯಕ್ತಿಗಳ ಮಾನಸಿಕ ಸ್ಥಿತಿಗೂ ಯಾವ ಸಂಬಂಧವಿರುವುದಿಲ್ಲ:

ಇಂಥ ಸ್ಥಿತಿಯಲ್ಲಿ ಮದುವೆಯೆಂಬುದೊಂದು ಕಾಮದ ಅನಪೇಕ್ಷಿತ ಒಪ್ಪಂದವಾಗುತ್ತದೆ. ಇಂಥ ದಂಪತಿಗಳಿಗೆ ಹುಟ್ಟುವ ಮಗು ಅನಾಥವಾಗುತ್ತದೆ. ಪ್ರೇಮವಿಲ್ಲದ ದಾಂಪತ್ಯ ರಸವಿಲ್ಲದ ಕಬ್ಬಿನಂತೆ. " Love is the point where the soul meets the body " ಎಂದೆನ್ನುವಂತೆ. 'ಪ್ರೇಮ ಮನುಷ್ಯ ಚೇತನವು ತನ್ನನ್ನು ಮರೆತು ಮತ್ತೊಂದು ಜೀವಕ್ಕೆ ಅರ್ಪಿಸಿಕೊಂಡು ಶ್ರೀಮಂತವಾಗುವ ಪ್ರಕ್ರಿಯೆ.' [೧೨]

ಹಾಲಿ ಐದು ವರ್ಷದ ಮಗು. ನೀಲ-ಚಿನ್ನಿಯರ ವಿರಸದಾಂಪತ್ಯದ ಜೀವಂತ ರಚನೆ. ಚಿನ್ನಿ-ನೀಲನಿಗೆ ಒಲ್ಲದ ಹೆಂಡತಿಯಾದರೆ. ನೀಲ ತನ್ನ ಬೇಕು-ಬೇಡಗಳನ್ನು ನೋಡಲಾರದ ಕುಡುಕಗಂಡ. ಇದು ಚಿನ್ನಿಯ ಅಕ್ಷೇಪವಾದರೆ. ಚಿನ್ನಿ ತನಗೆ ಅನುಕೂಲೆಯಾಗದ ಹೆಣ್ಣೆಂಬುದು ನೀಲನ ತಕರಾರು. ಈ ಆಕ್ಷೇಪ-ತಕರಾರುಗಳ ಮಧ್ಯದಲ್ಲೇ ಹುಟ್ಟಿದ್ದು ಹಾಲಿ. ಲೇಖಕರೇ ಮುನ್ನುಡಿಯಲ್ಲಿ ಹೇಳುವಂತೆ "ಅದು ಅನಾಥ ಮಗುವಲ್ಲ; ಹಡೆದವರು ಇದ್ದಾರೆ. ತಾಯಿ ಒಬ್ಬಳಲ್ಲ: ಇಬ್ಬರು. ತಂದೆ ಒಬ್ಬನಲ್ಲ: ಇಬ್ಬರು. ಆದರೂ ಅದು ಪರದೇಶಿ. ಆ ಮಗು ಹದಗೆಟ್ಟ ದಾಂಪತ್ಯದ ಸಂಕೇತ. ನೀಲ-ಚಿನ್ನಿಯರು ದೈಹಿಕವಾಗಿ ಒಂದಾದರೂ. ಮಾನಸಿಕವಾಗಿ ಬೇರೆಯಾಗಿದ್ದವರು. ನೀಲ ರುಕ್ಮಿಣಿಯಲ್ಲಿ ತೃಪ್ತಿಕಂಡಂತೆ. ಚಿನ್ನಿಯೂ ಕರಿಯನಿಗೆ ಮನಸ್ಸು ಕೊಟ್ಟಳು. ಹೀಗಿದ್ದರೂ ಹೆಸರಿಗೊಂದು ಮನೆ-ಸಂಸಾರ-ದಾಂಪತ್ಯ. ಚಿನ್ನಿ ದೇವದಾಸಿ ರಾಣವ್ವಳ ಮಗಳಾದದುದರಿಂದ. ತನಗಿಂತ ಮುಂಚೆಯೇ ಅನೇಕರಿಗೆ ಸೆರಗು ಹಾಸಿರಬಹುದೆಂಬ ಸಂಶಯ ನೀಲನಿಗೆ; ಹಾಗೆಂದು ಪ್ರಥಮ ರಾತ್ರಿಯಂದೇ ಚಿನ್ನಿಯನ್ನು ಕೇಳಿಯೂ ಬಿಟ್ಟಿದ್ದ. ಚಿನ್ನಿ ತನ್ನ ಮನದಳಲನ್ನು ತೋಡಿಕೊಂಡರೂ. ನಂಬದ ನೀಲನ ಮೇಲೆ ಸಂತಪ್ತಳಾಗಿ ಕಲ್ಲಟ್ಟಿಯ ಕರಿಯನಲ್ಲಿ ಸಂತೃಪ್ತಿಯನ್ನು ಕಂಡಳು. ಸಂಶಯದ ಹುಳ ಹೊಗಿಸಿಕೊಂಡ ನೀಲ ರುಕ್ಮಿಯ ಸೆರಗಿನಲ್ಲಿಯೇ ಸೇರಿಕೊಂಡುಬಿಟ್ಟ. ತನ್ನ ತನು-ಮನಗಳನ್ನು ಕರಿಯನಿಗೆ ಸಮರ್ಪಿಸಿದ ಜೋಗಿಮರಡಿಯ ಚಿನ್ನಿ ನಿತ್ಯ ಕಲ್ಲಟ್ಟಿಯ ದಾರಿ ತುಳಿಯುತ್ತಿದ್ದಳು.

ಸುಬ್ಬಿ ನರಸಪ್ಪನ ಮಗಳು. ವಿಧವೆ. ಚಿನ್ನಿಯ ಆತ್ಮೀಯ ಗೆಳತಿ. ಚಿನ್ನಿಯ ಆಗು-ಹೋಗುಗಳನ್ನು ಹಂಚಿಕೊಳ್ಳುವ ಸಹೃದಯಿ. ನರಸಪ್ಪನ ಪ್ರಬಲವಾದ ವಿರೋಧದ ಮಧ್ಯದಲ್ಲಿಯೂ ಸುಬ್ಬಿ ಹಾಲಿಯನ್ನು ಪ್ರೀತಿಯಿಂದ ಕಾಣುತ್ತಾಳೆ. ಹಾಲಿಗೆ ಹಡೆದವಳಿಗಿಂತ ಸುಬ್ಬಿಯಲ್ಲಿಯೇ ಹೆಚ್ಚಿನ ಪ್ರೀತಿ-ಅನುಕಂಪ. ಹಾಲಿ ಜ್ವರದ ತಾಪದಿಂದ ಬಳಲುತ್ತಿದ್ದ ಸಂದರ್ಭದಲ್ಲಿ ತಾಯ್ತನವನ್ನು ಉಣಿಸಿದ ಸುಬ್ಬಿ ಹಾಲಿಗೆ ಪಡೆದ ತಾಯಿಯಂತಿದ್ದಳು. ಹಾಲಿಯ ಸುಂದರ ಮುಖ ಕಂಡರೆ. ಸುಬ್ಬಿಗೆ ಎಲ್ಲಿಲ್ಲದ ಪ್ರೀತಿ. ಆ ಮಗುವಿನ ಒಲವೇ ಚಿನ್ನಿ ಎಂಥವಳಿದ್ದರೂ. ಆಕೆಯ ಸ್ನೇಹ ಸಂಪಾದಿಸುವಂತೆ ಮಾಡಿದ್ದು. ಎಲ್ಲಿ ಸುಬ್ಬಿಯ ತಂಗಿ. ಅಕ್ಕನ ತಾಯ್ತನದ ಹಂಬಲವನ್ನು ಕಂಡು ಮನಕರಗಿದರೂ ಅಪ್ಪನ ಕಠೋರತೆಗೆ ಹೆದರಿ 'ಸುಬ್ಬಿ-ಹಾಲಿ'ಯರ ಮಧುರ ಬಾಂಧ್ಯವ್ಯಕ್ಕೆ ಒಳಗೊಳಗೇ ಹಾರೈಸುವವಳು.

---

೧೨. ಎಲ್. ಎಸ್. ಶೇಷಗಿರಿರಾವ್ : ಸಾಹಿತ್ಯ-ಬದುಕು. ಪುಟ ೧೦

ಸುಂದರಿ ಜೋಗಿಮರಡಿ ಗೌಡನ ಎರಡನೇ ಸಂಬಂಧ. ಮೇಲಿನ ಓಣಿ ಪರಸನಿಗೂ–ಗೌಡನಿಗೂ ಅಡ್ಡಬೆಂಕಿ ಹಾಯುತ್ತಿರಲಿಲ್ಲ. ಗೌಡನ ತೋಟದ ಹತ್ತಿ. ಕಾಳು-ಕಡಿ. ಮೇವು ಇತ್ಯಾದಿಗಳು ಮಾಯವಾಗುವುದಕ್ಕೆಲ್ಲ ಪರಸನ ಕೈಚಳಕವೇ ಕಾರಣ. ಇಂಥ ಕೆಲಸಗಳಲ್ಲಿ ನೀಲನಿಗಿಂತ ಒಂದು ಹೆಜ್ಜೆ ಮುಂದಿದ್ದ. ಪರಸನ ಉಪಟಳಕ್ಕೆ ಜೋಗಿಮರಡಿಯ ಹೆಣ್ಣು ಮಕ್ಕಳೂ ಬೇಸತ್ತಿದ್ದರು. ಒಂದೆರಡು ಸಲ ಸುಂದರಿಯನ್ನು ಕೆಣಕಿ ಗೌಡನ ಕೆಂಗಣ್ಣಿಗೂ ಪರಸ ಗುರಿಯಾಗಿದ್ದ: ಸುಂದರಿ ನಿನ ಹಾರಿಸಿಕೊಂಡು ಹೋಗದಿದ್ರ ನಮ್ಮಪ್ಪನ ಹೊಟ್ಟೀಲೇ ಹುಟ್ಟಬಾರ್ದು! ಎಂದು ಗೌಡರ ಹೆಣ್ಣಾಳಿನ ಎದುರೇ ಆಹ್ವಾನಕೊಟ್ಟಿದ್ದ. ಇದೊಂದು ಗೌಡನಿಗೆ ಕಗ್ಗಂಟಾಗಿತ್ತು. ಅನೇಕ ಸಲ ಕೊಡಲಿಹಿಡಿದು ಮೇಲೇರಿಯೂ ಬಂದಿದ್ದ ಪರಸನ ಉಪಟಳ ಇನ್ನೂ ಹೆಚ್ಚಾಗಿತ್ತು. ಹೀಗಾಗಿ ಗೌಡ ಒಳಗೊಳಗೇ ನಡುಗುತ್ತಿದ್ದ. ನೀಲನನ್ನು ತೋಟಕ್ಕೆ ಕರೆಸಿಕೊಂಡ ಗೌಡ ಪರಸನ 'ಕಥೆ'ಯ ಅಂತ್ಯಕ್ಕೆ ತಂತ್ರಹೂಡಿ. ಕೈಯಲ್ಲಿ ಕೊಡಲಿಕೊಟ್ಟು. ಕಾಸೂ ಇಟ್ಟು ಹರಸಿದ. ಮರುದಿನವೇ 'ಪಡಿ'ಯಲ್ಲಿ ಪರಸನ ಹೆಣ ತೇಲಾಡಿತು. ಪರಸನ ಕೊಲೆಪಟ್ಟ ಹೊತ್ತ ನೀಲ ಜೈಲಿಗೆ ಹೋದುದು. ಚಿನ್ನಿಯ ಚಿನ್ನಾಟಕ್ಕೆ ಮತ್ತಷ್ಟು ರಂಗೇರಿಸಿತು. ದನಗಳ ದಲಾಲಿ ಮಾಡುತ್ತಿದ್ದ ಕರಿಯನಿಗೆ ಹಣದ ಕೊರತೆಯೇನೂ ಇರಲಿಲ್ಲ. ಹೀಗಾಗಿ ಚಿನ್ನಿಯ ಬೇಕು-ಬೇಡಗಳನ್ನು ಕಂಡು ತಾನಾಗಿಯೇ ಈಡೇರಿಸುತ್ತಿದ್ದ; ಚಿನ್ನಿಗೆ ಬೇಕಾದುದೂ ಇದೇ. ಹೀಗಾಗಿ ಅವರಿಬ್ಬರ ಸಂಬಂಧ ಮತ್ತಷ್ಟು ಬೆಸೆದುಕೊಂಡಿತು.

ಅತ್ತ ಅಪ್ಪ ಜೈಲಿಗೆ. ಇತ್ತ ಚಿನ್ನಿ ಕರಿಯನಲ್ಲಿ. ಮಧ್ಯದಲ್ಲಿ ಹಾಲಿಯ ಬದುಕು ವಿಚಿತ್ರ. ತಿನ್ನಲು ಒಂದು ತುಣುಕು ರೊಟ್ಟಿಗೂ ಎರವಾದ ಮಗು ಓರಗೆಯವರಲ್ಲಿ ಅಂಗಲಾಚುತ್ತ. ಕೊಟ್ಟವರಲ್ಲಿ ಪಡೆದು ಕೊಡದವರಲ್ಲಿ ಬಿಕ್ಕಳಿಸಿ ಕಣ್ಣೀರುಗರೆಯುವುದೇ ಅದರ ದೈನಂದಿನ ಕರ್ಮವಾಯಿತು. ಸುಬ್ಬಿಯೊಬ್ಬಳಿಲ್ಲದಿದ್ದರೆ ಮಗು ಸತ್ತೇ ಹೋಗಬಹುದಾಗಿತ್ತು. ಅತ್ತ ತಂದೆಗೂ ಬೇಡ. ಇತ್ತ ತಾಯಿಗೂ ಬೇಡ. ಮರಕ್ಕೆ ಹಣ್ಣುಬೇಡ; ನೆಲಕ್ಕೆ ಕಾಯಿಬೇಡ. ಹೆತ್ತವರಿಗೆ ಬೇಡವಾದ ಮಗು ಸಮಾಜಕ್ಕೆ ಬೇಕಾಗುತ್ತದೆ. ತನ್ನ ವಿಕೃತ ಅಸಲು ಮುಖದ ಪ್ರದರ್ಶನಕ್ಕಾಗಿ. ಜೈಲಿನಿಂದ ಮನೆಗೆ ಬಂದ ನೀಲನಿಗೆ ಚಿನ್ನಿಯ ಶೀಲದ ಮೇಲೆ ಮೊದಲಿನಿಂದಲೂ ಇದ್ದ ಸಂಶಯ ಮತ್ತಷ್ಟು ಗಟ್ಟಿಗೊಳ್ಳುತ್ತದೆ. ನೀಲನ ಕ್ರೌರ್ಯಕ್ಕೆ ಸೋತುಸುಣ್ಣಾದ ಚಿನ್ನಿ ಕರುಳುಕುಡಿಯನ್ನೂ ಲೆಕ್ಕಿಸದೆ ಕರಿಯನಲ್ಲಿಗೆ ಹೋಗಿಬಿಟ್ಟಳು. ನೀಲ ರುಕ್ಮಿಯಲ್ಲಿಯೇ ಠಿಕಾಣಿ ಹೂಡಿದ. ಹಾಲಿ ಹಡೆದವರಿದ್ದರೂ ನಿರ್ಗತಿಕಳಾಗಿ ಗುಡಿಸಲಲ್ಲಿ ಬಿದ್ದುಕೊಂಡಿತು. ಸುಬ್ಬಿಯ ಅನುಕಂಪವೊಂದೇ ಅದಕ್ಕೆ ದೈನಂದಿನ ಜೀವರಸವಾಯಿತು. ಚಿನ್ನಿ-ನೀಲರ ವೈಮನಸ್ಸು ಹೆಚ್ಚಾದಷ್ಟು ಹಾಲಿ ಅನಾಥವಾಗುತ್ತ ಹೋಯಿತು; ಸುಬ್ಬಿಗೆ ಹತ್ತಿರವಾಗುತ್ತ ಹೋಯಿತು.

ಯಮನು. ಜೋಗಿಮರಡಿ. ಕವಳಗಿ. ಜಗದಾಳಗಳ ಕೂಡುರಸ್ತೆಯಲ್ಲಿದ್ದ ಜೋಪಡಿ ಚಾದಂಗಡಿಯ ಮಾಲಿಕ. ರುಕ್ಮಿಯನ್ನು ಕಂಡು ಬಾಯಿಚಪ್ಪರಿಸಿದವರಲ್ಲಿ ಇವನೂ ಒಬ್ಬ. ಚಹಾಕೊಡುವ ನೆಪದಲ್ಲಿ ಸಾಧ್ಯವಿದ್ದಷ್ಟು ಕೈಮುಟ್ಟಿ ಹಲ್ಲುಕಿರಿದವ. ಆದರೆ ಅವಳು ದಕ್ಕದಾಗ ನೀಲನ ತಲೆಯಲ್ಲಿ ಸೇಡಿನ ಬೆಂಕಿಹಚ್ಚಿದವ.

ಆದರೆ ನೀಲ. ರುಕ್ಮಿಗೂ-ಅರಣ್ಯರಕ್ಷಕನಿಗೂ ಸಂಬಂಧವಿದೆಯೆಂದರಿತರೂ ಸುಮ್ಮನಾದುದೊಂದು ವಿಪರ್ಯಾಸದ ಸಂಗತಿ. ಯಮನನು ತನ್ನ ಕುತಂತ್ರಗಳಿಗೆ ಫಲ ಕಾಣದೆ ಜೋಪಡಿಯ ಜೀವನಕ್ಕೇ ಜೋತು ಬಿದ್ದ. ರುಕ್ಮಿಯನ್ನು ಕಂಡು ಉಗುಳುನುಂಗಿದ್ದರಲ್ಲಿಯೇ ತೃಪ್ತಿಪಟ್ಟುಕೊಂಡ. ಭೀಮಣ್ಣ ಮಾವನಿಂದ ಚಿನ್ನಿ-ನೀಲರ ಸೋಡಪತ್ರ ಕುದುರುತ್ತದೆ. ಇದಕ್ಕೆ ಗೌಡನ ಸಮ್ಮತಿಯೂ ದೊರೆತು. ಒಂದು ದಿನ ವಿಶೇಷವಾಗಿ ಹಿರಿಯರೆಲ್ಲ ರುಕ್ಮಿಯ ಮನೆಯಲ್ಲಿ ಸಭೆಸೇರಿ ಈ ಕುರಿತು ಚರ್ಚಿಸಿ ನಿರ್ಧಾರ ತೆಗೆದುಕೊಂಡು. ೩೦೦ ರೂಪಾಯಿ ಪರಿಹಾರ ಹಣಪಡೆದು ನೀಲ ಚಿನ್ನಿಗೆ ಸೋಡಪತ್ರ ಕೊಟ್ಟ. ಈ ವಿವಾಹವಿಚ್ಛೇದನಕ್ಕೆ ಹಾಲಿಯೊಂದು ತೊಡಕಾಯಿತು: ಅದನ್ನು ನೀಲನ ಬೆನ್ನಿಗೇ ಕಟ್ಟಿದ ಚಿನ್ನಿ ಸಂತೃಪ್ತಳಾದಳು: ತಾನು ಮಾತ್ರ ಕರಿಯನನ್ನು ಶಾಸ್ತ್ರೋಕ್ತವಾಗಿಯೇ ಮದುವೆಯಾದಳು. ಅದೂ ಕರುಳುಕುಡಿಯನ್ನು ಕತ್ತರಿಸಿ. ಹೀಗಾಗಿ ಹಾಲಿ ರುಕ್ಮಿಯ ಮನೆಗೆ ಸೇರಿಕೊಂಡಿತು. ನಿತ್ಯ ಸೆಗಣಿ ಸಂಗ್ರಹಿಸಲು ರುಕ್ಮಿಗೆ ಆಳೂ ಸಿಕ್ಕಂತಾಯಿತು.

ಸೋನಿ ಮುಂಬೈ ಅಂಧೇರಿನಗರದಲ್ಲಿ ರಾಣಿಯಾಗಿ ಮೆರೆಯುತ್ತಿದ್ದವಳು. ರುಕ್ಮಿಯ ಓರಿಗೆಯವಳು. ಕವಳಗಿಗೆ ಬಂದ ಸೋನಿ ಗೆಳತಿ ರುಕ್ಮಿಯನ್ನು ಕಂಡಳು: ತನ್ನ ಥಳಕು-ಬಳುಕನ್ನು ಕಾಣಿಸಿದಳು. ಮುಂಬೈನ ರಂಗು-ರಂಗಿನ ಬದುಕನ್ನು ಕೇಳುತ್ತ ಹೋದಂತೆ ರುಕ್ಮಿಯ ಬಾಯಲ್ಲಿ ನೀರೂರಿದ್ದೇನೋ ಸರಿ. ಆದರೆ ನೀಲನೊಬ್ಬ ತೊಡಕಾಗಿದ್ದುದರಿಂದ ಕವಳಗಿಯಲ್ಲಿಯೇ ತೃಪ್ತಳಾಗಿರುವಂತೆ ಮನಸ್ಸು ಮಾಡಿದಳು. ಯಕಶ್ಚಿತ್ ಕಣ್ಣಿಗೆ ಬಿದ್ದ ಹಾಲಿ ಕೆಸರಲ್ಲಿನ ಕಮಲದಂತೆ ಸೋನಿಗೆ ಕಂಡುದಲ್ಲದೆ. ಒಂದು ಸಾವಿರ ರೂಪಾಯಿಗಳನ್ನು ರೋಖ ಎಣಿಸಿ ಮುಂಬೈಗೆ ಕರೆದುಕೊಂಡೇ ಹೋದಳು. ಸಮಸ್ಯೆಯೊಂದು ಲಾಭದಲ್ಲಿ ಮುಕ್ತಾಯವಾದುದು ನೀಲ-ರುಕ್ಮಿ ಇಬ್ಬರಿಗೂ ತುಂಬ ಸಂತೋಷದ ಸಂಗತಿಯಾಯಿತು. ಸುಬ್ಬಿ ಹಾಲಿಯನ್ನೇ ಉಡಿತುಂಬಿಸಿಕೊಳ್ಳಬೇಕೆಂದು ನಿರ್ಧರಿಸಿ ಕವಳಗಿಗೆ ಹೋಗಿ ಹಾಲಿಯನ್ನು ತನ್ನೊಂದಿಗೆ ಕಳಿಸಿಕೊಡುವಂತೆ ನೀಲನಲ್ಲಿ ಸೆರಗೊಡ್ಡಿ ಬೇಡಿದರೆ. ಆಗಲೆ ಹಾಲಿ ಮುಂಬೈನ 'ಕೆಂಪುದೀಪ' ಸೇರಿದ ಸುದ್ದಿ ಕೆಂಡದಂತೆ ಅವಳ ಸೆರಗಿನಲ್ಲಿ ಬಿದ್ದಿತ್ತು: ಅವಳೂ ನೆಲಕ್ಕೆ ಕುಸಿದು ಬಿದ್ದಿದ್ದಳು. ಈ ಹೃದಯವಿದ್ರಾವಕ ದೃಶ್ಯದೊಂದಿಗೆ ಕಾದಂಬರಿ ಅಂತ್ಯಗೊಳ್ಳುತ್ತದೆ.

'ಹಡೆದವರು' ಕಾದಂಬರಿಗೆ ನಾಯಕನೂ ಇಲ್ಲ; ನಾಯಕಿಯೂ ಇಲ್ಲ. ಇದೊಂದು ಅನಾಥ ಮಗುವಿನ ಕಥೆ. ಒಬ್ಬರನ್ನೊಬ್ಬರು ಅರಿಯದ ದಂಪತಿಗಳು. ತಮ್ಮ ಸುಖಕ್ಕಾಗಿ ಬೇರೆ ದಾರಿ ತುಳಿದಾಗ-ಬಾಳುಹದಗೆಟ್ಟು-ಪರಿದೇಶಿಯಾಗಿ ಉಳಿಯುವ ಮಗುವಿನ ಚಿತ್ರಣವೇ ಈ ಕೃತಿಯ ಕಥೆ: ಇದುವೇ 'ಹಡೆದವರು' ಕಾದಂಬರಿಯ ಒಡಲಾಳದ ಧ್ವನಿ. ಪರಿತ್ಯಕ್ತ ಮಗುವಿನ ಆರ್ತ ಕೂಗಿನೊಂದಿಗೇ ತನ್ನ ಮೈಬಿಚ್ಚಿಕೊಳ್ಳುವ ಕಾದಂಬರಿಯ ಆರಂಭವೇ ತುಂಬ ಔಚಿತ್ಯಪೂರ್ಣವಾಗಿದೆ. ಹಾಲಿ ಹುಟ್ಟಿದ್ದೇ ತುಳಿಸಿಕೊಳ್ಳುವದಕ್ಕಾಗಿ. ಅದರ ಮೊರೆ ಜನರ ಗದ್ದಲದಲ್ಲಿ ಕರಗಿಹೋಗುತ್ತದೆ. ಜನರಿಗೆ ಬಣ್ಣದ ಬದುಕುಬೇಕು; ಆದರೆ ಅದೇ ವಾಸ್ತವದ ಆರ್ತ ಮೊರೆ ಬೇಡ. ಏನೂ ಅರಿಯದ ಹಾಲಿ ತುಳಿತದ ನೋವಿನಿಂದ ಅತ್ತರೆ. ಚಿನ್ನಿ-ಕರಿಯನಲ್ಲಿ ಅನುರಕ್ತಳಾಗಿದ್ದಳು. ಚಿನ್ನಿಗೆ ಹಾಲಿ ಕ್ರೌರ್ಯದ ಕೂಸು. ಹೆತ್ತೊಡಲಿಗೇ ಬೇಡವಾದ ಹಾಲಿ ಕರಿಯನಿಗೂ ಬೇಡವಾದುದರಲ್ಲಿ ಆಶ್ಚರ್ಯವೇನಿದೆ?

"ಸತ್ತ ನಾಯಿಯನ್ನು ಎಳೆಯುತ್ತ ಊರಹೊರಗೆ ಸಾಗಿಸುವಂತೆ ಆಕೆ ಮಗುವಿನ ಎಡಗೈ ಜಗ್ಗುತ್ತ ಗುಡ್ಡದ ದಾರಿ ದಾಟಿ. ಎರೆಮಣ್ಣಿನ ಕಾಲುದಾರಿ ದಾಟಿ...."[೧೩] ಮನೆಯತ್ತ ನಡೆದ ಚಿತ್ರ ಕಣ್ಣಿಗೆ ಕಟ್ಟಿದಂತಿದೆ; ಅದು ಓದುಗರ ಹೃದಯವನ್ನೂ ಕಟ್ಟಿಹಾಕುತ್ತದೆ.

ನೀಲ ಅನೇಕ ಕ್ರೌರ್ಯಗಳ ಸಂಕೇತ. "ಒಂದ್ರೂಪಾಯ್ ಕೊಟ್ರ. ಯಾರ್ನಾರಿ ಬಡದ ಬರೂದು! ಎಡ್ಡ ಕೊಟ್ರ ಬಣವಿಗೆ ಬೆಂಕಿ ಹಚ್ಚೂದು! ಇದs ಹ್ವಾರೆ ಮಾಡ್ಕೋತ ತಿರಗತೈತಿ"[೧೪] ಎಂದೆನ್ನುತ್ತ ಚಿನ್ನಿ ಕರಿಯನಲ್ಲಿ ಸುಖ ಕಂಡವಳು. ಇದನ್ನರಿತ ನೀಲ "ಹ್ಞು. ಹೇಳ ರಾತ್ರಿ ಎಲ್ಲಿ ಹೋಗಿದ್ದಿ? ಆ ಕತ್ತಿಮಗಾ ಕರ್ಯಾನ ಹತ್ಲೆ ಹೋಗಿದ್ದಿಲ್ಲೋ"[೧೫] ಎಂದು ಎಕ್ಕಡದಿಂದ ಮನಬಂದಂತೆ ಗುದ್ದುತ್ತಿದ್ದುದಕ್ಕೆ. "ನೀ ಎಲ್ಲಿ ಹೋಗಿದ್ದಿ ಹೇಳು. ಹೆಂಡ್ರ-ಮಕ್ಕಳ ಖಬರ ಇಲ್ದ ಒಂದ ತಿಂಗ್ಳಾತು! ಇಲ್ಲಿ ನಾವೇನ ಸೆಗಣಿ ತಿನ್ನೋಣೇನು? ಅದೆಲ್ಲಿದ್ದಿ? ಆ ರುಕ್ಮಿ ಹತ್ಲೆ ಇದ್ದಿಲ್ಲೋ! ಅತ್ತs ಹಾಳಾಗಿ ಹೋಗಬಾರ್ದs ಮತ್ಯಾಕ ಬಂದಿ ಶನಿ! ನಾಡಶನಿ!"[೧೬] ಎಂದು ಸರಾಪಿಸುವುದೇ ಅವಳ ಕೈಯಿಂದಾಗುವ ಕೆಲಸ; ಇದು ಹದಗೆಟ್ಟು ಹೋದ ಅವರ ದಾಂಪತ್ಯದ ನಿತ್ಯನೋಟ. ನೀಲನಿಗೆ ಚಿನ್ನಿಯ ಮುಖದಲ್ಲಿ ಕರಿಯ ಕಂಡರೆ. ಚಿನ್ನಿಗೆ ನೀಲನ ಮುಖದಲ್ಲಿ ರುಕ್ಮಿ ಕಾಣುತ್ತಿದ್ದಳು. ಚಿನ್ನಿಯ ಪಾಲಿಗಂತೂ ಹಾಲಿ ನೀಲನ ದೌರ್ಜನ್ಯದ-ಕಾಮದ ಸಂಕೇತವಾಗಿದ್ದಳು.

ಕಾಮವೇ ಕಾದಂಬರಿಯ ಕೇಂದ್ರವಸ್ತು. ಚಿನ್ನಿ ಕರಿಯನಲ್ಲಿ. ನೀಲ ರುಕ್ಮಿಯಲ್ಲಿ ಅದನ್ನು ಕಂಡರೆ. ಪರಸ ಸುಂದರಿಯನ್ನು ತಡವಿ ಕೊಲೆಯಾದ. ರುಕ್ಮಿ ಫಾರೆಸ್ಟ ಗಾರ್ಡನ ಬಲೆಗೆ ಬಿದ್ದರೆ. ಗೌಡರ ಆಳು ಭರಮ ಎಲ್ಲಿಯಲ್ಲಿ ಅನುರಕ್ತನಾಗಿದ್ದ. ಸುಂದರಿ ಗೌಡನ ಗೌಡಕಿಯ ಗತ್ತಿಗೆ ಕುಣಿದರೆ. ಪರಸನ ಸಾವಿಗೂ ಕಾರಣಳಾಗುತ್ತಾಳೆ. ನೀಲನಿಗೆ ಚಿನ್ನಿ ಬೇಡವಾದರೂ. 'ರುಕ್ಮಿಗಿಂತ ಚೆಂದ'ವಾಗಿ ಕಾಣುತ್ತಾಳೆ. ಫಾರೆಸ್ಟಗಾರ್ಡನೊಂದಿಗೆ ರುಕ್ಮಿಯ ಸಂಬಂಧವಿದ್ದುದು ನೀಲನಿಗೆ ತಿಳಿದರೂ ಅವಳನ್ನು ತಿರಸ್ಕರಿಸದೆ. ಅವಳಲ್ಲಿಯೇ ಬಿದ್ದುದು. ಸುಬ್ಬಿ ಯೌವ್ವನದಲ್ಲಿಯೇ ವಿಧವೆಯಾದ ತನ್ನ ಅತೃಪ್ತಿಯನ್ನು ಹಾಲಿಯಲ್ಲಿ ತಾಯ್ತನವನ್ನು ಕಾಣುವುದರೊಂದಿಗೆ ತುಂಬಿಕೊಳ್ಳಲು ಪ್ರಯತ್ನಿಸುತ್ತಾಳೆ. ಚಿನ್ನಿ ಹಾಲಿಗಾಗಿ ಒಂದು ಕ್ಷಣ ಮರುಗಿದರೂ. ಕರಿಯನನ್ನು ಬಿಡಲಾಗದೆ. ಅವನ ಮೇಲಿನ ಆಸೆಯೇ ಹೆಚ್ಚಾಗಿ. ಕರುಳಿನ ಕುಡಿಯನ್ನೇ ಬೀದಿಗೆಸೆದು ಕರಿಯನ ಮದುಮಗಳಾಗುತ್ತಾಳೆ. ಬೀದಿಗೆ ಬಿದ್ದ ಹಾಲಿ ನೀಲನ ಗುಡಿಸಲಿಗೆ ಕೊನೆಯ ವಾರಸುದಾರಳು. ಸುರಿಯುವ ಮಳೆಯಲ್ಲಿ ಏರಿದ ಜ್ವರದ ತಾಪದಲ್ಲಿ ಒಂಟಿಯಾಗಿ ಗುಡಿಸಲಿನಲ್ಲಿ ನರಳುತ್ತಾಳೆ. ತನ್ನ ಅಸ್ತಿತ್ವಕ್ಕಾಗಿ ಹೆತ್ತಮಗಳನ್ನೇ ತೊರೆದು ಹೋಗುವ ಚಿನ್ನಿ ಹೆಣ್ಣಿನ ಒಂದು ಮುಖವಾದರೆ. ಏನೂ

---

೧೩. ದು. ನಿಂ. ಬೆಳಗಲಿ : ಹಡೆದವರು. ಪುಟ ೪

೧೪. ದು. ನಿಂ. ಬೆಳಗಲಿ : ಹಡೆದವರು. ಪುಟ ೧೩

೧೫. ದು. ನಿಂ. ಬೆಳಗಲಿ : ಹಡೆದವರು. ಪುಟ ೬

೧೬. ದು. ನಿಂ. ಬೆಳಗಲಿ : ಹಡೆದವರು. ಪುಟ ೬

ಸಂಬಂಧವಿಲ್ಲದ ಸುಬ್ಬಿ ಹಾಲಿಗಾಗಿ ಹಂಬಲಿಸಿ-ಪ್ರೀತಿಯೆರೆದುದು ಹೆಣ್ಣಿನ ಮತ್ತೊಂದು ಮುಖ. ಕಾಮದ ಪಾತಳಿಯ ಮೇಲೆಯೇ ರೂಪಗೊಳ್ಳುವ ಈ ಎಲ್ಲ ಸಂಕೀರ್ಣಗಳನ್ನು ಕಾದಂಬರಿಕಾರರು ತುಂಬ ಜಾಣ್ಮೆಯಿಂದ ಪ್ರತಿಪಾದಿಸಿದ್ದಾರೆ. ಎಲ್ಲಿಯೂ ಅಶ್ಲೀಲತೆ ಮೈಯಿಕ್ಕದಂತೆ ಸದಾ ಜಾಗೃತವಾಗಿದ್ದಾರೆ. ನಿಗಿನಿಗಿಸುವ ಕಿಚ್ಚನ್ನು ಸಹ ಬೆಳಕಿನಂತೆ ಅರಳಿಸಿದ ಶ್ರೇಯಸ್ಸು ಕಾದಂಬರಿಕಾರರದು.

ಹಾಲಿ ಸಮಾಜದ ರೀತಿ-ನೀತಿ. ಕಟ್ಟುಪಾಡು. ನಿಯಮ-ಸಂಬಂಧಗಳನ್ನು ಅರಿಯದ ಮುಗ್ಧ ಜೀವಿ. ಅದೊಂದು ಸಮಸ್ಯೆಯ ಮಗು. "ಯಾವ ಅಪರಾಧಕ್ಕಾಗಿಯೋ ಜನಿಸಿ ಬಂತು. ಹರಕೆಹೊತ್ತು ಬೇಡಿ-ಬಯಸಿ ಪಡೆದ ಮಗುವಲ್ಲ; ಅರಳಿಕಟ್ಟೆ ಸುತ್ತಿ ಬಂದ ಪುಣ್ಯದ ಅಂಶದಿಂದ ಹುಟ್ಟಿಬಂದ ಹಸುಳೆಯಲ್ಲ. ಅದರ ಪಾಲಿಗೆ ನ್ಯಾಯುವಾಗಿ ಜೀವಿಸಲು ಮಾನವೀಯ ಧರ್ಮದ ಆಸರೆಯೂ ಇಲ್ಲ. ಆದರೆ ಬದುಕಿಯೇ ಇದೆ. ವಿಷವರ್ತುಲದಲ್ಲಿ".[೧೭] ಎಂಬ ಲೇಖಕರ ಮಾತುಗಳು ಹಾಲಿಯ ನಿಕೃಷ್ಟ ಬದುಕಿಗೆ ವ್ಯಾಖ್ಯಾನ ಬರೆದಂತಿದೆ. ತಾಯಿಯ ನಿರ್ಲಿಪ್ತತೆಯಾಗಲೀ. ತಂದೆಯ ತಿರಸ್ಕಾರವಾಗಲೀ. ಸುಬ್ಬಿಯ ವಾತ್ಸಲ್ಯವಾಗಲೀ ಆ ಮುಗ್ಧ ಮಗುವಿಗೆ ಅರ್ಥವಾಗದು. ರುಕ್ಮಿಯ ವಶಕ್ಕೆ ಹೋದ ಹಾಲಿ ಕೊನೆಯಲ್ಲಿ ನೀಲನಿಗೆ ಸಾವಿರ ರೂಪಾಯಿ ತಂದುಕೊಡುವ ವಸ್ತುವಾದಾಗ ಓದುಗರ ಮನಮಿಡಿಯುತ್ತದೆ. ಬೊಂಬಾಯಿಯ ರಂಗು-ರಂಗಿನ ಸೋನಿ ಹಾಲಿಯನ್ನು ವಸ್ತುವಿನಂತೆ ಖರೀದಿಸಿದಾಗ ನೀಲನಿಗೇನೋ ಖುಷಿ; ಹೆಮ್ಮೆಯಿಂದ ಅವನೇನೋ ಬೀಗುತ್ತಾನೆ ಸರಿ. ಓದುಗರಿಗೆ ಅದೊಂದು ಸಹಿಸಲಾಗದ ಸಂವೇದನಾ ಅನುಭವ.

ಚಿನ್ನಿ ಮಹಾಭಾರತದ ಕುಂತಿ ಇವರಿಬ್ಬರೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಹಾಲಿ ಗಂಡುಮಗುವಾಗಿದ್ದರೆ ಕರ್ಣನಂತೆ ಉಳ್ಳವರ ದಾಸನಾಗುತ್ತಿದ್ದ. ಕರ್ಣ ಹೆಣ್ಣುಮಗುವಾಗಿದ್ದರೆ ಹಾಲಿಯಂತೆ ಸಮಾಜಕ್ಕೆ ಸಮಸ್ಯೆಯಾಗುತ್ತಿದ್ದನು. ಒಂದರ್ಥದಲ್ಲಿ ಆ ಕರ್ಣ- ಈ ಹಾಲಿ ಇಬ್ಬರ ಸ್ಥಿತಿಯೂ ಒಂದೇ ರೀತಿಯವು. ಹೆತ್ತವರಿಗೆ ಬೇಡವಾದರೂ. ಸಮಾಜಕ್ಕೆ ಹೊರೆಯಾದರೂ ಸಹ ಬದುಕುಳಿಯುವುದು ಇವರಿಬ್ಬರ ದುರ್ದೈವ. ಹುಟ್ಟಿದ್ದೇ ಒಂದು ದುರಂತ; ಅದು ಒಂದು ಮೋಜಿಗಾಗಿಯಷ್ಟೇ. 'ನೆನೆವೊಡೆ ಕರ್ಣನಂ ನೆನೆಯ'–ಎಂಬ ಪಂಪನ ಕರುಣೆಗೆ ಪಾತ್ರನಾದ ಕರ್ಣನಂತೆ ಹಾಲಿ ಕೂಡ ಬೆಳಗಲಿಯವರ ಅನುಕಂಪ ಸಂಪಾದಿಸಿದೆ.

ಇದೊಂದು ಹಿಂದುಳಿದ ಸಮಾಜದ ಕಥೆ. ಆದರೆ 'ಜಾತಿ'ಯ ಹಣೆಪಟ್ಟಿ ಇದಕ್ಕಿಲ್ಲ. ಕೆಳವರ್ಗದವರ ಬದುಕಿನ ಸಹಜ ನೆಲೆ-ಬೆಲೆಗಳನ್ನು ಚೆನ್ನಾಗಿ ಗುರುತಿಸಿರುವ ಕಾದಂಬರಿಯಿದು. ಕೆಳವರ್ಗದವರು ಕಾಮವನ್ನು ಫ್ಯೂಡಲ್ ನೆಲೆಯಲ್ಲಿ ಗ್ರಹಿಸುವುದಿಲ್ಲ. ಆದರೆ ಅದೇ ಮಧ್ಯಮವರ್ಗದವರು ಕಾಮವನ್ನು ವಾಸ್ತವದಲ್ಲಿ ಕಾಣುತ್ತಾರೆ. ನೀಲ ರಾಜಕಾರಣಿ–ಗೌಡರ ದಾಳವಾಗಿ ಪರಸನನ್ನು ಕೊಂದದ್ದು. ಸುಂದ್ರಿಗಾಗಿ ಗೌಡನೇ

---

೧೭. ದು. ನಿಂ. ಬೆಳಗಲಿ : ಹಡೆದವರು : ಮೊದಲ ಮಾತಿನಿಂದ

ಪರಸನನ್ನು ಕೊಲ್ಲಿಸಿದ್ದು. ಕರಿಯ ನೀಲನಿಗೆ ಹಣತೆತ್ತು ಸೋಡಚೀಟಿ ಪಡೆದದ್ದು. ರುಕ್ಮಿಗಾಗಿ ಆಸೆಪಟ್ಟ ಯಮನು. ಅವಳು ದಕ್ಕದಾಗ ನೀಲನನ್ನು ದುಷ್ಕೃತ್ಯಗಳಿಗಾಗಿ ಪ್ರಚೋದಿಸಿದ್ದು– ಇವುಗಳೆಲ್ಲ ಫ್ಯೂಡಲ್ ವ್ಯವಸ್ಥೆಯ ವಿವಿಧ ಮುಖಗಳೇ. ಆದರೆ ನೀಲ ಮೂಲತಃ ನಾನ್ ಫ್ಯೂಡಲ್ ವ್ಯಕ್ತಿ. ತನ್ನ ಹೆಂಡತಿ ಕರಿಯನನ್ನು ಪ್ರೀತಿಸಿದರೂ. ಅವಳ 'ಚೆಲುವಿಕೆ'ಗೆ ಮನಸೋಲುತ್ತಾನೆ. ತಾನು ಜೈಲಿಗೆ ಹೋದಾಗ ರುಕ್ಮಿ ಫಾರೆಸ್ಟಗಾರ್ಡ್‌ನ ಸಂಗ ಬೆಳೆಸಿದರೂ ಅವಳನ್ನು ತ್ಯಜಿಸದವ. ಹೀಗೆ ಕಾದಂಬರಿಯುದ್ದಕ್ಕೂ ಫ್ಯೂಡಲ್-ನಾನ್‌ಫ್ಯೂಡಲ್‌ಗಳ ಮಧ್ಯದ ಸಂಘರ್ಷ ತುಂಬ ಆಕರ್ಷಕವಾಗಿ ಮೂಡಿಬಂದಿದೆ. "ಕನ್ನಡ ಕಾದಂಬರಿಯ ಮೂಲಸ್ವರೂಪದ ಒಂದು ಮುಖ್ಯ ಲಕ್ಷಣವೆಂದರೆ. ಪರಿವರ್ತನೆಯ ಪ್ರಕ್ರಿಯೆಯಲ್ಲಿ ಗಾಢವಾಗಿ ತೊಡಗಿಸಿಕೊಳ್ಳುವಿಕೆ. ತನ್ನ ಪ್ರಾರಂಭದಿಂದಲೂ ಅದು ಪರಿವರ್ತನೆಯ ಎರಡು ಆಯಾಮಗಳಲ್ಲಿ. ಎಂದರೆ ವ್ಯಕ್ತಿ ಹಾಗೂ ಸಮಾಜಗಳೆರಡರಲ್ಲಿಯೂ ನಡೆದ ಪರಸ್ಪರ ಬದಲಾವಣೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಲೇ ಬಂದಿದೆ. ನವೋದಯ ಕಾಲದಲ್ಲಿ ಅದರ ಒತ್ತು ಪರಿಸರದ ಮೇಲಿದ್ದರೆ. ನವ್ಯದ ಕಾಲದಲ್ಲಿ ಅದು ಪ್ರಜ್ಞೆಯತ್ತ ಹೊರಳಿತು. ಆದರೆ ಕನ್ನಡ ಕಾದಂಬರಿ ಪ್ರಜ್ಞೆ-ಪರಿಸರಗಳ ಅನ್ಯೋನ್ಯತೆಯನ್ನು ಎಂದೂ ಅಲಕ್ಷಿಸಿಲ್ಲ" [೧೮] ವೆಂಬ ಮಾತು ಫ್ಯೂಡಲ್ ವ್ಯವಸ್ಥೆಗೆ ಹಿಡಿದ ಕನ್ನಡಿ. ನೀಲನಿಗೆ ಪರಿವರ್ತನೆಯ ಹಂಬಲವಿದ್ದರೂ. ಅವಕಾಶ ಸಿಗದೆ. ಇನ್ನೊಬ್ಬರ 'ಅಸ್ತ್ರ'ವಾಗುವುದು ಅನಿವಾರ್ಯವಾಗುತ್ತದೆ.

ಕಥೆ ಬಹು ಮಾರ್ಮಿಕವಾಗಿ ನಿರೂಪಣೆಗೊಂಡಿದೆ. ದುಃಖದ ಭರದಲ್ಲಿ ಅಂತಃಕರಣದ ಸೋಪಾನದಲ್ಲಿ ತೇಲಿಸಿಕೊಂಡು ಹೋಗುವ 'ಹಡೆದವರು' ಬೆಳಗಲಿಯವರ ಗಮನಾರ್ಹ ಕೃತಿ. ಕಥಾ ನಿರೂಪಣೆಯಲ್ಲಿ ಕೌಶಲ್ಯ ಕಂಡು ಬರುತ್ತಿದ್ದು. ಸಾಮಾನ್ಯ ಓದುಗರನ್ನು ಸೆರೆಹಿಡಿಯುವಂತಿದೆ. ಇಡೀ ಕಾದಂಬರಿಯಲ್ಲಿ ಎದ್ದು ಕಾಣುವ ಕೆಲವು ವೈಶಿಷ್ಟ್ಯಗಳುಂಟು. ಹಿಂದುಳಿದ ಜನಾಂಗದ ವಾಸ್ತವ ಚಿತ್ರಣದಿಂದ ಆಡುನುಡಿಯ ಬಳಕೆಯಿಂದ ಕಾದಂಬರಿಗೆ ಸ್ವಂತಿಕೆ ತಂದು ಕೊಟ್ಟಿದ್ದು. ಮಣ್ಣಿನ ವಾಸನೆಯನ್ನು ಕಾದಂಬರಿಯುದ್ದಕ್ಕೂ ಕಾಯ್ದಿರಿಸಿ ಅದರ ಸೊಗಡನ್ನು ಪ್ರಕಟಿಸಿದ್ದು. ಸೊಗಸಾದ ಪ್ರಾದೇಶಿಕ ಭಾಷೆಯ-ಒಂದು ಕಗ್ಗ ಗ್ರಾಮಜೀವನದ ಅನುಭವಪೂರ್ಣ ಬದುಕಿನ ದಟ್ಟ ನಿರೂಪಣೆ. 'ಕರುಳುಮಿಡಿಯುವ ಘಟನೆಗಳು ಇವೆಲ್ಲ ಈ ಕಾದಂಬರಿಯ ಪ್ರಮುಖ ಅಂಶಗಳು. ಅವರಲ್ಲಿಯೂ ಲೇಖಕರ ಪಕ್ವವಾದ ಅನುಭವ ವಿಶೇಷವಾಗಿ ಗಮನಸೆಳೆಯುತ್ತದೆ. ಪ್ರಾದೇಶಿಕ ಮೂಸೆಯಲ್ಲಿ ಮೂಡಿಬಂದ ಇದು ಗ್ರಾಮಜೀವನದ ಯಥಾವತ್ ಬದುಕನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ಅನಾಥ ಮಗುವಿನ ಜೀವನವೊಂದರ ಸುತ್ತ ಹೆಣೆದುಕೊಂಡ ವಿಘಟಿತ ಕುಟುಂಬವೊಂದರ ಚಿತ್ರಣ ತುಂಬ ಚೆನ್ನಾಗಿಯೇ ಮೂಡಿಬಂದಿದೆ. ಗಂಡು. ಹೆಣ್ಣಿನ ಶೋಷಣೆಗಾಗಿ ಸದಾ ಅವಕಿಸುವ ಅವರ ದೃಷ್ಟಿ. ಮಧ್ಯದಲ್ಲಿ ಮಕ್ಕಳ ಪಾಡನ್ನು ಕೇಳುವವರಾರು ? ಅದು ಭೂಮಿಗೆ ಭಾರವಾಗಿ ನಿಕೃಷ್ಟ ಬದುಕನ್ನು ಸಾಗಿಸುವ ಸ್ಥಿತಿ ತೀರ ಚಿಂತಾಜನಕ.

---

೧೮. ಜಿ. ಎಸ್. ಆಮೂರ : ಕನ್ನಡ ಕಥನ ಸಾಹಿತ್ಯ : ಕಾದಂಬರಿ. ಪುಟ ೪೬೫

ಮಿರ್ಜಿ ಅಣ್ಣಾರಾಯರ ನಿಸರ್ಗ. ರಾವಬಹಾದ್ದೂರರ ಗ್ರಾಮಾಯಣಗಳು ಉತ್ತರ ಕರ್ನಾಟಕದ ಶ್ರೇಷ್ಠ ಪ್ರಾದೇಶಿಕ ಕಾದಂಬರಿಗಳು. ಅದರಂತೆ ಬೆಳಗಲಿಯವರ 'ಹಡೆದವರು' ಆ ಮಟ್ಟಕ್ಕೇರದಿದ್ದರೂ. "ಗ್ರಾಮೀಣ ಬದುಕಿನಲ್ಲಿ ಸಾಮಾನ್ಯ ವರ್ಗದ ಜನರ ನಡುವಣ ಸಂಬಂಧಗಳ ಸಂಕೀರ್ಣ ಅಂಶಗಳನ್ನು ಕಲಾತ್ಮಕವಾಗಿ ಮೈದಾಳಿಸುವ ಪ್ರಸ್ತುತ 'ಹಡೆದವರು' ಕಾದಂಬರಿ ಬೆಳಗಲಿಯವರ ಗಮನಾರ್ಹಕೃತಿ"[೧೯] ಎಂಬುದಕ್ಕೆ ಎರಡು ಮಾತಿಲ್ಲ. ಅಣ್ಣಾರಾಯರ 'ನಿಸರ್ಗ' ಸಂಕೀರ್ಣಭಾವಗಳ ಮುಖಾಂತರ ಆ ಭಾವಗಳ ದುರಂತ ಕಾದಂಬರಿಯಾಗಿದ್ದು. ಕಾಮ-ಪ್ರೇಮದ ಸಾಮಾಜಿಕ ಸಂಘರ್ಷವೇ ಅದರ ವಸ್ತುವಾಗಿದೆ. ಗ್ರಾಮಾಯಣ ಸಂಕ್ರಮಣಾವಸ್ಥೆಯ ಸಮಾಜವೊಂದರ ದುರಂತ ಚಿತ್ರವನ್ನು ಚಿತ್ರಿಸುತ್ತದೆ. ಕಾಮಪಿಪಾಸೆಯ ದಾಸರಾದ ಗಂಡು-ಹೆಣ್ಣಿನ ಮಧ್ಯದಲ್ಲಿ ಮಗು ಪಟ್ಟ ಶ್ರಮ-ಕ್ರಮಗಳನ್ನು ಚಿತ್ರಿಸುವ 'ಹಡೆದವರು' ವಿಘಟಿತ ಕುಟುಂಬವೊಂದನ್ನು ತೆರೆದಿಡುವ ಜೀವಂತ ಚಿತ್ರವಿದ್ದಂತಿದೆ.

"ಸಾಹಿತ್ಯವೆಂಬುದು ಲೇಖಕನೊಬ್ಬನ ವೈಯಕ್ತಿಕ ಅನುಭವವನ್ನು ಮತ್ತು ಜೀವನದೃಷ್ಟಿಯನ್ನು ಶಾಬ್ದಿಕ ಭಾಷೆಯಲ್ಲಿ ಒಡಮೂಡಿಸುವ ಮಾಧ್ಯಮವಾದರೂ. ಅದು ಸಮಕಾಲೀನ ಸಾಮಾಜಿಕ ವಾಸ್ತವಗಳನ್ನು ಪ್ರತ್ಯಕ್ಷವಾಗಿಯೋ. ಪರೋಕ್ಷವಾಗಿಯೋ. ಒಳಗೊಂಡೇ ಇರುತ್ತದೆ. ಆ ಸಮಾಜವನ್ನು ಗ್ರಹಿಸುವ ಕ್ರಮವೇ ಅವನ ಕೃತಿಯ ಸ್ವರೂಪವನ್ನು ನಿರ್ಧರಿಸುತ್ತವೆ"[೨೦] ಯಾದುದರಿಂದ 'ಹಡೆದವರು' ಸಮಕಾಲೀನ ಭಾರತೀಯ ಸಮಾಜದ ವಿಭಿನ್ನ ನೆಲೆ-ಬೆಲೆಗಳನ್ನು ಶೋಧಿಸುವ ವಾಸ್ತವ ಮಾರ್ಗದ ಅಪರೂಪದ ಕಾದಂಬರಿ.[೨೧]

ಲೇಖಕರು ಉತ್ತಮ ವಸ್ತುವನ್ನೇ ಆಯ್ದುಕೊಂಡಿದ್ದಾರೆ. ಆದರೆ ಅದನ್ನು ಇನ್ನಷ್ಟು ಸಾಮಾಜಿಕ-ಸಾಂಸ್ಕೃತಿಕ ಪಾತಳಿಯಲ್ಲಿ ಶೋಧಿಸಿದ್ದರೆ. ಇನ್ನೂ ಹೆಚ್ಚು ಪರಿಣಾಮಕಾರಿಯಾಗಬಹುದಿತ್ತು. ಬೆಳಗಲಿಯವರು ತಾವೊಬ್ಬ ನುರಿತ ಕಥೆಗಾರರೆಂಬುದನ್ನು ಸಾಬೀತು ಪಡಿಸಿದ್ದಾರೆ. ತಮ್ಮ ಅನುಭವಗಳನ್ನು ಸಾಂದ್ರಗೊಳಿಸುವಲ್ಲಿ ಬೆಳಗಲಿಯವರ ಭಾಷೆ ಸೊರಗದು: ಸೋರದು. ತಂತ್ರ-ನಾವೀನ್ಯತೆ-ಸಾಂಸ್ಕೃತಿಕ ಪಾತಳಿಯ ಕೊರತೆಗಳು ಕಾದಂಬರಿಯಲ್ಲಿ ಕಂಡರೂ ವಸ್ತುವಿನ ಪ್ರಬಲತೆಯಲ್ಲಿ ಇವಾವೂ ಎದ್ದುಕಾಣದಂತೆ ಮೂಡಿದೆ. ಕಾದಂಬರಿ ಸಶಕ್ತವಾಗಿಯೇ ಮೂಡಿಬಂದಿದೆ. ಬೆಳಗಲಿಯವರ ಉತ್ತಮವಾದ ಗುಣವೆಂದರೆ. ಅವರ ಬರವಣಿಗೆಯಲ್ಲಿ ಸದಾ ಲವಲವಿಕೆಯಿರುವುದು ಹಾಗೂ ಸರಳತೆ ತುಂಬಿಕೊಂಡಿರುವುದು. ಜೊತೆಗೆ ಕಾದಂಬರಿಗಳಲ್ಲಿ ಸಹಜ ಆಕರ್ಷಣೆ ಎದ್ದು ಕಾಣುತ್ತದೆ. ಬರವಣಿಗೆಯಲ್ಲಿ ಪ್ರಾಮಾಣಿಕತೆ ಹಾಗೂ ಆತ್ಮೀಯ ನಿವೇದನೆಗಳು ಬೆಳಗಲಿಯವರ ಯಶಸ್ಸಿಗೆ ಮೂಲಸೆಲೆಗಳಾಗಿವೆ. ಸಹಜ-ಸರಳ-ಅಕೃತಕತೆ ಬೆಳಗಲಿಯವರ ಬರವಣಿಗೆಯ ಪ್ರಮುಖ ಗುಣಾತ್ಮಕ ಅಂಶಗಳಾಗಿವೆ. ಹೀಗಾಗಿ 'ಹಡೆದವರು' ಒಂದು ಉತ್ತಮ ಪ್ರಾದೇಶಿಕ ಕಾದಂಬರಿ.

---

೧೯. ದು. ನಿಂ. ಬೆಳಗಲಿ : ಹಡೆದವರು ಕಾದಂಬರಿಯ ಬೆನ್ನುಡಿ

೨೦. ಟಿ. ಪಿ. ಅಶೋಕ : ಸಾಹಿತ್ಯ ಸಂದರ್ಭ. ಪುಟ ೨೩೨-೩೩

೨೧. ವ್ಹಿ. ಎಸ್. ಮಾಳಿ : ಜಿ. ಎಸ್. ಕಾಪಸೆ (ಸಂ) : ಬೆಳಗಲಿ (ಅಭಿನಂದನ ಗ್ರಂಥ). ಪುಟ ೧೨೯

**ಪ್ರಾದೇಶಿಕತೆ :**

"ನಿಸರ್ಗ ಕಾದಂಬರಿ ಮಾದರಿಯ ಪ್ರಾದೇಶಿಕತೆಯ ಸೊಗಡಿನಿಂದ ಕೂಡಿದ ಬನಿಕಟ್ಟಿನ ಜೀವಂತ ಭಾಷೆ...." ೨೨ ಯನ್ನು ಹೊಂದಿದ 'ಹಡೆದವರು' ಬೆಳಗಲಿಯವರ ಗಮನಾರ್ಹವಾದ ಪ್ರಾದೇಶಿಕ ಕಾದಂಬರಿ. ಕಥಾವಸ್ತುವನ್ನು ಎಲ್ಲೆಡೆ ಅನ್ವಯಿಸಬಹುದಾದರೂ. ಪ್ರಸ್ತುತ ಕಾದಂಬರಿ ಪ್ರಾದೇಶಿಕ-ಭಾಷಾ ಸೊಗಡನ್ನು ಹೊಂದಿದ್ದು: ಇಲ್ಲಿ ಬಳಸಿದ ಭಾಷೆ-ಆಡುನುಡಿ. ರೀತಿನೀತಿಗಳಿಂದಾಗಿ ವಿಶಿಷ್ಟವಾದ ನೆಲೆ-ಬೆಲೆಯನ್ನು ಕಂಡುಕೊಂಡಿದೆ.

**ಸ್ಥಳ-ಪಾತ್ರ :**

'ಹಡೆದವರು' ಕಾದಂಬರಿಯಲ್ಲಿ ಬೆಳಗಲಿಯವರು ಉಲ್ಲೇಖಿಸಿರುವ ಸ್ಥಳ-ಪಾತ್ರಗಳೆಲ್ಲ ಗ್ರಾಮನಾಮಗಳೇ ಆಗಿವೆ. 'ಜೋಗಿ ಮರಡಿ'. ಕಲ್ಲಟ್ಟಿ. ಕವಳಗಿ. ಬನಹಟ್ಟಿ. ಕುಳ್ಳೊಳ್ಳಿ. ಜಗದಾಳ. ಚಿಮ್ಮಡ. ಮೂಡಲಗಿ– ಈ ಮೊದಲಾದ ಪ್ರದೇಶಗಳೆಲ್ಲ ಗ್ರಾಮೀಣಸ್ಥಳಗಳೇ ಆಗಿವೆ. ಈ ಪ್ರಾದೇಶಿಕ ಗ್ರಾಮಗಳಲ್ಲೆಲ್ಲ ಹರಿದಾಡುವ ಕಾದಂಬರಿಯ 'ವಸ್ತು' ಮಾತ್ರ ಎಲ್ಲೆಡೆಯಲ್ಲಿಯೂ ಕಾಣುವಂಥದ್ದು. ಈ ಗ್ರಾಮಗಳಲ್ಲಿ ಸಹಜ ಪ್ರಚಲಿತವಿರುವ ಹೆಸರುಗಳನ್ನೇ ಕಾದಂಬರಿಯಲ್ಲಿ ಕಾಣಬಹುದು. ಚಿನ್ನಿ. ಸುಬ್ಬಿ. ರುಕ್ಮಿ. ಎಲ್ಲಿ. ಕೆಂಪವ್ವ. ಸೋನಿ. ಮಾದರನಾಗಿ. ಹಾಲಿ. ರಾಣವ್ವ. ಸುಂದ್ರಿ. ಚಂದ್ರಿ. ಕಾಳಿ. ಸೀಲ. ಪರಸ. ಕರಿಯ. ಯಮನು. ಭೀಮಣ್ಣ, ಮಲ್ಲಪ್ಪ. ಕಲ್ಲ. ನರಸ. ಭರಮ. ದಲ್ಲಾಳಿ ಪೀರಸಾಬ. ಈ ಪಾತ್ರಗಳೆಲ್ಲ ಗ್ರಾಮೀಣ ಪ್ರದೇಶದ ಹೆಸರುಗಳೇ. ಸಾರ್ವತ್ರಿಕ ವಸ್ತುವೊಂದನ್ನು 'ಪ್ರಾದೇಶಿಕನೆಲೆ'ಯಲ್ಲಿ ಗುರುತಿಸಿರುವ ಬೆಳಗಲಿಯವರ 'ಹಡೆದವರು' ಒಂದು ಅನುಭವಪೂರ್ಣ ಕಾದಂಬರಿಯಾಗಿ ಹೊರಹೊಮ್ಮಿದೆ.

**ಆಡುಭಾಷೆಯ ಸತ್ವಯುತ ಬಳಕೆ :**

ಗ್ರಾಮೀಣ ಬದುಕನ್ನು ಕಣ್ತುಂಬ ನೋಡಿರುವ ಬೆಳಗಲಿಯವರು ಹಳ್ಳಿಗರ ಬಾಯಿಮಾತಿನಲ್ಲಿಯ ಭಾಷೆಯ ಶಕ್ತಿಯನ್ನು ಅರಿತು ಕುಶಲತೆಯಿಂದ ಬಳಸುತ್ತಾರೆ. ಹೀಗಾಗಿ ಅವರ ಕಾದಂಬರಿಗಳಲ್ಲೆಲ್ಲ ಲೀಲಾಜಾಲವಾಗಿ. ರಸವತ್ತಾಗಿ. ಅಷ್ಟೇ ಅರ್ಥಪೂರ್ಣವಾಗಿ. ಸತ್ವಯುತವಾಗಿ ಬಳಕೆಯಾಗಿರುವ ಗ್ರಾಮೀಣ ಭಾಷೆಯ ಅಂತಃಸತ್ವವನ್ನು ಅರಿಯದಿದ್ದರೆ ಅವರ ಕಾದಂಬರಿಗಳನ್ನು ಕುರಿತ ಅಧ್ಯಯನ ಅಪೂರ್ಣವಾಗುತ್ತದೆ. ತಮ್ಮ ಪರಿಸರದ ಮಣ್ಣಿನ ಕಂಪನ್ನು ತಮ್ಮ ಕಾದಂಬರಿಗಳಲ್ಲಿ. ಅದೂ ಹೆಚ್ಚಾಗಿ ತಮ್ಮ ಪ್ರಾದೇಶಿಕ ಕಾದಂಬರಿಗಳಲ್ಲಿ ಸೂರೆಗೈದಿದ್ದಾರೆ. ಅವರು ಬಳಸಿದ ಇಂಥ ಭಾಷೆಯಲ್ಲಿ ಗ್ರಾಮೀಣ ಬದುಕು-ಸಂಸ್ಕೃತಿಯ ಪಡಿಯಚ್ಚೇ ಇದೆ.

---

೨೨. ಹಂಪನಾ : ಸಾಹಿತ್ಯ ವಾರ್ಷಿಕ ೭೭

"ಈಗಿನ ಗಂಡ್ಸರ ಕಣ್ಣು ನೆತ್ತೀ ಮ್ಯಾಗs ಇರ್ತಾವು" (ಪುಟ ೧)

"ಹ್ನು ತಿನ್ನು ಗಂಟ್ಲಾಗ ತೂತ ಐತಿಲ್ಲೋ?" (ಪುಟ ೩)

"ಇನ್ಮುಂದ ತ್ವಾಟದ ಕಡೀ ಹಾಯ್ಲೇಬ್ಯಾಡ. ತಿಳೀತೇನ ನೀಲ್ಯಾ! ಏನ ಮುಗಿಸ್ತಿ ಅತ್ತs ಮುಗಸ. ಮುಂದಿನ ಜವಾಬ್ದಾರಿ ನಂದು. ಒಂದೀಟೂ ಅಂಜಬ್ಯಾಡಾ. ಮಗನ ಹುಲಿ ಆಗಬೇಕು ನೋಡ ಹುಲಿ" (ಪುಟ ೯)

–ಈ ಮಾತುಗಳಲ್ಲಿ ಗೌಡಿಕೆಯ ಗತ್ತೂ ಇದೆ; ಕೆಳವರ್ಗದವರನ್ನು ತಮ್ಮ ಗಾಳವನ್ನಾಗಿ ಉಪಭೋಗಿಸಿಕೊಳ್ಳುವ ಓಕ್ಮತ್ತೂ ಇದೆ. ಬೆಳಗಲಿಯವರು ಪ್ರಯೋಗಿಸಿರುವ ಗ್ರಾಮೀಣ ಭಾಷೆಯಲ್ಲಿ ಅಲ್ಲಿಯ ಜೀವಿಗಳ ಭಾವ-ಭಾಷೆ ಸ್ಪಂದನವಿದೆ: ಅದು ಸಾಮಾನ್ಯ ಜನತೆಯ ಎದೆಯಿಂದ ಹೊರಬರುವ ಅಂಥ ಭಾಷೆ ಗ್ರಾಮೀಣರ ಬದುಕಿನ ಭಾಷ್ಯವಾಗಿದೆ. "ಲಗೂ ಬರಬೇಕಂದ್ರು ಒಂದ ಎಮ್ಮಿ ಕೆಲಸ ಹತ್ಯು. ಇಗಾ ಈ ಚೀಲದಾಗ ಏನ್ ಅದಾವ ನೋಡ". "ಎಟ್ಟ ನೇಟ ಅದೀಯ ಚಿನ್ನಿ ನಾ ಹೊರಲಾರ್ದ ಹೊರೀನ ಹೆಂಗ ಹೊತ್ಕೊಂಡ ಬಂದಿ?" (ಪುಟ ೧೫). "ಸುಂದರೀ. ನಿನ ಹಾರ್ಸಿಕೊಂಡ ಹೋಗದಿದ್ರು ನಮಪ್ಪನ ಹೊಟ್ಟೀಲೇ ಹುಟ್ಟಬಾರ್ದು" (ಪುಟ ೨೩) –ಎಂದು ಸೊಕ್ಕೇರಿದ ಪರಸ ಸೊಕ್ಕಿನಿಂದಲೇ ನುಡಿಯುವ ಮಾತುಗಳಲ್ಲಿ ಒಂದು ರೀತಿಯ ಆಹ್ವಾನವೇ ಇದೆ. "ಪರಸ್ಯಾನ ಖೂನೀ ನೀಲ್ಯಾ ಮಾಡ್ಯಾನು! ಅದರ ಸೆರ್ಗ ಚಿನ್ನಿಗೂ ಬರೂದು. ಸೂಳಿ ಪಾಪ ಸಂನ್ಯಾಸಿಗಿ. ಆ ಖೂನಿ ಮಾಡಿದವ್ನ ಮಗಳ್ನ ಮದ್ಲಿಕಳಸ ಅವ್ರ ಮನಿಗಿ! ಇಲ್ಯಾಕ ತಂದಿ. ಆ ಇಸದ ಬೀಜಾ?" (ಪುಟ ೩೪) "ಹಾವರಗಿತ್ತ್ಯಾರು! ಎಲ್ಲಾ ಹೆಂಗ್ಸರೂ ಹಾಂಗ!" (ಪುಟ ೭೬). "ಹಾಲಿ ನಿಮಪ್ಪ. ನಿಮವ್ವನ ಕೊಲ್ಲಾಕ ಹೋಗಿದ್ದಂತ್ಲ.....! ಇನ ಮುಂದೂ ಕೊಂದು ಬಿಡ್ತಾನಂತ್ಲ! ನಿಮ್ಮವ್ವ ಇಲ್ಲಿ ಬರೂದುಲ್ಲಂತ್ಲ.....! ಕರ್ಯಾನ ಮದ್ವಿ ಆಗ್ತಾಳಂತ್ಲ.....! ನಿಮಪ್ಪನೂ ಇಲ್ಲಿ ಬರೂದುಲ್ಲಂತ್ಲ! ಅವನೂ ರುಕ್ಮೀನ ಮದ್ವೀ ಆಗ್ತಾನಂತ್ಲ....! ನಿನಗ ಇಬ್ರು ಅಪ್ಪ. ಇಬ್ರು ಅವ್ವ ಆಗ್ತಾರಂತ್ಲ.....! ಆದ್ರೂ ನೀ ಒಬ್ಬಾಕಿ ಅಂತ್ಲ....! ನೀ ಪರ್ದೇಶಿ ಆಗ್ತಿಯಂತ್ಲ!!" (ಪುಟ ೧೦೧) –ಎಂಬಂತ ಮಾತುಗಳಲ್ಲಿ ಬೆಳಗಲಿಯವರು ಗ್ರಾಮೀಣ ಭಾಷೆಯ ರಸವನ್ನೇ ಹಿಂಡಿಟ್ಟಿದ್ದಾರೆ. "ಹಾವರ್ಗಿತ್ತಿ ಮಗಳs ಎಲ್ಲಾ ಪರ್ಲ ಹರದ್ರೂ ನನ ಬಿಡವಲ್ಲಲ್ಲಾ!" (ಪುಟ ೧೨೭). "ಹಾಂಗs ಹೋಗಿಲ್ಲ, ಒಂದ್ಸಾವಿರ ರೂಪಾಯಿರೋಖ ಕೊಟ್ಟು ಕರ್ಕೊಂಡ ಹೋಗ್ಯಾಳು ಸೋನಿ" (ಪುಟ ೧೩೭) –ಹೀಗೆ ಗ್ರಾಮೀಣ ಜನತೆಯ ಒರಟು. ಬಿರುಸು. ಧೈರ್ಯ. ಔದಾರ್ಯ. ಸಿಟ್ಟು-ಸೆಡವು ಏನೆಲ್ಲವನ್ನು ಒಳಗೊಂಡ ದೇಶೀ ಭಾಷೆಯ ಮೂಲಸತ್ವ-ಸ್ವರೂಪವನ್ನು ಬಳಸಿಕೊಂಡ ಬೆಳಗಲಿಯವರು 'ಹಡೆದವರು'ದಲ್ಲಿ ಒಂದು 'ಸಂಪೂರ್ಣ ಗ್ರಾಮೀಣವಾತಾವರಣ'ವನ್ನೇ ನಿರ್ಮಿಸಿದ್ದಾರೆ. ಕೇವಲ ಗ್ರಾಮೀಣ ಭಾಷೆಯನ್ನಷ್ಟೇ ಬಳಸದೆ. ದೇಸೀ ಮಾತುಗಳನ್ನು. ವಿಶಿಷ್ಟಾರ್ಥದ ಅನೇಕ ಗ್ರಾಮೀಣ ಪದಗಳನ್ನು. ಗಾದೆಮಾತುಗಳನ್ನು ಗ್ರಾಮೀಣರಲ್ಲಿ ಸಹಜವಾಗಿ ಬೆಸೆದುಕೊಂಡಿರುವ ಬೈಗುಳ. ನಾಣ್ಣುಡಿ. ಪಡೆನುಡಿಗಳನ್ನು ತಮ್ಮ ಈ ಕಾದಂಬರಿಯಲ್ಲಿ ಬಳಸುವುದರ ಮುಖಾಂತರ ಕಾದಂಬರಿಯನ್ನು ಮತ್ತಷ್ಟು ಹುಲುಸುಗೊಳಿಸಿದ್ದಾರೆ.

**ದೇಸೀ ಮಾತುಗಳು :**

'ಹಡೆದವರು' ಗ್ರಾಮಪರಿಸರದ ಕೂಸಾದುದರಿಂದ ಸಹಜವಾಗಿಯೇ ಅದರಲ್ಲಿ ವಿಪುಲವಾದ ಗ್ರಾಮೀಣಪದಗಳನ್ನು ಕಾಣುತ್ತೇವೆ. ಇಂಥ ದೇಸೀ ಮಾತುಗಳಲ್ಲಿ ವರ್ಗ-ವರ್ಣ-ಲಿಂಗ ಭೇದಗಳಿಗನುಗುಣವಾಗಿ ವಿಭಿನ್ನತೆಯಿರುವುದು ಕಂಡುಬರುತ್ತದೆ.

ನಾಲು. ಕಾಲ್ಮರಿಹಿಂಬಡ. ತಟ್ಟಿ. ಅಪ್ಪಾರ. ಅವ್ವಾರ. ಹರ್ಯಾಗ. ವಾಟಕಾ. ಉರೋಲು. ಅಂದಗಿಂದಿ. ನಾಯಾಕ. ಒಂಚೂರ. ಅಯ್ಯs. ಅವ್ವ. ಸೀರಿಪಡಾಳಿ. ನಿಂದ್ರು. ಕೊಡ್ತನು. ಸಾಟಾ. ಚಕಮಕಿ. ನುಚ್ಚು. ಇಗಾ. ಮೋತಿ. ತ್ರಾಸ. ಲಗೂ. ಜೋರ. ನೇಟ. ಎಟ್ಟ. ಚಿಗವ್ವಾ. ಪೋರಿ. ಏನಾರೆ. ದಿಟ್ಟಿಸಿ. ಚಂಜೀಸಾರೆ. ಬರ್ಲಾಕ. ಒಕ್ಕಂಡಿ. ಖಂಬೀರ. ತಟ್ಟು. ಏನಾರೆ. ತಿನ್ಲಾಕ. ಹಸೂ. ಕಿಚಡಿ. ಅಗಸುದ್ದಿ. ಅತ್ಲಾಗ. ಬುತ್ತಿ. ತತ್ರಾಣಿ. ಜಡ್ಡ. ಜಾಪತ್ರಿ. ಭಾಳ. ಇಸ್ವಾಸ. ಅಡಕಾಳು. ಪರಾತ. ಪಿಸುಕಿ. ಗೋಣ. ಸಾಕ್ಸಿ. ಮರ್ರ್ಯೋ. ಪಟಕಾ. ಹೆಟ್ಟು. ಮುಸಡಿ. ಚಿಲಕ. ಮೆಟ್ಟು. ಬರೋಬರಿ. ನಮಪ್ಪ. ನಮವ್ವ. ಅದಾಳು. ಅದಾನು. ಹೆಣ್ಗಳ್ಳ. ಅಂಬಲಿ. ನೆಂಪಿಲ್ಲ. ಚಿಪ್ಪಾಡಿ. ಏನಪಾ. ಯಾರಪಾ. ಏನವಾ. ಯಾರವಾ. ಅಕನಾರ. ಬಂಧ್ನಿ. ಹ್ವಾದ್ನಿ. ಆಗತೈತಿ. ಸಾವಾಸ. ಇಚಾರ. ಇಸಾ. ಒರ್ಯಾ. ಹೇಣತಿ. ಹ್ವಾರೆ. ತಲಬು, ಸವಡ, ರಗಡ. ರಾಟಿ. ಮುಂಡಿಚಾಟ– ಇತ್ಯಾದಿ ಗ್ರಾಮೀಣ ಜನತೆಯ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಇಂಥ ದೇಸೀ ಮಾತುಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ಬೆಳಗಲಿಯವರು ಹೇರಳವಾಗಿಯೇ ಬಳಸಿದ್ದಾರೆ.

**ವಿಶಿಷ್ಟಾರ್ಥದ ಗ್ರಾಮೀಣ ಪದ / ಪದಪುಂಜಗಳು :**

ಖಬರ (ಸುದ್ದಿ. ಎಚ್ಚರ) ರಾಟಿ (ರೂಢಿ) ಕಣ್ಣ ನೆತ್ತಿ ಮ್ಯಾಗ (ಸೊಕ್ಕಿನಿಂದ ನಡೆಯುವುದು). ನಮ ಗಂಡ್ಸನ್ (ನನ್ನ ಗಂಡ). ಎದೆ ಮೇಲೆ ಚೇಳು ಹರಿದಂತಾಗು (ಭಯಮಿಶ್ರಿತ ನೋವು). ಕಣ್ಣಲ್ಲಿ ಕಿಡಿ ತುಂಬು (ಕೋಪೋದ್ರಿಕ್ತನಾಗು). ಎತ್ತಿದ ಕೈ (ಪಳಗಿದವ). ಅಡ್ಡಬೆಂಕಿ ಹಾಯು (ಸಹಿಸಲಾರದವರು-ವೈರಿಗಳು). ನೂವಾಗೇತಿ (ನೋವು ಆಗಿರುವುದು) ಬಾತ-ಕೀಂಪ್ (ತೀವ್ರತರ ಗಾಯ). ಜಗಳಾ ಕೊಳ್ಳಾಕ (ಜಗಳಾಡಲು). ಬಯಕೆಗೆ ಬೆಂಕಿ ಬೀಳು (ಆಸೆಗೆ ತಣ್ಣೀರೆರಚು). ನಾಯಿಗೆ ಕನಸು ಬಿದ್ದಂತೆ (ಶೀಘ್ರ ಎಚ್ಚತ್ತುಕೊಂಡು). ತಲಿ ಎಟ್ಟ ಹೆಡಸಾಗೇತಿ (ತಲೆ ಎಷ್ಟೊಂದು ಹೊಲಸಾಗಿದೆ). ಬ್ಯಾಟಿ ಬಲಿಗಿ ಬೀಳು (ಕಾರ್ಯಗತವಾಗುವ). ಕೆರಿಬಾವಿ ನೋಡ್ತನು (ಆತ್ಮಹತ್ಯೆ ಮಾಡಿಕೊಳ್ಳು) ತಗಣಿ ಒರಧಾಂಗ (ಸುಲಭವಾಗಿ ಕೊಲ್ಲು). ಖಣಿಪಿಣಿ (ಹೊಡೆದಾಟ). ಕೂದ್ಲ ಕೊಂಕದಂತೆ (ತೊಂದರೆಯಾಗದಂತೆ). ಸೋಡಚೀಟಿ (ಬಿಡುಗಡೆ ಪತ್ರ) ಕಾಲ ಹಾಕೂ ಎದಿನೋಡು (ಬರುವ ಧೈರ್ಯ) ಚಳಿಜ್ವರ ಹಿಡಿ (ಹೆದರಿಕೆಯಾಗು). ಹೊಟ್ಯಾಗ ಹಾಕೊ (ಕ್ಷಮಾಪಣೆ ಮಾಡು). ಹಾದ್ಗಿ ಸೀರಹಣಿಸು (ಮರೆತುಬಿಡು) ನಿನ ಪಾಲ್ಗಿ ಅಪ್ಪ ಸತ್ತs ಅವ್ವ ಸತ್ತು (ಮರೆತುಬಿಡುವುದು). ಎಲ್ಲಾರ್ಗೂ ಮೂಲ (ತಲೆಬೇನೆ - ತೊಂದರೆಯಾಗು) ಪರ್ಸ್ಲಹರಿಯಿತು (ಸಂಬಂಧ ಕಡಿಯಿತು) ಸೆರಗೊಡ್ಡಿ ಬೇಡು (ವಿನಮ್ರವಾಗಿ ಬೇಡಿಕೊಳ್ಳು) ಮೂಗು ಕುಣಿಸು (ಒಯ್ಯಾರ ಮಾಡುತ್ತ). ಕಾಲಾನ ಮುಳ್ಳು ಕಿತ್ತ ಹೋತು (ಸಮಸ್ಯೆ

ಪರಿಹಾರವಾಯಿತು) ಇತ್ಯಾದಿ ವಿಶಿಷ್ಟವಾದ ಅರ್ಥವನ್ನು ನೀಡುವ ಇಂಥ ಅನೇಕ ಗ್ರಾಮೀಣ ಪದಗಳನ್ನು ಹಾಗೂ ಪದಪುಂಜಗಳನ್ನು ಬೆಳಗಲಿಯವರು ಪ್ರಸ್ತುತ ಕಾದಂಬರಿಯಲ್ಲಿ ಸಾಕಷ್ಟು ಬಳಸಿರುವುದು ಕಂಡುಬರುತ್ತದೆ.

## ಗ್ರಾಮೀಣ ಬೈಗುಳಗಳು :

ಹೆಣಾ ಎತ್ಲಿ. ಹಾದರಗಿತ್ತಿ. ಕತ್ತೀ ಮಗಾ. ಹಾಳಾಗಿ ಹೋಗು. ಶನಿ-ನಾಡಶನಿ !. ಭೋಸಡಿ. ರಾಕ್ಷಸ. ಮಗನ. ಖೋಡಿ. ಮಂಗ್ಯಾ. ನಾಡಮಂಗ್ಯಾ. ಮಗಾ. ಇದೀ. ಸೂಳಿ. ಇಸದ ಬೀಜ. ನಿನ್ನವ್ವ. ಸಾಯೋಗ. ಮೂಳಾ. ಸತ್ತೇನS. ಸಾಯ್ಲಾಕ. ಮುಸಡಿ. ಹಾದರಗಿತ್ತ್ಯಾರು. ಅಳ್ಳಾಕ ನಿಮವ್ವ ಸತ್ತಿಲ್ಲ. ಬಿಕನಾಸಿ. ಆ ಮಕ್ಕಳ್ನ. ಮಿಂಡ. ಹಾದರಗಿತ್ತೀಮಗಳ. ಸುಟ್ಟ ಮೋತ್ಯಾಕೀನ. ಪರ್ದೇಸಿ. ನಿನ ಮಣ್ಣಾಗ ಇಟ್ಟ ಬರ್ಲಿ. ಹಾದರದವ್ನ. ಗತಿಗೇಡಿ. ಬ್ಯಾನಿ. ಇತ್ಯಾದಿ. ಹೀಗೆ ಗ್ರಾಮೀಣ ಬದುಕಿನಲ್ಲಿ ಸಹಜವಾಗಿಯೇ ಬಳಕೆಯಾಗುವ ಈ ಬೈಗುಳಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ಬೆಳಗಲಿಯವರು ಹಾಸುಹೊಕ್ಕಾಗಿ ಬಳಸಿದ್ದಾರೆ. ಅದರಲ್ಲಿಯೂ ಕೆಳ ವರ್ಗದವರು ಬಳಸುವ ಬೈಗುಳಗಳು. ಬಾಯಿ ತೆರೆದರೆ ಸಾಕು ಸುರಿಮಳೆಯಾದಂತೆ ಬಳಕೆಯಾಗುವ ಈ ಬೈಗುಳಗಳು ಗ್ರಾಮೀಣರ ಬಾಯಲ್ಲಿ. ಬದುಕಿನಲ್ಲಿ ವಿಶೇಷ ಸ್ಥಾನ ಪಡೆದುಕೊಂಡಿವೆ. ಕೆಲವು ಸಲ ಪ್ರೀತಿ-ಸಲಿಗೆಯ ಸಂಬಂಧಗಳಲ್ಲಿಯೂ ಮಾತುಗಳಲ್ಲಿಯೂ. ಇಂಥ ಬೈಗುಳಗಳನ್ನು ಬಳಸುವುದು ಉತ್ತರ ಕರ್ನಾಟಕದ ಗ್ರಾಮೀಣ ಬದುಕಿನ ವಿಶೇಷಗುಣ.

## ದ್ವಿರುಕ್ತಿಗಳು - ಜೋಡುನುಡಿಗಳು :

ಒಂದೇ ಪದ ಎರಡು ಸಲ ಬಳಕೆಗೊಂಡರೆ. ಅದು ದ್ವಿರುಕ್ತಿಯೆನಿಸುತ್ತದೆ. ಕೆಲವು ಸಲ ಎರಡಕ್ಕಿಂತ ಹೆಚ್ಚಿಗೆ ಬಳಕೆಯಾಗುವುದೂ ಉಂಟು. ಆಡುನುಡಿಗೆ ಹೆಚ್ಚಿನ ಒತ್ತುಕೊಟ್ಟು ಅದರ ಅರ್ಥವನ್ನು ಮತ್ತಷ್ಟು ಗಟ್ಟಿಗೊಳಿಸಲು ಇಂಥ ದ್ವಿರುಕ್ತಿಗಳನ್ನು ಬಳಸಲಾಗುತ್ತದೆ. ವಿಲಿವಿಲಿ. ದುಮುದುಮು. ಪಡಪಡ. ಮಿಕಿಮಿಕಿ. ಕೈ-ಕೈ. ಗುಳುಗುಳು. ದಡದಡ ಹುಳುಹುಳು. ತಗೀತಗೀ. ಪಿಳಿಪಿಳಿ. ಮುಸುಮುಸು. ಗಬಗಬ. ಚಿಟಿಚಿಟಿ. ಮುಳುಮುಳು. ಬಿಕ್ಕಿಬಿಕ್ಕಿ. ಕಿಲಕಿಲ. ದುರುದುರು. ಝಣ್‌ಝಣ್ ಇತ್ಯಾದಿಗಳು ಇಂಥ ಅನೇಕ ದ್ವಿರುಕ್ತಿಪದಗಳನ್ನು ' ಹಡೆದವರು 'ದಲ್ಲಿ ಬಳಸಿದ್ದಾರೆ. ಇನ್ನು ಜೋಡುನುಡಿಗಳೆಂದರೆ. ಅರ್ಥಸಾಮಿಪ್ಯವಿರುವ (ಸಾಮ್ಯವಿರುವ) ಎರಡು ಅಥವಾ ಎರಡಕ್ಕಿಂತ ಹೆಚ್ಚು ಪದಗಳನ್ನು ಭಾವಸ್ಪಷ್ಟತೆಗೋ. ತಮ್ಮ ಅಭಿಪ್ರಾಯಗಳನ್ನು ಗಟ್ಟಿಗೊಳಿಸಲೋ. ಬಳಕೆಗೊಳ್ಳುವ ಪದಗಳು : ಪಾನಪಟ್ಟಿ. ಮೋಜು-ಮಜ. ಚಕಮಕಿ. ಗಡಬಡ. ಕುಲಗೋತ್ರ. ಚೆಲ್ಲಾಪಿಲ್ಲಿ. ಕಲ್ಲಪಡಿ. ಚೂರು-ಪಾರು. ಕಸಕಡ್ಡಿ. ಗಿಡಗಂಟೆ. ಉಪ್ಪು-ಖಾರ. ಕಸ-ಕಳೆ. ಖಿಟಿಪಿಟಿ. ಖಿಣಿಪಿಣಿ. ಸಿಕ್ಸಾ-ಗಿಕ್ಸಾ. ಕೆರಿ-ಬಾವಿ. ಅರಿವೆ-ಅಂಚಡಿ. ಗಡಿಬಿಡಿ. ಠಾಕು-ಠೀಕು. ಅಕರಾಳ-ವಿಕರಾಳ – ಇತ್ಯಾದಿ ಜೋಡುನುಡಿಗಳನ್ನು ಬೆಳಗಲಿಯವರು ಪ್ರಸ್ತುತ ಕಾದಂಬರಿಯಲ್ಲಿ ಹದವರಿತು ಬಳಸಿಕೊಂಡಿದ್ದಾರೆ.

ಆಡುಭಾಷೆಯನ್ನೇ ಜೀವನಾಡಿಯನ್ನಾಗಿಸಿಕೊಂಡ ಬೆಳಗಲಿಯವರ ಕಾದಂಬರಿಗಳಲ್ಲಿ ಇಂಥ ದ್ವಿರುಕ್ತಿ-ಜೋಡುನುಡಿಗಳು ಸಹಜವಾಗಿಯೇ ಬಳಕೆಗೊಂಡಿವೆ.

**ಗಾದೆ ಮಾತು - ಪಡೆನುಡಿಗಳು :**

ಪ್ರಸ್ತುತ ಕಾದಂಬರಿಯಲ್ಲಿ ಬೆಳಗಲಿಯವರು ಗಾದೆಮಾತುಗಳನ್ನು ಹಾಗೂ ಪಡೆನುಡಿಗಳನ್ನು ಹೇರಳವಾಗಿ ಬಳಸದಿದ್ದರೂ ಅವಶ್ಯವಿದ್ದಲ್ಲಿ ಅವುಗಳನ್ನು ಕೆಲವು ಸಲ ಇದ್ದಕ್ಕಿದ್ದಂತೆ. ಇನ್ನು ಕೆಲವು ಸಲ ಅಲ್ಪ ಬದಲಾವಣೆಯೊಂದಿಗೆ ಬಳಸಿಕೊಂಡಿದ್ದಾರೆ. ತಮ್ಮ ಕಥಾತ್ಮಕ-ಭಾವಾತ್ಮಕ-ಭಾಷಾತ್ಮಕ ಅಭಿವ್ಯಕ್ತಿಗಳಿಗೆ ಮೊನಚು-ಮೆರಗು ತಂದುಕೊಡುವಲ್ಲಿ ಈ ಗಾದೆಮಾತುಗಳನ್ನು. ಪಡೆನುಡಿಗಳನ್ನು ಬಳಸಿದ್ದಾರೆ.

" ಗಂಡಾ-ಹೆಂಡ್ತಿ ಜಗಳದಾನ ಕೂಸಾ...." (ಪುಟ ೧೮)

" ಸತ್ತು ಹೋದವನ ಬಗೆಗೆ ಸಹಾನುಭೂತಿ...." (ಪುಟ ೨೬)

" ತಾ ಮಾಡಿರ ಅದರ ಫಲಾ ಉಣ್ತಾನು ! ನನಗೇನು " (ಪುಟ ೨೮)

" ......ಸೂಳಿ ಪಾಪ ಸಂನ್ಯಾಸಿಗಿ " (ಪುಟ ೩೫)

" ಕುಲಕ್ಕೆ ಕೊಡಲಿಯಾಗಿ ಮನೆಗೆ ಅಪಕೀರ್ತಿ...." (ಪುಟ ೩೯)

" ಸುಂದ್ರಿ ಕಾಲಾನ ಮುಳ್ಳ ಕಿತ್ತ ಹೋತು " (ಪುಟ ೪೧)

" ನೀಲ್ಯಾ ಹುಲಿ ಆಗಿ ತೋಳಾ ತಿಂದ....." (ಪುಟ ೪೧)

" ಜಾಲಿಗಿಡಕ್ಕೆ ಹಾಕಿದ ಕೊಡಲಿ ಏಟ ತಪ್ಪಿ ತನ್ನೆದೆಗೆ ಬಿದ್ದಂತೆ...." (ಪುಟ ೪೪)

" ಬಿಳೇ ಬಾಣ ಉಂಡ ನಾಲಗೆ. ನುಚ್ಚುಕಂಡು ಹೇಸಿಕೊಳ್ಳುತ್ತಿತ್ತು" (ಪುಟ ೫೨)

" ಹೀಂಗ ನಮ್ದು ಏಟ ದಿನ ಸಾಗಬೇಕs ?" (ಪುಟ ೫೭)

" ಕರಿಯನ ಮಾತು ಕಲ್ಪವೃಕ್ಷವಾಯಿತು " (ಪುಟ ೫೮)

" ಮೀಸೆ ಬಿಟ್ಟ ಪುಂಡಗಂಡನಿಗಿಂತ ಮೀಸೆ ಇಲ್ದ ಹೆಂಡ್ತಿಯೇ ದೊಡ್ಡ ಪಟಾಯ್ತಿ" (ಪುಟ ೬೧)

" ವ್ಹಾ ನನ ಪಟ್ಟೇದ ಹುಲಿಯೇ " (ಪುಟ ೬೩)

" ಹಸಿದ ಮಗುವಿನ ಬಾಯಿಂದ ಮೊಲೆ ಬಿಡಿಸಿದಷ್ಟೇ ಆ ಪ್ರಸಂಗ ಬಿರಿಯಾಗಿದ್ದರೂ. ಮಗುವಿನ ಬಾಯಿಯನ್ನೇ ಒತ್ತಿ ಹಿಡಿದವರಿಗೇನು ?" (ಪುಟ ೬೯)

" ನನ್ನಿಂದ ತಪ್ಪಾಗೇತಿ ಹೊಟ್ಯಾಗ ಹಾಕ್ಕೋ ನೀಲ್ಯಾ" (ಪುಟ ೮೫)

" ಖಿಡ್ತಾದ ತಗ್ಗು ತೋಡಿ....." (ಪುಟ ೯೦)

" ಹಡೆದ ಹೃದಯಕ್ಕಿಂತ ಪಡೆದ ಹೃದಯ......." (ಪುಟ ೧೦೫

" ಸಿಟ್ಟಿನ ಕೈಯಾಗ ಬುದ್ಧಿ ಕೊಡಬಾರ್ದು" (ಪುಟ ೧೦೬)

" ನಿನ ನಸೀಬ ಚಲೂ ಇಲ್ಲs ಸುಡ್ಲಿ ! ನೀ ಹಿಡದದ್ದೆಲ್ಲ ಹಾವಾಗತೈತಿ " (ಪುಟ ೧೨೩)

" ನಿನ ಮಣ್ಣಾಗ ಇಟ್ಟ ಬರ್‍ಲಿ ಎಲ್ಲಾ ಪರ್‍ಲ ಹರದ್ರೂ...." (ಪುಟ ೧೨೭)

**ಪ್ರಾದೇಶಿಕ ಸಂಸ್ಕೃತಿ :**

'ಬೈಲಾಟ'ದ ದೃಶ್ಯದೊಂದಿಗೆ ತನ್ನ ಮೈಬಿಚ್ಚಿಕೊಳ್ಳುವ ಕಾದಂಬರಿ ಉತ್ತರ ಕರ್ನಾಟಕದ ಸಂಸ್ಕೃತಿಯನ್ನು ಅನೇಕ ಸನ್ನಿವೇಶಗಳಲ್ಲಿ ಜೀವಂತವಾಯೇ ಚಿತ್ರಿಸಿದೆ. ಈ ಭಾಗದಲ್ಲಿ ಅಪ್ಪಾಲಾಲನ ಪಾರಿಜಾತ. ರಾಧಾನಾಟ. ಸಂಗ್ಯಾ-ಬಾಳ್ಯಾ. ಬೈಲಾಟಗಳು ಹಿಂದೊಮ್ಮೆ ಗ್ರಾಮೀಣ ಜನರಿಗೆ ಹುಚ್ಚು ಹಿಡಿಸಿದ್ದವು. ಆಟ ನೋಡಲು ಹೋಗುವ ಜನರ ಗುಣ-ಸ್ವಭಾವ. ಅವರ ಚಲನವಲನಗಳು. ಅವರು ಪಾತ್ರಗಳನ್ನು ಕಾಣುವ ದೃಷ್ಟಿ. ಅವರ ಪ್ರತಿಕ್ರಿಯೆಗಳು ಇತ್ಯಾದಿಗಳನ್ನು ನೋಡಿದರೆ ತುಂಬ ವಿಶೇಷವೆನಿಸುತ್ತದೆ.

ಈ ಭಾಗದ ಮಕ್ಕಳ ಆಟಗಳಲ್ಲಿ ನಮ್ಮ ಸಂಸ್ಕೃತಿಯ ಪಡಿಯಚ್ಚೇ ಇದೆ. "…. ಒಬ್ಬ ಬಾಲಕ ಅಂಗಡಿಯನ್ನಿಟ್ಟಿದ್ದ. ಕಟ್ಟೆಯ ಮೇಲೆ ಇಟ್ಟಿದ್ದ ನಾಲ್ಕಾರು ಗುಂಪಿಕಲ್ಲು. ಹರಳು. ಉಸುಕು. ಮಣ್ಣು-ಅವನ ಮಾರಾಟದ ವಸ್ತುಗಳು. ಐದಾರು ಜನ ಬಾಲಕ-ಬಾಲಕಿಯರೇ ಆತನ ಗಿರಾಕಿಗಳು-ಹೆಂಚಿನಬಿಲ್ಲೆ ಅವರು ಸಲ್ಲಿಸುವ ಹಣ."[೨೩] "ಇನ್ನೊಂದು ಕಡೆ ಗೊಂಬೆ ಮದುವೆ ನಡೆದಿತ್ತು. ನಾಲ್ಕಾರು ಬಾಲಕರು ಬಾಯಲ್ಲಿ ದಂಟಿನಗಣಿಕೆ ಹಿಡಿದು. 'ತು ತೂ ತೂ' ಎಂದು ಊದುತ್ತಿದ್ದರು. ಇನ್ನಿಬ್ಬರು ಹೊಟ್ಟೆ ಬಡಿದುಕೊಂಡು ಡೊಳ್ಳು ಬಾರಿಸುತ್ತಿದ್ದರು. ಒಂದಿಬ್ಬರು ಗಂಡು-ಹೆಣ್ಣು ಗೊಂಬೆ ಹಿಡಿದು ಮೆರವಣಿಗೆ ಮಾಡುತ್ತಿದ್ದರು. ಉಳಿದವರು ಕಲ್ಲು-ಮಣ್ಣು ಹೋಳಿಗೆ ಮಾಡಿ. ಅಡಿಗೆ ಸಿದ್ಧಪಡಿಸುತ್ತಿದ್ದರು".[೨೪] ಮಕ್ಕಳ ಸಹಜ ಆಟಗಳಲ್ಲಿಯೇ ನಮ್ಮ ಸಂಸ್ಕೃತಿಯ ಸರಳ ನಿರೂಪಣೆಯಾದುದೊಂದು ವಿಶೇಷ.

ಉತ್ತರ ಕರ್ನಾಟಕದ ಬಹುತೇಕ ಜನರಿಗೆ ಎಲ್ಲಮ್ಮ ಮನೆದೇವರು. ಅವಳಿಗೆ ಹರಕೆ ಹೊರುವುದು. ಉಟಗಿ ಉಡುವುದು ಇಲ್ಲಿನ ಪದ್ಧತಿ. "ಭಾಳ ಚಲೂ ಆತು ನೀಲ್ಯಾ! ಎಲ್ಲವ್ವನ ಹರಕೀ ಸಂತೋಷದಿಂದಲೇ ತೀರಸ್ತೀನ"[೨೫] ಹೀಗೆ ಹರಕೀ ಹೊತ್ತ ಜನರು ವರ್ಷ-ವರ್ಷ ಜಾತ್ರೆಗೆ ಬರುವುದೊಂದು ಈ ಭಾಗಕ್ಕೆ ಹಬ್ಬದಂಥ ವಾತಾವರಣ. ಜಾತ್ರೆಗೆ ಬಂದ ಜನ ಹರಕೀ ತೀರಿಸಿ ಹೋಗುತ್ತಾರೆ. "ನಾ ಎಲ್ಲವ್ವನ ಜಾತ್ರೀಗಿ ಬಂದಾಗ"[೨೬] ರುಕ್ಮಿಯನ್ನು ತನ್ನತ್ತ ಕರೆದೊಯ್ಯಲು ಹವಣಿಸಿ ಹೇಳಿದ ಮಾತುಗಳು ಒಂದೆಡೆ ವೃತ್ತಿಲಾಭವನ್ನೂ ಇನ್ನೊಂದೆಡೆ ಭಕ್ತಿಲಾಭವನ್ನೂ ಏಕಕಾಲದಲ್ಲಿ ಬಯಸಿದ ರೀತಿಯನ್ನು ಹೇಳುತ್ತದೆ. ಈ ರೀತಿಯ ಆಚರಣೆ ಹೆಚ್ಚಾಗಿ ಕೆಳವರ್ಗದವರಲ್ಲಿ ಕಂಡುಬರುತ್ತದೆ. ಎಲ್ಲವ್ವನ ಹರಕೀ ಆಚರಣೆಯಲ್ಲದೆ. ಚಿನ್ನಿಯ ಸೋಡಚೀಟಿಯ ಪ್ರಸಂಗದಲ್ಲಿ. ಕರಿಯ-ಚಿನ್ನಿಯರ ಉಡಿಕೆ ಕಾರ್ಯಕ್ರಮದ ಸಂದರ್ಭದಲ್ಲಿ ಈ ಪ್ರದೇಸದ 'ಸಂಸ್ಕೃತಿ' ಅಲ್ಲಲ್ಲಿ ಕಂಡುಬಂದರೂ. "ಪ್ರಾದೇಶಿಕ ಭಾಷೆಯ ಸೊಗಡು ಇಲ್ಲಿ ಚೆನ್ನಾಗಿ ಮೂಡಿಬಂದಿದೆಯೇ ವಿನಃ ಆ ಪ್ರದೇಶದ ಜನರ ಒಟ್ಟು ಸಂಸ್ಕೃತಿಯಲ್ಲ"[೨೭] ಎಂಬುದು ಒಪ್ಪತಕ್ಕ ಮಾತು.

---

೨೩. ದು. ನಿಂ. ಬೆಳಗಲಿ : ಹಡೆದವರು. ಪುಟ ೧೫

೨೪. ದು. ನಿಂ. ಬೆಳಗಲಿ : ಹಡೆದವರು. ಪುಟ ೧೬

೨೫. ದು. ನಿಂ. ಬೆಳಗಲಿ : ಹಡೆದವರು. ಪುಟ ೬೫

೨೬. ದು. ನಿಂ. ಬೆಳಗಲಿ : ಹಡೆದವರು. ಪುಟ ೧೩೫

೨೭. ಮಾದೇವ ಕಣವಿ : ಬೆಳಗಲಿ (ಅಭಿನಂದ ಗ್ರಂಥ) ಪುಟ ೧೬೩

'ಹಡೆದವರು' ಅನಾಥ ಮಗುವಿನ ಕರುಣಾಜನಕ ಕಥೆಯನ್ನೊಳಗೊಂಡ ಸಂಕೀರ್ಣವಲ್ಲದ ಸರಳ ಕಾದಂಬರಿಯಾಗಿದ್ದು: ಅಲ್ಲಿನ 'ಹಾಲಿ'ಯ ಪಾತ್ರ ಹಡೆದವರಿದ್ದರೂ ಅನಾಥಳಾದ ಅವಳ ಸ್ಥಿತಿ, ಚಾರ್ಲ್ಸ್ ಡಿಕೆನ್ಸ್‌ನ ಅನಾಥಮಕ್ಕಳ ಚಿತ್ರಣವನ್ನು ನೆನಪಿಸಿಕೊಳ್ಳುವಷ್ಟು ಸಮರ್ಥವಾಗಿ ಮೂಡಿಬಂದಿದೆ.

**ಜೋಗಿಮರಡಿ (೧೯೮೧) :**

ಉತ್ತರ ಕರ್ನಾಟಕದ ಉತ್ತರ ತುದಿಯ ಒಂದು ಕಾಡುಹಳ್ಳಿಯ ಪ್ರಾತಿನಿಧಿಕ ಊರು 'ಜೋಗಿಮರಡಿ'. ಲೇಖಕರೇ ಹೇಳುವಂತೆ ಇದೊಂದು ಪ್ರಾದೇಶಿಕ ಕಾದಂಬರಿ. ಜೋಗಿಮರಡಿ. ದೇಶಕ್ಕೆ ಸ್ವಾತಂತ್ರ್ಯಸಿಕ್ಕು ಸುಮಾರು ವರ್ಷಗಳಾದರೂ ವಿದ್ಯುತ್ ಸಂಪರ್ಕ ಕಾಣದ ಕುಗ್ರಾಮ; ಅದೊಂದು ಕಾಡುಹಳ್ಳಿ. ಇಂಥ ಹಳ್ಳಿಗಳೆಷ್ಟೋ ಇರಬಹುದು ಅವುಗಳಿಗೆಲ್ಲ ಜೋಗಿಮರಡಿಯೊಂದು ಪ್ರಾತಿನಿಧಿಕ ಕಗ್ಗ ಹಳ್ಳಿ. ಊರಿನ ಸಂದಿಗೊಂದಿಗಳಲ್ಲಿ ವಿದ್ಯುತ್ ಕಂಬಗಳು ತಂತಿಬಿಗಿದುಕೊಂಡು ಅಲ್ಲಲ್ಲಿ 'ಅಪಾಯ'ವೆಂದು ಕೆಂಪುಬಣ್ಣದ ಪಟ್ಟಿ ಕಟ್ಟಿಕೊಂಡಿವೆಯಾದರೂ. ಅಲ್ಲಿ ಅಂಥ 'ಅಪಾಯ'ವೇನೂ ಇರದೆ. ವಿದ್ಯುತ್ ತರಂಗಗಳನ್ನು ಸಂಪರ್ಕಿಸಿಕೊಳ್ಳದೆ ಅವು ನಪುಂಸಕನಂತೆ ನಿರುಪದ್ರವಿಯಾಗಿವೆ. ಜೋಗಿಮರಡಿಯ ಜೀವನಾಡಿಯೆಂದರೆ. ಕಾಡಪ್ಪ ಕಾಕಾ. ಒಂದು ಕಾಲಕ್ಕೆ ಆ ಹಳ್ಳಿ ನೆಮ್ಮದಿಯಿಂದ ಉಸಿರಾಡುತ್ತಿತ್ತು. ಕಾಲಕಳೆದಂತೆ ಕಾಕಾನಿಗೆ ವಯಸ್ಸಾದಂತೆ ತಲೆಮಾರುಗಳ ಅಂತರವು ಹೆಚ್ಚಾಗುತ್ತ ಹೋದಂತೆ. ನಾಗರಿಕತೆ ಕಾಲಿಟ್ಟಂತೆ. ಅವನ 'ಸಮದೃಷ್ಟಿ'ಯನ್ನೂ ಮೀರಿ ಊರಲ್ಲಿ ಘಟನೆಗಳು ಜರುಗಿವೆ. ಅವನ ಹಿರಿತನಕ್ಕೂ ತುಕ್ಕು ಹಿಡಿಯುತ್ತದೆ; ಅಪಾಯಕಾರಕ ದುಷ್ಟ-ಅಷ್ಟಪದ ಶಕ್ತಿಗಳೆದುರು ಕಾಕಾನ ಪುಂಗಿ ಬಂದಾಗುತ್ತದೆ. ಹಳ್ಳಿಯಲ್ಲಿ ಸಾವಕಾಶವಾಗಿ ಅಶಾಂತಿ ತಲೆದೋರುತ್ತದೆ.

ಜೋಗಿಮರಡಿಯ ಭೌಗೋಳಿಕ ಗೆರೆಕೊರೆದಿರುವ ಬೆಳಗಲಿಯವರು. ಸ್ಥಳನಾಮದ ಐತಿಹ್ಯವನ್ನು ಹೇಳುತ್ತ. ಬಹಳದಿನಗಳ ಹಿಂದೆ ಬೆಟ್ಟದಡಿಯಲ್ಲಿ ಸಂನ್ಯಾಸಿಯೊಬ್ಬ ನೆಲಸಿದ್ದನಂತೆ. ಸಿದ್ಧಪುರುಷ ವಾಸಿಸಿದ ಆ ಮೊರಡಿಪ್ರದೇಶವೇ 'ಜೋಗಿಮಡ್ಡಿ'. 'ಜೋಗಿಮರಡಿ' ಯೆಂದಾಯಿತೆಂದು ಲೇಖಕರು ಹೇಳುತ್ತಾರೆ. ಅಲ್ಲಿದ್ದ ಮುಪ್ಪಾದ ಸೂಳೆಯೊಬ್ಬಳು ಗುಡ್ಡದ ಎಲ್ಲವ್ವನ ಪ್ರಾರ್ಥನೆಯಿಂದಾಗಿ ಅವಳು ತನ್ನ ರೋಗವನ್ನು ಪರಿಹರಿಸಿಕೊಂಡಳು. ಅದಕ್ಕಾಗಿ 'ಜೋಗಿಮರಡಿ' ಎಂದು ಕರೆಯುತ್ತಿದ್ದುದೇ ಮುಂದೆ 'ಜೋಗಿಮರಡಿ'ಯಾಯಿತೆಂದೂ ಅನೇಕರು ವಾದಿಸುತ್ತಾರೆ. ಹೀಗೆ ಇನ್ನೂ ಅನೇಕ ಐತಿಹ್ಯಗಳು ಜೋಗಿಮರಡಿಯ ಸುತ್ತ ಹೆಣೆದುಕೊಂಡಿದ್ದರೂ. ಕಾಡಪ್ಪ ಕಾಕಾ ಹೇಳುವ ಮೊದಲ ಐತಿಹ್ಯವೇ ಆ ಗ್ರಾಮದ ಸರ್ವಸಮ್ಮತ ಇತಿಹಾಸ. ಆ ಸ್ಥಳವೀಗ ಅಪಕ್ವ ವಯೋಮಾನದ ದನಗಾಹಿಗಳಿಗೆ. ಪ್ರೌಢ ಕಳ್ಳ ಪ್ರಣಯಿಗಳಿಗೆ ಕಾಮಕ್ರೀಡಾ ಸ್ಥಳವಾದುದೊಂದು ವಿಪರ್ಯಾಸದ ಸಂಗತಿ. ಈ ರೀತಿಯಾಗಿ ಕಾದಂಬರಿಯಲ್ಲಿ ಸ್ಥಳ ಪುರಾಣವನ್ನಾಗಲಿ. ಐತಿಹ್ಯವನ್ನಾಗಲಿ ಹೇಳುವ ಪರಿಪಾಠ 'ಗ್ರಾಮಾಯಣ'ದಂಥ ಉತ್ತಮ ಪ್ರಾದೇಶಿಕ ಕಾದಂಬರಿಯಿಂದಲೇ ಮೊದಲುಗೊಂಡಿತೆಂದು ಬೇರೆ ಹೇಳಬೇಕಾಗಿಲ್ಲ. ಸ್ಥಳನಾಮದ ಬಗ್ಗೆ ಕಾಳಜಿವಹಿಸಿದ ಲೇಖಕರು ಆ ಊರಿನ ಬಾಹ್ಯಸ್ವರೂಪದ ಬಗ್ಗೆಯೂ ವಿಶೇಷ ಮುತುವರ್ಜಿ ವಹಿಸಿರುವುದು ಕಂಡು ಬರುತ್ತದೆ. ಊರಸುತ್ತಲೂ ಹಬ್ಬಿನಿಂತ ಬೋಳುಗುಡ್ಡ. ಅಲ್ಲಲ್ಲಿ ಒಂದೆರಡು

ಗಿಡಮರಗಳ ಜತೆ ಕಂಟಿಗಳು ಹಾಗೂ ಕುರುಚಲು ಹುಲ್ಲು. ಕಾಲುವೆ ಪಕ್ಕದ ವಿಲಾಯಿತಿ ಜಾಲಿಯ ಗುಂಪು. ಜಾರುಗುಂಡಿಗಳಂತಿರುವ ಮಸಾರಿಗಳು. ಗುಡ್ಡಕ್ಕೆ ಒತ್ತಿಕೊಂಡಂತಿರುವ ಮಾವಿನತೋಪು. ಊರ ದಕ್ಷಿಣ ದಿಕ್ಕಿಗೆ ಗುಡ್ಡದ ಪಕ್ಕದಲ್ಲಿ ನಾಲ್ಕಾರು ತೋಟಗಳು ವರ್ಣಹೀನ ಗುಡ್ಡದ ಕುಂದಿದ ಕಳೆಯನ್ನು ಮರೆಮಾಡಲು ತಮ್ಮ ಹಸಿರಿನಿಂದ ಪಸರಿಸಿ ನಿಂತಿವೆಯೆಂದು ವರ್ಣಿಸುತ್ತ ಜೋಗಿಮರಡಿಯ ಸ್ಪಷ್ಟ ಚಿತ್ರವನ್ನು ಓದುಗರಲ್ಲಿ ಮೂಡಿಸುತ್ತಾರೆ. ಹದಗೆಡುತ್ತಿರುವ ಹಳ್ಳಿಗಳ ಕಥಾನಕವನ್ನೇ ತನ್ನ ಒಡಲಾಳದಲ್ಲಿಟ್ಟುಕೊಂಡು 'ಜೋಗಿಮರಡಿ' ಸುಂದರ ಸುಲಲಿತ ಗದ್ಯದಲ್ಲಿದ್ದು. ತುಂಬ ಆಸಕ್ತಿಯಿಂದಲೇ ಕೊನೆವರೆಗೆ ಓದಿಸಿಕೊಳ್ಳುತ್ತದೆ. ಅನೇಕ ಘಟನಾವಳಿಗಳನ್ನು ತನ್ನ ಕಥಾನಕದಲ್ಲಿಟ್ಟುಕೊಂಡೇ ಮುಂದೆ ಸಾಗುವ ಕಾದಂಬರಿಯ ಭಾಷೆ ಇನ್ನೂ ವಿಶಿಷ್ಟವಾದುದು.

"ಕನ್ನಡಕ್ಕೆ ಒಂದು ಅಪೂರ್ವ ಕೊಡುಗೆ"[೨೮] ಎಂಬ ಹೊಗಳಿಕೆಯನ್ನು ಹೊತ್ತುಕೊಂಡೇ ಪ್ರಕಟವಾದ 'ಜೋಗಿಮರಡಿ'. 'ಅಪೂರ್ವ' ಎಂಬುದು ಅತಿಶಯದ ಮಾತಾದರೂ. ಓದುಗರನ್ನು ನಿರಾಶೆಗೊಳಿಸದ ಉತ್ತಮ ಪ್ರಾದೇಶಿಕ ಕಾದಂಬರಿಯೆಂಬುದಂತೂ ಸತ್ಯಸ್ಯ ಸತ್ಯ. ಭಾರತದ ಹಲವು ಹತ್ತು ಹಳ್ಳಿಗಳ ಕಥೆಯನ್ನೇ ಹೊಂದಿದ ಪ್ರಸ್ತುತ 'ಜೋಗಿಮರಡಿ'. ಅನೇಕ ದೃಷ್ಟಿಯಿಂದಾಗಿ ಇದೊಂದು ಉತ್ತಮ ಪ್ರಾದೇಶಿಕ ಕಾದಂಬರಿ. ಅಲ್ಲಲ್ಲಿ ಒಂದಿಷ್ಟು ಕೊರತೆಯ ಸೆಳಕುಗಳೂ ಕಾಣುತ್ತವೆ.

**ಶರಣ ಮಾಡಿಸುವ ಮನ-ಮನೆಗಳ ದರ್ಶನ :**

ಹೆದ್ದಾರಿ ರಸ್ತೆಗೆ ಹೊಂದಿಕೊಂಡಿರುವ ಕಡೇಮನಿ ಈರೇಶಿಯ ತಟ್ಟಿ ಚಾದಂಗಡಿಯ ವರ್ಣನೆಯೊಂದಿಗೆ 'ಜೋಗಿಮರಡಿ' ತನ್ನ ಮೈಬಿಚ್ಚಿಕೊಳ್ಳುತ್ತದೆ. ಒಂದೆರಡು ದಿಂಡು ನಾಲ್ಕು ಗಳನೆಟ್ಟು ಹುಲ್ಲಿನ ಹೊದಿಕೆಯ ಸುತ್ತ ದಂಟಿನ ತಟ್ಟಿಗೆ ರಾಡಿ-ಸೆಗಣಿಯಿಂದ ಮೆತ್ತಿ ಭದ್ರಗೋಡೆಯಂತೆ ನಿರ್ಮಿಸಿದ ಚಾದಂಗಡಿಗೆ ಈರೇಶಿಯೇ ಮಾಲಿಕ. ನಿಂಬಿ ಅವನ ಹೆಂಡತಿ. ಚಹದ ಜೊತೆಗೆ ಬಾಯಿಖಾರ ಮಾಡಿಕೊಳ್ಳಲು ಚುರಮರಿ ಚೂಡಾ. ಅಪರೂಪವಾಗಿ ಅವಲಕ್ಕಿ ಚೂಡಾ. ಭಜಿ. ಬಣ್ಣಗೆಟ್ಟ ಗಜಿಗಿನಾಕಾರದ ಬುಂದೆ ಉಂಡಿಗಳು – ಇವಿಷ್ಟು ಈರೇಶಿಯ ಚಾದಂಗಡಿಯ ನಿತ್ಯದ ಸ್ಪೇಶಲ್ ತಿಂಡಿ-ತಿನಿಸುಗಳು. ಮೂರುಕಾಲಿನ ಮುರುಕು ಬೆಂಚುಗಳು. ಒಂದು ಮೇಜು. ಒಂದೆರಡು ಖಾಲಿ ಖೋಕಾಗಳು. ಕಿವಿಯಿಲ್ಲದ ಕರ್ರಗಿನ ಕಪ್ಪುಗಳೇ ತಟ್ಟಿಯ ಚಾದಂಗಡಿಯ ಚಿರಾಸ್ತಿಗಳು. ಕಾಗದದ ಚೂರುಗಳೇ ಪ್ಲೇಟುಗಳು. ಚೂಡಾ ಕೊಟ್ಟ ಕಾಗದದಲ್ಲಿ ಸಿನಿಮಾ ನಟ-ನಟಿಯರ ರಂಗುರಂಗಿನ ಚಿತ್ರಗಳನ್ನು ಕಾಣದೆ ನಿರಾಶರಾಗಿ. "ಚೆಂದಾದ ಚಿತ್ರಿದ್ದ ಕಾಗ್ದಾ ಕೊಡಬಾರ್ದೇನೋ ಮಾರಾಯಾ ? ಇದೇನ ಮಂಡ ಕಾಗ್ದಾ...."[೨೯] ಎಂದು ಕೇಳುವ ರಸಿಕಪ್ರಿಯರೇ ಈರೇಶಿಯ ಗಿರಾಕಿಗಳು. ಬಿಜಾಪುರ-ಬೆಳಗಾವ ಬಸ್ಸೊಂದು ಒಂದು ದಿನ ಕೆಟ್ಟು ನಿಂತಾಗ. ಆತನ ಹೊಟೇಲಿನ ಎಲ್ಲ ಕಮಟು ಚೂಡಾ, ಹಳಸಲು ಉಂಡಿ,

---

೨೮. ದು. ನಿಂ. ಬೆಳಗಲಿ : 'ಜೋಗಿಮರಡಿ'ಯ ರಕ್ಷಾಕವಚದಿಂದ

೨೯. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೬

ಕಪ್ಪುಚಹ. ಮುರಿದಬೀಡಿ. ಕೊಳಕು ವೀಳ್ಯ. ಅಡಿಕೆಚೂರುಗಳು ಓಗೆ ಇದ್ದಬಿದ್ದ ವಸ್ತುಗಳೆಲ್ಲ ಖರ್ಚಾಗಿ ಅವನಿಗೆ ನಲವತ್ತು ರೂಪಾಯಿ ವ್ಯಾಪಾರವಾದಾಗ ಗಂಡ-ಹೆಂಡತಿಯರಿಬ್ಬರಿಗೂ ಎಲ್ಲಿಲ್ಲದ ಖುಷಿ. ಅಂದೊಂದು ದಿನ ಈರೇಶಿಯ ತಟ್ಟು ಚಾದಂಗಡಿಯೇ ಪಂಚತಾರಾ ಹೊಟೇಲಾಗಿತ್ತು. ಓಪ್ಪರಗಿಯ ಸಂಗಮೇಶ್ವರ ಮಹಾರಾಜರ ಅನನ್ಯಭಕ್ತನಾದ ಈರೇಶಿ ಅಂದು ತುಂಬ ವಿನೀತನಾಗಿ. "ಸಂಗಪ್ಪ ಮಾರಾಜ್ರು. ಈ ಬಸ್ ಇಲ್ಲೆ ಬಂದಾಗಿ ನಿಂತ ಬಿಡ್ಲಿ.... ನನ ಅಂಗ್ಡಿ ಯಾಪಾರ ಆಗ್ಲಿ....." ೩೦ ಎಂದು ಗುಣಗುಣಿಸುತ್ತಲೇ ಗಾಳಿಬಿಟ್ಟಾಗ ತೂರಿಕೊಂಡಬಿಟ್ಟಿದ್ದ.

ಹಜಾಮರ ಶರಣ ಜೋಗಿಮರಡಿಯ ಆಕಾಶವಾಣಿಯಿದ್ದಂತೆ. ಮನೆ-ಮನೆಗೆ ಅಡ್ಡಾಡಿ ತನ್ನ ಕಾಯಕ ಮಾಡುತ್ತಲೇ ಊರಲ್ಲಿ ಘಟಿಸಿದ-ಘಟಿಸುವ ಸಂಗತಿಗಳನ್ನು ಅನಾವರಣಗೊಳಿಸುತ್ತಾನೆ. ಅದರೊಂದಿಗೆ ಊರಲ್ಲಿನ ದಿನನಿತ್ಯದ ಸಂಗತಿಗಳಿಗೆ ಸಾಕ್ಷಿಯಾಗುತ್ತ 'ಜೋಗಿಮರಡಿ' ವ್ಯವಸ್ಥೆಯ ದರ್ಶನ ಮಾಡಿಸುತ್ತಾನೆ. ಪ್ರಾತಃಕಾಲ ತನ್ನ ಹಡಪದೊಂದಿಗೆ ಹೊರಬಿದ್ದ ಶರಣ. ರಾತ್ರಿಯ ಹೊತ್ತಿಗೆ ಊರಿನ ಪ್ರತಿ ಮನ-ಮನೆಗಳ ಸಂಪೂರ್ಣ ದರ್ಶನ ಮಾಡಿಸುತ್ತಾನೆ.

ಈರೇಶಿಯ ಚಹದಂಗಡಿ ಎಡಬದಿಗಿರುವ ಒಂದು ಚಿಕ್ಕಕಟ್ಟೆ ಜೋಗಿಮರಡಿಯ ಮಹತ್ವದ ಆಗುಹೋಗುಗಳ ಮಂತ್ರಾಲೋಚನೆಯ ಸಭಾಸ್ಥಾನವಾಗಿದ್ದು. ಅನೇಕ ವಿಶೇಷ-ವಿಶಿಷ್ಟ ಕಾರ್ಯಗಳು ಅಲ್ಲಿಯೇ ಉಗಮಗೊಳ್ಳುತ್ತಿದ್ದವು. ವರಿಷ್ಠ ನ್ಯಾಯಾಲಯದಂತೆ ಕೊನೆಯ ನಿರ್ಣಾಯಕ ಸ್ಥಳವೂ ಆಗಿದ್ದಲ್ಲದೆ ಶರಣನ ಘಸ್ನಿಕಟಿಂಗ್ ಸ್ಥಳವೂ ಅದೇ. ಶರಣ ಈರೇಶಿಗೆ ಘಸ್ನಿಕಟಿಂಗ್ ಮಾಡುತ್ತ ಊರ ಉಸಾಬರಿಯ ಮಾತುಗಳನ್ನಾಡುತ್ತ. 'ಮಲಗೊಂಡನ ಕತೀ ಕೇಳಿದಿಲ್ಲೋ.....!" ಎಂದು ಮಾತೊಂದನ್ನು ಜಾರಿಸಿದ್ದ. ಮಲಗೌಡ ಊರ ಪ್ರಮುಖ ಅಲ್ಲದೆ. ಎಲ್ಲರಿಗೂ ಬೇಕಾದವ. ಒಳ್ಳೆಯ. ಪ್ರಾಮಾಣಿಕ. ನ್ಯಾಯನಿಷ್ಠುರನಾದ ವ್ಯಕ್ತಿ. ಮಲಗೌಡನ ಹೆಂಡತಿ ರತ್ನಾ ಮೂರು ಮಕ್ಕಳ ತಾಯಿ. ಗಂಡ-ಹೆಂಡತಿ ಇಡೀ ಊರಿಗೆ ಮಾದರಿಯಾದ ಒಲವಿನ ಬದುಕನ್ನು ಸಾಗಿಸುವ ದಂಪತಿಗಳು; ಇದು ಊರಿಗೇ ಗೊತ್ತು. ಇಂಥದ್ದರಲ್ಲಿ ಹೆಂಡತಿ ಕಾಶವ್ವ ಹೇಳಿದ 'ರತ್ನಾ-ಬಸಲಿಂಗರಲ್ಲಿಲ್ಲದ ಸಂಬಂಧವನ್ನು ಇನೆಯೆಂದು ಹೇಳಿದಾಗ. "ಹಲ್ಲಾಗ ನಾಲ್ಗಿ ಹಾಕಿ ಸುಮ್ನ ಕುಂಡ್ರು. ಈ ಮಾತ ಸಾದಾ ಅಲ್ಲ.... ಎಲ್ಯಾರೆ ಯಾರ ಮುಂದಾದ್ರೂ ನಾಲ್ಗಿ ಸಡ್ಲ ಬಿಟ್ಟೆಂದ್ರ. ನಿನ ಮುಂದಿನ ಹಲ್ಲs ಕೀಳ್ತಾರು ಪರಗೊಂಡ. ಮಲಗೊಂಡ ನನ್ನ ಹಲ್ಲ ತಗದಾರು" ೩೧ ಎಂದೇನೋ ಶರಣ ಹೆಂಡತಿಯನ್ನು ಗದರಿಸಿಕೊಂಡಿದ್ದ. ಆದರೆ ಅದೇ ಮಾತು ಮೈಮರೆತು ಶರಣನ ಬಾಯಿಂದ ಜಾರಿಹೋಗಿತ್ತು; ಪ್ರಸಂಗ ಕೈಮೀರಿತ್ತು. ಮನಸ್ಸಿಲ್ಲದಿದ್ದರೂ. ಈರೇಶಿಯ ಮುಂದೆ ಹೆಂಡತಿಯಿಂದ ಕೇಳಿದ ಸುದ್ದಿಯನ್ನೇ ಗಿಳಿಪಾಠದಂತೆ ಉಪ್ಪು-ಖಾರ ಹಚ್ಚದೆ ನೇರವಾಗಿ ಉಸುರಿದ್ದ. ಹೌಹಾರಿದ ಈರೇಶಿ. "ಶರಣ. ಸಿಕ್ಕಾಂಗ ಬಾಯಿಬಿಡಬ್ಯಾಡೋ. ರತ್ನಾ ಅಂಥಾಕಿ ಅಲ್ಲ. ಒಂದೀಟ ಖರೆ-ಖೊಟ್ಟಿ ಒರಿಗಿ ಹಚ್ಚಿ ಮಾತಾಡಬೇಕು. ಈ ಮಾತ್ನ ಯಾರ ಮುಂದೂ

೩೦. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೭

೩೧. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೧

ಹೇಳಬ್ಯಾಡಾ.....ನಿನ ಬಾಯಂದ್ರ ಒಡಕ ಗಡಿಗಿ. ಜರಾ ಎಚ್ರ ಇರ್ಲಿ....." [೬೨] ಎಂದು ತಾಕೀತು ಮಾಡಿದ. ಚಹಾ-ಚೂಡಾದ ಪ್ರಮಾಣ ಹೆಚ್ಚಾಗಲೆಂದು ಈರೇಶಿಗೆ ಆ ಮಾತನ್ನು ಹೇಳಿದ್ದನಾದರೂ. ಅದೇಕೋ ಚಹಾ-ಚೂಡ ಮೊದಲಿನಂತೆ ಅಷ್ಟೊಂದು ರುಚಿಯೆನಿಸಲಿಲ್ಲ. ತಿಂದು ಮುಗಿಸಿ ಎಂಟಾನೆ ಹಡಪದ ಪೆಟ್ಟಿಗೆಗೆ ಇಳಿಸಿಕೊಂಡು ಖಿನ್ನನಾಗಿಯೇ ಅಲ್ಲಿಂದ ಹೊರಬಿದ್ದ. ಇನ್ನೊಬ್ಬ ರೋಖಗಿರಾಕಿ ಕಾಗಿಮೋತಿ ಮಾಸ್ತರ ಕರೆದಾಗ. ಶರಣ ಶಾಲೆಯತ್ತ ಕಾಲುಎಳೆದ.

ಕಾಗಿ ಮೋತಿಯ 'ಹಜಾಮತಿ'ಗೆ ಕೂತ ಶರಣನ ದೃಷ್ಟಿ ಸಹಜವಾಗಿಯೇ ಶಾಲಾಗೋಡೆ ಬರಹಗಳತ್ತ ಹರಿಯಿತು. ಮೊದಲೇ ಅಕ್ಷರ ಶತ್ರುವಾದ ಶರಣನಿಗೆ ಅದೇನೊಂದೂ ತಿಳಿಯದೆ. ಚುನಾವಣಾ ಭಿತ್ತಿಪತ್ರಗಳೆಂದು ಸಂಶಯಗೊಂಡು. "ಮಾಸ್ತರ್ ಗ್ವಾಡಿ ಮ್ಯಾಲ ಇದೇನ ಬರ್ದ ಹಚ್ಯಾರು? ಯಾವ ಚುನಾವಣಿ ಕಾಗ್ದೇನ್ರಿ.... ?" [೬೩] ಎಂದು ಆಶ್ಚರ್ಯದಿಂದಲೇ ಕೇಳಿದ ಶರಣನಿಗೆ. ಹಿಂದಿನ ಮಳ್ಳ ಬೆನಕಟ್ಟಿ ಮಾಸ್ತರ್ಗ ಯಾವ ಕೆಲ್ಸಿರ್ಲಿಲ್ಲ ಕಾಣ್ತೈತ್ತು. ಹುಡ್ಗೂರ ಕಡಿಂದ ಬರ್ಸಿ ಹಚ್ಯಾನೆಂದು ತನಗಾಗದ ಹಿಂದಿನ ಬೆನಕಟ್ಟಿ ಮಾಸ್ತರನನ್ನು ಕಾಗಿಮೋತಿ ಸಾಧ್ಯವಾದಷ್ಟು ಬೈದಿದ್ದ. ಬೆನಕಟ್ಟಿ ಮಾಸ್ತರ ಜೋಗಿಮರಡಿಯಲ್ಲಿದ್ದಷ್ಟು ದಿನ ಪ್ರಾಮಾಣಿಕನಾಗಿ ಕೆಲಸ ಮಾಡಿ ಆದರ್ಶ ಶಿಕ್ಷಕನೆಂದು ಹೆಸರು ಪಡೆದಿದ್ದ. ಕಾಗಿಮೋತಿಯಂತೆ ಊರ ಉಸಾಬರಿಗೆ ಹೋಗದವ. ಹೀಗಾಗಿ ಹುಡುಗರು ತುಂಬಾ ಸುಧಾರಣೆಯಾಗಿದ್ದರು. ಅದರ ಸಾಕ್ಷಿಯೇ ಗೋಡೆ ಮೇಲೆ ನಾಣ್ಣುಡಿಗಳು-ಗಾದೆಮಾತುಗಳು ಪ್ರತಿಬಿಂಬಿಸಿದ್ದವು. ಆದರೆ ಅದೆಲ್ಲ ಕಾಗಿಮೋತಿಗೆ ಬಾತಿಗ್ಗೆ ಬಾರದ ಕೆಲಸವೆನಿಸಿತ್ತು. ಬೆನಕಟ್ಟಿ ಮಾಸ್ತರನ ಬಗ್ಗೆ ಬಿರುಸಾಡಿದ್ದು ಶರಣನಿಗೆ ಸರಿಕಂಡಿರಲಿಲ್ಲ. ಅದಕ್ಕಾಗಿ 'ಈ ಮಾಸ್ತರೇನ ಸುದ್ದುಳ್ಳವ!'ನೆಂದು ತನ್ನಲ್ಲಿಯೇ ಅಂದುಕೊಂಡ. ಇಂದು ಬಹುತೇಕ ಹಳ್ಳಿಯ ಶಾಲೆಗಳ ಕಥೆ ಇದೇ ಆಗಿದೆ. ಮಾಸ್ತರ ಹಜಾಮಕ್ಕೆ ನಾಲ್ಕಾಣೆ ಕೊಟ್ಟುದನ್ನು. ಈರೇಶಿ ಕೊಟ್ಟ ಎಂಟಾಣೆಯೊಂದಿಗಿಡುವಾಗ ಶರಣನಿಗೆ ರಾಜಕುಮಾರ ಸಿನಿಮಾ ನೆನಪಾಯಿತು. ರಾಜಕುಮಾರನ ಸಿನಿಮಾ ನೋಡುವುದೊಂದು ಶರಣನ ಖಯಾಲಿ. ರಾಜಕುಮಾರನನ್ನೇ ಮನದಲ್ಲಿ ತುಂಬಿಕೊಂಡು ಶಾಲೆಯಿಂದ ಹೊರಬೀಳುವಾಗ ಕಾಕಾನ ಮೊಮ್ಮಗಳು 'ಅಲ್ಲಿ' ಕಂಡದ್ದು ಶರಣನಿಗೆ ಸರಿಬರಲಿಲ್ಲ. ಶಾಲೆಯಿಂದ ಹೊರಬಿದ್ದ ಶರಣನಿಗೆ ಗುರುಪಾದಪ್ಪನ ಭೇಟಿಯಾಗುತ್ತದಲ್ಲದೆ. ಇನ್ನೊಂದು ರೋಖಗಿರಾಕಿ ಸಿಕ್ಕಿದ್ದು ಆತನಿಗೆ ಸಂತೋಷವೇ.

ಗುರುಪಾದಪ್ಪ ಜೋಗಿಮರಡಿಯ ಮಲ್ಲಿಕಾರ್ಜುನ ದೇವಾಲಯದ ಪೂಜಾರಿ. ತಿಂಗಳೊಪ್ಪತ್ತಿನಲ್ಲಿ ಒಂದೆರಡು ಸಲ ದಾಡಿ ಮಾಡಿಸಿಕೊಳ್ಳುವ ಗುರುಪಾದನ ಶ್ರದ್ಧೆಯಿರುವುದೆಲ್ಲ ಜಮಖಂಡಿಯ ನೀಲಿಯಲ್ಲಿ: ಮಾಡುವುದು ದೇವರ ಪೂಜೆ! ಗುರುಪಾದನ ಕಣ್ಣುಮುಂದೆ ದೇವರ ಮೂರ್ತಿ. ಪೂಜಾ ಸರಂಜಾಮು. ಯಾಂತ್ರಿಕವಾಗಿ ನಡೆಯುವ ಪೂಜಾಕಾರ್ಯ. ಶ್ರದ್ಧೆಯಿಲ್ಲದ ಇವನ ಭಕ್ತಿಯೆದುರು ನೀಲಿಯ ಉನ್ಮಾದಕ

---

೬೨. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೨

೬೩. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೪

ಅಂಗಾಂಗಗಳೇ ಸುಳಿದು ಸುತ್ತುತ್ತಿದ್ದವು. ಗುರುಪಾದನಿಗೆ ಮಲ್ಲಿಕಾರ್ಜುನ ಉಪಜೀವನದ ದೇವರಾದರೆ. ಜಮಖಂಡಿಯ ' ನೀಲಿ ' ಆರಾಧ್ಯದೈವವಾಗಿದ್ದಳು. ಇದನ್ನರಿತ ಕಾಡಪ್ಪ ಕಾಕಾ ಅನೇಕ ಸಲ. " ದೇವ್ರ ಪೂಜಿ ಮಾಡಾವ್ರ ಮನಸ್ಸು ಸುದ್ಧ ಇರಬೇಕು. ಮೈಯೂ ಸುದ್ಧ ಇರಬೇಕು. ಭಕ್ತಿಯಿಂದ ಪೂಜಿ ಮಾಡಿದ್ರ ದೇವ್ರ ಒಲೀತಾನು...." [೩೪] ಎಂದು ಹೇಳಿದ್ದುಂಟು. ಆದರೆ ಗುರುಪಾದನಿಗೆ ಮಾತ್ರ ಅದ್ಯಾವುದು ಕಿವಿಯಲ್ಲಿ ಹೊಕ್ಕಿರಲಿಲ್ಲ. ಮೂರುಮಕ್ಕಳ ತಂದೆಯಾದ ಗುರುಪಾದನಿಗೆ ಮನೆಯಲ್ಲಿ ಒಳ್ಳೆಯ ಹೆಂಡತಿಯಿದ್ದರೂ ನೀಲಿಯ ಉನ್ಮತ್ತ ಸೆರಗಿನಲ್ಲಿ ಬಿದ್ದಿದ್ದ. ಮಡಿ-ಮೈಲಿಗೆಗಳ ವಿಚಾರದಲ್ಲಿ ಗುರುಪಾದಪ್ಪ ಬಹಳಷ್ಟು ಸಡಿಲ. ಅದಕ್ಕೆಂದೇ ಕಷ್ಟಮುಗಿಸಿಕೊಂಡ ಮೈಲಿಗೆಯಿಂದಲೇ ಗರ್ಭಗುಡಿ ಹೊಕ್ಕು ಪೂಜಾರಿಯನ್ನು. " ಇದೇನೋ ಪೂಜಾರಿ ! ದೇವ್ರ ಕ್ವಾನ್ಯಾಗ ಹಾಂಗs ಹೋಗಿ ಬಂದ್ಯಲ್ಲ ? ನಿನಗೇನ ಮಡಿ-ಮೈಲಿಗಿ....!" [೩೫] ಎಂದು ಒಂದಿಷ್ಟು ಅಸಹನೆಯಿಂದಲೇ ಕೇಳಿದ ಶರಣನಿಗೆ. " ನೋಡೋ ಶರಣಾ. ಆತ್ಮ ಸುದ್ಧ ಇದ್ರ ಸಾಕು. ಈ ಮಡಿ-ಮೈಲಿಗಿ ನನಗೇನ ಗೊತ್ತಿಲ್ಲಂತ ತಿಳಿದಿಯೇನ ? ನಿನ ಮುಟ್ಟ್ಯ ಅದ ಮೈಲಿಗಿ ಆತೇನ ? ನೀನೂ ಮನಸ್ಯಾ...." [೩೬] ಎಂದು ವೇದಾಂತದ ಬಿರುಸು ಬಾಣವನ್ನೇ ಬಿಡುತ್ತಾನೆ.

ತ್ವಾಟದ ಮನೀ ಕಾಡಪ್ಪ ಊರಿಗೆಲ್ಲ ಕಕ್ಕ. ನಾಕಿಪ್ಪತ್ತು ವಯಸ್ಸಾದರೂ ಮೂರಿಪ್ಪತ್ತು ಆದಂತೆ ಕಾಣುವ ಕಾಕಾನ ಕಣ್ಣು. ಕೈಕಾಲುಗಳು ಗಟ್ಟಿಮುಟ್ಟಾಗಿದ್ದಂತೆ. ಹಲ್ಲು ಒಂದೂ ಮುಕ್ಕಾಗಿರದ ಗಟ್ಟಿಮುಟ್ಟಾದ ಆಸಾಮಿ. ಕಾಕಾನಿಗೆ ಇಬ್ಬರು ಗಂಡುಮಕ್ಕಳು. ಒಬ್ಬಳೇ ಹೆಣ್ಣುಮಗಳು. ಸವದಿಗೆ ಕೊಟ್ಟಿದ್ದ. ಗೌರಕ್ಕನ ಗಂಡ ತೀರಿಕೊಂಡಾಗ ವಿಧವೆಯಾಗಿ ಮನೆಯಲ್ಲಿಯೇ ಇದ್ದಳು. ಐವರು ಮೊಮ್ಮಕ್ಕಳು. ಎಲ್ಲಕ್ಕಿಂತ ಹೆಚ್ಚಾಗಿ ನಿರ್ಮಲಾ ಮುದ್ದಿನ ಮೊಮ್ಮಗಳು. ಅವಳೆಂದರೆ ಕಾಕಾನಿಗೆ ಪಂಚಪ್ರಾಣ. " ಕಾಕಾ ಹಾಕಿದ ಉಗಳ ಅಂವ್ಯಾಂವ ದಾಟ್ತಾನು ?" ಎನ್ನುವಷ್ಟು ಕಾಕಾನ ವ್ಯಕ್ತಿತ್ವ ಜೋಗಿಮರಡಿಯಲ್ಲಿ ಪ್ರಶ್ನಾತೀತವಾಗಿತ್ತು. ಶರಣ. ಕಾಕಾನನ್ನು ಕಂಡು ತಲೆಬಾಗಿ ನಮಸ್ಕರಿಸಿದ. ಶರಣನನ್ನೇ ಹುಡುಕುತ್ತಿದ್ದ ಕಾಕಾನಿಗೆ ಅವನು ಸಿಕ್ಕಿದ್ದು ತುಂಬ ಸಂತೋಷವಾಗಿತ್ತು. ಕಾಲಲ್ಲಿ ಮುಳ್ಳುಮುರಿದು ಕುಂಟುತ್ತಿರುವ ಕಾಕಾನಿಗೆ ರಾಚಪ್ಪನ ಮನೆಯೇ ಉಪಚಾರ ಗೃಹವಾಯಿತು. ಕಾಕಾ ಕ್ಯಾದಾರಿ ಮನಿಗಿ ಬಂದಾನು ಎನ್ನುತ್ತ ಹುಸೇನಿ ಕಾಕಾನನ್ನು ಹುಡುಕುತ್ತ ರಾಚಪ್ಪನ ಮನೆಗೇ ಬಂದಿದ್ದ. ಕೇದಾರಿ ' ಮರಡಿ 'ಯಲ್ಲಿ ಸಣ್ಣ-ಪುಟ್ಟ ಕಳ್ಳತನ ಮಾಡುತ್ತ ಊರಿಗೆ ಕಂಟಕನಾಗಿದ್ದ. ಊರಲ್ಲಿನ ಕುರಿ-ಕೋಳಿಗಳು ಇವನ ಕೈಚಳಕಕ್ಕೆ ಬಲಿಯಾಗುತ್ತಿದ್ದವು. ಹುಸೇನಿಯ ಆಡಿನಮರಿಯೊಂದನ್ನು ಕದ್ದ ಕ್ಯಾದಾರಿ ಎಂಟತ್ತು ದಿನ ತಲೆ ಮರೆಸಿಕೊಂಡಿದ್ದವ. ಮತ್ತೆ ಊರಲ್ಲಿ ಕಾಣಿಸಿಕೊಂಡಾಗ ಹುಸೇನಿ ಆ ಸುದ್ದಿಯನ್ನೇ ಕಾಕಾನಿಗೆ ಒಪ್ಪಿಸಿ ನ್ಯಾಯ ಬೇಡಿದ್ದ. ಕಾಕಾನ ಕಾಲಲ್ಲಿ ಮುಳ್ಳು ತೆಗೆವಾಗ ಶುಶ್ರೂಷಾ

---

೩೪. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೨

೩೫. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೫

೩೬. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೫

ಗೃಹವಾಗಿದ್ದ ರಾಚಪ್ಪನ ಮನೆಯೀಗ ನ್ಯಾಯಾಲವೂ ಆಯಿತು. ಬಿರಾದಾರ ರಾಚಪ್ಪನ ಮನೆಯಲ್ಲಿ ಪಂಚಾಯತಿ ಸೇರಿತು. ನೀಲಪ್ಪಗೋಳು ಕ್ಯಾದಾರಿ ಒಂದಿಷ್ಟು ತಡವಾಗಿಯೇ ಅಲ್ಲಿಗೆ ಬಂದ. ಶರಣನಿಗೆ ಹೊಟ್ಟೆ ಹಸಿದಿದ್ದರೂ ಅದರ ಕಡೆ ಲಕ್ಷ್ಯಗೊಡದೆ. ಒಂದಿಷ್ಟು ಉತ್ಸುಕನಾಗಿಯೇ ನ್ಯಾಯನಿರ್ಣಯಕ್ಕೆ ಕಾದುಕುಳಿತ. ಕಾಡಪ್ಪ ಕಾಕಾ ಸಾಕಷ್ಟು ಅಗೆದು ತೆಗೆದರೂ ಜಪ್ಪೆನ್ನದ ಕ್ಯಾದಾರಿಗೆ ಒಂದಿಷ್ಟು ನಿಷ್ಠುರನಾಗಿಯೇ " ನೋಡ ಕ್ಯಾದಾರಿ. ನಿನಮ್ಯಾಲ ತಕರಾರ ಭಾಳ ಬಂದಾವು. ಏನೋ ಮನಸ್ಸಾ ತಪ್ಪ ಮಾಡೂದs ನೀ ತಿದ್ಕೊಂಡ ಚಲೂತ್ನಾಗಿ ನಡೀಬಹುದಂತ ರಗಡಸಾರೆ ನಿನಗೆ ಹೇಳೇ ಹೇಳೇನಿ. ನೀ ಹುಂ ಅಂತೀ ಮತ್ತ ನಿಂದs ಕೈ ಹಚ್ತಿ..... ಹುಸೇನಿ ಬಡೂ ಮನುಸ್ಯಾ. ಬಡೂರ್ನ ಮರಾಮರಾ ಮಾಡಿದ್ರ ದೇವ್ರ ಯಾರಿಗ್ಯೂ ಚಲೂ ಮಾಡೂದುಲ್ಲ ಬಡೂರ್ನ ಬಿಟ್ಟ ಸಾವ್ಕಾರ್ರ್ ತುಡಗ ಮಾಡಬೇಕಂತಲ್ಲ. ಒಟ್ಟ ತುಡಗs ಮಾಡ್ಬಾರ್ದು. ಇನ್ನೊಬ್ರ ಮನಸ್ಸ ಯಾಕ ಮರಾಮರಾ ಮಾಡಬೇಕು ? ದುಡದ ಯಾಕ ತಿನಬಾರ್ದು ? ಈಗ ಖರೆ ಹೇಳ. ಆಡಿನಮರಿ ತಗೊಂಡಿದ್ದ ಹೋಗ್ಲಿ. ಈಗ ಅದರ ಕಿಮ್ಮತ್ತ ಹುಸೇನಿಗೆ ಕೊಟ್ಟಬಿಡ...." [೩೭] ಎಂದು ಹೇಳಿಬಿಟ್ಟ. ಇದಕ್ಕೂ ಕ್ಯಾದಾರಿ ಜಪ್ಪೆನ್ನದಾಗ ತಾನೇ ಕಿಸೆಯಿಂದ ಇಪ್ಪತ್ತರ ನೋಟ ತೆಗೆದು ಹುಸೇನಿಗೆ ಕೊಡಹೋದಾಗ. ಕ್ಯಾದಾರಿಗೆ ತಡೆಯಲಾಗಲಿಲ್ಲ. " ಕಾಕಾ ನನ ಕಡಿ ತಪ್ಪಾಗೇತಿ ! ನಾನs ಮರಿ ತುಡಗ ಮಾಡಿದ್ದ ಖರೆ. ಇನಮುಂದ ಎಂದೂ ಇಂತಾ ಕೆಲ್ಸಾ ಮಾಡೂದುಲ್ಲಾ. ಹುಸೇನಿಗೆ ನಾನs ರೊಕ್ಕಾ ಕೊಡ್ತನು " [೩೮] ಎಂದು ತನ್ನ ತಪ್ಪೊಪ್ಪಿಕೊಂಡು. ಮುಂದೆ ಆತ ಮತ್ತೆ ಅಂಥ ತಪ್ಪು ಮಾಡದಿರುವುದು ಕಾಕಾನ ವ್ಯಕ್ತಿತ್ವಕ್ಕೆ ಸಂದ ಗೌರವವೆಂದೇ ಹೇಳಬೇಕು. ಚುರುಗುಟ್ಟುತ್ತಿರುವ ಹೊಟ್ಟೆಗೆ ಇನ್ನೂ ಊಟವಿಲ್ಲದಿರುವುದು ನೆನಪಾದಾಗ ಶರಣ ಮನೆಯತ್ತ ಸರಸರ ನಡೆದ; ಬೈಲಾಟದ ಗ್ಯಾನೋಬಾ ತಡೆದು ಮನೆಯತ್ತ ಕರೆದ. " ಮಾರಾಯಾ. ಯಾಳೆ ನೋಡೇದಿ ಇಲ್ಲೋ ! ಏನ ಮದ್ದೀನ ಊಟಾ ಸಂಜೀ ಊಟಾ ಕೂಡಿ ಒಮ್ಮೆ ಆಗ್ಲಿ ಅಂತಿಯೇನ...." [೩೯] ಎನ್ನುತ್ತಲೇ ಶರಣ ಅತ್ತ ಕಾಲು ಹಾಕಿದ್ದ.

ಗ್ಯಾನೋಬಾ ಬೈಲಾಟದ ಖಯಾಲಿ ಮನುಷ್ಯ. ಅಂಭಾ-ಗ್ಯಾನೋಬಾರಿಬ್ಬರೂ ಶಾಸ್ತ್ರೋಕ್ತವಾಗಿ ಮದುವೆಯಾಗದಿದ್ದರೂ. ಅನ್ಯೋನ್ಯ ದಂಪತಿಗಳಾಗಿದ್ದವರು. ಆಡಂಬರದ ಮದುವೆಗಿಂತ ಅಂತರಂಗದ ಬೆಸುಗೆಯೇ ಜೀವನದ ಸೂತ್ರವೆಂದರಿತ ಅವರು. ಪರರು ಹೊಟ್ಟೆಕಿಚ್ಚು ಪಡುವಷ್ಟು ಅನ್ಯೋನ್ಯದಿಂದಿದ್ದವರು. " ಅಂಬಾಳಂಥವರ್ನ ನೋಡ್ಲಾಕ ನಸೀಬ ಬೇಕ " [೪೦] ಎಂದೆನ್ನುವವರಲ್ಲಿ ಶರಣನೂ ಒಬ್ಬನಾಗಿದ್ದು. ಅನೇಕ ಸಲ ಅವಳ ವೈಯಾರದ ಹಾಡು-ಕುಣಿತಗಳನ್ನು ಕಂಡು ಅದರಲ್ಲಿಯೇ ತಲ್ಲೀನನಾಗಿ ' ಸಂಗ್ಯಾ-ಬಾಳ್ಯಾ ' ಬೈಲಾಟ ನೋಡುತ್ತಿದ್ದಾಗ ಮೈಮರೆತು. " ಕ್ಯಾಹೂsss ಎಂದು ಕೂಗಿದ್ದು ಉಂಟು. " ಇಳಿವಯದಾಗ ಇದ್ಕೇನ ಹುಚ್ಚು

೩೭. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೩೦-೩೧

೩೮. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೩೩

೩೯. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೩೪

೪೦. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೩೬

ಓಡಿದ್ಯೆತ್ಯೋ !" [೪೧] ಎಂದು ಹೆಂಡತಿಯ ಕೈಯಿಂದ ಉಗಳಿಸಿಕೊಂಡಿದ್ದೂ ಉಂಟು. ಹೊಟ್ಟೆಹಸಿದರೂ ಶರಣ. ಗ್ಯಾನೋಬಾನ ಮನೆಗೆ ದಾಡಿಮಾಡಲು ಹೋಗಿದ್ದ. ಕಣ್ಣಿಗೂ ಹಬ್ಬ. ಮೂಗಿಗೂ ಹಬ್ಬ. ಕಿವಿಗೂ ಹಬ್ಬ. ಈ ತ್ರಿವಿಧ ಲಾಭಕ್ಕಾಗಿಯೇ ಶರಣ ಅಲ್ಲಿ ಹಾಜರಾಗಿ ಅಂಬಾಳ ಕೈಯಿಂದ ಚಾ ಕುಡದು ಗ್ಯಾನೋಬಾನ ಹಜಾಮತಿ ಮಾಡಿ ಐವತ್ತು ಪೈಸಾ ಹಡಪದಲ್ಲಿಟ್ಟು. ಮತ್ತೊಮ್ಮೆ ರಾಜಕುಮಾರನ ಸಿನಿಮಾ ಧ್ಯಾನಿಸುತ್ತ ಮನೆದಾರಿಹಿಡಿದ.

ಸ್ನಾನ ಮಾಡಿ ಇನ್ನೇನು ಊಟ ಮಾಡಬೇಕೆನ್ನುವಷ್ಟರಲ್ಲಿ ಹೊಲೇರ ದುರ್ಗಪ್ಪನ ಮಗಳು ತಾರಿ ಕೈಯುಳುಕಿಸಿಕೊಂಡು ಶರಣನ ಮನೆಮುಂದೆ ಹಾಜರಾಗಿದ್ದಳು. ತಾರಿಯ ತಾಯಿ ಎಲ್ಲವ್ವ ಅದೇ ಕೇರಿಯ ಕಮಲಿಯ ಬೋಧೆಗೆ ಮನಸೋತು ತಾರಿಯನ್ನು ಕಮಲಿಯೊಂದಿಗೆ ಮುಂಬೈಗೆ 'ದಂಧೆ' ಮಾಡಲು ಕಳಿಸುವ ಹವಣಿಕೆಯಲ್ಲಿದ್ದಳು: ಮಗಳನ್ನು ಆ ಕುರಿತು ಕೇಳಿದರೆ. ತಾರಿ ಒಪ್ಪಲೇ ಇಲ್ಲ. ಮಾತಿಗೆ ಮಾತು ಬೆಳೆದು ಒಂದು ವ್ಯಾಜ್ಯವೇ ಆಯಿತು. ಸಿಟ್ಟಿಗೆದ್ದ ಎಲ್ಲವ್ವ ಕಟ್ಟಿಗೆಯಿಂದ ಬಲವಾಗಿ ಕೈಗೆ ಹೊಡೆದದ್ದರಿಂದ ತಾರಿಯ ಕೈ ಉಳುಕಿತ್ತು: 'ಹೇಣತಿ ಮುಂದ ಉಠಾಬಸಿ ತೆಗಿಯೂ ಸೂರ' ನಾಗಿದ್ದ ದುರ್ಗಪ್ಪ ಹೆಂಡತಿಗೆ ಏನೂ ಮಾಡದವನಾಗಿದ್ದ. ಅದಕ್ಕೀಗ ತಂದೆಯೊಂದಿಗೆ ತಾರಿ ಶರಣನ ಮನೆ ಮುಂದೆ ಬಂದು ನಿಂತಿದ್ದಳು. ಶರಣನಿಗೆ ತಾರುಣ್ಯ ತುಂಬಿದ ತಾರಿಯ ಕರಸ್ಪರ್ಶದ ಸುಖ ಬಾಯಲ್ಲಿ ನೀರೂರಿಸಿದರೂ. "ಈಗ ಜಳಕಾ ಮಾಡಿ ತುತ್ತ ಹಾಕ್ಕೊಂಡದಿ. ಇನ ಮತ್ತ ಅವರ್ನ ಮುಟ್ಟತಿಯೇನ ?" [೪೨] ಎಂಬ ಹೆಂಡತಿಯ ಮಾತು ಶರಣನನ್ನು ಉಭಯಸಂಕಟದಲ್ಲಿ ಸಿಲುಕಿಸಿತ್ತು. ಅದೇ ವೇಳೆಗೆ ಹಾಜರಾದ ಕಾಡಪ್ಪ ಕಾಕಾ ಆ ಸಮಸ್ಯೆಗೆ ಪರಿಹಾರವೇ ನಡೆದು ಬಂದಂತಾಗಿತ್ತು. ತನ್ನ ತಂದೆಯಿಂದಲೇ ಕಲಿತುಕೊಂಡ ಜ್ಞಾನದಿಂದಾಗಿ ಶರಣನಿಗೆ ತಾರಿಯ ಕೈಕೂಡಿಸುವುದರಲ್ಲಿ ಅಷ್ಟೇನು ತೊಂದರೆಯಾಗಿರಲಿಲ್ಲ. ಅಷ್ಟೊತ್ತಿಗಾಗಲೇ ಚಾ ಮಾಡಿದ ಕಾಶವ್ವ ಕಾಕಾನ ಮರ್ಜಿಗಾಗಿ ಹೊಲೆಯರ ದುರ್ಗಪ್ಪ-ತಾರಿಯರಿಗೂ ಕೊಡಬೇಕಾಯಿತು. ಇದಕ್ಕಾಗಿ ಗಂಡನ ಬಗ್ಗೆ ಒಳಗೊಳಗೇ ಸಂತಪ್ತಳಾಗಿದ್ದಳು. ಶರಣನಿಗೆ ಇದೆಲ್ಲ ಗೊತ್ತು. ಹೇಗಾದರೂ ಮಾಡಿ ಹೆಂಡತಿಯ ಕೈಯಿಂದ ತಪ್ಪಿಸಿಕೊಳ್ಳಬೇಕೆಂಬ ಹವಣಿಕೆಯಲ್ಲಿದ್ದ ಆತನಿಗೆ. "ಶರಣಾ. ನಡೀ ಒಂದೀಟ ಬಡಿಗ್ಯಾರ ಕಾಳಪ್ಪನ ಕಡಿ ಹೋಗಿ ಬರೋಣ ನಿಂದೇನ ಬ್ಯಾರೆ ಕೆಲ್ಸಿಲ್ಲ ಹೌದಲ್ಲೋ....." [೪೩] ಎಂದು ಕಾಕಾ ಕೇಳುವುದಷ್ಟೇ ತಡ. "ನಡಿ ಕಾಕಾ ನಾನೂ ಬರ್ತಿನು. ಒಂದ ಮಣಿ ಮಾಡ್ಲಾಕ ಹೇಳಿದ್ನಿ. ಮಾಡ್ಯಾನಿಲ್ಲೋ ನೋಡೋಣು.... ಏಯ್ ಈ ಕಪ್ಪುಬಸಿ ಒಳಗಿಡ...." [೪೪] ಎಂದು ಹೊರಗಿನಿಂದಲೇ ಹೆಂಡತಿಗೆ ಆಜ್ಞೆಯಿತ್ತು. ಅವಳನ್ನು ನೋಡಲು ಎದೆಯಾಗದೆ ಹೊಟ್ಟೆಹಸಿವನ್ನೂ ಮರೆತು ಕಾಕಾನೊಂದಿಗೆ ಕಾಲುಹಾಕಿದ್ದ. ಜೋಗಿಮರಡಿಯ ಬಡಿಗೇರ ಕಾಳಪ್ಪ. ಹುನ್ನೂರಿನ ಪತ್ತಾರ ಮೋನಪ್ಪ ಎದುರುಬದುರು ಸಂಬಂಧ ಬೆಳೆಸಿದ ಬೀಗರು. ನಾಗರಿಕ ಬದುಕಿಗೆ ಒಗ್ಗಲಾಗದ ಕಾಳಪ್ಪನ ಮಗ ದತ್ತ ಹೆಂಡತಿಯೊಂದಿಗೆ ವಿರಸಕಟ್ಟಿಕೊಂಡು ತವರು ಮನೆಗೆ ಅಟ್ಟಿದ್ದ. ಓಗಾಗಿ ಪರಸ್ಪರರಲ್ಲಿ ಅನ್ಯೋನ್ಯವಾಗಿದ್ದ

---

೪೧. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೩೮
೪೨. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೪೨
೪೩. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೪೯
೪೪. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೪೯

ಸಂಬಂಧವೀಗ ಹಳಸಿತ್ತು. ಕಾಕಾಸಿಗೆ ಇದನ್ನೆಲ್ಲ ಕಥೆಯಾಗಿ ಹೇಳಿದ ಕಾಳಪ್ಪ ಕಣ್ಣೀರುಗರೆದಿದ್ದ. ಅದಕ್ಕೆ ಕಾಕಾ ಪ್ರಸಂಗ ಬಂದಾಗ ಸಂಬಂಧವನ್ನು ಸುಧಾರಿಸುವೆನೆಂಬ ಭರವಸೆ ನೀಡಿದ್ದ: ಅಂಥ ಪ್ರಸಂಗ ಬಂದಾಗ ಎರಡೂ ಸಂಬಂಧಗಳನ್ನು ಮರುಬೆಸೆದು ಕೂಡಿಸಿದ್ದ: ಅದರಿಂದ ಸಂತೋಷಪಟ್ಟಿದ್ದ ಕೂಡ.

ಶರಣನಿಗೆ ಕಾಲಲ್ಲಿ ಚಕ್ರಗಳಿವೆ. ಊರ ಸುತ್ತುವುದೇ ಅವನ ಕೆಲಸ. "…. ದಾರಿಯಲ್ಲಿ ಕಂಡವರ ಕ್ಷೇಮಸಮಾಚಾರ ವಿಚಾರಿಸುತ್ತ ಸಂಜೆಯಸಮಯ ವರವಿ ಠಿಕಾಣೆಗಳಲ್ಲಿ ಕುಂಡಿ ಊರುತ್ತ. ಸುತ್ತಮುತ್ತಲಿನ ಸುದ್ದಿಯನ್ನೆಲ್ಲ ಹೇಳುತ್ತ-ಕೇಳುತ್ತ. ಅದರಲ್ಲಿ ಉಪ್ಪು-ಖಾರ ಬೆರಸುತ್ತ ಊರ ಉಸಾಬರಿ ಮಾಡುತ್ತಿರುವುದರಿಂದಲೇ ಊರ ಅಬಚಿ " [೪೫] ಎಂದು ಶರಣನಿಗೆ ಕರೆಯುವ ಹೆಸರು ಸಾರ್ಥಕವಾಗಿತ್ತು. ' ಪೈಲ್ವಾನರು ಕುಡಿಯೂ ಚಾ ' ಮಾಡುವ ಹಳೇಮನಿ ನೀಲವ್ವಳ ನೆನಪಾಗಿ ಶರಣ ಅತ್ತ ಕಾಲುಎಳೆದ. ಹೇಗೂ ಹೆಂಡತಿಯಿಂದ ರಾತ್ರಿವರೆಗೆ ತಪ್ಪಿಸಿಕೊಳ್ಳಬೇಕಾಗಿತ್ತು. ' ಕರಿಗಡಬು ನೀಲವ್ವ ' ನೆಂದೇ ಹೆಸರಾಗಿದ್ದ ನೀಲವ್ವ ಎಮ್ಮೆ ಸಾಕಿ ಹೈನು ಮಾಡುವುದಕ್ಕೆ ಊರಲ್ಲಿ ಪ್ರಸಿದ್ಧಿ ಪಡೆದವಳು: ಗಟ್ಟಿ ಚಾ ಮಾಡುವುದರಲ್ಲಿ ಎತ್ತಿದ ಕೈ. ಆದರೆ ಅಂದು ನೀಲವ್ವನ ಹಿಂಡು ಎಮ್ಮೆಯನ್ನು ಮನೆಗೆ ಹೊಡೆದುಕೊಂಡು ಬರದೆ. ದ್ಯಾವೀರಿ ಪೆದ್ದಮಗಳು ಸಾಂವವ್ವಳ ಗೊಡ್ಡು ಎಮ್ಮೆಯನ್ನು ಹೊಡೆದುಕೊಂಡು ಬಂದದ್ದು ನೀಲವ್ವನಿಗೆ ತುಂಬ ಸಿಟ್ಟುತರಿಸಿತ್ತು. ' ಈ ಭಾನಗಡಿ 'ಯಲ್ಲಿ ಶರಣನಿಗೆ. ' ಪೈಲ್ವಾನ ಚಾ ' ಸಿಗದೆ. ಅಲ್ಲಿಂದ ಕಂಬಿಕಿತ್ತಿದ್ದ. ಇಷ್ಟೊತ್ತಿಗಾಗಲೇ ಊರೆಲ್ಲ ಕತ್ತಲೆಯಲ್ಲಿ ಮಲಗಿತ್ತು. ಇನ್ನೊಂದಿಷ್ಟು ವೇಳೆಗಳೆಯಲು ಗೂಳಪ್ಪನ ಕಿರಾಣಿಯಂಗಡಿಯ ದರ್ಬಾರಿನಲ್ಲಿ ಪಾಲ್ಗೊಳ್ಳಲು ಆ ಅಂಗಡಿಯತ್ತ ಅವಸರವಸರವಾಗಿ ನಡೆಯುತ್ತಿದ್ದ ಶರಣ. ಕತ್ತಲಲ್ಲಿ ಎದುರಿಗಿದ್ದ ಸ್ತ್ರೀಯೊಬ್ಬಳಿಗೆ ' ಢಡಲ್ ' ಎಂದು ಡಿಕ್ಕಿ ಹೊಡೆದಿದ್ದ. ಹಾಯ್ದ ಭಾರಕ್ಕೆ ' ಢಡಲ್ ' ಎಂದು ಹಿಟ್ಟಿನ ಡಬ್ಬಿ ಬಿದ್ದಿತ್ತು. " ಐ ನಿನ ಹೆಣಾ ಎತ್ಲಿ ! ಕತ್ಲಾಗ ಇದಿರ್‍ಗಿ ಮಂದಿ ಬರ್‍ತಾರನ್ನು ಖಬರಿಲ್ದ ಹಾಂಗs ಹಾಯ್ದೆಲ್ಲೋ ಮೂಳಾ ! ಹೆಂಗ್ಸರನ್ನು ಖಬರೈತಿಲ್ಲೋ ! ನಾಕ ಸೇರಗೋಂಜ್ಯಾಳ ಹಿಟ್ಟ ಕೆಡವಿಬಿಟ್ಟಿ. ನಾಡಮೂಳಾ !! ಈ ಹಿಟ್ಟಿನ ರೊಕ್ಕಾ ಕೊಟ್ಟ ಹೋಗ…." [೪೬] ಎಂದೆನ್ನುವ ದನಿಗುರುತಿಸಿ. ಹಾಯ್ದದ್ದು ತನ್ನ ಹೆಂಡತಿಗೇ ಎಂದರಿತಾಗ ಅಲ್ಲಿಂದ ಹಾರ್‍ಗಾಲ ಬಿದ್ದು ತಪ್ಪಿಸಿಕೊಂಡಿದ್ದ: ಈಗ ಇನ್ನೊಂದು ಅಳುಕು ಅವನನ್ನು ಕಾಡತೊಡಗಿತು. ಅದಾಗಲೇ ಗೂಳಪ್ಪನಿಗೂ. ಚನಗಿರಗೌಡನಿಗೂ ನಡೆದ ಅಂಗಡಿ ಬಾಕಿ ವ್ಯಾಜ್ಯದಲ್ಲಿ ತಾನೂ ಪ್ರೇಕ್ಷಕನಾಗಿ ಶರಣ ಗುಂಪಿನಲ್ಲಿ ಸೇರಿಕೊಂಡಿದ್ದ.

ಚನಗಿರಿಗೌಡನನ್ನು ಜೋಗಿಮರಡಿಯಲ್ಲಿ ' ಪಾರ್‍ವ್ಯಾಳಗೌಡ 'ನೆಂದೇ ಕರೆಯುತ್ತಿದ್ದರು. ಅದಕ್ಕೆ ಅವನುಡುವ ಬಿಳಿಉಡುಪುಗಳೇ ಕಾರಣವಾಗಿದ್ದವು. ಚನಗಿರಿಗೌಡನ ತಂದೆ ರಾಯನಗೌಡ ಊರಿಗೆ ಸಂಸ್ಥಾನಿಕನಂತೆ ಮೆರೆದವ. ತಂದೆ ತೀರಿಹೋದ ಮೇಲೆ ದೇಸಗತಿಯ ಇಳಿಗಾಲ ಆರಂಭವಾಯಿತು. " ಹೊಲ. ತೋಟ. ಮನೆ. ಹಣ. ಬಂಗಾರದವಸ್ತು. ಒಡವೆಗಳು. ಆಳುಕಾಳು. ದನಕರು. ಎಲ್ಲವೂ ಕರಗುತ್ತ ಕರಗುತ್ತ ಸೊರಗುತ್ತ ಸೊರಗುತ್ತ ಈಗ ಚನಗಿರಿಗೌಡ. ಆತನ

೪೫. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೫೬

೪೬. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೬೩

ಹೆಂಡತಿ. ನಾಲ್ಕುಮಕ್ಕಳು. ಸುತ್ತೆಲ್ಲ ಬಿದ್ದಹೋಗಿ ನೆತ್ತಿಯ ನೆರಳಾಗಿ ಉಳಿದಿದ್ದ ವಾಡೆ. ಒಂದಿಷ್ಟು ಹೊಲ. ಒಂದು ಎಮ್ಮೆ. ಒಂದು ಕರು. ಒಂದು ಆಳು. ಒಂದು ನಾಯಿ. ಇಷ್ಟು ಮಾತ್ರ ಇವೆ "[೪೭] ಎಂದೆನ್ನುವ ಮಾತುಗಳು. ಅಳಿದುಳಿದ ದೇಸಗತಿ ಮನೆತನಗಳು ಹಾಳಾಗಿ. ಅವುಗಳ ಅವಶೇಷಗಳ ಪಟ್ಟಿಯನ್ನು ನೀಡಿದಂತಿದೆ. ಗೂಳಪ್ಪನಿಗೂ ಪಾರ್ವಾಳಗೌಡನಿಗೂ ಬಿರುಸಾಗಿಯೇ ಮಾತು ನಡೆದಿತ್ತು. ಕೊನೆಗೆ " ಅದೇನಾರ ಇರ್ಲಿ ಮಾರಾಯಾ. ಈಗ ನಮ ಅಂಗ್ಗಿ ಉದ್ರಿಕೊಟ್ಟಬಿಡ "[೪೮] ಎಂದು ಗೂಳಪ್ಪ ಜಗಳಕ್ಕೆ ಮಂಗಳಹಾಡಿದಾಗ. ಪಾರ್ವ್ಯಾಳಗೌಡ ಶರಣನನ್ನು ' ವಾಡೆ 'ಗೆ ಕಳಿಸಿ ' ಸಾಡೇತೀನಸೇ ' ತರುವಂತೆ ಹೇಳಿದ. ಓಡಿ ವಾಡಿಗೆ ಹೋದ ಶರಣ ಅಲ್ಲಿನ ಸನ್ನಿವೇಶದ ಸುಳಿವು ಹತ್ತಿ "ಯಪ್ಪಾರೆ ಇದೂ ಒಂದು ದೊಡ್ಡ ಕತಿ ಕಾಣತೈತ್ಲಾ !! "[೪೯] ಎಂದೆನ್ನುತ್ತಲೇ ರಮಾ ಕೊಟ್ಟ ರೂಪಾಯಿಗಳನ್ನು ತಂದುಕೊಡುವಷ್ಟರಲ್ಲಿ. ಕಲ್ಲಿ-ಮಲ್ಲಿ ಅವನಿಗಾಗಿ ಅಲ್ಲಿಯೇ ಕಾಯುತ್ತಿದ್ದು. ಕರೆದುಕೊಂಡು ಮನೆಯತ್ತ ನಡೆದರು. " ಅಪಾ ಕತ್ಲಾಗ ಅವ್ವಾ ಬಿದ್ದ ನಡಾ ನೂಸಕೊಂಡಾಳು ! ಯಾಂವ್ನೋ ಬಂದ ಹಾದ್ನಂತ.... ಒಟ್ಟೆಲ್ಲ ಮಣ್ಣಾಗೇತಿ..... ಮನೀಗೆ ಬಾ ಅಂತ ಕರ್ದಾಳು....."[೫೦] ಮಕ್ಕಳ ಈ ಮಾತುಗಳನ್ನು ಕೇಳುತ್ತ ಅಳುಕುತ್ತಲೇ ಶರಣ ಮನೆಹೊಕ್ಕ. " ಅಂವ್ಯಾಂವ ಕುಡ್ದ ಕತ್ತೀಮಗಾ ಈಕಿಗಿ ಹಾದ ಒಟ್ಟ ಕೆಡವಿದ್ನೋ. ಮಣ್ಣ ಕೂಡಿ ರೊಟ್ಟಿ ಕರಕರ ಮಾಡ್ಲಾಕ ಹತ್ಯಾವು "[೫೧] ವಟಗುಟ್ಟುತ್ತಲೇ ಒಂದೆರಡು ರೊಟ್ಟಿ ಕರಗಿಸಿದ ಶರಣ. ಹೆಂಡತಿಯ ಉಪಚಾರಕ್ಕೆ ತೊಡಗಿದ ಆ ಸರಿಹೊತ್ತಿನಲ್ಲಿ. ಸೂರ್ಯೋದಯದೊಂದಿಗೆ ಹಡಪ ಹೆಗಲಿಗೆಹಾಕಿಕೊಂಡು ಊರ ' ಹಜಾಮತಿ 'ಗೆ ಹೊರಟ ಶರಣ. ಅನೇಕ ಕಿತಾಪತಿಗಳನ್ನು ಮಾಡುತ್ತ-ನೋಡುತ್ತ. ' ಊರಅಬಚಿ 'ಯಂತೆ ಊರೆಲ್ಲ ಸುತ್ತಿ ಅನೇಕ ಘಟನೆಗಳಿಗೆ ಸಾಕ್ಷಿಯಾಗುವ ತಾನೇ ಮಾಡಿದ ಕಿತಾಪತಿಗೆ ಈಗ ತನ್ನನ್ನೇ ಬೈಯ್ದುಕೊಳ್ಳುತ್ತ ಹೆಂಡತಿಯ ಸೊಂಟಕ್ಕೆ ಎಣ್ಣೆ ಹಚ್ಚಿ ತಿಕ್ಕುತ್ತ ಆರೈಕೆ ನಡೆಸಿದ್ದ.

**ಸಂಗನ ಜಂಗಿನ ಸದ್ದುಗಳು :**

ಹಜಾಮರ ಶರಣ. ಸೈಪಾಕ ಭಿಕ್ಷದ ಸಂಗಯ್ಯ ಇವರಿಬ್ಬರೂ ಜೋಗಿಮರಡಿಯ ಆಯಗಾರರು. ಶರಣನಂತೆ ಬೆಳಗಿನಿಂದಲೇ ಜೋಳಿಗೆ ಬಗಲಿಗೇರಿಸಿಕೊಂಡು ' ಸೈಪಾಕ ಬಿಕ್ಷ 'ಕ್ಕೆ ಹೊರಡುವ ಸಂಗಯ್ಯನ ಜಂಗಿನ ಸದ್ದು ಊರ ಮನ-ಮನೆಗೆಲ್ಲ ಕೇಳಿಸುತ್ತದೆ. ಹಳ್ಳಿಯ ಹಲವು-ಹತ್ತು ಸಮಸ್ಯೆಗಳನ್ನು ತನ್ನ ಜೋಳಿಗೆಯಲ್ಲಿ ಬೀಳದಂತೆ ಜಂಗಿನ ಸದ್ದಿನಿಂದಲೇ ದೂರದಿಂದ ಎಚ್ಚರಿಸುತ್ತ ಹೊರಡುವ ಸಂಗಯ್ಯ ಜೋಗಿಮರಡಿಯ ಅನೇಕ ಸದ್ದು-ಗುದ್ದುಗಳಿಗೆ ಸಾಕ್ಷಿಯಾಗುತ್ತಾರೆ. ಕಾಲಕಳೆದಂತೆ ಒಟ್ಟು ನೀಡುವ ಕೈಗಾತ್ರವೂ ಚಿಕ್ಕದಾಗಿತ್ತು. ಅವನ ಜೋಳಿಗೆಯ ಮುಖ್ಯ ಹೊಟ್ಟೆಗೆ ಇನ್ನೆರಡು ಮರಿಹೊಟ್ಟೆಗಳಿದ್ದವು. ದೊಡ್ಡದರಲ್ಲಿ ಒಟ್ಟು. ಸಣ್ಣದರಲ್ಲಿ ಜೋಳ. ಮೆಕ್ಕೆಜೋಳ.

---

೪೭. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೬೭

೪೮. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೭೨

೪೯. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೭೨

೫೦. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೭೪

೫೧. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೭೫

ನೀಡಿಸಿಕೊಳ್ಳುತ್ತಿದ್ದ. ಕಾಲಿಗೆ ಜಂಗುಕಟ್ಟಿ. ಹೆಗಲಿಗೆ ಇಂಥ ಜೋಳಿಗೆಯನ್ನು ಹಾಕಿಕೊಂಡು ಮಠದ ಸಂಗಯ್ಯ ನಿಂಬಿಯ ಮನೆಯೆದುರು ನಿಂತು ಸೈಪಾಕ ಭಿಕ್ಷಾ..... ! ' ಕೇಳಿದ್ದ.

ನಿಂಬಿ ಹಿಟ್ಟು ನೀಡುತ್ತ. ಗಚ್ಚಿನಮನಿ ಬಸಲಿಂಗನ ಇತಿಹಾಸ ಬಿಚ್ಚಿಡುತ್ತ. ".... ಪರಗೌಡ್ರ ತ್ವಾಟದಾಗ ಕೆಲ್ಸಾ ಮಾಡೂ ತಳವಾರ ಸೂಗಿಗಿ ಅದೇನೋ ಯಾಂಸಿದೀಡಿ ಅಂತಾನಂತ..... ಪಾಪ. ಸೂಗಿ ನನಮುಂದ ಹೇಳ್ತು. ಗೌಡ್ರ ಮುಂದ ಹೇಳಾಕ ಅದಕೆಲ್ಲಿ ಧೈರ್ಯ." ಎಂದೆನ್ನುತ್ತ ಪರಗೌಡ ತನ್ನ ಮನೆಗೆ ಬಂದ ಮುಖ್ಯ ಕಾರಣವನ್ನೇ ಮರೆಮಾಚಿ ಸಂಗಯ್ಯನಿಗೆ ಬಸಲಿಂಗನ ನಿತ್ಯದ ತರಲೆಗಳನ್ನು ಒಪ್ಪಿಸಿದ್ದಳು. ಬಸಲಿಂಗ ಜೋಗಿಮರಡಿಯ ಪುಂಡ. ಕಂಡ-ಕಂಡ ಹೆಣ್ಣುಗಳ ರುಚಿ ನೋಡಲು ಸದಾಹವಣಿಸುವ ಈತನಿಗೆ. ರತ್ನದಂತಿರುವ ಹೆಂಡತಿ ಮುತ್ತವ್ವ ಕಣ್ಣಿಗೆ ಕಾಣುತ್ತಿರಲಿಲ್ಲ. ಮುತ್ತವ್ವ ಸಾಧುಪ್ರಾಣಿಯಂಥ ಹೆಂಡತಿ; ದೈವಭಕ್ತೆ ಕೂಡ. ಗಂಡನ ತರಲೆಗಳೆಲ್ಲ ಗೊತ್ತಿದ್ದರೂ ಪ್ರತಿಭಟಿಸದೆ. ತೆಪ್ಪಗಿದ್ದುಕೊಂಡು ದೇವರನ್ನೇ ಮೊರೆಹೋಗುವವಳು. ಬಸಲಿಂಗನ ಮನೆತನದ ಪೂರ್ಣಪರಿಚಯವಿದ್ದ ಸಂಗಯ್ಯ. " ನಿಂಬೆವ್ವಾ. ಈ ಬಸಲಿಂಗನ ಕಾಲಾಗಂತೂ ನನಗ ಬ್ಯಾಸರ ಹಿಡ್ದೈತಿ " [೫೨] ಸಂಗಯ್ಯ ತನ್ನ ಬೇಸರವನ್ನು ನಿಂಬಿಯೆದುರು ತೋಡಿಕೊಂಡ. " ಆದ್ರೂ ಬಸಲಿಂಗಗ ಯಾರರೆ ಅಂಜಿಕಿಬೇಕ ನೋಡ್ರಿ ! ತಾನs ಪುಂಡ ಅಂತ ಮೆರ್ದ್ಯಾಡು ಮಂದಿಗಿ ಕಾಕಾನಂತವ್ರು ಬುದ್ಧಿ ಎಲ್ಲಿ ನಾಟಬೇಕು ? ಮುಳ್ಳ ತಗ್ಯಾಕ ಮುಳ್ಳs ಬೇಕ್ಲಾ " [೫೩] ನಿಂಬಿಯ ಈ ಮಾತುಗಳನ್ನು ಗುಣಗುಣಿಸುತ್ತ ಕುರುಬರ ಬೀರನ ಮನೆ ಪಡಸಾಲೆಗೆ ಬಂದ ಸಂಗಯ್ಯ ' ಸೈಪಾಕ.... ' ಎಂದಿದ್ದ.

ತಾಯವ್ವ ಕುರುಬರ ಬೀರನ ಹೆಂಡತಿ. ಜೋಗಿಮರಡಿಯ ಸಾಧ್ವಿಯರಲ್ಲಿ ಇವಳೂ ಒಬ್ಬಳು. ಮನೆತುಂಬ ಮಕ್ಕಳು. ಬಿಡುವಿಲ್ಲದ ಕೆಲಸ. ಜ್ವರದಿಂದ ಬಳಲುತ್ತಿದ್ದ ಮಗಳಿಗೆ ಚೀಟಿಮಾಡಿಕೊಡುವಂತೆ ಭಿನ್ನವಿಸಿಕೊಂಡ ತಾಯವ್ವಳಿಗೆ ಬುದ್ಧಿ ಹೇಳುತ್ತ ಅವಳ ಮಾತನ್ನೂ ಲೆಕ್ಕಿಸದೆ ಮೇಲಿನಮನಿ ಡಾಕ್ಟರನ್ನು ಕರೆತಂದು ಮಗುವಿಗೆ ಚಿಕಿತ್ಸೆ ಮಾಡಿಸುತ್ತಾನೆ. ಆದರೆ ಚಿಕಿತ್ಸೆಯಿಂದ ಬದುಕುವ ಬದಲಾಗಿ ಮಗು ಸತ್ತು ಹೋಗಿದ್ದು ಅದರ ದುರ್ದೈವದೊಂದಿಗೆ ಡಾಕ್ಟರ ಮೇಲಿನಮನಿಯ ಕರಾಮತ್ತೂ ಸೇರಿತ್ತು. ಕಾಂಗ್ರೆಸ್ ಕಸದಂತೆ ಹಳ್ಳಿಗಳಲ್ಲಿ ಹಬ್ಬಿಕೊಳ್ಳುತ್ತಿರುವ ನಕಲಿ ವೈದ್ಯರಿಗೆಲ್ಲ ಡಾಕ್ಟರ್ ಮೇಲಿನಮನಿ ಒಬ್ಬ ಪ್ರಾತಿನಿಧಿಕ ವೈದ್ಯ. " ಡಾ. ಮೇಲಿನಮನಿ ಕೆಟ್ಟು ಹೋದ ಹಳೆಯ ಸ್ಟೆಥಸ್ಕೋಪೊಂದು ಶಿವನ ಕೊರಳಿಗೆ ಸಿಕ್ಕಿಸಿಕೊಂಡ ನಾಗರಹಾವಿನಂತೆ. ಅದು ಸದಾಕಾಲ ಡಾಕ್ಟರರು ಕುತ್ತಿಗೆಗೆ ಸಿಕ್ಕಿಸಿಕೊಂಡು. " ನಿಮ ಮೈಗಿ ಮುಟ್ಟಿದ ಕೂಡ್ಲೇ ನಿಮಗ ಯಾವ ಬ್ಯಾನಿ ಬಂದೈತಂತ ಆಗs ತಿಳಿದ ಬಿಡತೈತಿ...." [೫೪] ತನ್ನ ಸ್ಟೆಥಸ್ಕೋಪಿನ ಮಹತ್ವವನ್ನು ಹಳ್ಳಿಗರೆದುರು ಹೇಳುತ್ತ ಬೀಗುವ ಡಾಕ್ಟರ್. ಬೀರನ ಮಗಳನ್ನು ಬಲಿತೆಗೆದುಕೊಂಡದ್ದು ಹಳ್ಳಿಗಳಲ್ಲಿ ಹಬ್ಬುತ್ತಿರುವ ನಕಲಿವೈದ್ಯರ ಅವಾಂತರಗಳಿಗೆ ಸಾಕ್ಷಿಯಾದರೂ. ಕೊನೆಯಲ್ಲಿ

---

೫೨. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೮೧

೫೩. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೮೨

೫೪. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೮೮

ಕಾಕಾನ ಮೊಮ್ಮಗಳು ನಿರ್ಮಲಾಳ ನಾಡಿನೋಡಿ " ಜೀಂವ ಐತಿ...." ಎಂದೆನ್ನುತ್ತ ಮೇಲಿನಮನಿ ತನ್ನ ಅಸ್ತಿತ್ವವನ್ನು ಆ ಹಳ್ಳಿಗೆ ಸಾಬೀತುಪಡಿಸುತ್ತಾನೆ.

ಮಹಾರುದ್ರ ಜೋಗಿಮರಡಿಯ ಮತ್ತೊಬ್ಬ ಕಂಟಕ. ಯಾರದೋ ಹಣದಲ್ಲಿ ಎಲ್ಲಮ್ಮನ ಜಾತ್ರಿ ಮಾಡುವ ಆಸಾಮಿ. ರಾಜಕೀಯ ಪುಡಾರಿಗಳ ಬಾಲಂಗಾಸಿಯಂತಿರುವ ಈತ ಚುನಾವಣೆಯ ಸಂದರ್ಭಗಳಲ್ಲಿ ಅಳಿತಿಲ್ಲದ ಅಂಗಿತೊಟ್ಟು ಊರಮುಗ್ಧರನ್ನು ಅವರಿಗರಿವಾಗದಂತೆ ಮುದ್ದೆ ಮಾಡುವ ಕರಾಮತ್ತಿನ ಮನುಷ್ಯ. ನಾಗೇಶಿಯ ಅಳಿಯನಿಗೆ ನೌಕರಿ ಕೊಡಿಸಲು ಹಣಪಡೆದು 'ಗುಳುಂ' ಮಾಡಿದ್ದು ಪ್ರಸ್ತುತ ವಾತಾವರಣಕ್ಕೆ ಕೈಪಿಡಿಯಾದಂತಿದೆ. ಅವನ ಕರಾಮತ್ತುಗಳೆಲ್ಲವನ್ನು ತಿಳಿದಿದ್ದ ಕಾಡಪ್ಪ ಕಾಕಾ. ತಮಾ ರೊಕ್ಕಾ ಗಳಸೂದು ದೊಡ್ಡಲ್ಲ. ರೊಕ್ಕಾ ಯಾರ ಬೇಕಾದರೂ ಗಳಿಸಬಹುದೆಂದು ಅನೇಕ ಸಲ ತಿಳಿಹೇಳಿ ಮಾರುದ್ರನನ್ನು ಎಚ್ಚರಿಸಿದ್ದುಂಟು. ಇಂಥ ಮಾರುದ್ರನ ಮನೆಯಲ್ಲಿ ಸಂಗ ಭಿಕ್ಷಾ ನೀಡಿಸಿಕೊಂಡು ಅವನ 'ಅಹಂ'ಗೆ ಬೇಸರಿಸಿಕೊಳ್ಳುತ್ತಲೇ. ಮುತ್ತಕ್ಕನ ಬದುಕಿಗೆ ಸಾಂತ್ವನ ಹೇಳುತ್ತ ಅವಳಿಂದಲೂ ಉದಾರ ಭಿಕ್ಷೆ ಪಡೆದು. ಕೆಂಚಪ್ಪನ ಗಂಡನಂತಿರುವ ಜಕ್ಕವ್ವನ ಮನೆಗೆ ಬಂದಿದ್ದ. ಹೇಣತಿ ಕೈಯಾಗಿನ ಗೊಂಬಿಯಂತಿರುವ ಕೆಂಚಪ್ಪ. ಎಲ್ಲವ್ವಳ ಮುಂದೆ ಉಠಾಬಸಿ ತೆಗೆವ ದುರ್ಗಪ್ಪ ಇಬ್ಬರೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ತನ್ನ ಎಮ್ಮೆ ಹಿಂಡುವಂತೆ ಚೀಟಿಮಾಡಿಸಿಕೊಂಡ ಜಕ್ಕವ್ವ. ತನ್ನ ದಾಯಾದಿ ಎಮ್ಮಿ ಹಿಂಡದಂತೆಯೂ ಚೀಟಿಮಾಡಿಕೊಡೆಂದಾಗ. " ಜಕ್ಕವ್ವ. ಚಲೂ ಆಗ್ಲಾಕ ನಾ ಚೀಟಿ-ಬೂದಿ ಮಂತ್ರಿಸಿಕೊಡ್ತನು. ಆದ್ರ ಕೆಟ್ಟಿದ್ನ ನನಗ ಬರೂದುಲ್ಲವಾ" [೫೫] ಎಂದೆನ್ನುವಲ್ಲಿ ಸಂಗಯ್ಯನ ಸದ್ದಿನ ನಿಯತ್ತೇ ಅಡಗಿದೆ. ಜಕ್ಕವ್ವನ ಅನೀತಿಯ ಮಾತನ್ನು ಹೊತ್ತುಕೊಂಡೇ ಬಂದ ಸಂಗಯ್ಯನಿಗೆ ಮಲಗೊಂಡನ ಮನೇಲಿ ರತ್ನಾ ಕಾಲುಳುಕಿಸಿಕೊಂಡುದನ್ನು ಕೇಳಿ ಸುಮ್ಮನಿರಲಾಗಲಿಲ್ಲ. ಮನೆಯಿಂದ ಸಾರಂಗದ ಕೋಡು ತರಿಸಿ. ಅದರೊಂದಿಗೆ ಗಂಟರಿಶಿನ ತೇಯ್ದು ರಾಡಿ ತಯಾರಿಸಿ ರತ್ನಾಳ ಕಾಲಿಗೆ ಹಚ್ಚುವಂತೆಯೂ. ಚೆನ್ನಾಗಿ ಕಾವು ಕೊಡುವಂತೆಯೂ ಮಲಗೌಡನಿಗೆ ಹೇಳಿದ. ಕೆಟ್ಟುಹೋದ ಸ್ಟೆಥಸ್ಕೋಪಿನ ಡಾಕ್ಟರ ಚನ್ನೇಶಿಗಿಂತ ಸಂಗಯ್ಯನೇ ವಾಸಿ ಎನಿಸುತ್ತಾನೆ. ಅತೀ ಪ್ರೀತಿಯಿಂದ ಹೆಂಡತಿಯ ಉಪಚಾರ ಮಾಡುವ ಮಲಗೌಡನನ್ನು ಕಂಡು. " ಗಂಡ-ಹೆಣತಿ ಅಂದ್ರ ಹಿಂಗಿರಬೇಕು " ಎನ್ನುತ್ತಲೇ ಸಂಗಯ್ಯ ಕಾಕಾನ ಮನೆಯಡೆಗೆ ಕಾಲೆಳೆದ.

ಕಾಕಾನ ಉದಾರ ಮನಸ್ಸಿಗೆ ಮಾರುಹೋದ ಸಂಗಯ್ಯನ ಎದುರೇ ನಿಂತಿದ್ದ ಕಾಕಾನ ಮೊಮ್ಮಗಳನ್ನು ಕಂಡು. " ನಿರ್ಮಲಾ ಒಬ್ಬಾಕಿ ಬೆಳ್ಯಾಕ ಹತ್ಯಾಳ್ಲಾ. ಕಾಕಾ ನಮ ನಿರಮಲಾನಾಂಗ ನಮೂರಾಗ ಕಳಸುದ್ದ ಹಡ್ದೂಗ್ರು ಯಾರೂ ಇಲ್ಲ. ಈಕೀ ಮೋತಿ ಮ್ಯಾಲ ರಾಜಕಳಿ ಐತಿ. ರಾಜಕಳೀ.... ಬಸೂಗ ಹೇಳ್ಸಿ ಮಾಡಿಧಾಂಗ ಆದಾಳು...." [೫೬] ತನ್ನ ಸಂತೃಪ್ತಿಯನ್ನು ತೆರೆದಿಟ್ಟಿದ್ದ. ದಾರಿಮಧ್ಯದಲ್ಲಿ ತಮ್ಮ ಕರಿಬಸವನ ಹಾಗೂ ಕಿವುಡ

೫೫. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೦೯

೫೬. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೧೪

ಕಾಡೇಶಿಯ ಸರಗೋಲು ಆಕಳದ ವ್ಯಾಜ್ಯವನ್ನು ಬಗೆಹರಿಸಿದ ಸಂಗಯ್ಯ ಪಾರ್ವಾಳ ಗೌಡನ ಮನೆಮುಂದೆ ನಿಂತಿದ್ದ. 'ವಾಡೆ' ಮುಂದೆ ಬಿಟ್ಟ ಚಪ್ಪಲಿ ಕಂಡು. ಅದೂ ಚನಗಿರಿಗೌಡ ಮನೆನಲ್ಲಿಲ್ಲದ ಸಮಯದಲ್ಲಿ ದಂಗಾಗಿ ಹೋಗಿದ್ದ. ಪಾರ್ವಾಳಗೌಡನ ಹೆಂಡತಿ ರಮಾ ಇಳಿವಯದಲ್ಲೂ ಮತ್ತೇರುತ್ತಿರುವ ತನ್ನ ಕಾಮದ ಹಸಿವನ್ನು ಕಾಗಿಮೋತಿಯಿಂದ ಸಿಕ್ಕಸಿಕ್ಕಲ್ಲೆಲ್ಲ ಕಚ್ಚಿಸಿಕೊಂಡು ತೀರಿಸಿಕೊಳ್ಳುತ್ತಿದ್ದಳು. ಇದು 'ವಾಡೆಯ' ಸಾಂಪತ್ತಿಕ ಅಧಃಪತನದಂತೆ. ನೈತಿಕ ಅಧಃಪತನಕ್ಕೂ ಸಾಕ್ಷಿಯೆಂಬಂತಿತ್ತು. ಕುಡುಕ ಪಾರ್ವಾಳಗೌಡ ಚೈನೀ ಮಾಡುತ್ತ ಊರೂರು ಸುತ್ತುತ್ತಿದ್ದರೆ. ಕಾಗಿಮೋತಿ ಮಾಸ್ತರ ರಮಾಳೊಂದಿಗೆ ಮಗ್ಗುಲ ಬದಲಿಸುತ್ತಿದ್ದ. ಇದರಿಂದ ಕಾಗೀಮೋತಿಗೆ ದ್ವಿವಿಧ ಲಾಭವಿತ್ತು. ಒಂದಡೆ ರಮಾಳಂಥ ಸುಂದರಿಯ ಮೈಸುಖ ಸಿಕ್ಕರೆ ಇನ್ನೊಂದೆಡೆ ಅವನ ಕಿಸೆಯೂ ತುಂಬುತ್ತಿತ್ತು. ಹಿರಿಯಕ್ಕನ ಚಾಳಿ ಮನಿಮಂದಿಗೆಲ್ಲ ಎಂಬಂತೆ. ತಾಯಿಯ ಅನಾಚಾರವೆಲ್ಲ ಗೊತ್ತಿದ್ದ ಗೌಡನ ಎರಡನೇ ಮಗಳು ಪ್ರತಿಮಾ ಲಾ ಮುಗಿಸಿ ಮನೆಯಲ್ಲಿದ್ದ ತನ್ನಣ್ಣ ರಾವಸಾಹೇಬನೊಂದಿಗೆ. ಮೈಮರೆತು ಬೆತ್ತಲಾಗಿ ಬಿದ್ದುದನ್ನು ಕಂಡು ರಮಾ ದಂಗಾಗಿ ಹೋಗಿದ್ದಳು. ಆದರೆ ಎದೆಸೆಟೆಸಿ ಉತ್ತರ ಕೊಟ್ಟ ಪ್ರತಿಮಾಳೆದುರು ಇವಳ ಪುಂಗಿಯೇನೂ ನಡೆದಿರಲಿಲ್ಲ. ಕಾಗಿಮೋತಿಯ ಕಾರ್ಯಗಳು ಇನ್ನೂ ಭಯಂಕರವಾಗಿದ್ದವು. ಊರವರ ಕುರಿ-ಕೋಳಿಗಳನ್ನು ಕದ್ದು ಮಾಡಿದ ಅಡಿಗೆಯ ರುಚಿ ನೋಡುವವರಲ್ಲಿ ಕಾಗಿಮೋತಿಯೂ ಒಬ್ಬ. ಕಳ್ಳನಿಗೆ ಸುಳ್ಳ ಬೆಂಬಲಿಸಿದಂತೆ. "..... ಕಳ್ಳತನಾ ಮಾಡಿದ್ದು ಇಬ್ರಿಗೆ ಗೊತ್ತ ಒಬ್ಬ ಮಾಡಾಂವ್ಗ ಮತ್ತೊಬ್ಬ ದೇವ್ರಿಗೆ. ಹಾದರಾ ಮಾಡೂದು ಮೂರು ಮಂದಿಗಿ ಗೊತ್ತು"[೫೭] ಎಂದು ಹೇಳುತ್ತಾ ಕೇದಾರಿಯ ಅಡಿಗೆ ರುಚಿ ಚಪ್ಪರಿಸುತ್ತ ಹರಟುವ ಕಾಗಿಮೋತಿ 'ಮರಡಿ' ವಿಧ್ವಂಸಕರಲ್ಲಿಯೇ ತುಂಬ ಭಯಂಕರ ವ್ಯಕ್ತಿ. ಸಾಲಿಯನ್ನು ಧರ್ಮಸಾಲಿ ಮಾಡಿದ ಕಾಗಿಮೋತಿ ಮಾಸ್ತರ. ಮುಗ್ಧ ನಿರ್ಮಲಾಳನ್ನು ಚಾಕಲೇಟ ಕೊಡುವ ನೆಪದಲ್ಲಿ ಕೈ ಒತ್ತುತ್ತಾನೆ. ಅವಳಿಗಿಂತ ಹಿರಿಯವಯಸ್ಸಿನ ಮಕ್ಕಳು ತನಗಿದ್ದುದನ್ನು ಮರೆತು. ನಿರ್ಮಲಳ ಮುಗ್ಧತೆಯನ್ನು ಹೊಸಗಿಹಾಕಲು ಪ್ರಯತ್ನಿಸುತ್ತಲೇ ಇರುವ ಕಾಗಿಮೋತಿಯೊಬ್ಬ ಕಾದಂಬರಿಯಲ್ಲಿ 'ಕಚ್ಚೆಹರುಕ'ನಂತೆ ಚಿತ್ರಿಸಲ್ಪಟ್ಟಿದ್ದಾನೆ.

ಓಂಕಾರಿ ಜೋಗಿಮರಡಿಯ ಇನ್ನೊಬ್ಬ ತರಲೆ; ಕುಡುಕ. ಪಾರವ್ವ ಮುದುಕಿ ಓಂಕಾರಿಯ ತಾಯಿ; ಜೋಗಿಮರಡಿಯ ಹಿರಿಯ ಸೂಲಗಿತ್ತಿ. ಉಂಡುಟ್ಟು ಸುಖವಾಗಿರುವಷ್ಟು ಹೊಲಮನೆಯಿದೆ. ಆದರೆ ಮಗನ ಕೆಟ್ಟ ಚಾಳಿಗಳಿಗೆ ಬೇಸತ್ತು ಪಾರವ್ವ ಮಮ್ಮಲ ಮರುಗುತ್ತಾಳೆ. ಸಂಗಯ್ಯನು ಕೇಳಿದ ಸೊಸೆಯ ವಿಚಾರ ಮತ್ತಷ್ಟು ಖಿನ್ನಳನ್ನಾಗಿಸಿತು. "ಸಸೀ ಸಮಾಚಾರ ಏನ ಕೇಳ್ತಿಯಾ ತಮಾ ಇದೊಂದ ನನ ಹೊಟ್ಯಾಗ ಹಾಂವ ಹುಟ್ಟಿಧಾಂಗ ಹುಟ್ಟೇತಿ. ಹಿಂದಿನ ಜನ್ಮದಾಗ...."[೫೮] ಹೇಳುತ್ತಲೇ ಮಗನ ಬಗ್ಗೆ ಸಂತಪ್ತಗೊಂಡಿದ್ದಳು. ಬಸಲಿಂಗನ ಬಲಗೈ ಬಂಟನಾದ ಓಂಕಾರಿ. ರತ್ನಾ ಅವನಿಗೆ ಒಲಿವಂತೆ ಚೀಟಿ ಮಾಡಿಸಲು ಕಲ್ಲಟ್ಟಿಗೆ ಹೋಗಿ

---

೫೭. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೪೯

೫೮. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೩೬

ಬರುವಾಗ ' ತರ್ ' ಆಗಿ ಬಂದು. ಮರಡಿಯಲ್ಲಿಳಿದಾಗ. ಚೀಟಿ ನೆನಪಾಗಿ ಕಿಸೆತಡಕಾಡಿದರೆ. ಅದು ಬರಿದಾಗಿತ್ತು. ಈರೇಶಿ ಚಾದಂಗಡಿ ಮುಂದೆ ನಿಂತು ಇದ್ದುದೆಲ್ಲವನ್ನು ಕಕ್ಕಿದ್ದ. ಈರೇಶಿ-ನಿಂಬಿಯರನ್ನ ಬಿಟ್ಟು ಬೇರಾರು ಇಲ್ಲದ್ದು ಅವನಿಗೆ ಉಪಕರಿಸಿತ್ತು. ಹೀನ ಚರಿತ್ರೆಯ ಮಗನನ್ನು ಸರಾಪಿಸುತ್ತಿರುವ ಪಾರವ್ವ ಮುದುಕಿಗೆ ಸಮಾಧಾನ ಹೇಳಿದ ಸಂಗಯ್ಯನಿಗೆ ನೋವು ತರಿಸಿತ್ತು: ಅದರೊಂದಿಗೆ ಓಂಕಾರಿಯ ಉಢಾಳತನಕ್ಕೆ ರೋಸಿಹೋಗಿದ್ದ. ಗ್ಯಾನೋಬಾನ ಮನೆಗೆ ಬಂದಾಗ ಆಶ್ಚರ್ಯವೊಂದು ಕಾದಿತ್ತು. ಬಸಲಿಂಗ. ಓಂಕಾರಿ. ಮಾರುದ್ರ. ಕಾಗಿಮೋತಿ ಮೊದಲಾದ ಊರ ಪುಂಡರ ಪುಂಡಾಟಿಕೆಗೆ ಬೇಸತ್ತ ನಾಟಕದ ಆ ದಂಪತಿಗಳು ' ಜೋಗಿಮರಡಿಯನ್ನು ' ಬಿಟ್ಟುಹೋಗಲು ತಯಾರಿ ನಡೆಸಿದ್ದರು. ಸಂಗಯ್ಯನಿಗೆ ಕಾರಣ ತಿಳಿದು ನೋವು ಎನಿಸಿತ್ತು: ಅದರೊಂದಿಗೆ ' ಊರ ಅಭಿಮಾನ 'ವೂ ಕಾಡಿತ್ತು. ಅದಕ್ಕೆಂದೇ. ಇದೇನು ಪರದೇಶಿ-ಪುಂಡರ ಊರಲ್ಲ. ಇನ್ನಷ್ಟು ತಾಳ್ಮೆಯಿಂದಿರುವಂತೆ ಅವರಿಗೆ ಸಮಾಧಾನ ಹೇಳಿ. ಕೇದಾರಿಯ ಮನೆಯತ್ತ ಹೋಗಿದ್ದ. ಅಲ್ಲೊಂದು ಪುಂಡರ ಗುಂಪೇ ಸೇರಿತ್ತು. ನಿಲ್ಲಲಾಗದೆ. ಅಲ್ಲಿನ ಚರಿತ್ರೆಯನ್ನೆಲ್ಲ ಕಾಕಾನಿಗೆ ಹೇಳಬೇಕೆಂದು ಮನಸ್ಸಿನಲ್ಲಿಯೇ ಗೇನಿಕೆ ಹಾಕಿ ಅಲ್ಲಿಂದ ಬೇಗ ದಾಟಿದ. ಕೇದಾರಿಯ ಮನೆಯಿಂದ ಹತ್ತುಹೆಜ್ಜೆ ಮುಂದೆ ಹೋಗಿದ್ದ ಸಂಗಯ್ಯನಿಗೆ ಬೀರನ ಮಗಳ ಸಾವಿನ ಸುದ್ದಿ ಅಂದಿನ ಕಂತುಭಿಕ್ಷೆಗೆ ವಿರಾಮ ನೀಡಿತ್ತು.

## ' ಮರಡಿ 'ಯಲ್ಲಿ ಕೊಡಲಿ-ಕುಡಗೋಲುಗಳ ಹಾರಾಟ

ಕಾಡಪ್ಪ ಕಾಕಾ ಊರಿಗೆಲ್ಲ ಕಕ್ಕನಾಗಿದ್ದರೂ. ಅವನ ಬೆನ್ನಹಿಂದೆ ಊರಲ್ಲಿ ದುಷ್ಟಅಷ್ಟಪದಶಕ್ತಿಗಳು ಅವನನ್ನು ಮೀರಿ ಬೆಳೆಯುತ್ತಿದ್ದವು. ಬಸಲಿಂಗ ರತ್ನಾಳನ್ನು ಬೆಂಬತ್ತಿ ಕಾಡುತ್ತಿದ್ದುದು ಮೈದುನ ಪರಗೊಂಡನಿಗೆ ಗೊತ್ತಾಗಿ. ಆತ ಅತ್ತಿಗೆಯ ಚಲನವಲನಗಳ ಮೇಲೆ ನಿಗಾ ಇಟ್ಟ. ಕೆಲವು ಸಲ ಸಾಮ್ಯವಾದ ಘಟನೆಗಳೂ ಜರುಗುತ್ತವೆ. ಅತ್ತಿಗೆ ಹೊಲದಮೂಲೆಯಲ್ಲಿದ್ದಾಗ ಬಸಲಿಂಗ ಸೈಕಲ್ ಗಂಟೆ ಬಾರಿಸುತ್ತ ಹಾಯ್ದಾಡುತ್ತಿದ್ದುದು ಅವನಲ್ಲಿ ಮತ್ತಷ್ಟು ಸಂಶಯ ಮೂಡುವಂತೆ ಮಾಡುತ್ತದೆ. ಬಸಲಿಂಗನ ಮೇಲೆ ಕರಕರ ಹಲ್ಲುಕಡಿಯುತ್ತಾನೆ. ಹೆಂಡತಿ ಸೇವಂತಿಯಿಂದ ನೀತಿಕಥೆ ಕೇಳುತ್ತ ಮುಗ್ಧನಂತಿರುವ ಪರಗೌಡ ಅಷ್ಟೇ ರೌದ್ರನೂ ಆಗಿದ್ದ. ಪರಗೌಡ ಹೆಂಡತಿ ಕೊಟ್ಟ ಚಾ ಕುಡಿಯುತ್ತಿರುವಾಗ ಈರೇಶಿ-ನಿಂಬಿ ಹೇಳಿದ ಸಂಗತಿ ನೆನಪಾಗಿ ಕೊನೆ ಗುಟುಕು ವಿಷದಂತೆನಿಸಿ ಉಗುಳಬೇಕೆಂದುಕೊಳ್ಳುತ್ತಾನೆ. " ಹೆಣ್ಣು ! ಹೌದು ಆಕೆ ರಾಕ್ಷಸಿಯೂ ಹೌದು ದೇವತೆಯೂ ಹೌದು " [೫೯] ಎನ್ನುತ್ತ ತನ್ನಲ್ಲಿಯೇ ಹಲ್ಲು ಕಡಿದಿದ್ದ: ಪ್ರಸಂಗಕ್ಕಾಗಿ ಕಾದುಕುಳಿತಿದ್ದ. ಗೆಳೆಯ ಇರಬದ್ರನೊಂದಿಗೆ ಮನೆಯತ್ತ ಬರುವಾಗೊಮ್ಮೆ ಪರಗೊಂಡನಿಗೆ ಬಸಲಿಂಗನ ಸೈಕಲ್ ಗಂಟೆ ಕೇಳಿಸುತ್ತದೆ. " ಇರಬದ್ರಾ ಇಂಥ ಹಾದರ್‍ಗಿತ್ತಿ ಮಕ್ಕಳ್ನ ಗಂಟ್ಲಾ ಸೀಳಿ ರಕ್ತಾ ಕುಡಿಬೇಕನ್ನಸೈತಿ.... ಈ ಚೀಟಿ-ಚಪಾಟಿ ಮಕ್ಕಳ್ಗಿ ಕೊಡ್ಲಿ-ಕುಡಗೋಲಾ ಕಾಣೂದಿಲ್ಲೇನೋ " [೬೦] ಎಂಬಲ್ಲಿ ಭವಿಷ್ಯದ ಆಯುಧಗಳ ಹಾರಾಟವೇ ಕಾಣುತ್ತದೆ.

---

೫೯. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೬೨

೬೦. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೨೬

ಮೈಕೈ ತುಂಬಿಕೊಂಡು ಬೆಳೆಯುತ್ತಿರುವ ನಿರ್ಮಲಾಳನ್ನು ಕಂಡು ಉಗುಳು ನುಂಗುತ್ತ ಅವಳ ಮೈಕೈ ಮುಟ್ಟುತ್ತ ಸುಖಿಸುತ್ತಿದ್ದ. ತನ್ನ ಗುರುಗಳ ಈ ವಿಚಿತ್ರ ರೀತಿಯನ್ನು. " ಮಾಸ್ತರ ಚಲೂ ಅಂತ ತಿಳಿದಿದ್ನಿ. ಆದ್ರ ಇಷ್ಟು ಕೆಟ್ಟಾಂವಾ ! ಯಾವಾಗ್ಲೂ ಒಂಥರಾ ನೋಡ್ತಿರ್‍ತಾನ.... ಮೈಕೈ ಮುಟ್ಟಿರ್‍ತಾನ.... ಹಾಂಗ್ಯಾಕ ?"[೬೧] ಎಂದು ತನ್ನನ್ನೇ ತಾನು ಪ್ರಶ್ನಿಸಿಕೊಳ್ಳುತ್ತಾಳೆ. ಊರಲ್ಲಿ ತಾರಿಯನ್ನು ಮುಂಬೈಯತ್ತ ಕಳಿಸದೇ ಲಕ್ಕನ ಕೊರಳಿಗೆ ಕಟ್ಟುವಂತಹ ದಾಯಾದಿಗಳಾದ ಬಾಳು ಗಿರಿಮಲ್ಲರ ವ್ಯಾಜ್ಯ ಬಗೆಹರಿಸಿ ಪಾಲು ಕೊಡುವಂತೆ ಮಾಡಿದ್ದು. ಇಂಥ ಸಾಮಾಜಿಕ ಪ್ರಗತಿಪರ ಕಾರ್ಯಗಳು ನಡೆಯುತ್ತಿದ್ದಂತೆಯೇ. ಮಧ್ಯದಲ್ಲಿ ಕೊರವರ ಮಾಯವ್ವನ ಗುಳದಾಳಿ ಪ್ರಸಂಗವೊಂದು ನಡೆದು ಹೋಗುತ್ತದೆ. ಇದು ಊರಲ್ಲಿ ರಿಕಾಮಿ ಊಟ ಮಾಡುವವರಿಗೆ ಒಂದು ಸಂಕೇತದಂತೆ ಕಾಣುತ್ತದೆ.

ಹೆಣ್ಣು - ಹೆಂಡ - ಕಂಡಗಳ ಬೆನ್ನುಹತ್ತಿದ ಊರಪುಜಾರಿ ಗುರುಪಾದನ ಅನಾಚಾರಗಳು ದಿನೇ ದಿನೇ ಬೆಳೆಯುತ್ತ ಹೋಗುತ್ತವೆ. ಗುರುಪಾದನ ಅವಾಂತರಗಳಿಗೆ ಬೇಸತ್ತ ಕಾಡಪ್ಪ ಕಾಕಾ ಗುಡಿಯ ಪೂಜಾರಿಕೆಯನ್ನು ಸಂಗಯ್ಯನಿಗೆ ಒಪ್ಪಿಸುತ್ತಾನೆ; ಕಂಬಿ ತೆಗೆದುಕೊಂಡು ಶ್ರೀಶೈಲಕ್ಕೂ ಅವನನ್ನೇ ಕಳಿಸುತ್ತಾನೆ. ಇದನ್ನೆಲ್ಲ ಅರಿತುಕೊಂಡ ಗುರುಪಾದ ಒಂದು ದಿನ ಪೂಜಿಗಾಗಿ ಬಂದ ಸಂಗಯ್ಯನಿಗೆ " ಖಬರ್‌ದಾರ್ ಒಳಗ ಬರಾಂವ ಯಾಂವಂವ....? ಪೂಜಿ ಮಾಡೂ ಹಕ್ಕ ನಂದೈತಿ.... ಒಳಗ ಬರಾಕ ಬ್ಯಾರೆದವರ‍್ಗಿ ಹಕ್ಕ ಇಲ್ಲಾ...."[೬೨] ಎಂದು ಗರ್ಭಗುಡಿಯಲ್ಲಿ ಕೂತು ಹಾಕಿದ ಗುಟರಿಗೆ. " ಗುರುಪಾದಾ. ಗರ್ಭಗುಡಿ ಬಿಟ್ಟ ನೀ ಹೊರ‍್ಗ ಬಾ. ನೀ ಇನ್ಮುಂದ ದೇವ್ರ ಪೂಜಿ ಮಾಡೂ ಕಾರಣೆಲ್ಲ. ಸಂಗಯ್ಯ ಮಾಡ್ತಾನು. ಅವ್ನs ಪರೂತಕ ಕಂಬೀ ವಯ್ತಾನು.... ನಿನ್ನಲ್ಲಿ ನೀತಿ ಉಳಿದಿಲ್ಲ. ನೀ ಇಂತಾ ಪವಿತ್ರ ಕೆಲಸಕ್ಕೂ ಯೋಗ್ಯ ಇಲ್ಲ-ಇದ್ನ ಬೆಳಸಬ್ಯಾಡ.... ಈಗ ಹೊರ‍್ಗ ಬಾ "[೬೩] ಕಾಕಾನೇ ನೇರವಾಗಿ ಬೈದಿದ್ದ. ಅನಿವಾರ್ಯವಾಗಿ ಗುರುಪಾದ ಬಾಲಮುದುಡಿಸಿಕೊಂಡು ಹೊರಹೊರಟ ಅವನನ್ನು ಕುರಿತು ಊರಮಕ್ಕಳೆಲ್ಲ. ಸೂಳ್ಯಾರ‍್ಗಿ ಮಾಡೂ ಗುರುಪಾದಾ....! ಸೆರೆ ಕುಡ್ಯೂ ಗುರುಪಾದಾ....!! ಕುರಿ ತಿನ್ನೂ ಗುರುಪಾದಾ....!!! ಎಂದು ಪಲ್ಲವಿ ಹಾಡುತ್ತ ನಿಂತುದು ಆ ಪ್ರಸಂಗಕ್ಕೆ ಮತ್ತಷ್ಟು ಕಳೆ ಕಟ್ಟಿದಂತಿತ್ತು. ಅವಮಾನಗೊಂಡ ಗುರುಪಾದ ಕಾಗಿಮೋತಿಯ ಸಲಹೆಯಂತೆ. ಕೇದಾರಿ-ಓಂಕಾರಿ-ಬಸಲಿಂಗ ಹೀಗೆ ಊರಲ್ಲಿದ್ದ ಪುಂಡಗುಂಪೊಂದನ್ನು ಕಟ್ಟಿ ಅವರಿಗೆಲ್ಲ ಗುಂಡು-ತುಂಡುಗಳ ರುಚಿಕಾಣಿಸಿ ' ಮರಡಿ 'ಯಲ್ಲಿ ಕೊಡಲಿ-ಕುಡಗೋಲುಗಳನ್ನು ಹಾರಾಡಿಸಲು ಸಾಕಷ್ಟು ರಂಗತಾಲೀಮು ನಡೆಸಿದರು. ಒಂದು ದಿನ ಪುಂಡರ ಈ ಗುಂಪು ಕುಡಿದು ' ತರ್ ' ಆಗಿ ಗುಡಿಯತ್ತ ಆಯುಧಸಮೇತರಾಗಿ ಬಂದು ಜಮಾಯಿಸುತ್ತಾರೆ. ಈ ಮಧ್ಯೆ ಕಾಗಿಮೋತಿ ಮಾಸ್ತರ ಪರೀಕ್ಷೆ ಮುಗಿಸಿದ ವಿದ್ಯಾರ್ಥಿಗಳಿಗೆಲ್ಲ ವನಭೋಜನಕ್ಕಾಗಿ ಯುಗಾದಿಯಂದು ಕಲ್ಲುಗುಡ್ಡದತ್ತ ಕರೆದುಕೊಂಡು ಹೋಗಿದ್ದ. ಇತ್ತ

---

೬೧. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೧೭೮

೬೨. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೩೦-೨೩೧

೬೩. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೩೧

ಕಾಕಾ. ಲಕ್ಕ-ತಾರಾ ಇವರ ಮದುವೆಗಾಗಿ ತ್ವಾಟದ ಮನೆಯಲ್ಲಿ ಕೂಡಿದ್ದರು. ಊರೆಲ್ಲ ಸಡಗರ-ಸಂಭ್ರಮದಿಂದ ಯುಗಾದಿಪಾಡ್ಯವನ್ನಾಚರಿಸುತ್ತಿದ್ದರೆ. ಗುರುಪಾದ ತನ ಮಂದಿನ ಕರಕೊಂಡ ಗುಡಿ ಹೊಕ್ಕ. ಅವ್ರೆಲ್ಲಾ ಕೊಡ್ಲಿ ಕುಡಗೋಲಾ. ಬಡಿಗಿ ತಗೊಂಡ ತಯಾರಾಗಿ ನಿಂತಿದ್ದರು. ಯಾಂವ ಗಂಡ ಮಗಾ ಅದಾನ ಬರ್ಲಿ ಎಂದೆನ್ನುತ್ತ ಎಲ್ಲದಕ್ಕೂ ತಯಾರಾಗಿಯೇ ಗುರುಪಾದಾ ಊರಲ್ಲಿ ಹೂಲಿ ಎಬ್ಬಿಸಿದ್ದ. ಸುದ್ದಿ ತಿಳಿದ ಕಾಕಾ ಓಡೋಡುತ್ತ ಗುಡಿಯತ್ತ ಬಂದು ನೋಡಿದರೆ. ಊರಿಗೆ ಊರೇ ಬೆಂಕಿ ಹತ್ತಿ ಉರಿಯುವ ಪ್ರಸಂಗ ಬಂದೊದಗಿತ್ತು. ಎಷ್ಟು ಹೇಳಿದರೂ ಕೇಳದ ಗುರುಪಾದಾ ನಿಶೆದಲ್ಲಿ ಕುಣಿಯುತ್ತ ಊರವರಿಗೆಲ್ಲ ಸವಾಲೆಸೆಯುತ್ತಲೇ ಇದ್ದ. ಕಾಕಾನ ಉಪದೇಶವೆಲ್ಲ ಜನರ ಗದ್ದಲವಲ್ಲಿ ಕರಗಿ ಹೋಗುತ್ತಿತ್ತು. ಮಲಗೊಂಡನ ತಾಕೀತನ್ನು ಲೆಕ್ಕಿಸದೆ ಪರಗೌಡ 'ಫಟ್' ಅಂತ ಗುರುಪಾದನ ಬಾಯಿಗೆ ಒಂದೇಟು ಕೊಟ್ಟೇ ಬಿಟ್ಟಿದ್ದ. ಬಾಯಿಂದ ಬಳಬಳ ರಕ್ತಸುರಿಸುತ್ತ ಗುರುಪಾದ ನೆಲಕ್ಕೆ ಬಿದ್ದಾಗ. ಅವನ ಬೆಂಬಲಿಗರೆಲ್ಲ ಪಕ್ಷಾಂತರಿಗಳಾಗಿದ್ದರು. ಬಸಲಿಂಗ ಸಾವಕಾಶವಾಗಿ ಅಲ್ಲಿಂದ ಜಾರಿಕೊಂಡು ಮಲಗೌಡನ ಮನೆ ಸುತ್ತಮುತ್ತ ಕೆಮ್ಮುತ್ತ-ಕ್ಯಾಕರಿಸುತ್ತ ನಡೆದಾಡುತ್ತಿದ್ದ: ಅಷ್ಟರಲ್ಲಿ ಪೋಲಿಸರು ಪರಗೌಡನನ್ನು 'ಅರೆಸ್ಟ' ಮಾಡಿ ಜಿಪಿನಲ್ಲಿ ಕರೆದುಕೊಂಡು ಹೋದರು. ಈ ಸುದ್ದಿ ತಿಳಿಸಲು ಬಂದ ಶರಣನಿಗೆ ಕತ್ತಲಲ್ಲಿ ಸುಳಿದಾಡುವ ಆಕಾರ ಗುರುತು ಸಿಕ್ಕು. ಜಪ್ಪಿಸಿನಿಂತು ಬಸಲಿಂಗನ ತಲೆಗೆ ಬೀಸಾಗಿ ಒಂದು ಕಲ್ಲು ಎಸೆದ: ಅದು ಹಣ್ಣೇ ಆಗಿತ್ತು.

ಇತ್ತ ವನಭೋಜನಕ್ಕೆ ಹೋದ ಮಗಳು ಬೇಗ ಮನೆಗೆ ಬಾರದೆ ಗೌರಕ್ಕ ಅಳುತ್ತ ಕೂಡ್ರುತ್ತಾಳೆ. ಸುದ್ದಿ ತಿಳಿದ ಕಾಕಾ ಅವನೊಂದಿಗಿದ್ದವರೆಲ್ಲ ಗಾಬರಿಯಾಗಿ ನಿರ್ಮಲಾಳನ್ನು ಹುಡುಕುತ್ತ ಹೊರಟ ಅವರಿಗೆ. "ಕಾಕಾನ ಮೊಮ್ಮಗಳು ಅಲ್ಲಿ ಗುಡ್ಡದ ವಾರ್‍ಯಾಗ ಸಾಧೂನ ಗವ್ಯಾಗ ಬಿದ್ದೈತಿ.... ಯಾರ್ ಏನ್ ಮಾಡ್ಯಾರೋ. ಜೀವಐತಿಲ್ಲೊ ತಿಳೀಲಿಲ್ಲ...."[೬೪] ಎಂದೆನ್ನುತ್ತಲೇ ಗಡಬಡಿಸಿ ಹೇಳಿದ ಬೀರನ ಮಾತುಗಳು ಬರಿಸಿಡಿಲಂತಾಗಿದ್ದವು. ರಾಚಪ್ಪ. ಬಾಳು. ಹುಸೇನಿ. ಲಗಮಣ್ಣ. ನಾಗೇಶಿ. ಬಡಿಗೇರ ದತ್ತ. ಎಲ್ಲರೂ ಸೇರಿಕೊಂಡು ಸಾಧೂನ ಗವಿಗೆ ಹೋಗಿ ನೋಡುತ್ತಾರೆ; ನಿರ್ಮಲಾಳ ಲಂಗವೆಲ್ಲ ಹರಿದು ರಕ್ತಸಿಕ್ತವಾಗಿತ್ತು. ಜಂಪರ್ ಕಿತ್ತು ಹೋಗಿತ್ತು.... ಮೈಯೆಲ್ಲ ಪರಚಿಕೊಂಡಂತೆ ನೆತ್ತರು ಹೆಪ್ಪುಗಟ್ಟಿತ್ತು. ಆ ಹೃದಯವಿದ್ರಾವಕ ದೃಶ್ಯ ನೋಡಿದ ಹುಸೇನಿ ತಡೆಯದೆ. "ಇಸ್ಸೀಮಾಕ. ಯಾರೋ ಹುಡ್ಗೀನ ಕೆಡ್ಸ್ಯಾರು...."[೬೫] ಎಂದು ಕರಕರ ಹಲ್ಲು ಕಡಿದಿದ್ದ. ಕಾಗಿಮೋತಿಯ ಪೈಶಾಚಿಕ ಕೃತ್ಯದಿಂದ ಪ್ರಜ್ಞಾಹೀನಳಾದ ನಿರ್ಮಲಾ. ಅಲ್ಪ ಸಮಯದ ನಂತರ 'ಅವ್ವಾ....!' ಎಂದು ನರಳಿದ್ದು ಎಲ್ಲರಿಗೂ ಎದೆಯಲ್ಲಿ ಎದೆ ಬಂದಂತಾಗಿತ್ತು. ಸಾಧುಗವಿಯ ಹೃದಯ ಹಿಂಡುವ ದೃಶ್ಯದಿಂದಲೇ ಕಾದಂಬರಿ ತನ್ನ ಮೈಮುಚ್ಚಿಕೊಳ್ಳುತ್ತದೆ.

'ಜೋಗಿಮರಡಿ' ಯೊಂದು ಪಾತ್ರಪ್ರಧಾನವಾದ ಕಾದಂಬರಿ. ಸಾಮಾಜಿಕ ವ್ಯವಸ್ಥೆ ಹದಗೆಟ್ಟುಹೋದ ಸಂದರ್ಭದಲ್ಲಿ ಬದಲಾಗುತ್ತಿರುವ ಹಳ್ಳಿಯ ಸಾಮಾಜಿಕ ಸ್ಥಿತ್ಯಂತರಗಳನ್ನು. ಅದು ಪತನದತ್ತ ಸಾಗುವ ಪರಿಯನ್ನು

---

೬೪. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೪೯

೬೫. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೨೫೦

ಬೆಳಗಲಿಯವರು ಚೆನ್ನಾಗಿ ಗುರುತಿಸಿದ್ದಾರೆ. ಶರಣ. ಸಂಗ. ಗ್ರಾಮಭಂಗ-ಗಳೆಂಬ ಮೂರು ಸ್ತರಗಳಲ್ಲಿ ಸಾಗುವ ಕಾದಂಬರಿಯ ಕಥೆ ಇತಿಹಾಸವನ್ನು ಪುನಃ ಪ್ರತಿಷ್ಠಾಪಿಸುತ್ತ. ತಾನೇ ಒಂದು ಇತಿಹಾಸವಾಗುವ ವೈಪರೀತ್ಯದ ವ್ಯವಸ್ಥೆಯನ್ನು ಹಾಸುಹೊಕ್ಕಾಗಿ ಮೂಡಿಸುವಂತಿದೆ: ಮೂಡಿನಿಂತಿದೆ. ಬೆಳಗಲಿಯವರು ಸ್ವತಃ ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯ ಬದುಕನ್ನು ಕಂಡುಂಡವರಾಗಿದ್ದುದರಿಂದ ಹಳ್ಳಿಯ ವಿವಿಧ ಸ್ತರಗಳ ಜನರ ಗುಣ-ಸ್ವಭಾವಗಳನ್ನು ಇದ್ದಕ್ಕಿದಂತೆ ಬರೆದಿದ್ದಾರೆ. ಕಾದಂಬರಿಕಾರರು ಎಂಥ ಸಂದರ್ಭಗಳಲ್ಲಿಯೂ ಉದ್ವೇಗಗೊಳ್ಳದೆ. ಬರೆಯಬಲ್ಲರೆಂಬುದಕ್ಕೆ ಕಾದಂಬರಿಯಲ್ಲಿ ಅವರು ಅನಾವರಣಗೊಳಿಸಿದ ಸಮಾಜ. ಪಾತ್ರಗಳೇ ಸಾಕ್ಷಿ. ಕಾಡಪ್ಪ ಕಾಕಾ 'ಮರಡಿ'ಗೆ ಜೀವನಾಡಿಯಾಗಿದ್ದಂತೆ. ಸಾತ್ವಿಕತೆಯ-ಪ್ರೀತಿಯ ಸಾಕಾರಮೂರ್ತಿ. ಹಳ್ಳಿಯ ಹಲವು ಹತ್ತು ಸಮಸ್ಯೆಗಳಾದ ದೇವದಾಸಿ ಪದ್ಧತಿ. ಅಸ್ಪೃಶ್ಯತೆ. ಹಾದರ. ಕಳ್ಳತನ. ಸುರಾಪಾನ. ಧರ್ಮಭ್ರಷ್ಟತೆ. ವಂಚನೆ. ದಾಯಾದಿಗಳ ವೈರತ್ವ. ಸಂಬಂಧಿಗಳ ಪ್ರಾಸಂಗಿಕ ವೈಮನಸ್ಸು– ಇವುಗಳನ್ನೆಲ್ಲ ವೈಚಾರಿಕ-ತಾತ್ವಿಕ-ನೈತಿಕ ತಳಹದಿಯ ಮೇಲೆ ಬಗೆಹರಿಸುವ ಹಿರಿಯ ಸಮಾಜ ಸುಧಾರಕನಂತೆ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿದ್ದಾನೆ.

ಶರಣ-ಸಂಗಯ್ಯ. ಕಾದಂಬರಿಯಲ್ಲಿನ ಶಕ್ತಿಯುತ-ಯುಕ್ತಿಯುತ ಪಾತ್ರಗಳು. ಹಳ್ಳಿಯ ಆಯಗಾರರಾದ. ಶರಣ-ಸಂಗಯ್ಯರು ಊರು ಸುತ್ತುವುದು ಇವರ ವೃತ್ತಿ. ಊರಿನ ಆಗುಹೋಗುಗಳಿಗೆ ಸ್ಪಂದಿಸುವುದು ಇವರ ಪ್ರವೃತ್ತಿ. ಇವರ ಈ ಪ್ರವೃತ್ತಿಯಲ್ಲಿಯೇ ಕಾದಂಬರಿಯ ಕಥಾನಿರೂಪಣೆಯಡಗಿದೆ. ಹಳ್ಳಿಯೊಂದರ ವಿವಿಧ ವೃತ್ತಿ-ಪ್ರವೃತ್ತಿಯ ಜನರನ್ನೆಲ್ಲ ಕಾದಂಬರಿಯ ಒಡಲಾಳದಲ್ಲಿ ತುಂಬಿ. ಅವರವರ ಗುಣಸ್ವಭಾವದ ಚಿತ್ರಣಗಳಲ್ಲಿಯೇ ಕಾದಂಬರಿ ಅರಳಿಸಿದಂತಿದೆ. 'ಜೋಗಿಮರಡಿ' ಕಾಡುಹಳ್ಳಿಯೊಂದರ ಕಥೆಯಾದರೂ. ದೇಸಗತಿ ದರ್ಬಾರದ ಪಳಯುಳಿಕೆಗಳನ್ನು ತೋರಿಸುವಲ್ಲಿ ಯಶಸ್ವಿಯಾಗಿದೆ. ಪಾರ್ವಾಳಗೌಡನು. ಚೈನಿಯಿಂದಾಗಿ ತನ್ನೆಲ್ಲ ಆಸ್ತಿ-ಅಂತಸ್ತನ್ನೆಲ್ಲ ಕಳೆದುಕೊಂಡು. ಹೆಂಡತಿ ಹಾದರ ಮಾಡಿದರೂ ಕಣ್ಮುಚ್ಚಿ ಕುರುಡನಂತೆ ಇರುವ ಚನಗಿರಿಯ ಪಾತ್ರವಾಗಲಿ. ಮಕ್ಕಳೇ ಅನೈತಿಕ ಕೂಪದಲ್ಲಿ ಬಿದ್ದು ಹೊರಳಾಡುವ ಚಿತ್ರಣಗಳು. ಚಂದ್ರಶೇಖರ ಕಂಬಾರರ 'ಸಿಂಗಾರೆವ್ವ ಮತ್ತು ಅರಮನೆ' ಯನ್ನು ನೆನೆಪಿಸಿಕೊಡುವಷ್ಟು ಸಶಕ್ತವಾಗಿದೆ. ಲೇಖಕರ ಮೆಚ್ಚಬೇಕಾದ ಸಂಗತಿಯೆಂದರೆ. ತಾವು ನೈತಿಕ-ಅನೈತಿಕ ಸಂಬಂಧಗಳನ್ನು ಚಿತ್ರಿಸುವಾಗ. ಶೀತಲ ಸಂಘರ್ಷವನ್ನು ಚಿತ್ರಿಸುವಾಗ. ಎಲ್ಲೂ ಭಾವುಕರಾಗಿ. ಯಾವುದರ ಪರ ವಕಾಲತ್ತು ವಹಿಸದೆ ಸಂಯಮದಿಂದಲೇ ಕಾದಂಬರಿ ರಚನೆಗೈದುದು.

ಶಾಂತವಾಗಿರುವ ಹಳ್ಳಿಯೊಂದು ಹಾಳಾಗಲು ಬಸಲಿಂಗನಂಥ. ಕಾಗಿಮೋತಿಯಂಥ. ದೇವರನ್ನು ಮೈಲಿಗೆ ಮಾಡುವ ಗುರುಪಾದನಂಥವರು. ಒಂದೆರಡು ಜನರಿದ್ದರೆ ಸಾಕು. ಗ್ಯಾನೋಬಾ-ಅಂಬಾರಂತೆ ದಾಂಪತ್ಯ ನಡೆಸುವವರಿದ್ದಂತೆ. ಕಾಗಿಮೋತಿ-ರಮಾರಂಥ ಹಾದರಮಾಡುವ ಕಾಮಪಿಪಾಸುಗಳು ಜೋಗಿಮರಡಿಯಲ್ಲಿದ್ದಾರೆ. ಕಾದಂಬರಿಯ ಸಾರ್ಥಕತೆಯಿರುವುದು. ಅದು ಬಿಚ್ಚಿಡುವ ಸಾಮಾಜಿಕ ಚಿತ್ರಣಗಳಲ್ಲಿ. "ದೇಸೆಲ್ಲಾ ಇಲೆಟ್ರಿ ದೀಪ ಬಂದ್ರು ನಮ್ಮೂರ್ಗೆನಾಗೇತ್ಯೋ ಧಾಡಿ! ಕಂಬಾ ನೆಟ್ಟರು: ದೀಪಾನಃ

ಇಲ್ಲ. ಚುನಾವಣೆ ಬಂದ್ರ ಕಾಲಬೀಳ್ಕೋತ ಮತಾ ಹಾಕಂತಾರು. ಅದ ಮುಗದ ಹ್ವಾದ್ರ ಅಂಬಿಗ್ಯಾನ ಮಿಂಡ ಆಗ್ತಾರು. ಯಾರ ನಿಮಗ ದೀಪ ಬೇಕೋ. ನೀರ ಬೇಕೋ. ಹೊಟ್ಟಿಗಿ ಬೇಕೋ. ದನಕ್ಕ ಮೇವ ಬೇಕೋ ಅಂತ ಕೇಳ್ತಾರೇನ ? ಅದ್ರಾಗ ಆ ಹರಾಮಿ ರೊಕ್ಕಾ ತಿಂದ ಊರಾನು ನಾಕ ಮಂಗ್ಯಾಗೋಳ ಕೂಡಿ ಓಡ್ಯಾಡಿ ಮತಾ ಹಾಕಸ್ತಾವು.... ಆ ಮಾರುದ್ವ್ಯಾನ ಕೆಲ್ಸಾನs ಇದಾಗೇತಿ...." [೬೬] ಇದು ಜೋಗಿಮರಡಿಯ ಸ್ಥಿತಿಯಷ್ಟೇ ಅಲ್ಲ ಅಂಥ ಸಾವಿರಾರು ಹಳ್ಳಿಗಳ ಸ್ಥಿತಿ-ದುಸ್ಥಿತಿ ಇದೇ ಆಗಿದೆ. ಜೋಗಿಮರಡಿಯ ಅನೇಕ ದುರ್ಘಟನೆಗಳಿಗೆ ಕಾಗಿಮೋತಿಯೇ ಕಾರಣನಾಗಿದ್ದ. ಪರವೂರಿನಿಂದ ಬಂದ ಈ ದುಷ್ಟ ಮಾಸ್ತರ. 'ಮರಡಿ'ಯ ದುಷ್ಟಕೂಟದೊಂದಿಗೆ ಸೇರಿಕೊಂಡು. 'ಜೋಗಿಮರಡಿ'ಯ ಅಧಃಪತನಕ್ಕೆ ಕಾರಣವಾದ ಚಿತ್ರಣ. 'ಗ್ರಾಮಾಯಣ'ದ ಬಾಪುಸಾಹೇಬನನ್ನು ನೆನಪಿಗೆ ತರುತ್ತಾನೆ.

ಕಾದಂಬರಿಯ ಕೊನೆಯಲ್ಲಿ ದುಷ್ಟಗುಂಪಿಗೆ ತಾತ್ಕಾಲಿಕ ಜಯಸಿಕ್ಕಂತೆ ಕಾಣುತ್ತದೆಯಾದರೂ. ಅದು ಕೇವಲ ಕಾಲಗರ್ಭದಲ್ಲಿ ನಶಿಸಿಹೋಗುತ್ತಿರುವ ಹಳ್ಳಿಗಳ ಸೌಹಾರ್ದತೆಯನ್ನು ಪ್ರತಿಬಿಂಬಿಸುವ ದೃಶ್ಯ. "ಕಾದಂಬರಿ ನಮಗೆ ಗ್ರಾಮೀಣ ಪರಿಸರದ ವಾಸ್ತವ ಚಿತ್ರಣದಿಂದ. ಜೀವಂತಿಕೆಯಿಂದ ಒಂದು ಸಂತೋಷದ ಅನುಭವ ಕೊಡುತ್ತದೆ" [೬೭] ಆ ಸಂತೋಷವನ್ನು ಉಣಬಡಿಸಿದ ಬೆಳಗಲಿಯವರನ್ನು ನೆನೆಯಲೇಬೇಕು.

ಕಾದಂಬರಿಯಲ್ಲಿ ಹೆಚ್ಚುಮಟ್ಟಿಗೆ ಗುಣಾತ್ಮಕ ಅಂಶಗಳೇ ತುಂಬಿಕೊಂಡರೂ. ಅಲ್ಲಲ್ಲಿ ಒಂದಿಷ್ಟು ಋಣಾತ್ಮಕ ಅಂಶಗಳೂ ಕಾಣಸಿಕ್ಕುತ್ತವೆ. ಲೇಖಕರು. ಕಾದಂಬರಿಯ ಅಧ್ಯಾಯಗಳನ್ನು ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಹಾಗೂ 'ಮಲೆಗಳಲ್ಲಿ ಮದುಮಗಳು' ಗಳಂತೆಯೇ ಹೇಳಿರುವುದು ಕಾಣುತ್ತದೆ. ಆದರೆ ಈ ರೀತಿ ಮಾಡಿದ ಅಧ್ಯಾಯಗಳೆಲ್ಲ ಒಂದೊಂದು ಬಿಡಿಬಿಡಿಯಾದ ಕಥೆಗಳಂತೆ ಭಾಸವಾಗುತ್ತದೆ. ಇದಕ್ಕೆ ಉತ್ತಮ ನಿದರ್ಶನವೆಂದರೆ. ಕೊರವರ ಮಾಯವ್ವನ ಗುಳದಾಳಿ ಪ್ರಸಂಗ. ಸ್ಪಷ್ಟವಾಗಿ ಇದೊಂದು ಬಿಡಿಗಥೆಯಾಗಿ ಕಾಣುತ್ತದೆ. ಕಾದಂಬರಿಯಲ್ಲಿ ಕಾಣುವ ಇನ್ನೊಂದು ಕೊರತೆಯೆಂದರೆ. ಲೇಖಕರು. ಸಮಾಜ ಚಿತ್ರಣದ ಸಂದರ್ಭದಲ್ಲಿ ಅಲ್ಲಿನ ಪ್ರಾದೇಶಿಕ ಆಟ-ಪಾಟ. ಹಬ್ಬ-ಹರಿದಿನ. ವಿವಿಧ ಕೋಮುಗಳ ಆಚಾರ ವಿಚಾರಗಳು. ಹವ್ಯಾಸಗಳು ಈ ಬಗ್ಗೆ ಹೆಚ್ಚಿನ ಸ್ಥಾನ ಕೊಡದಿರುವುದು. ಕಾದಂಬರಿಯಲ್ಲಿ ಕಾಡಪ್ಪ ಕಾಕಾ ಒಬ್ಬ ದೇವಬೋಳೆ ಮನುಷ್ಯನಂತೆ ಚಿತ್ರಣಗೊಂಡಿದ್ದು. ಬಸಲಿಂಗನಂಥ-ಕಾಗಿಮೋತಿಯಂಥವರ ವಿರುದ್ಧ ಕಾಂತಿಹೀನನಾಗಿ ಕಂಡುಬರುತ್ತಾನೆ. ಹೀಗಾಗಿ ಅವನ ಹಿಡಿತವನ್ನು ಮೀರಿ ಊರಿನ ಘಟನೆಗಳು ಬೆಳೆದು. ಕಾದಂಬರಿ ದುರಂತದಲ್ಲಿ ಕೊನೆಗೊಳ್ಳಬೇಕಾಗುತ್ತದೆ. ಇಂಥ ಚಿಕ್ಕ-ಪುಟ್ಟ ದುರ್ಬಲ ಅಂಶಗಳಿದ್ದಾಗ್ಯೂ. " Jogimaradi is an instance of able and interesting writings " [೬೮] ಎಂಬ ಮಾತು ಸುಳ್ಳಲ್ಲ; "ಬೆಳಗಲಿ ಅವರು ಈ

---

೬೬. ದು. ನಿಂ. ಬೆಳಗಲಿ : ಜೋಗಿಮರಡಿ. ಪುಟ ೫೮

೬೭. ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿಯ ವಿಮರ್ಶೆ : ದೇವದಾಸಿ. ಪುಟ ೪೪೮ ರಿಂದ

೬೮. ಹಾ. ಮಾ. ನಾಯಕ : Indian Literature : ದೇವದಾಸಿ. ಪುಟ ೪೪೮ ರಿಂದ

ಕಾದಂಬರಿಯನ್ನ ಬಹಳ ಸಂಯಮದಿಂದ ನಡೆಸಿಕೊಂಡು ಹೋಗಿ ಪಾತ್ರಗಳನ್ನು ತಮ್ಮಷ್ಟಕ್ಕೆ ಬೆಳೆಯಲು ಬಿಟ್ಟು ಎಲ್ಲಿಯೂ ತಮ್ಮ ವಿಚಾರಗಳನ್ನು ಓದುಗರ ಮೇಲೆ ಹೇರುವುದಿಲ್ಲ"[೬೯] ಇದು ಬೆಳಗಲಿಯವರ ಬರವಣಿಗೆಯ ಸಾರ್ಥಕತೆ. ಕೊರತೆಗಳೇನೇ ಇರಲಿ. ಕನ್ನಡ ಪ್ರಾದೇಶಿಕ ಕಾದಂಬರಿಗಳ ಪರಂಪರೆಯಲ್ಲಿ 'ಜೋಗಿಮರಡಿ'ಯೊಂದು ಉತ್ತಮ ಪ್ರಾದೇಶಿಕ ಕೃತಿ.

**ಪ್ರಾದೇಶಿಕತೆ :**

'ಜೋಗಿಮರಡಿ ಕನ್ನಡಕ್ಕೆ ಅಪೂರ್ವ ಕೊಡುಗೆ'ಯಾಗದಿದ್ದರೂ. ಒಂದು ಉತ್ತಮ ಪ್ರಾದೇಶಿಕ ಕಾದಂಬರಿ. ಭಾಷೆಯ ಬಳಕೆಯಲ್ಲಿ. ಪ್ರಾದೇಶಿಕ ಸೊಗಡು ತುಂಬಿನಿಂತಿದೆ. ಉತ್ತರ ಕರ್ನಾಟಕದ ಬಾಯ್ನುಡಿಗಳನ್ನು ಬಳಸುವಲ್ಲಿ ಬೆಳಗಲಿಯವರದು ಎತ್ತಿದ ಕೈ. 'ಜೋಗಿಮರಡಿ'ಯ ಭಾಷಿಕ ಅಧ್ಯಯನದಿಂದಲೇ ಅದರ ವಿಶ್ಲೇಷಣೆ-ವಿಮರ್ಶೆ ಪರಿಪೂರ್ಣವಾಗುತ್ತದೆ: ಇಲ್ಲದಿದ್ದರೆ ಅದು ಅಪೂರ್ಣವಾದಂತಾಗುತ್ತದೆ.

**ಸ್ಥಳ-ಪಾತ್ರ :**

ಉತ್ತರ ಕರ್ನಾಟಕದ ಉತ್ತರ ತುದಿಯ ಒಂದು ಕಾಡುಹಳ್ಳಿಯ ಪ್ರಾತಿನಿಧಿಕ ಊರು 'ಜೋಗಿಮರಡಿ' ಎಂದು ಭೌಗೋಳಿಕ ಗೆರೆ ಕೊರೆದಿರುವ ಲೇಖಕರ ಮಾತೇ ಇದೊಂದು ಪ್ರಾದೇಶಿಕ ಕಾದಂಬರಿಯೆಂದು ಸಾರುತ್ತದೆ. ಮುಧೋಳ. ಜಮಖಂಡಿ. ಹುನ್ನೂರು. ಬನಹಟ್ಟಿ. ನಾವಲಗಿ. ಶಿರಹಟ್ಟಿ. ಚಿಂಚಗಂಡಿ. ಇಳಕಲ್. ಆಸಂಗಿ. ಕಲ್ಲಟ್ಟಿ. ಮೂಡಲಗಿ. ಕೋಳಿಗುಡ್ಡ. ಸೂರಣಗಿ. ಚಿಂಚಲಿ. ಸವದಿ. ಮರೆಗುದ್ದಿ. ಚಿಮ್ಮಡ. ಸತ್ತಿ. ಈ ಮೊದಲಾದ ಪ್ರಾದೇಶಿಕ ಸ್ಥಳಗಳ ಉಲ್ಲೇಖ ಕಾದಂಬರಿಯಲ್ಲಿ ಬಂದರೂ. ಕಥೆಯ ಉಸಿರಾಟವೆಲ್ಲ ಸಾಂಕೇತಿಕ ಊರಾದ 'ಜೋಗಿಮರಡಿ'ಯಲ್ಲಿಯೇ ಇದೆ. ಪ್ರಸ್ತುತ ಕಾದಂಬರಿಯಲ್ಲಿ ಲೇಖಕರು ಉಲ್ಲೇಖಿಸಿದ ಬಹುತೇಕ ಸ್ಥಳಗಳೆಲ್ಲ ಗ್ರಾಮ ನಾಮಗಳೇ ಆಗಿವೆ.

'ಜೋಗಿಮರಡಿ'ಯೊಂದು ಪಾತ್ರಪ್ರಧಾನವಾದ ಕಾದಂಬರಿ. ಕಾದಂಬರಿಯನ್ನು ಓದುತ್ತ ಹೋದಂತೆ ಪಾತ್ರಗಳ ದಂಡೇ ನಮ್ಮೆದುರು ನಿಲ್ಲುತ್ತದೆ. ಶರಣ. ಸಂಗ. ಕಾಡಪ್ಪಕಾಕಾ. ಮಲಗೊಂಡ. ಪರಗೊಂಡ, ಈರೇಶಿ, ಇವರೆಲ್ಲ ಜೋಗಿಮರಡಿಯ ಆಗುಹೋಗುಗಳಿಗೆ ಭದ್ರಗೋಡೆಗಳಿದ್ದಂತೆ. ಬಸಲಿಂಗ. ಕಾಗಿಮೋತಿ ಮಾಸ್ತರ. ಕೇದಾರಿ. ಓಕಾಂರಿ. ಗುರುಪಾದಪ್ಪ. ಕರಿಬಸು. ಮಾರುದ್ರ. ಬಾರಿಗಿಡದ ಗಿರಿಮಲ್ಲ ಇವರೆಲ್ಲ 'ಮರಡಿ'ಯ ವಿಚ್ಛಿದ್ರಕಾರಕ ಶಕ್ತಿಗಳು. ಲೇಖಕರು ಪಾತ್ರಗಳ ವೃತ್ತಿ-ಪ್ರವೃತ್ತಿಗಳನ್ನು ಆಧರಿಸಿ ತುಂಬ ಸಮಂಜಸ ಹೆಸರುಗಳನ್ನೇ ಕೊಟ್ಟಿದ್ದಾರೆ. ಬಡಿಗೇರ ಕಾಳಪ್ಪ. ದತ್ತ. ಪತ್ತಾರ ಮೋನಪ್ಪ. ಕುರುಬರ ಬೀರಪ್ಪ. ಕೆಂಚ. ಬೆನಕಟ್ಟಿ ಮಾಸ್ತರ. ಕಿವುಡ ಕಾಡೇಶಿ. ಚಿಮ್ಮಡ ಪಡೆಪ್ಪ. ಕರಿಯ. ರಾವ್‌ಸಾಹೇಬ. ಜ್ಯೋತಿಬಾ ಬುವ.

---

೬೯. ಬಾಳಾಸಾಬ ಲೋಕಾಪುರ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೪೧

ಬಾರಿಗಿಡದ ಬಾಳು. ನಾಗೇಶಿ. ಗಾಣಿಗೇರ ಈರಣ್ಣ. ಕೊರವರ ಮಾಯಪ್ಪ. ಕುರಬರ ಲಕ್ಷ್ಮಣ. ಮೇಲಿನಮನಿ ಡಾಕ್ಟರ. ಕೆಂಚಪ್ಪ. ಶಿವಸಂಗಯ್ಯ. ಚೆನ್ನವೀರ. ಬಸು. ಮಾಲಗಾರ ಶಿವರುದ್ರ. ಮೋಪಗಾರ ಲಗಮಣ್ಣ. ಮಾಸಿಂಗ. ಅಂಗಡಿ ಗೂಳಪ್ಪ. ಪಾರ್ವಾಳಗೌಡ. ಆಸಂಗಿ ಭೀಮಶಿ ಹೀಗೆ ಬೃಹತ್ ಸಂಖ್ಯೆಯ ಪುರುಷ ಪಾತ್ರಗಳಲ್ಲದೆ. ನಿಂಬಿ. ಕಾಶಿ. ರತ್ನ. ಗೌರಕ್ಕ. ನಿರ್ಮಲಾ. ಮುತ್ತವ್ವ. ಗಂಗವ್ವ. ರಸೂಲಬೀ. ಅಂಬಾ. ತಾರಿ. ಎಲ್ಲವ್ವ ಕಮಲಿ. ಸೋನು. ಜಕ್ಕವ್ವ. ಮಾಸಿಂಗಪ್ಪಗೋಳ ಲಕ್ಷ್ಮಿ. ರಾಧಾ. ದ್ಯಾವಿ. ಕಲಾವತಿ. ಹಳೇಮನಿ ನೀಲವ್ವ. ಮೂಲಿಮನಿ ಸಾಂವಕ್ಕ. ರಮಾಬಾಯಿ. ತಾಯವ್ವ. ಅನುಪಮಾ. ನಿರೂಪಮಾ. ಕಲ್ಲಿ-ಮಲ್ಲಿ. ಪ್ರತಿಮಾ. ಪಾರವ್ವ ಮುದುಕಿ. ಸೇವಂತಿ. ಬಸಕ್ಕ. ಚಂದ್ರವ್ವ. ಕೊರವರ ಮಾಯವ್ವ. ಅಷ್ಟೇ ಪ್ರಮಾಣದ ಸ್ತ್ರೀ ಪಾತ್ರಗಳೂ ಕಾದಂಬರಿಯಲ್ಲಿ ಸ್ಥಾನ ಪಡೆದಿವೆ. ವಿವಿಧ ಕೋಮುಗಳ. ವಿವಿಧ ಗುಣ-ಸ್ವಭಾವದ ಈ ಪಾತ್ರಗಳೆಲ್ಲ ಹೆಚ್ಚಾಗಿ ಗ್ರಾಮೀಣ ಪರಿಸರದಲ್ಲಿ ಸಹಜವಾಗಿರುವ ಹೆಸರುಗಳೇ ಆಗಿವೆ.

**ಆಡುಭಾಷೆಯ ಸತ್ವಯುತ ಬಳಕೆ :**

ಲೇಖಕ ಪರಿಸರದ ಕೂಸು. ಗ್ರಾಮೀಣ ಪರಿಸರದಲ್ಲಿಯೇ ಹುಟ್ಟಿಬೆಳೆದ ಬೆಳಗಲಿಯವರಿಗೆ ನಿತ್ಯ ಬದುಕಿನ ಭಾಷೆಯನ್ನು ಬಳಸುವದೆಂದರೆ. ನೀರುಕುಡಿದಷ್ಟು ಸುಲಭ. ಬೆಳಗಾವಿ. ಬಿಜಾಪುರ. ಬನಹಟ್ಟಿ. ಮುಧೋಳ. ಜಮಖಂಡಿ ಭಾಗದ ಹಳ್ಳಿಗರ ಭಾವ-ಭಾಷೆಗಳನ್ನು ತಮ್ಮೆಲ್ಲ ಕಾದಂಬರಿಗಳಲ್ಲಿ ಎರಕಹೊಯ್ದಿದ್ದಾರೆ. ಪ್ರಾದೇಶಿಕ ಭಾಷೆಯ ಕಸುವನ್ನು ತುಂಬಿಕೊಂಡ ಪ್ರಸ್ತುತ 'ಜೋಗಿಮರಡಿ' ಒಂದು ಸಶಕ್ತ ಕಾದಂಬರಿ. ಜೋಗಿಮರಡಿಯ ಮೌಲ್ಯಗಳೆಲ್ಲ ಅಪಮೌಲ್ಯವಾಗುತ್ತ ಹೋಗುವ ಪರಿಚಯವನ್ನು ಗ್ರಾಮೀಣರಿಂದಲೇ. ಅವರ ನಿತ್ಯಬಳಕೆಯ ಮಾತುಗಳಲ್ಲಿಯೇ ಹೇಳುತ್ತ ಹೋದುದು ಬೆಳಗಲಿಯವರ ಬರವಣಿಗೆಯ ವಿಶೇಷ ಗುಣ. ಗ್ರಾಮೀಣರ ಬದುಕನ್ನು ಇದ್ದಕ್ಕಿದ್ದಂತೆ ನಿರೂಪಣೆಗೈಯುವಲ್ಲಿ ಇವರ ಭಾಷೆ ಎಲ್ಲೂ ಸೋಲುವುದಿಲ್ಲ-ಸೊರಗುವುದಿಲ್ಲ. ಉತ್ತರ ಕರ್ನಾಟಕದ ಭಾಷಾಸೊಗಡು 'ಜೋಗಿಮರಡಿ'ಯಲ್ಲಿ ಹಾಸುಹೊಕ್ಕಾಗಿ ಹರಿದು ಬಂದಿದೆ :

"ಶರಣಾ. ಇದೆನ ಕರೀ ಕಲ್ಲೋ. ಸಾಬಣ ಚೂರೋ. ಒಟ್ಟ ಬುರಗs ಹೊರಡುದುಲ್ಲಲಾ.... ನಿನ ಮಂಡ ಕತ್ತಿಯಿಂದ ದಾಡಿ ಬೋಳ್ಸಿಕೊಳ್ಳೂದ ಒಂದs ಮೋತಿಮ್ಯಾಲ ನಟ್ಟ ಕಡ್ಸಿಕೊಳ್ಳೂದ ಒಂದs ...." (ಪುಟ ೧೮)

"ಹ್ಞು ಬೆಲ್ಲ ಮಾಡೂದು ಅಟ್ಟ ಹಗರಲ್ಲ. ಸುಖದ ಜೀವಂಕ ಎಮ್ಮಿ ಹೈನ ಇದ್ದಾಂಗ. ಈಗ ಬೆಲ್ಕ ಧಾರಣೀನೂ ಇಲ್ಲ. ನೀವೂ ಒಬಟಗ್ಯಾರು ಪ್ಯಾಟ್ರಿಗಿ ಹಾಕಿರ ನಿರಂಬ್ಳ...." (ಪುಟ ೨೭)

"ಎಲಾ ಇವ್ನವ್ನ. ಮತ್ತ ಕಿತ್ತೆಲ್ಲ! ಸೋಮ್ಯಾ ಉಗಳ ಹತ್ಸಿ ದುರಸ್ತಿ ಮಾಡಿದ್ದ ಕಾಣತೈತಿ! ಹೊಲಿಗಿ ಹಾಕ್ದ ಬರೇ ಒಂದ ಮಳಿ ಬಡ್ದಕೊಟ್ಟಿದ್ದ...." (ಪುಟ ३೪)

" ದ್ಯಾವೀ ನಿಮು ಎಮ್ಮೀ ಮಂದಿ ಎಮ್ಮೀ ಗುರ್ತ ಹತ್ತಿಲ್ಲೇನs !" (ಪುಟ ೫೯)

" ಭಾಳ ಪೆಟ್ಟ ಹತ್ಯs ಯವ್ವಾ ! ಈ ಗಂಡ್ಸರೊಂದ ಉರೀತಾವು. ಕತ್ಲಾಗ ಸಾವ್ಕಾಸ ಬರಬೇಕ ಅನ್ನೊ ಎಚ್ಚರಾ ಇರೂದಿಲ್ಲ ಇವ್ಕ ! ಜಗಾ ಎಲ್ಲ ಇಲೆಟ್ರಿ ದೀಪ ಬಂದ್ರೂ ನಮೂರ್ಗೇನಾಗೇತ್ತೊ ದುರ್ಗವ್ವನ ಬ್ಯಾನಿ ಎಂದ ಬರ್ರಾವೋ...." (ಪುಟ ೬೪)

" ಅವ್ವಾ. ನೀ ಮಾಡೂದು ಎಲ್ಲಾ ಗೊತ್ತೈತಿ. ನೀ 'ಬ್ರ' ಅಂದ್ರ ಅಪ್ಪನ ಮುಂದ ನಿನ್ನ ಎಲ್ಲ ಕತೀ ಹೇಳ್ತನು. ಬಾಯಿಮುಚ್ಕೊಂಡು ಗಪ್ ಚುಪ್ ಇರು" (ಪುಟ ೧೩೨)

" ಹೋಗಿರ್ಬೇಕು. ಎಲ್ಲ್ಯಾದ್ರು ಕೇರ್ಯಾಗ ಬಿದ್ದಿರ್ಬೇಕು. ಯಾವೂರ್ಗರೆ ಹೋಗಿ ಅಲ್ಲಿ ಕುಡ್ದ ಬಿದ್ದಿರ್ಬೇಕು. ಬಸಸಿಂಗ್ಯಾ ಒಂದ ಅಂಥಾದ್ದು. ಇದೊಂದ ಇಂಥದ್ದು ! ಎಡ್ಡೂ ಚಲೂ ಹುಟ್ಟಿದ್ವು ನಮೂರಾಗ ! ಅಲ್ಲಿ ಬಸಸಿಂಗ್ಯಾನ ಹೇಣ್ತಿ ಮನ್ಯಾಗ ಮರಾಮರಾ ಮಾಡತೈತಿ. ನನ ಸೊಸೀ ತವರ್ಮನ್ಯಾಗ ಮರಾಮರಾ ಮಾಡತೈತಿ" (ಪುಟ ೧೩೮)

" ಏಯ್ ಇದೊಂದು ಮಂಗ್ಯಾನ ಮರಿ ! ಗೊತ್ತಿಲ್ಲs ಮಂಗ್ಯಾ. ಹೊಲ್ಯಾರು. ಮಾದ್ರು. ಸಮಗಾರು ಕುಡ್ಯಾಕ ನೀರ ಒಯ್ಯೂದ ಕಾಕಾಗೋಳ ತ್ವಾಟದ ಬಾವಿಂದ ! ಉಳದಾವ್ರ ಅವರ್ನ ಮಟ್ಟೀ ಬಾರ್ಯಾಗ ಬರುಗೊಡುದುಲ್ಲಾ.... (ಪುಟ ೧೭೪)

" ಪಗಾರಾಗಿಗಾರಾ ನನಗೇನ ಗೊಂತಿಲ್ಲ ! ಹಾಂಗs ಇರ್ಲಾಕ ಗುಡ್ಲಾ ಕೊಟ್ಟಾರು. ಖರ್ಚಿಗೆ ರೊಕ್ಕಕ ಕಮಿ ಇಲ್ಲ. ಉಣ್ಣಾಕ ತಿನ್ನಾಕ ಕಮ್ಮಿ ಇಲ್ಲ. ಯಾವ್ದೂ ಕಮಿ ಇಲ್ಲಾ..... ನೀವ ಹೇಳ್ದಾಂಗ ಪಗಾರ ತಗೊಂಡ್ರ ಒಪ್ಪೊತ್ತಿನ ಕೂಳ್ಗಿ ಆಗತೈತಿಲ್ಲೋ ! ಈಗ ನೀವ ದಿನಾ ಪಗಾರ ಮ್ಯಾಲ ಹೋಗ್ತಿರಿ. ನೀವs ಹೇಳ್ರಿ. ಮನಿಗೆಷ್ಟ ಕೊಡ್ತೀರಿ. ಎಷ್ಟ ಉಳಸ್ತಿರಿ. ಎಷ್ಟ ಹಾಳ ಮಾಡ್ತೀರಿ. ಎಷ್ಟ ಸಾಲಾ ಮಾಡ್ತೀರಿ...... ಮಳ್ಳs ಪಗಾರ ಯಾದಕ್ಕ ಸಾಲಬೇಕ.....? (ಪುಟ ೧೮೩)

" ಇದೊಂದ ಕಾರ್ಣ ಗೊತ್ತೈತೇನ ? ಕಾಕಾನ ತ್ವಾಟದಾಗ ಅದೀವಂತs ಮುಲ್ಲಾ ಆಗ್ಲಿ. ನಮಪ್ಪ ಆಗ್ಲಿ. ಯಾರೂ ಸೆರಿಸಿಂದಿ ಕುಡೀಲಿಲ್ಲಾ. ಆ ಚಟಾ ಬೀಳ್ಲಿಲ್ಲ...... ನೀವ ರಗಡ ಸಾರೆ ಕುಡಸಾಕ ನೋಡ್ರಿ. ನನಗಂತೂ ಅದ ಆಗೂದs ಇಲ್ಲಾ...." (ಪುಟ ೧೮೩)

" ಏನ್ ಕೊಟಬಿಡ್ರಿ. ಕೈ ಬಿಗಿ ಹಿಡದ ಕೊಟ್ಟ....." (ಪುಟ ೧೮೮)

" ಈಗ ರಾಸಿ ನಡದೈತಿ ಹದ್ನಾರ ಚೀಲ ಜ್ವಾಳಾ ಎಲ್ಲಾ ಅಣ್ಣಾ ತನ ಮನೀಗಿ ಒಯ್ದುಬಿಟ್ಟನು. ನಾನೂ ಹೊಲದಾಗ ದುಡದsನಿ. ಅರ್ಧಾ ಖರ್ಚ ಕೊಟ್ಟನಿ. ನನ ಪಾಲಿನ ಎಂಟ ಚೀಲಾ ಕೊಡಂದ್ರ ಅವ್ನ ಹೇಣತಿ. ಮೂರ್ನಾಕ ಕೊಡ್ತಿವು ಬೇಕಾರ ಒಯ್ಯ. ಬ್ಯಾಡಾರ ಬಿಡು ಅಂತಾಳು...." (ಪುಟ ೧೯೪)

" ದೇವ್ರು ಬಂದಾಂಗ ನೀವ ಬಂದ್ರಿ ಕಾಕಾ. ಈ ಕಸ್ಮಾಲಗೇಡಿಗಿ ನೀವಾದ್ರೂ ಬುದ್ಧಿ ಹೇಳಿ ತೆಲ್ಯಾನ ದೆವ್ವ ಬಿಡಸ್ರಿ...." (ಪುಟ ೨೦೭)

" ಗುರುಪಾದಾ ಇದೆಲ್ಲಾ ಏನ ಕ್ಯಾಂತಿ ತಗೊಂಡ ಬಂದಿಯೋಪಾ ! ಇಂದ ಹೊಸಾ ದಿನಾ...." (ಪುಟ ೨೪೧)

" ಅದ್ಯಾಂವ ಗಂಡ್ಸ ನನ ಮ್ಯಾಲ ಕೈಮಾಡಾಂವಾ ! ಅಂ. ಯಾಂವ ಅದಾನ ಊರಾಗ ! ಬಳಿ ತೊಟ್ಟಾರು. ಎಲ್ಲಾರೂ ಬಳಿ.... ಥೂ....." (ಪುಟ ೨೪೪)

**ದೇಸೀ ಮಾತುಗಳು :**

ದೇಸೀ ಭಾಷೆಯಂತೆ. ದೇಸೀಮಾತುಗಳನ್ನು ಬೆಳಗಲಿಯವರು ಸಾಕಷ್ಟು ಬಳಸಿದ್ದಾರೆ. ನಾಕಿಪ್ಪತ್ತು. ಬರ್‍ರೆಲ್ಲ. ಇರ್‍ಲಿಬಿಡ ತಂಗಿ. ಹತೇಕ. ಬಾ ಮಾರಾಯಾ. ಜಾಡಿಪಟ್ಟಿ. ಕಡಿ. ಪ್ಯಾಟಿ. ಅಟ್ಟ. ಮಸ್ನಿ. ತಗೀಲಾಕ. ಹ್ವಾದ್ರು. ಕೆದರಿ. ಪಡಸಾಲಿ. ಸವಡ. ಅಂವ್ನS. ಗೋಳ. ಜಂತಿ ಧಡಿದೋತರ. ಇಸಕೋ. ಯಾಳೆ. ಆತು. ಮದ್ದೀನ. ಪಂದ್ರಾವೀಸ. ಲವಕರ್. ಗೊಂಜ್ಯಾಳ. ಉಳ್ಳಾಕ. ಪಟಕ. ಏಸಿಲ್ರಿಯಪ. ಅಗದೀ. ಕಿಟ್ಲಿ. ನುಚ್ಚು. ಉಳುಕು. ಬೆಳಕಿಂಡಿ. ಅಯ್ಯಯ್ಯವ್ವ. ಅಯ್ಯಯ್ಯಪ್ಪ. ತಟ್. ಸಬಕಾರ. ಹೆಂಡಿ. ಕಾಕುಳ್ಳ. ಚಿಪ್ಪಾಡಿ. ಎಲ್ಲ್ಯಾರೆ. ಸಡ್ಲ. ಹೌಂದ್ರಿ. ಬರ್‍ತೀನು. ಸಾಣಿಕಲ್ಲು. ಆನಿಸಿಟ್ಟ. ಕಮಿ. ಖರೆ. ಚಲೂ. ಬ್ಯಾರೆ ದ್ಯಾಸ. ತಮಾ. ಒಟ್ಟs ರೊಕ್ಕ. ವಾಟಕಾ. ತಂದಸ್ರಿ. ಜಳಕ. ಸುದ್ದ. ದೀಡಿ. ಸಾಲಿ. ಕಂಡ್ಯಾಳ. ಮೋತಿಗಪ್ಪ. ಎಲಾಇವ್ನ. ಐತಿ. ಧೇಸಿಸು. ಯಾಂಸಿದೀಡಿ. ಹೇಳ್ಯ್ಯ. ಸೂಸ್ಮ. ನದರ. ಹಾಂಗಾರ. ಹಿಂಗಾರ. ಅಂವ. ಇಂವ. ಆಕಿ. ಈಕಿ. ಯಾರರೆ. ನ್ಯಾಹರಿ. ಕೂಕಮಾ. ಯವ್ವಾ. ರಂಪಾಟ. ಚಂಜೀಕ. ಹ್ವಾರೆ. ಹರ್‍ಯಾಗ. ದಾಗ್ದರ. ಬಂದಾರ. ಕುಂಡ್ರು. ಸೊಟ್ಟ. ಬೈಲಕಡೆ. ಕಣ್ಮುಟ್ಟ. ನೋಡೊನಲ್ಲ. ಗಿಲಾಯಿ. ಧೇನಿಕೆ. ಸಾಜೋಗ. ಗೊಂತ. ಅವಗೊಳ. ಅಪಗೋಳ. ಅಪ್ನಾರ. ಅವ್ನಾರ. ರಿಕಾಮಿ. ಹೈರಾನ. ಅಲಲ. ನೂ. ನೀಗಬೇಕು. ಸಾಕಳಿ. ರಗಡ. ಥಗಾ. ಧ್ಯಾಸ. ಮಳ್ಳ. ಹುಚ್ಚವ್ವಾ. ಹಚ್ಚಡ. ರುಮಾಲು. ನಡಬರ್‍ಕ. ತಾಬಾಣ. ಹಾರ್‍ಗ್ಗಾಲ. ಸಸಾರ. ಸ್ವಾರಿ. ಕಂಕಿ ಇತ್ಯಾದಿ. ವರ್ಣ-ವರ್ಗ-ಲಿಂಗಭೇದಗಳಂತೆ ದೇಸೀಮಾತುಗಳಲ್ಲಿ ವಿಭಿನ್ನತೆ ಕಂಡುಬರುತ್ತದೆ. ಇಂಥ ಅಕೃತಕ ದೇಸೀ ನುಡಿಗಳ ರಾಶೀಯೇ ಕಾದಂಬರಿಯಲ್ಲಿ ಸಿಕ್ಕುತ್ತದೆ.

**ವಿಶಿಷ್ಟಾರ್ಥದ ಗ್ರಾಮೀಣ ಪದ-ಪದಪುಂಜಗಳು :**

ಬ್ರ (ಎದುರಾಡು). ಕಾಯಾಸ (ನಿರೀಕ್ಷೆ). ಹಲ್ಲಲ್ಲಿ ನಾಲಿಗೆ ಇಟ್ಟುಕೊಳ್ಳು (ಸುದ್ದಿಮಾಡದೆ ಸುಮ್ಮನಿರು). ನಾರಿದ್ದು (ಸುದ್ದಿಯಾದುದು). ಆಯ (ಸುಗ್ಗಿಕಾಲದಲ್ಲಿ ಆಯಗಾರರಿಗೆ ಕೊಡುವ ಕಾಳುಕಡಿ ರೂಪದ ಕಾಣಿಕೆ). ಕಷ್ಟ (ಕ್ಷೌರ). ಅಕ್ಷರಶತ್ರು (ಅನಕ್ಷರಸ್ಥ). ಹುಳುಕು (ಅನಾಚಾರಗಳು). ಎದೆಗೊಳ್ಳು (ಧೈರ್ಯವಾಗಿರು). ಬಾಬತ್ತು (ವಿಷಯ) ವಾಜಮಿ (ಯೋಗ್ಯ). ಸಬೂಬು (ಕಾರಣ). ಹೊಟ್ಟಿಮ್ಯಾಲಕಾಲ್ಕೊಡು (ಉಪಜೀವನಕ್ಕೆ ತೊಂದರೆ ಮಾಡು). ದೇವಬೋಳಿ (ಸಾಂಭಾವಿತ). ಮುಖಕಿವುಚು (ತಿರಸ್ಕಾರದಿಂದ ನೋಡು). ಹೊಟ್ಟ್ಯಾಗ ಹಾಕೊ (ಕ್ಷಮಾಪಣೆ ಮಾಡು). ಒಲೆಯಲ್ಲಿ ಬೆಕ್ಕು ಮಲಗು (ಅಡಿಗೆ ಮಾಡದಿರುವುದು). ಆಸಾಮಿ (ವ್ಯಕ್ತಿ). ಹೊತ್ತುಹಾಕು (ಬೇಗಕಳಿಸು). ಉಗುಳದಾಟು (ಮಾತು ಮೀರದ). ತುಟಿಬಿಚ್ಚದ (ಎದುರಾಡದ). ನಿರುಂಬ್ಳ (ನಿಶ್ಚಿಂತ). ಗಂಟುಬೀಳು (ಭೇಟಿಯಾಗು ಅಥವಾ ಕೀಟಲೆಮಾಡು). ಮನಗಂಡ (ಬಹಳಷ್ಟು). ಹೊಟ್ಟೆಯಲ್ಲಿ

ಡೊಂಬರಾಟ (ಅತೀಹಸಿವೆಯಾಗು). ಕಾಗಾಳಿ (ತೊಂದರೆ). ಪಲ್ಲವಿಹಾಡು (ಹೇಳಿದ್ದನ್ನೇ ಹೇಳು). ದೇವ್ರು ಪಾದ ಬಡಿ (ಪ್ರಮಾಣ ಮಾಡು). ಮೂಗಿನ ಮೇಲೆ ಬೆರಳಿಡು (ಆಶ್ಚರ್ಯಪಡು). ಮಾಲ (ಅನೈತಿಕ ಸಂಬಂಧ ಏರಿಸಿಕೊಂಡ ಹೆಣ್ಣು). ಅಮಾತ್ಲೆ (ಕಷ್ಟವಿಲ್ಲದೆ). ಮೈಯುನ್ನು (ರೂಢಿಗತ). ಬಾಯಲ್ಲಿ ನೀರೂರು (ಆಸೆಪಡು). ಸೊಪ್ಪುಹಾಕದ (ಹೆದರದ). ಸಪಟ್ಟ (ನಿರ್ಭಿಡೆಯಿಂದ). ಪಂಚೀತಿ (ಸಂಕಷ್ಟ ಸ್ಥಿತಿ). ಕೈಬಿಗಿಹಿಡಿ (ಜಿಪುಣತನ). ಹೂಉದುರು (ಬೈಗುಳಗಳ ಸುರಿಮಳೆ). ಬೇವಿನ ಟೊಂಗ್ಯಾಗ ಹೋಗು (ಖೂನಿಯಾಗು). ಕಾಲುಕೆದರು (ಜಗಳ ತೆಗೆ). ಬಾಯಲ್ಲಿ ಮುಸರಿ ಸಿಕ್ಕಿಸಿಕೊಳ್ಳು (ಋಣಭಾರ). ಹತ್ತಿ ಬಿತ್ತು (ಹಾಳುಮಾಡು). ಗುಡಚಾಪಿ ಕೀಳು (ವಸತಿಬಿಟ್ಟು ಹೋಗು). ಸಮಜೂತ (ತಿಳಿವಳಿಕೆ). ಕಾಸಿಗೆ ಪಂಚೇರಾಗು (ಹರಾಜಾಗು). ಪಡೂ (ವಿಶ್ರಾಂತಿ-ಅವಕಾಶ). ತೀರ್ಥ (ಹೆಂಡ). ಹೂಲಿಎಬ್ಬಿಸು (ದಂಗೆ-ಗದ್ದಲ ಎಬ್ಬಿಸು). ಸರಗೋಲ (ಸರಿಪಾಲಕ್ಕಾಗಿ ದನಕರು ಸಾಕುವುದು) ಇತ್ಯಾದಿ ಗೂಢಾರ್ಥದ ಅನೇಕ ಪದ-ಪದಪುಂಜಗಳು ಕಾದಂಬರಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬಳಕೆಯಾಗಿವೆ.

**ಗ್ರಾಮೀಣ ಬೈಗುಳಗಳು :**

ಸಾಮಾನ್ಯವಾಗಿ ಒರಟಾಗಿ. ನಿಷ್ಠುರವಾಗಿ. ಆಡುವ ಮಾತುಗಳೆಲ್ಲ ಬೈಗುಳಗಳಾಗಿರುತ್ತವೆ. ಗ್ರಾಮೀಣ ಬದುಕಿನಲ್ಲಿ ಇವು ಮಾತಿನಷ್ಟೇ ಸಹಜತೆಯನ್ನು ಪಡೆದಿವೆ. ಅನೇಕ ಸಲ ಮಾತಿಗೆ ಆಕರ್ಷಣ ಶಕ್ತಿ ಬರುವುದು ಇಂಥ ಬೈಗುಳಗಳಿಂದಲೇ. ಗ್ರಾಮೀಣರ ಬದುಕಿನಲ್ಲಿ ಬೈಗುಳಗಳು ದೈನಂದಿನ ಬದುಕಿನ ಅವಿಭಾಜ್ಯ ಅಂಗಗಳಾಗಿವೆ: ಬೆಸೆದುಕೊಂಡು ಬಿಟ್ಟಿವೆ. ಪ್ರಸ್ತುತ ಜೋಗಿಮರಡಿ ಕೇವಲ ಕೆಳವರ್ಗದವರನ್ನು ಕುರಿತಾದ ಕಾದಂಬರಿಯಲ್ಲ. ಇದರಲ್ಲಿ ಸಮಾಜದ ಎಲ್ಲ ಸ್ತರದ ಜನರೂ ಸೇರಿಕೊಂಡಿದ್ದಾರೆ. ಇದೊಂದು 'ಪೂರ್ಣಗ್ರಾಮದ ಪೂರ್ಣ' ಚಿತ್ರವಿರುವ ಕಾದಂಬರಿಯಾಗಿದೆ. ಎಲಾ ಇವ್ನವ್ನ. ಹರಾಮಿ. ಖೋಡಿ. ಕತ್ತೆ. ಮಂಗ್ಯಾಗೋಳ. ನಿನ ಸುಟ್ಟಬರ್ಲಿ. ಹಾದರ್ಗಿತ್ತಿ. ನಿನ ಹೆಣಾ ಎತ್ಲಿ. ಮೂಳ. ನಾಥಮೂಳ! ಖಬರ. ಮಣ್ಣಾಗ ಇಡ್ಲಿ. ಮನಿ ಮಸೂತಿ ಆಗ್ಲಿ. ವಂಸ ನಿರ್ವಂಸ ಆಗ್ಲಿ. ಇದಿ. ಮಳ್ಳ. ನಾಡಮಳ್ಳ. ಇಂವನಾಪ್ನ. ಮಂಗ್ಯ. ಕತ್ತೀಮಗಾ. ಹೆಣಾ ಶಡಗರಾಗ್ಲಿ. ದುರಗವ್ವನ ಬ್ಯಾನಿ ಬಡ್ಕೊಳ್ಲಿ. ಮಂಗ್ಯಾನಂತಾಕ್ನ. ದರಿದ್ರ. ರಾಕ್ಷೀಸ. ಕಸ್ಮಾಲಗೇಡಿ. ಭೋಸಡಿಮಕ್ಳು. ನೀತಿಗೆಟ್ಟವ್ನ. ಯಾ ಗಂಡ ಮಗಾ. ಅವುಪ್ಪಗ ಹುಟ್ಟಿದ ಮಗಾ. ಅದ್ಯಾಂವ ಗಂಡ್ಸ. ಇಸ್ಸೀಮಾಕ ಇತ್ಯಾದಿ ವಿರಳವಾಗಿಯೇ ಇಂಥ ಬೈಗುಳಗಳನ್ನು ಬಳಸಿದ್ದಾರೆ.

**ದ್ವಿರುಕ್ತಿಗಳು - ಜೋಡುನುಡಿಗಳು :**

ಒಂದೇ ಪದ ಎರಡೆರಡು ಅಥವಾ ಕೆಲವು ಸಲ ಅದಕ್ಕಿಂತ ಹೆಚ್ಚು ಸಲ ಬಳಕೆಗೊಳ್ಳುವುದೇ ದ್ವಿರುಕ್ತಿ. ಆಡಿದ ಮಾತಿನ ಅರ್ಥವನ್ನು ಮತ್ತಷ್ಟು ಗಾಢ-ಗಟ್ಟಿಗೊಳಿಸಲು ಲೇಖಕರು ಇಂಥ ದ್ವಿರುಕ್ತಿಗಳ ಮೊರೆಹೋಗುತ್ತಾರೆ. 'ಜೋಗಿಮರಡಿ'ಯಲ್ಲಿ ಇಂಥ ದ್ವಿರುಕ್ತಿಗಳಿಗೆ ಯಥೇಚ್ಛವಾದ ಸ್ಥಾನಸಿಕ್ಕಿದೆ. ಕೆದಕಿಕೆದಕಿ.

ತಿಕ್ಕಿತಿಕ್ಕಿ. ಓರಿಓರಿ. ಸುಮ್ಮಸುಮ್ಮ. ದುಮುದುಮು. ಕೈಕೈ. ಪಟಪಟ. ಹೇಳಿಹೇಳಿ. ಶಿವಶಿವ. ಪಿಳಿಪಿಳಿ. ಬ್ಯಾಡಬ್ಯಾಡ. ಸಿಕ್ಕಸಿಕ್ಕಂತೆ. ಹೆಕ್ಕಿಹೆಕ್ಕಿ. ತಿಂದು ತಿಂದು. ಕರಗುತ್ತಕರಗುತ್ತ. ಸೊರಗುತ್ತ ಸೊರಗುತ್ತ. ಹೊಸಹೊಸ. ದುರದುರ. ಪುರ್‌ಪುರ್. ಕೂಗಿಕೂಗಿ. ಮಾರಿಮಾರಿ. ಹಜಾರಹಜಾರ. ಸುರುಳೆಸುರುಳೆ. ಯಾವಯಾವ. ಮತ್ತೆಮತ್ತೆ. ಪುರುಪುರು. ಸುಡುಸುಡು. ಕರ್‌ಕರ್. ಥೂಥೂ. ಮರಾಮರಾ. ಸಹಿಸುತ್ತಸಹಿಸುತ್ತ. ಕಿಡಿಕಿಡಿ. ಬೇರೆಬೇರೆ. ಓಡಿಓಡಿ. ಚಿಕ್ಕಚಿಕ್ಕ. ಬಣ್ಣಬಣ್ಣದ. ದಿನದಿನ. ಹುಳ್ಳಹುಳ್ಳ. ಮಾರಮಾರ. ಕಂಡಕಂಡ. ಮಳಮಳ. ತಮ್ಮತಮ್ಮ. ಬಗೆಬಗೆ. ಚಟಚಟ. ಗುದ್ದಿಗುದ್ದಿ. ದೂರದೂರ. ಹಣೆಹಣೆ. ಹೇಣತಿಹೇಣತಿ. ಓರ್‍ಯಾರಓರ್‍ಯಾರ. ದಿನದಿನ. ಮುಂದೆಮುಂದೆ. ಕಣ್ಣುಕಣ್ಣು. ಹೇಳಿಹೇಳಿ. ತಡೆತಡೆ. ಹಿಂದೆಹಿಂದೆ. ಮರ್‌ಮರ್. ಗಟಗಟ. ತಿರ್‍ಗಿತಿರ್‍ಗಿ. ಹುಯ್‌ಹುಯ್. ಬಳಬಳ. ಇತ್ಯಾದಿ. ಅರ್ಥ ಸಾಮಿಪ್ಯವಿರುವ ಎರಡು ಅಥವಾ ಎರಡಕ್ಕಿಂತ ಹೆಚ್ಚು ಪದಗಳ ಬಳಕೆಯನ್ನೇ ಜೋಡುನುಡಿಗಳೆಂದು ಕರೆಯುತ್ತಾರೆ. 'ಜೋಗಿಮರಡಿ' ಇಂಥ ಅನೇಕ ಜೋಡುನುಡಿಗಳನ್ನು ಹೊಂದಿ ಭಾಷಿಕ ಸೌಂದರ್ಯವನ್ನು ಮೆರೆದಿದೆ. ಅಕ್ಕಪಕ್ಕ. ದನಕರು. ನಾಯಿನರಿ. ಲಂಗು-ಲಾಗಾಮು. ಥಾಣಾಡಂಗುರ. ತಳಮಳ. ತಿದ್ದಿತೀಡಿ. ಖರೆಖೊಟ್ಟಿ. ತೋಟಪಟ್ಟಿ. ಕೆಲಸ ಬೊಗಸೆ. ಹೊಟ್ಟೆಬಟ್ಟೆ. ಮಂದಿ-ಮಕ್ಕಳು. ಸಿಡಿಮಿಡಿ. ತಳಬುಡ. ಕುಳ್ಳಾಕಟ್ಟಿಗೆ. ಕೂಲಿನಾಲಿ. ಗಡಿಬಿಡಿ. ಕಸಕಡ್ಡಿ. ಹರಬರಕು. ಓಗ್ಗಿಸಿಕುಗ್ಗಿಸಿ. ಠಾಕು-ಠೀಕು. ಏರುಪೇರು. ತಿಥಿಮಿಥಿ. ಗಟ್ಟಿಮುಟ್ಟು. ಆಳುಕಾಳು. ಹಳಹಳಿ. ಅಪ್ಪಿತಪ್ಪಿ. ಹಾವಭಾವ. ಅಂಕುಡೊಂಕು. ಅಡ್ಡತಿಡ್ಡ. ತಗ್ಗುದಿನ್ನೆ. ಕಾಳುಕಡಿ. ಹಾಲುಹೈನು. ಹಿಂಡಿಹಿಪ್ಪಿ. ಅರ್ಥಮರ್ಥ. ಹಬ್ಬಹರಿದಿನ. ಇದಾರಾಬದರಾ. ಸಿಟ್ಟುಸೆಡವು. ಸುಳ್ಳುಸೊಟ್ಟು. ಹಸಿಬಿಸಿ. ಸುತ್ತಮುತ್ತ. ಅತ್ತಇತ್ತ. ಕಕ್ಕಾವಿಕ್ಕಿ. ಬೀಗರುಬಿಜ್ಜರು. ಗಪ್‌ಚಿಪ್. ದಿನಮಾನ. ಅಗಸುದ್ದಿ-ಗಿಗಸುದ್ದಿ. ದೇವ್ರು-ದಿಂಡ್ರು. ದವಾಖಾನಿ-ಗಿವಾಖಾನಿ. ಚೀಟಿ-ಪಾಟಿ. ಮಾರಾಮಾರಿ. ಮಾತಾಮಾತಿ. ತಳಮಳ. ಚಂಡಪ್ರಚಂಡ. ಕಾಯಿಕಸರು. ಹಣ್ಣುಹಂಪಲ. ಕಾಯಿಪಲ್ಲೆ. ಜನಜಂಗುಳಿ. ತರಾತುರಿ. ಕೂಲಿಕುಂಬಳಿ. ನುಚ್ಚುನುಗ. ಸಂತೆಪೇಟೆ. ಕಣಿಕಿಬಣಿವೆ. ಕರಾರಗಿರಾರ. ತಂಟೀತಕರಾರ. ಜಾತಿಪಾತಿ. ಕಳವಳ. ಸುಗ್ಗೀಗಿಗ್ಗೀ. ಚಿಂದಿಚಿಪ್ಪಾಡಿ. ಟಕಪಕ. ಅಡ್ಡಿಆತಂಕ. ಪಾತ್ರೆ-ಪಗಡ. ಕೋರ್ಟಕಚೇರಿ. ಜಗಳಾಕದನಾ. ಚಿಲಿಪಿಲಿ. ಲಟಪಟ. ಹಳ್ಳಾಕೊಳ್ಳಾ. ತಿಂಡಿತಿನಿಸು. ರೊಜ್ಜುರಾಡಿ. ಇತ್ಯಾದಿ.

**ಗಾದೆಮಾತು - ಪಡೆನುಡಿಗಳು :**

'ಜೋಗಿಮರಡಿ'ಯ ಭಾಷಿಕ ಸ್ವಾರಸ್ಯವಿರುವುದು. ಅಲ್ಲಿ ಬಳಸಲಾದ ಗಾದೆಮಾತು - ಪಡೆನುಡಿಗಳಲ್ಲಿ. ಅನುಭವಸತ್ಯವಾದ ಗಾದೆಮಾತುಗಳನ್ನು-ನುಡಿಗಟ್ಟುಗಳನ್ನು ಬೆಳಗಲಿಯವರು ಪ್ರಸ್ತುತ ಕಾದಂಬರಿಯಲ್ಲಿ ಹೇರಳವಾಗಿಯೇ ಬಳಸಿದ್ದಾರೆ. ಕೆಲವನ್ನು ಇದ್ದಕ್ಕಿದ್ದಂತೆ ಬಳಸಿದರೆ. ಇನ್ನು ಕೆಲವನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಬಳಸಿದ್ದಾರೆ.

"ಕಾಯಕವೇ ಕೈಲಾಸ" (ಪುಟ ೧೫)

"ಕೈ ಕೆಸರಾದರೆ ಬಾಯಿ ಮೊಸರು" (ಪುಟ ೧೫)

" ಉಂಡ ಮನೆ ಗಳ ಎಣಿಸಬೇಡ " (ಪುಟ ೧೫ ಮತ್ತು ೨೧೫)

" ನಿಮ್ಮ ಬೆವರಿಗೆ ತುಂಬ ಬೆಲೆಯಿದೆ " (ಪುಟ ೧೫)

" ಪ್ರಾಮಾಣಿಕನಾಗಿ ಕರ್ತವ್ಯ ನಿರ್ವಹಿಸು " (ಪುಟ ೧೫)

" ಕಾಮಣಿ ಆದಾವ್ರಿಗಿ. ಎಲ್ಲಾ ಹಳದಿ ಕಾಣತೈತಂತ " (ಪುಟ ೧೬)

" ..... ಖರೇ ಮಂದಿ ಅದಾರಂತs ಬೇಗ ಬೆಳಗ ಆಗತೈತ್ರಿ" (ಪುಟ ೧೬)

" ತಮಾ ಒಬ್ರಿದ್ದಾಂಗ ಒಬ್ರ ಎಲ್ಲಿ ಇರ್ತಾರು " (ಪುಟ ೧೮)

" ಇಂವ್ನ ಕಾಲಾಗ ನಾಯಿಗೆರಿ ಇದ್ದಾಂಗ ಬರೇ ಅತ್ತಿತ್ತ ತಿರ್ಗತಾನು " (ಪುಟ ೧೮)

" ತೋಯಿಸಿಕೊಂಡ ಬಳಿಕ ಮಳೆಯ ಅಂಜಿಕೆ ಏಕೆ ?" (ಪುಟ ೨೩)

" ದೇವ್ರು ಬಂದಾಂಗ ಭೇಟಿಯಾದಿ " (ಪುಟ ೨೬)

" ನಿನಗ ನೂರ ವರ್ಷ ಆಯೂಸ ನೋಡೋ ಶರಣಾ...." (ಪುಟ ೨೬)

" ಒಂದs ಏಟ ಎಡ್ಡ ತುಂಡ " (ಪುಟ ೩೧)

" ಗಂಡಾ ಹೆಂಡ್ರು ಜಗಳ ರಸ್ತಾಕ ಬರ್ಬಾರ್ದ" (ಪುಟ ೪೦)

" ತಾ ಕೆಡೂದಲ್ದ ಊರೆಲ್ಲಾ ಕೆಡಸ್ಲಾಕ ನಿಂತಾಳೇನ " (ಪುಟ ೪೭)

" ಇಲಿಗಿ ಬಡದ್ರು ಗಣಪತಿಗಿ ಪೆಟ್ಟ ಹತ್ತೂದs " (ಪುಟ ೫೩)

" ನೀವೆಲ್ಲಾ ಅಯ್ಯಾಗ್ರ ಹೀಂಗs " (ಪುಟ ೫೦)

" ಸೂಳೆಯ ಪಾಪ ಸಂನ್ಯಾಸಿಗಿ " (ಪುಟ ೫೪)

" ಹೊತ್ತಿಲ್ದ ಹೊತ್ತಿನ್ಯಾಗ ತೊತ್ತ ಮೈನೆರೀತಂತ...." (ಪುಟ ೫೮)

" ಕಂಬಾರ ಕಾಸಿದರೂ ಅಷ್ಟೆ, ಬಡಿಗ ಬೀಸಿದರೂ ಅಷ್ಟೆ" (ಪುಟ ೬೦)

" ಗುಂಪಿನಲ್ಲಿ ಗೋವಿಂದ " (ಪುಟ ೬೬)

" ....ಇಂತಾ ಗಂಡಮಕ್ಕಳ್ನ ತಗೊಂಡ ಉಪ್ಪಹಚ್ಚಿ ನೆಕ್ಕೂದೈತೇನ " (ಪುಟ ೭೪)

" ನಾಯಿ ಬಾಲ ಇದ್ದಾಂಗ...." (ಪುಟ ೮೧)

" ಮುಳ್ಳ ತಗ್ಯಾಕ ಮುಳ್ಳs ಬೇಕ್ಲಾ" (ಪುಟ ೮೨)

" ಎಲ್ಲಮ್ಮನ ಜಾತ್ರೆಯಲ್ಲಿ ಮುಲ್ಲಾನದೇನ ಕೆಲಸ " (ಪುಟ ೮೭)

" ಬೆಳೆಯುವ ಪೈರಿನ ಸಿರಿಯನ್ನು ಮೊಳಕೆಯಲ್ಲಿ ನೋಡು " (ಪುಟ ೯೧)

" ಯಾರದೋ ಹಣದ ಮೇಲೆ ಎಲ್ಲವ್ವನ ಜಾತ್ರೆ" (ಪುಟ ೯೨)

" ....ರೊಕ್ಕ ಯಾರ ಬೇಕಾದ್ರೂ ಗಳಸ್ತಾರು...." (ಪುಟ ೯೬)

" ..... ಹುಲಿ ಹೊಟ್ಯಾಗ ಇಲಿ ಹುಟ್ಟಿಧಾಂಗ....." (ಪುಟ ೯೨)

" .... ಮಂಗ ಬೆಣ್ಣೆ ತೂಗಿಧಾಂಗ...." (ಪುಟ ೯೫)

" ಊರ ಸುಟ್ಟರೂ ಹನಮಪ್ಪ ಹೊರಗೇ...." (ಪುಟ ೯೫)

" ಸತ್ತರೂ ಕೆಟ್ಟರೂ ಗಂಡನ ಮನೆಯೇ ಆಧಾರ...." (ಪುಟ ೧೧೬)

" ಕಾಕಾನ ಬಾಯಾಗ, ಕಡ್ಡಿ ಇದ್ರು ಅದs ಗುಡ್ಡ ಆಗತೈತಿ " (ಪುಟ ೧೨೦)

" ಇದ್ದಾಂಗ ಇರೋ ಸಿದ್ದೇಶ್ವರಾ " (ಪುಟ ೧೨೧)

" ಮನ್ಯಾಗ ಗೋಣ್ಮುರ್ಯ ದನಾ ಇರ್‍ಬಾರ್ದಂತ ಕೊಟ್ನಿ " (ಪುಟ ೧೨೨)

" ಬೆಕ್ಕು ಕಣ್ಣುಮುಚ್ಚಿ ಹಾಲುಕುಡಿದಂತೆ...." (ಪುಟ ೧೩೦)

" ಹಿಂಡುವ ಎಮ್ಮೆಯ ಹಾಲು ಕರೆದಂತೆ...." (ಪುಟ ೧೩೦)

" ಹಾರುವ ಹಕ್ಕಿ ಪುಚ್ಚ ಎಣಿಸುವ...." (ಪುಟ ೧೩೧)

" ಹಿರಿಯಕ್ಕನ ಚಾಳಿ ಮನಿ ಮಂದಿಗೆಲ್ಲ" (ಪುಟ ೧೩೩)

" ತಮಾ ಚಲೂ ಮಕ್ಕ ಹುಟ್ಟ ಬೇಕಾದ್ರು ಒಂದಿನ ಜನ್ಮದ ಪುಣ್ಯಾ ಬೇಕ " (ಪುಟ ೧೪೦)

" ಬಣವಿಗಿ ಬೆಂಕಿ ಹಚ್ಲಾಕ ಒಂದs ಕಡ್ಡಿ ಸಾಕ...." (ಪುಟ ೧೪೫)

" ಹೆಣ್ಣಿನ ನೆಲಿ ಯಾರ ಹಚ್ಚಬಲ್ರು ?" (ಪುಟ ೧೭೧)

" ಹೆಣ್ಣು ! ಹೌದು ಆಕೆ ರಾಕ್ಷಸಿಯೂ ಹೌದು, ದೇವತೆಯೂ ಹೌದು " (ಪುಟ ೧೭೨)

" ಅದ್ಯಾ ಗಿಡದ ತಪ್ಪ...." (ಪುಟ ೧೭೭)

" ಹೆಣಸಿಗದ ಹಾಳೂರ ಹದ್ದಿನಂತೆ...." (ಪುಟ ೨೧೦)

" ನೀತಿಯಿಲ್ಲದ ಜನ ದನಕ್ಕಿಂತ ಕಡೆ...." (ಪುಟ ೨೧೫)

" ಕೊಟ್ಟ ಹೆಣ್ಣು ಕುಲಕ್ಕೆ ಹೊರಗು " (ಪುಟ ೧೧೫)

" ಹೊಳ್ಯಾಗ ಹುಣಸಿ ಹಣ್ಣು ತೊಳಧಂಗ " (ಪುಟ ೯೯)

" ತಾಯಿ ಹೊಟ್ಟಿ ತಣ್ಣಗೆ " (ಪುಟ ೨೩೮)

" ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆ...." (ಪುಟ ೨೪೫)

–ಕಥಾತ್ಮಕ ಭಾಷಾಭಿವ್ಯಕ್ತಿಗೆ ಮೊನಚು ತಂದು ಕೊಡುವ ಇಂಥ ಜನವಾಣಿಗಳನ್ನು ಬೆಳಗಲಿಯವರು ಹದವರಿತು ಪ್ರಯೋಗಿಸಿದ್ದಾರೆ. ಈ ಭಾಗದಲ್ಲಿ ಚಾಲ್ತಿಯಲ್ಲಿರುವ ಗಾದೆಮಾತು-ಪಡೆನುಡಿಗಳನ್ನು ಪ್ರಸ್ತುತ ಕೃತಿಯಲ್ಲಿ ಹೇರಳವಾಗಿ ಬಳಸಿರುವುದರಿಂದ, ಕಾದಂಬರಿಗೆ ಸಹಜತೆ ಹೆಚ್ಚಾಗಿರುವುದರೊಂದಿಗೆ ತೀವ್ರತರ ಪರಿಣಾಮ ಬೀರಿ ಓದುಗನ ಮನಸ್ಸನ್ನು ಸೂರೆಗೊಳ್ಳುತ್ತದೆ. ಜನರು ತಮಗಾಗಿ ತಾವೇ ಸೃಷ್ಟಿಸಿಕೊಂಡ ಇಂಥ ಜನವಾಣಿಯ ಹೇರಳ ಬಳಕೆಯಿಂದಾಗಿ 'ಜೋಗಿಮರಡಿ' ಭಾಷಾಸಂದರ್ಭದಲ್ಲಿ ವಿಶೇಷ ಸ್ಥಾನ ಪಡೆದುಕೊಂಡಿದೆ.

**ಪ್ರಾದೇಶಿಕ ಸಂಸ್ಕೃತಿ :**

ಲೇಖಕ ಪರಿಸರದ ಕೂಸು: ಸಾಹಿತ್ಯವೆಂಬುದು ಸಂಸ್ಕೃತಿಯ ವಾಹಕವಿದ್ದಂತೆ. ಬದುಕಿನ ರೀತಿ-ನೀತಿ. ಆಚಾರವಿಚಾರಗಳನ್ನೇ. 'ಒಟ್ಟು ಜೀವನ ಮಾರ್ಗ'ವನ್ನೇ ಸಾಮಾನ್ಯವಾಗಿ ಸಂಸ್ಕೃತಿಯೆಂದು ಕರೆಯಲಾಗುತ್ತದೆ. ಪ್ರಸ್ತುತ ಕಾದಂಬರಿ ತನ್ನ ಪ್ರಾದೇಶಿಕ ವಿವಿಧ ಕೋಮುಗಳ ವಿವರಣೆ ನೀಡುವಾಗ. ಅವರ ಆಚಾರ-ವಿಚಾರ. ಹಬ್ಬಹರಿದಿನ. ಆಟ-ಪಾಟ. ವೇಷ-ಭೂಷಣ. ತಿಂಡಿ-ತಿನಿಸು. ಹವ್ಯಾಸಗಳು ಇತ್ಯಾದಿಗಳ ಬಗ್ಗೆ ಹೆಚ್ಚು ಗಮನಹರಿಸಿಲ್ಲ. ಹೀಗಾಗಿ ಕಾದಂಬರಿ 'ಸಾಂಸ್ಕೃತಿಕಪಾತಳಿಯ ಕೊರತೆ'ಯನ್ನು ಅನುಭವಿಸಿದೆ. ಇಷ್ಟಿದ್ದರೂ ಅಲ್ಲಲ್ಲಿ ಪ್ರಾದೇಶಿಕ ಸಂಸ್ಕೃತಿಯ ವಿವರಣೆಗಳು ಬರುತ್ತವೆ.

ಗ್ರಾಮೀಣರ ಬದುಕಿನಲ್ಲಿ ಸಣ್ಣಪುಟ್ಟ ಕಳ್ಳತನಗಳು ನಡೆಯುವುದು ಸಹಜವಾಗಿರುವ ವಿಚಾರ. ಕೇದಾರಿ ಹುಸೇನಿಯ ಆಡುಮರಿ ತುಡುಗ ಮಾಡಿದ್ದೇನೋ ಸರಿ. ಆದರೆ ರಾಚಪ್ಪನ ಮನೆಯಲ್ಲಿ ನೆರೆದ ಪಂಚಾಯ್ತಿಯಲ್ಲಿ ತಾನೇ ತುಡಗ ಮಾಡಿದ್ದನ್ನು ಒಪ್ಪಿಕೊಂಡು. ಹುಸೇನಿಗೆ ಪರಿಹಾರ ಕೊಡಲು ಒಪ್ಪಿಕೊಂಡದ್ದು. ಗ್ರಾಮೀಣರ ಮುಖಾಮುಖಿ ಸಂಬಂಧಗಳಿಗೆ ಜೀವಂತ ಸಾಕ್ಷಿ.

ಗ್ರಾಮೀಣ ಬದುಕಿನಲ್ಲಿ ಮೂಢನಂಬಿಕೆಗಳು. ಅವರ ಬದುಕನ್ನು ನಿಯಂತ್ರಿಸುವ ಯಂತ್ರಗಳಿದ್ದಂತೆ. ಚೀಟಿ-ಚಪಾತಿ. ಮಾಡಿಸುವುದು. ಬೂದಿಮಂತ್ರಿಸಿಕೊಡುವುದು. ತಾಯತ-ತಂತ್ರ ಕಟ್ಟುವುದು. ಇವೆಲ್ಲ ಅವರ ಬದುಕಿನೊಂದಿಗೆ ಬೆಸೆದುಕೊಂಡು ಬಿಟ್ಟಿವೆ. ಮಾದರ ಲಸ್ಮಿ ದೃಷ್ಟಿ ಸರಿಯಿಲ್ಲವೆಂಬುದೊಂದು ಊರಲ್ಲಿ ಹಬ್ಬಿದ ಮೂಢನಂಬಿಕೆ. ಗಂಡ. ಅಣ್ಣ. ಅತ್ತಿಗೆ. ತಮ್ಮ. ಹೀಗೆ ಒಬ್ಬರಾದ ಮೇಲೊಬ್ಬರು ಸತ್ತಿದ್ದು ಇವಳ ಕೆಟ್ಟ ಕಾಲ್ಗುಣದಿಂದಲೇ ಎಂದು ಜನ ನಂಬಿದ್ದರು: ಹೀಗಾಗಿ ಇವಳನ್ನು ಯಾರೂ ಮುಖವೆತ್ತಿ ಕೂಡ ನೋಡಲಾರರು. ಅವಳೊಂದು ಅಪಶಕುನದಂತೆ ಎಲ್ಲರಿಗೂ ಬೇಡವಾದುದರಲ್ಲಿ ಅವಳದೇನೂ ತಪ್ಪಿಲ್ಲ. ಈ ಹಿನ್ನೆಲೆಯಲ್ಲಿ ಮೂಢನಂಬುಗೆಗಳು ಬದುಕಿನ ನೆಮ್ಮದಿಯನ್ನು ಹಾಳುಮಾಡಿದಷ್ಟು ಬೇರಾವ ಸಂಗತಿಗಳೂ ಮಾಡುವುದಿಲ್ಲವೆಂಬ ಲೇಖಕರ ಮಾತು ಔಚಿತ್ಯಪೂರ್ಣವಾದುದಾಗಿದೆ. ರತ್ನಾಳನ್ನು ಬಲಿಗೆ ಹಾಕಿಕೊಳ್ಳಲು. ಓಂಕಾರಿಗೆ ಕಲ್ಲಟ್ಟಿಯಿಂದ 'ಚೀಟಿ' ಮಾಡಿಸಿ ತರಲು ಬಸಲಿಂಗ ಕಳಿಸಿದ್ದು. ತಾಯವ್ವ ಮಗಳ ಜ್ವರಕ್ಕಾಗಿ 'ಚೀಟಿ' ಮಾಡಿಕೊಡುವಂತೆ ಸಂಗಯ್ಯನನ್ನು ಕೇಳಿದ್ದು. ತನ್ನ ಎಮ್ಮಿ ಹಿಂಡದಾದಾಗ ಬೂದಿಮಂತ್ರಿಸಿಕೊಡುವಂತೆ ಜಕ್ಕವ್ವ ಮಠದಯ್ಯನಲ್ಲಿ ಕೇಳುವುದರೊಂದಿಗೆ. ತನ್ನ ದಾಯಾದಿಯ ಎಮ್ಮಿ ಹಿಂಡದಂತೆಯೂ ಮಾಡುವ ಹುನ್ನಾರ ತಿಳಿಸಿದ್ದು– ಇವೆಲ್ಲ ಹಳ್ಳಿಗಳಲ್ಲಿ ಇಂದಿಗೂ ಚಾಲ್ತಿಯಲ್ಲಿದ್ದು ಅವರು ಮಾಟ-ಮಂತ್ರ. ಯಂತ್ರ-ತಂತ್ರ. ಚೀಟಿ-ಚಪಾತಿ. ಮೊದಲಾದವುಗಳಿಗೆ ಎಷ್ಟೊಂದು ಬೆಲೆಕೊಡುತ್ತಾರೆಂಬುದಕ್ಕೆ ಹಿಡಿದಕನ್ನಡಿ. ದನಗಳು ಗೋಣ ಮೇಲಕ್ಕೆತ್ತಿ ಮುರಿಯುವುದು ಅಪಶಕುನ-ದರಿದ್ರವೆಂದು ಇಂದಿಗೂ ಗ್ರಾಮೀಣರಲ್ಲಿರುವ ಭಾವನೆ. ಸರಪಾಲಿಗೆ ಪಡೆದ ಕಿವುಡ ಕಾಡೇಶಿಯ ಆಕಳನ್ನು ಈ ಕಾರಣಕ್ಕಾಗಿಯೇ ಕರಿಬಸವಯ್ಯ ಚಿಮ್ಮಡದ ಪಡೆಪ್ಪನಿಗೆ ಮಾರುತ್ತಾನೆ. ಮೂಢನಂಬಿಕೆಯಂತೆಯೇ ಅಸ್ಪೃಶ್ಯತೆ ಹಳ್ಳಿಗಳಿಗೆ ಹಿಡಿದ ಗ್ರಹಣದಲ್ಲಿ ಇದೂ ಒಂದು. ಸ್ತರ-ತಮ

ಭಾವನೆಗಳಲ್ಲಿಯೇ ಹುದುಗಿಕೊಂಡ ಹಳ್ಳಿಗರಲ್ಲಿ ಇಂದಿಗೂ 'ಜಾತಿ' ವ್ಯವಸ್ಥೆಯಿದೆ. ಹೊಲೆಯರನ್ನು ಮುಟ್ಟಿಸಿಕೊಳ್ಳದಿರುವ ಆಚರಣೆಯಿದೆ. ಹೊಲೆಯರನ್ನು ಮುಟ್ಟಿಸಿಕೊಳ್ಳುವುದಾಗಲಿ. ಅವರಿಗೆ ದೇವಾಲಯ. ಬಾವಿ-ಕೆರೆಗಳಲ್ಲಿ ಪ್ರವೇಶಾವಕಾಶವನ್ನು ಕೊಡದಿರುವುದು ಸ್ವತಂತ್ರ ಭಾರತದ ದುರ್ದೈವ. ಕಾಶಿ ಹೊಲೆಯರ ದುರ್ಗಪ್ಪ-ತಾರಿಯರಿಗೆ ಕಪ್ಪಿನಲ್ಲಿ ಚಹಾ ಕೊಟ್ಟದ್ದು ಅವಳಿಗೆ ದೊಡ್ಡ ಅಪರಾಧದಂತೆ ಕಾಣುತ್ತದೆ.

ಗುಡ್ಡದ ಎಲ್ಲವ್ವ ಈ ಭಾಗದ ಜನರ. ಅದೂ ಕೆಳವರ್ಗದವರ ಮನೆದೇವರು: ಒಬ್ಬ ಶಕ್ತಿದೇವತೆಯನ್ನಾಗಿ ಈ ಕಡೆಯ ಜನರು ಅವಳನ್ನು ಪೂಜಿಸುತ್ತಾರೆ. ಕುಡಿದು "ಕಲ್ಲಟ್ಟಿ.... ಚೀಟಿ.... ರತ್ನಾ.... ಮಲಗೊಂಡ.... ಬಸಲಿಂಗ...." ಎಂದು ರಾತ್ರಿಹೊತ್ತಿನಲ್ಲಿ ಈರೇಶಿ ಚಾದಂಗಡಿ ಮುಂದೆ ಚೀರಾಡುವ ಓಂಕಾರಿಯನ್ನು ಒಡಿದು. ನಿಂಬಿ-ಈರೇಶಿ ಈ ಸುದ್ದಿ ಊರಲ್ಲಿ ಬಾಯ್ಬಿಡದಂತೆ 'ಎಲ್ಲವ್ವನ ಆಣೆ ಮಾಡಿಸಿ ಭಂಡಾರ ಬಡಿಯುತ್ತಾರೆ. ಯುಗಾದಿಯಂದು ಶ್ರೀಶೈಲ ಮಲ್ಲಿಕಾರ್ಜುನನಿಗೆ ಕಂಬಿ ತೆಗೆದುಕೊಂಡು ಹೋಗಿಬರುವುದು ಈ ಕಡೆಯ ಸಂಪ್ರದಾಯ. ಇದು ಕಾದಂಬರಿಯಲ್ಲಿ ಉಕ್ತಗೊಂಡರೂ. ಈ ಸಂಪ್ರದಾಯ ಅಷ್ಟು ಚಾಲ್ತಿಯಲ್ಲಿಲ್ಲದಿರುವುದು ವಿಶೇಷ. ಕಾದಂಬರಿಯಲ್ಲಿ 'ಸಮೃದ್ಧ ಸಾಂಸ್ಕೃತಿಕ' ವಿವರಣೆ ಬರದೆ. ಅಲ್ಲಲ್ಲಿ ಪ್ರಾದೇಶಿಕ ಸಾಂಸ್ಕೃತಿಕ ವಿವರಣೆಗಳು ವಿರಳವಾಗಿ ಹೀಗೆ ಸಿಕ್ಕುತ್ತವೆಯಷ್ಟೇ.

'ಜೋಗಿಮುರಡಿ' ಅನೇಕ ಕಾರಣಗಳಿಂದಾಗಿ ಕನ್ನಡ ಪ್ರಾದೇಶಿಕ ಕಾದಂಬರಿ ಪರಂಪರೆಯಲ್ಲಿ ಮೂಡಿಬಂದ ಒಂದು ಉತ್ತಮ ಹಾಗೂ ಹೆಸರಿಸಬಹುದಾದ ಗಟ್ಟಿ ಕಾದಂಬರಿಗಳಲ್ಲೊಂದು: ಇಂಥ ಗಟ್ಟಿ ಪ್ರಾದೇಶಿಕ ಕಾದಂಬರಿಯೊಂದನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ ಬೆಳಗಲಿಯವರು ಅಭಿನಂದನಾರ್ಹರು.

## ಮೌನಕ್ರಾಂತಿ (೧೯೯೨)

'ಕೇಸರಿಗರ್ಜನೆ'ಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡ ಪ್ರಸ್ತುತ ಕಾದಂಬರಿ. ಗ್ರಾಮಜೀವನದ ಮೇಲೆ 'ಪೂರ್ಣಬೆಳಕನ್ನು' ಚೆಲ್ಲುವದರೊಂದಿಗೆ ಅದರಲ್ಲಿ ಬದಲಾವಣೆಯ ಗಾಳಿ ಬೀಸುತ್ತಿರುವುದನ್ನು. ಮೇಲು-ಕೀಳು. ಬಡವ-ಬಲ್ಲಿದ. ಜಾತಿ-ಮತ. ಭೇದ-ಭಾವಗಳನ್ನು ತೂರೆದು ಒಗ್ಗಟ್ಟಾದ ಜನರ ಶಕ್ತಿ ಸಂಚಾರವಾಗುತ್ತಿರುವುದನ್ನು ತೋರಿಸಿಕೊಡುವ ಒಂದು ಉತ್ತಮ ಕಾದಂಬರಿ.

ಭಾರತ ತನ್ನ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಆಚರಿಸಿದರೂ. ಗ್ರಾಮೀಣ ಪ್ರದೇಶದ ಹದಗೆಟ್ಟ ರಾಜಕೀಯ ಮಾತ್ರ ಹಾಗೇ ಇದೆ. ಇನ್ನೂ ಮಾನಸಿಕ ಗುಲಾಮಗಿರಿ. ಅಷ್ಟೇ ಯಾಕೆ ದೈಹಿಕ ಗುಲಾಮಗಿರಿಯೂ ಕೂಡ ಅಲ್ಲಲ್ಲಿ ಕಾಣಸಿಗುತ್ತಿರುವುದು ದಿನಪತ್ರಿಕೆ ಓದುವವರಿಗೆ ಗೊತ್ತು. ಇಂಥ ವಿಷಮ ಪರಿಸ್ಥಿತಿಯಲ್ಲಿ ಹಳ್ಳಿಗಳ ಸುಧಾರಣೆಗೆ ಕೈಹಾಕುವವರಿಗೆ ಅನೇಕ ಅಡ್ಡಿ-ಆತಂಕಗಳು ಸಹಜವಾಗಿಯೇ ಎದುರಾಗುತ್ತವೆ. ಇದಕ್ಕೆ ಪ್ರಸ್ತುತ ಕಾದಂಬರಿಯ ಶಿವಶಂಕರನೂ ಹೊರತಾಗಿಲ್ಲ. ಲೇಖಕರೇ ಹೇಳುವ– "ರಾಜಕೀಯದಿಂದ ಗ್ರಾಮೀಣ ಬದುಕು ಇನ್ನೂ ಹದಗೆಡುತ್ತಲಿದೆ. ಈಗ ಜಿಲ್ಲಾ ಪರಿಷತ್ತುಗಳಾದ ಬಳಿಕ ಶಾಂತಿಪ್ರಿಯ ಹಳ್ಳಿಗರ ಬದುಕು ಇನ್ನೂ

ನರಕವಾಗಿದೆ. ಕೊಲೆ-ಸುಲಿಗೆಗಳು. ಸುಲಭ ಎನ್ನುವಷ್ಟರಮಟ್ಟಿಗೆ ಅವ್ಯಾಹತವಾಗಿ ನಡೆಯುತ್ತಲೇ ಇವೆ. ನ್ಯಾಯ. ನೀತಿ. ನೆಮ್ಮದಿ. ರಕ್ಷಣೆ. ನಾಗರಿಕ ಹಕ್ಕು ಈ ಪದಗಳು ಶಬ್ದಕೋಶಗಳಲ್ಲಿ ಅಡಗಿಕೊಂಡು ಕುಳಿತಿವೆಯಷ್ಟೇ" ಎಂಬ ಮಾತುಗಳು ಪ್ರಸ್ತುತ ಹಳ್ಳಿಗರ ವಾಸ್ತವ ಸ್ಥಿತಿಯನ್ನು ಅಕ್ಷರಶಃ ಸತ್ಯವಾಗಿ ನಮ್ಮೆದುರು ನಿಲ್ಲಿಸುತ್ತವೆ. ಇಂಥ ಪರಿಸ್ಥಿತಿಯಲ್ಲಿಯೇ ಇಂದು ಪ್ರತಿಗ್ರಾಮ ಭಾನಗಡಿಗಳ ಆಖಾಡವಾಗುತ್ತಲಿದೆ. ಸ್ವಾರ್ಥಿಗಳು ವಿಷ ಬೀಜ ಬಿತ್ತಿ. ತಾವು ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ: ಪಟ್ಟಭದ್ರರು ಇನ್ನೂ ಬಿಗಿಯಾಗಿ ತಮ್ಮ ಸ್ವಾರ್ಥಕ್ಕೆ ಅಂಟಿಕೊಳ್ಳುತ್ತಿದ್ದಾರೆ. ಗ್ರಾಮೀಣ ನೆಮ್ಮದಿಯ ಬದುಕಿಗೆ ಬೆಂಕಿಯಿಡುತ್ತಿದ್ದಾರೆ. ಇಷ್ಟಿದ್ದಾಗ್ಯೂ ಶಿವಶಂಕರನಂಥ ತರುಣರ ದಂಡೇ ಗ್ರಾಮೀಣ ಒಳಿತಿಗಾಗಿ ಹೆಣಗುತ್ತಿರುವುದು. ಇಂಥವರ ನೆರವಿಗೆ ಅನೇಕ ಓರಿ-ಕಿರಿ ಕೈಗಳು ಸಹಾಯಹಸ್ತ ನೀಡುತ್ತಿರುವುದು. ಲೇಖಕರೇ ಹೇಳುವಂತೆ ಇದೊಂದು ಸಮಾಧಾನದ ಸಂಗತಿಯಾಗಿದೆ. ಓೀಗಾಗಿ 'ಮೌನಕ್ರಾಂತಿ' ಗ್ರಾಮೀಣ ಬದುಕಿನ ಕೈಪಿಡಿಯಂತಿದೆ. ಗ್ರಾಮಜೀವನದ ಎಲ್ಲಮಗ್ಗುಲಗಳನ್ನು ಪ್ರತಿಪಾದಿಸುವಲ್ಲಿ ಲೇಖಕರು ಯಶಸ್ವಿಯಾಗುತ್ತ. ಚೆನ್ನಾಗಿ ಚಿತ್ರಿಸುತ್ತ ಸಮಕಾಲೀನ ಸಂದರ್ಭದಲ್ಲಿ ತೀರಪ್ರಸ್ತುತ ಕೃತಿಯೊಂದನ್ನೇ ಸಮಾಜಕ್ಕೆ ನೀಡಿದ್ದಾರೆ.

'ಮೌನಕ್ರಾಂತಿ'ಯಲ್ಲಿ ಪ್ರಾದೇಶಿಕ ಭಾಷೆಯ ಓತಮಿತ ಬಳಕೆಯನ್ನು ಕಾಣುತ್ತೇವೆ. ಪ್ರಾದೇಶಿಕ ಸಂಸ್ಕೃತಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ ಬೆಳಗಲಿಯವರು. ತಮ್ಮ ಹಿಂದಿನ ಪ್ರಾದೇಶಿಕ ಕಾದಂಬರಿಗಳಲ್ಲಿಯ ಅಲ್ಪ ಕೊರತೆಯನ್ನು ಸರಿದೂಗಿಸಿಕೊಂಡಿದ್ದಾರೆ. ಗ್ರಾಮಜೀವನದ ಹಲವು ಹತ್ತು ಸಮಸ್ಯೆಗಳು. ಅದಕ್ಕೆ ತಕ್ಕ ಪರಿಹಾರಗಳು. ಹಳ್ಳಿಗರ ಸಂಸ್ಕೃತಿ. ಆಚಾರ-ವಿಚಾರ. ಆಟ-ಪಾಟ. ಹಬ್ಬ-ಹರಿದಿನ. ಹವ್ಯಾಸ ಮುಂತಾದವುಗಳ ಬಗ್ಗೆ ವಿಶೇಷ ಕಾಳಜಿ ವಹಿಸಿದ 'ಮೌನಕ್ರಾಂತಿ' ಬೆಳಗಲಿಯವರ ಮತ್ತೊಂದು ಉತ್ತಮ ಪ್ರಾದೇಶಿಕ ಕಾದಂಬರಿ. ಕನ್ನಡ ಕಾದಂಬರಿ ಪರಂಪರೆಯಲ್ಲಿ ಇದಕ್ಕೊಂದು ವಿಶಿಷ್ಟ ಸ್ಥಾನವಿದೆ.

ಶಿವಶಂಕರ ಕಾಳಗಿ ಗ್ರಾಮದ ವಿದ್ಯಾವಂತ ಎಂ. ಎ. ಪದವಿಧರ. ತಂದೆಯಂತೆ ಮಗನೂ ಬದುಕಿಗೊಂದು ಆದರ್ಶವನ್ನು ಮೈಗೂಡಿಸಿಕೊಂಡು ಬೆಳೆದವ. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಶಿವಶಂಕರ ತಾಯಿಯ ದೈನಂದಿನ ಕಷ್ಟನಷ್ಟಗಳನ್ನು ನೋಡುತ್ತ-ನೋಡುತ್ತಲೇ ಬೆಳೆದವ: ಶಿಸ್ತುಸಂಯಮಗಳನ್ನು ಮೈಗೂಡಿಸಿಕೊಂಡವ. ಲಂಚಕೊಟ್ಟು ಉದ್ಯೋಗ ಓಡಿಯುವುದು ಶಿವಶಂಕರನಿಗೆ ಇಷ್ಟವಿಲ್ಲ. ತಂದೆಯ ಸ್ನೇಹಿತನಂತೆ ನಟಿಸಿದ ಊರಗೌಡನಾದ ರುದ್ರಗೌಡ ಹೊಲವನ್ನು ನುಂಗಿ ಹಾಕಿದ್ದ. ಒಂದೆಡೆ ಮನೆಯ ಆಧಾರವಾದ ಹೊಲ ಕೈಬಿಟ್ಟು ಹೋದುದು. ಮತ್ತೊಂದೆಡೆ ಲಂಚಕೊಡದೆ ನೌಕರಿ ಸಿಗುತ್ತಿಲ್ಲ– ಈ ಮಧ್ಯ ತಾಯಿಯ ಕಷ್ಟದ ಬದುಕು. ಇಂಥ ಸ್ಥಿತಿಯಲ್ಲಿಯೇ ಸೋದರಮಾವ ಬನಹಟ್ಟಿಯ ಲೋಕಪ್ಪ ತನ್ನ ಮಗಳು ಬಿ.ಎ. ಪದವೀಧರೆಯಾದ ಶಶಿಯನ್ನು ಕೊಡಲು ತಯಾರಾಗಿ. ಲಗ್ನದ ಸಮಯ ವರದಕ್ಷಿಣೆಗಾಗಿ ಮಧ್ಯಸ್ಥರ ಕಡೆಯಿಂದ ಕೇಳಿಸಿದಾಗ. ತನ್ನ ಆದರ್ಶ ಹೇಳಿ ಶಿವಶಂಕರ ಅದಕ್ಕೆ ಒಪ್ಪದೆ ಕೇವಲ ಲಗ್ನಕ್ಕೆ ಮಾತ್ರ ಒಪ್ಪಿಕೊಂಡಿದ್ದ. ಮದುವೆಯಾದ ನಂತರವೂ ಮಾವ ನೌಕರಿಗಾಗಿ ಹಣಕೊಡಲು ಸಿದ್ಧನಿದ್ದರೂ ಶಿವಶಂಕರ

ಅದನ್ನು ಪಡೆಯಲು ಸಿದ್ಧನಿಲ್ಲ; ಲಂಚಕೊಟ್ಟು ನೌಕರಿ ಹಿಡಿಯುವುದು ಶಿವಶಂಕರನಿಗೆ ಇಷ್ಟವಿಲ್ಲ. ಈತನ ಈ ರೀತಿಯ ಗುಣವನ್ನು ಕಂಡವರು. 'ಈತ ಯಾವ ಕಾಲದ ಮನುಷ್ಯ? ನೆಂದು ಉದ್ಗಾರ ತೆಗೆಯುವಷ್ಟು ಆದರ್ಶವನ್ನು ಮೈಗೂಡಿಸಿಕೊಂಡಿದ್ದ. ನಿರಾಶನಾಗದ ಶಿವಶಂಕರ ಅಲ್ಲಲ್ಲಿ ನೌಕರಿಗಾಗಿ ಅರ್ಜಿಸಲ್ಲಿಸಿ ಅಲೆದಾಡುತ್ತಲೇ ಇದ್ದ: ಸಂದರ್ಶನಗಳೆಲ್ಲ ಕೇವಲ 'ದರ್ಶನ' ಗಳಾಗುತ್ತಿದ್ದವು. ನೆರೆಯೂರಾದ ಜಾನೂರಿನ ಹೈಸ್ಕೂಲಿನಲ್ಲಿ ಶಿಕ್ಷಕ ನೌಕರಿ ಸಿಗಬಹುದಾಗಿದ್ದರೂ. ಅದು ರುದ್ರಗೌಡನ ಕರಾಮತ್ತಿನಿಂದ ಹಾಗೂ ಲಂಚದ ಕರಾಳಕೈಯಿಂದಾಗಿ ತಪ್ಪಿಹೋದುದು ಶಿವಶಂಕರನನ್ನು ಮತ್ತಷ್ಟು ಚಿಂತೆಗೀಡುಮಾಡಿತು.

ಶಶಿ ಶ್ರೀಮಂತ ಮನೆತನದಿಂದ ಬಂದಾಕೆ; ವಿದ್ಯಾವಂತ ಪದವೀಧರೆ. ಬನಹಟ್ಟಿಯಂಥ ಮಧ್ಯಮ ಪಟ್ಟಣದ ಗಾಳಿಯಲ್ಲಿ ಸುಖವಾಗಿ ಬೆಳೆದ ಶಶಿಗೆ ತೀರ ಹಿಂದುಳಿದ ಕಾಳಗಿಯ ಬಡವನ ಮನೆಯಲ್ಲಿ ಬಾಳುವುದು ತುಂಬ ಬೇಸರ ತರುತ್ತದೆ. ರಾತ್ರಿಹೇಗೋ ಕಳೆಯುತ್ತಿತ್ತು. ಹಗಲನ್ನು ದೂಡುವುದು ಆಕೆಯ ಜೀವದ ಮೇಲೆ ಬರುತ್ತಿತ್ತು. ಕೊಟ್ಟಿಗೆಯಲ್ಲಿಯ ಗಬ್ಬುನಾತದಿಂದ ಆಕೆಯ ಮೂಗು ವಾಸನೆಯ ಶಕ್ತಿಯನ್ನೇ ಕಳೆದುಕೊಂಡಂತಾಗಿತ್ತು. ಅವಳ ಅಲಂಕಾರದ ಪರಿಮಳಗಳು ಕೂಡ ಸುಗಂಧವನ್ನು ತ್ಯಜಿಸಿದ್ದವು. ಗುಬ್ಬಿಗೂಡಿನಂತಿರುವ ಮನೆಯ ಒಂದೆಡೆ ಎಮ್ಮೆ-ಕರು. ಅಲ್ಲಿಯೇ ಇನ್ನೊಂದೆಡೆ ಹೊಗೆಸುತ್ತಿ ಕಪ್ಪಾದ ಅಡುಗೆಮನೆ. ಇದ್ದುದರಲ್ಲಿಯೇ ಹವೆಯಾಡದ ಉಸಿರುಗಟ್ಟಿದಂತಿರುವ ಮಲಗುವ ಕೋಣೆ. ಹೀಗಾಗಿ ಶಶಿಗೆ ಅಲ್ಲಿಯ ವಾತಾವರಣದಿಂದ ತಲೆತಿರುಗಿದಂತಾಗುತ್ತಿತ್ತು. ಕೆಲಸವಂತೂ ನೀಗದ ಮಾತು. ಅತ್ತೆ ಗೌರಕ್ಕ ಹೇಗೂ ಅಣ್ಣನ ಮಗಳೆಂದು ಎಲ್ಲವನ್ನೂ ತಾನೇ ಸರಿದೂಗಿಸಿಕೊಂಡು ಹೋಗುತ್ತಾಳೆ: ಅದು ಅವಳಿಗೆ ಅನಿವಾರ್ಯವೂ ಆಗಿತ್ತು. ಕಲಿತವಳಾದರೂ ಶಶಿಗೆ ಅನುಸರಿಸಿಕೊಂಡು ಹೋಗುವುದು ದುಸ್ತರವಾದಾಗ ಸಹಜವಾಗಿಯೇ ಗಂಡ-ಹೆಂಡರಲ್ಲಿ ಆಗಾಗ ಕೋಪತಾಪಗಳು ತಲೆದೋರುತ್ತಿದ್ದವು. ಅವರಲ್ಲಿ ಪ್ರೀತಿಯೇನೋ ಇದೆ. ಆದರೂ ಪರಸ್ಪರರಲ್ಲಿ ಹೊಂದಾಣಿಕೆಯ ಅಭಾವ. ಹಳ್ಳಿಯ ವಾತಾವರಣಕ್ಕೆ ಶಶಿ ಒಗ್ಗದಿರುವುದೊಂದು ದೊಡ್ಡ ಸಮಸ್ಯೆಯಾದರೆ. ಶಿವಶಂಕರನಿಗೆ ನೌಕರಿ ಸಿಗದಾದಾಗ ಅದು ಮತ್ತಷ್ಟು ಉಲ್ಬಣಗೊಳ್ಳುತ್ತದೆ. ಕೆಲವು ಸಲ ಗಂಡನ ವೇದನೆ-ತೊಳಲಾಟಗಳನ್ನು ಅರ್ಥೈಸಿಕೊಳ್ಳದೆ ಕೆನ್ನೆಗೇಟು ತಿಂದು ತವರುಮನೆ ದಾರಿತುಳಿದ ಶಶಿ. ಗೆಳತಿಯಾದ ಕಿಶೋರಿಯ ಸಕಾಲಿಕ ಉಪದೇಶದಿಂದ ತನ್ನ ತಪ್ಪಿನ ಅರಿವಾಗಿ ಗಂಡನೊಂದಿಗೆ ಸಹಬಾಳ್ವೆ ಮಾಡುವ ಪಣತೊಟ್ಟು ಕಾಳಗಿಗೆ ಬಂದದ್ದೂ ಉಂಟು.

ಗೌರಕ್ಕ ಶಿವಶಂಕರನ ತಾಯಿ. ತನ್ನ ನಲವತ್ತನೇ ವಯಸ್ಸಿನಲ್ಲಿ ಗಂಡ ತೀರಿಕೊಂಡಾಗ. ಎಳೆಯ ಶಿವಶಂಕರನನ್ನು ಉಡಿಯಲ್ಲಿ ಕಟ್ಟಿಕೊಂಡು ಜೀವನ ನಡೆಸಿದಾಕೆ. ಮೊದಲೆರಡು ಮಕ್ಕಳು ಸತ್ತು ಶಿವಶಂಕರನೊಬ್ಬನೇ ಉಳಿದಾಗ. ಗಂಡನನ್ನು ಕಳೆದುಕೊಂಡ ಆಕೆಗೆ ಶಿವಶಂಕರನೇ ಜೀವನದ ಆಧಾರವಾದ. ತವರುಮನೆ ಶ್ರೀಮಂತಿಕೆಯದಾದರೂ. ಗಂಡ ಸದಾಶಿವಪ್ಪನ ಬದುಕು-ಬವಣೆಗಳಿಗೆ ಒಗ್ಗಿಕೊಂಡು ಬದುಕಿದವಳು. ಗಂಡನ ಸ್ನೇಹಿತನಂತೆ ನಟಿಸುತ್ತ ರುದ್ರಗೌಡ ಗಂಡನಿಲ್ಲದಾಗ ಗೌರಕ್ಕನ ಕೈಹಿಡಿಯಲು ಬಂದಾಗ ಸಹಜವಾಗಿಯೇ

ಅವಳ ಕೈಗಳು ಚಪ್ಪಲಿಯೆತ್ತಿದ್ದವು. ಈ ಕಾರಣಕ್ಕಾಗಿಯೇ ಗೌಡ ಇವಳ ಹೊಲವನ್ನು ನುಂಗಿ ನೀರುಕುಡಿದಿದ್ದ. ಗಂಡನ ಮರಣದ ನಂತರದಲ್ಲಿ ಆಕೆ. ನೋವು-ತಳಮಳ-ಸಂಕಟಗಳನ್ನು ತಾಳದೆ ಅನೇಕಸಲ ಆತ್ಮಹತ್ಯೆಗೂ ಯತ್ನಿಸಿ. ಮರುಕ್ಷಣದಲ್ಲಿಯೇ ಎದೆಗುಂದದೆ ಧೈರ್ಯದಿಂದ ಬದುಕಲು ಮನಸ್ಸು ಮಾಡಿದ್ದಳು. ಅಪ್ಪಿತಪ್ಪಿ ಕೂಡ ಮಗನ ಮುಂದೆ ತನ್ನ ಚಿಂತೆಯನ್ನು ತೋಡಿಕೊಂಡವಳಲ್ಲ. ಅಳುನುಂಗಿ ನಗುತ್ತಲೇ ಮಗನನ್ನು ಕಾಣುವ ಗೌರಕ್ಕ ಹೆಸರಿಗೆ ತಕ್ಕಂತೆ ಗೌರಮ್ಮಳೇ ಆಗಿದ್ದಳು.

ಸಮಗಾರ ಸಿದ್ಧಣ್ಣನ ಮಗಳು ಹೌಶಿಯದು ಕಷ್ಟಕರ ಬದುಕು. ಮದುವೆಯಾಗಿ ಗಂಡನ ಮನೆಗೆ ಹೊರಟು ನಿಂತ ಹೌಶಿಗೆ. "ಗಂಡ ದೇವ್ರು. ಮಾತ ಮೀರಬಾರ್ದು. ಉಗಳ ದಾಟಬಾರ್ದು. ಬಡದ್ರೂ ಬಡಿಸಿಕೋಬೇಕು. ಅಂದ್ರೂ ಆಡಿಸಿಕೋಬೇಕು. ತಿರುಗಿ ಮಾತಾಡಬಾರ್ದು. ಮ್ಯಾಲ ಮೋತಿ ಮಾಡಿ ದಿಟ್ಟಿಸಿ ನೋಡಬಾರ್ದು...."[೨೦] ಅರ್ಥವಿಲ್ಲದ ತಾಯಿಹೇಳಿದ ಇಂಥ ಸತ್ತ ಶಬ್ದಗಳನ್ನೇ ಹೊತ್ತುಕೊಂಡು ಗಂಡನ ಮನೆಹೊಸ್ತಿಲ ತುಳಿದ ಅವಳಿಗೆ ಗಂಡನ ಕುಡಿತ-ಬಡಿತಗಳೇ ಸ್ವಾಗತಿಸಿದವು; ಇವೇ ಅವನಿಂದ ಪಡೆದ ಸುಖಗಳು. ನೈಜ ಚಿತ್ರ ಇದಕ್ಕಿಂತಲೂ ಭೀಕರವಾಗಿತ್ತು; ನೆಲಕ್ಕೆ ಮೈ ಹಚ್ಚಿದರೂ ಆಕೆಗೆ ಸುಖ ಕನಸಿನ ಗಂಟಾಯಿತು. "ನನ ಗಂಡ ಭಾಳ ಸಾಲಾ ಮಾಡಿಕೊಂಡಾನು. ಅಂವ್ನ ದೋಸ್ತ ಸಾಲಾ ಕೊಟ್ಟಾನಂತ. ರಾತ್ರಿ ನಾ ಅಂವ್ನ ಕರಕೊಂಡ್ರು ಅಂವ ಎಲ್ಲಾ ಸೂಟ ಬಿಡ್ತಾನಂತ.... ನಾ ಇದಕ್ಕ ಕಬೂಲ ಆಗಬೇಕಂತ ಗಂಡ ಬಡದಾ. ಅಂತಾವ್ಗ ನಾ ಗಂಡಂತ ಹೆಂಗ ಅನ್ಲಿ ? ಗುಳದಾಳಿ ಕಟ್ಟಿದ ಗಂಡsನ ಓಂಗ ಹೇಳಿದರ ನಾಯೇನ ಮಾಡಬೇಕು...."[೨೧] ಎಂದೆನ್ನುವ ಹೌಶಿಯ ಮಾತುಗಳಲ್ಲಿ ಅವಳ ಬದುಕಿನ ಒಟ್ಟುನೋಟವನ್ನೇ ಕಟ್ಟಿ ಇಟ್ಟಂತಿದೆ. ಮೈಮಾರಲು ಇಷ್ಟವಿರದ ಹೌಶಿ ತವರಿನಲ್ಲಿ ಮೈಮುರಿದು ದುಡಿದು ಉಣ್ಣುವುದರಲ್ಲಿಯೇ ತನ್ನ ಶೇಷ ಬದುಕನ್ನು ಕಂಡುಕೊಂಡಿದ್ದಳು. ತನ್ನ ಮಾನ ಕಾಯ್ದುಕೊಳ್ಳಲು ಹೋಗಿ ತನ್ನ ಎಡಗಾಲ ಚಪ್ಪಲಿಯಿಂದ ಗಿರಿಗೌಡನ ಮುಖಕ್ಕೆ ಹೊಡೆದ ಹೌಶಿ. ಮುಂದೊಂದು ದಿನ ಈ ಕಾರಣಕ್ಕಾಗಿಯೇ ಗಿರಿಗೌಡನ ಬಲಾತ್ಕಾರಕ್ಕೆ ಬಲಿಯಾಗಬೇಕಾಯಿತು: ಇಂಥ ಘಟನೆಗಳೇ ಕಾಳಗಿಯ ಗ್ರಾಮಜೀವನವನ್ನು ಕದಡುತ್ತ ಹೋಗುತ್ತವೆ.

ರುದ್ರಗೌಡ ಕಾಳಗಿಯ ಗ್ರಾಮಜೀವನಕ್ಕೆ. ಜನರ ಸೌಹಾರ್ದಬದುಕಿಗೆ ಕಂಟಕನಾಗಿದ್ದ; ಊರಲ್ಲಿನ ಸಣ್ಣಪುಟ್ಟ ರೈತರ ಹೊಲಗಳನ್ನೆಲ್ಲ ನುಂಗಿ ನೀರುಕುಡಿದ ರುದ್ರಗೌಡ ಕಾಳಗಿಯ ಭದ್ರಗೌಡನಾಗಿದ್ದ. ಅಸಹಾಯಕರ ವಸ್ತು-ಒಡವೆಗಳನ್ನು ತಿಂದು ತೇಗಿ. ಅವರಿಗೆ ಸಾಲಸೋಲ ಕೊಟ್ಟು ಬಡ್ಡಿಯ ರೂಪದಲ್ಲಿ ಅವರ ರಕ್ತವನ್ನೇ ಹೀರುತ್ತಿದ್ದ. ಸದಾಶಿವಪ್ಪನಿಗೂ ಸ್ನೇಹಿತನಂತೆ ನಟಿಸುತ್ತ ಅವರ ಹೊಲವನ್ನು ನುಂಗಿ ನೀರುಕುಡಿದಿದ್ದ. ಗ್ರಾಮಜೀವನದಲ್ಲಿ ಅಶಾಂತಿ. ಶೋಷಣೆ. ದಬ್ಬಾಳಿಕೆ. ಕ್ರೌರ್ಯಗಳನ್ನು ನಡೆಸುತ್ತ. ರಾಜಕೀಯ ಪುಢಾರಿಗಳ ಬಾಲಂಗೋಚಿಯಂತೆ ಸದಾಕಾಲ ಆಳುವ ಪಕ್ಷದ ಬಾಲಬಡಿಯುತ್ತ ಊರಲ್ಲಿ ತಾನೇ ರಾಜನಂತೆ ಮೆರೆಯುತ್ತಿದ್ದ.

---

೨೦. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೨೭

೨೧. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೨೮

ರುದ್ರಗೌಡನ ಮಗ ಗಿರಿಗೌಡ ಇಂಥ ಕೆಲಸಗಳಲ್ಲಿ ತಂದೆಯನ್ನೂ ಮೀರಿಸುವಂತಿದ್ದ. ಊರಲ್ಲಿನ ಕೆಲವು ರಿಕಾಮಿಗಳ ಗುಂಪುಕಟ್ಟಿಕೊಂಡು ಪುಂಡಾಟಿಕೆ ನಡೆಸುತ್ತ ತಂದೆ ಗಳಿಸಿದ ಮೋಸದ ಹಣದ ಮೇಲೆ ಲಾಗ ಹೊಡೆಯುತ್ತಿದ್ದ. ತಂದೆ ಮಕ್ಕಳ ಸಕಲ ಅನಾಚಾರಗಳಿಗೆಲ್ಲ ಕೈಜೋಡಿಸುವವರಲ್ಲಿ ಕಿರಾಣಿ ಅಂಗಡಿ ಗುರುಸಿದ್ದಪ್ಪನೇ ಪ್ರಮುಖ ಆಸಾಮಿ.

ಊರಲ್ಲಿ ನೀರೋಕುಳಿ - ಹಾಲೋಕುಳಿಗಳನ್ನು ಆಚರಿಸುವ ಸುದ್ದಿ ಕೇಳಿ ಶಿವಶಂಕರನಿಗೆ ತುಂಬ ಸಂತೋಷವಾಗುತ್ತದೆ. ಆದರೆ. ".... ವಸಂತಮಾಸದ ಸಂಕೇತವಾದ ಹೋಳಿಯಂತೆ. ಓಕಳಿ ಕೂಡ ಕಾಮಪ್ರಚೋದನೆಯ ಆಟಗಳಲ್ಲಿ ಒಂದಾಗಿತ್ತು. ಉತ್ತರದಲ್ಲಿ ಎಲ್ಲರೂ ಸೇರಿ ಬಣ್ಣದ ನೀರು ಆಡುತ್ತಿದ್ದರೆ. ದಕ್ಷಿಣದಲ್ಲಿ ಕೆಲವು ಕಡೆ ರಾಡಿ ನೀರು ಆಡುತ್ತಾರಷ್ಟೇ: ಇವೆಲ್ಲ ಕಾಮಸಂಕೇತದ ಆಟಗಳೇ" [೭೨] ಇಂಥ ಅನಿಷ್ಟ ಕಾಮಕೇಳಿಯ ಅಶ್ಲೀಲ ಆಟಕ್ಕೆ ಹೊಸದಿಕ್ಕು ನೀಡಲು ಶಿವಶಂಕರ ಆಲೋಚಿಸಿ. ಗ್ರಾಮದಲ್ಲಿ ಅರ್ಧಮರ್ಧ ಕಲಿತವರು. ಕಲಿತು ನಿರುದ್ಯೋಗಿಗಳಾದವರನ್ನು. ಕಲಿಯದಿದ್ದರೂ ಹೊಸಹುರುಪಿನವರನ್ನು. ಸೋಮಾರಿಗಳಂತಿರುವವರನ್ನು ಒಂದೆಡೆ ಸೇರಿಸಿ ಒಂದು 'ತರುಣ ಸಂಘ' ವನ್ನು ಸ್ಥಾಪಿಸಿ. ಅದನ್ನು ರಿಜಿಸ್ಟರ್ಡ್ ಮಾಡಿಸಿ. ಅದರ ಮೂಲಕ ಊರಲ್ಲಿ ಹೊಸ-ಹೊಸ ಕಾರ್ಯ-ಕಲಾಪಗಳನ್ನು ಮಾಡಬೇಕೆಂದು ಆಲೋಚಿಸಿದ. ಸಂಘ ತನ್ನ ಅಸ್ತಿತ್ವವನ್ನು ನೀರೋಕುಳಿಯಿಂದಲೇ ಪಡೆದುಕೊಂಡು. ಸಾಂಕೇತಿಕವಾಗಿ ಹಬ್ಬದ ಮುನ್ನಾದಿನ ಸುತ್ತಮುತ್ತಲಿನ ಗ್ರಾಮಗಳ ಯುವಕರಿಗೆಲ್ಲ ಕಬಡ್ಡಿ ಪಂದ್ಯಾಟಗಳನ್ನು ಏರ್ಪಡಿಸಿ ಬಹುಮಾನ ಇಡುವ ಬಗ್ಗೆ ಆಲೋಚಿಸಿದ: ಅದಕ್ಕಾಗಿ ಸಮಗಾರ ಮಾರುತಿ. ಕಂಬಾರ ಬಾಳೇಶಿ. ರಾಚಪ್ಪ. ಮುಂತಾದ ಯುವಕರನ್ನೆಲ್ಲ ಒಂದೆಡೆ ಸೇರಿಸಿ. ಅನೇಕ ಅಡೆತಡೆಗಳ ಮಧ್ಯದಲ್ಲಿಯೂ ಪ್ರಾರಂಭಿಕವಾಗಿ ಪ್ರತಿಯೊಬ್ಬ ಸದಸ್ಯರೂ ಇಪ್ಪತ್ತೈದು ರೂಪಾಯಿಗಳ ಚಂದಾಹಣದ ಸಂಗ್ರಹಣದೊಂದಿಗೆ ಸಂಘ ಅಸ್ತಿತ್ವಕ್ಕೆ ಬಂತು. ಈ ಮಧ್ಯ ಮಾರುತಿಯ ಮನೆ ಮೇಲೆ ಕಲ್ಲುಬಿದ್ದು. ಆತ ತಲೆ ಒಡೆಸಿಕೊಂಡು ಜಮಖಂಡಿ ಆಸ್ಪತ್ರೆ ಸೇರಿದ್ದರೂ. ನಿಗದಿತ ದಿನದಂದು ಪಂದ್ಯಾಟಗಳು ನಡೆದೇ ಬಿಟ್ಟವು. ಗ್ರಾಮದಲ್ಲಿ ಇದೊಂದು ಹೊಸಗಾಳಿ. ಇದನ್ನು ಸಹಿಸದ ರುದ್ರಗೌಡನ ಗುಂಪಿನವರು ಕರೆಸಿ. "ನೋಡು ತಮ್ಮ. ನೀ ಇನಾ ಸಣ್ಣಾಂವಾ! ಓಕಳಿ ಮಾಡೂದು ಆಟಾಪಾಟಾ ಮಾಡಸೂದು ಊರ ಪಂಚರ ಕೆಲಸ. ಅದ ಅವ್ರ ಜವಾಬ್ದಾರಿ. ನಾವಾರು ಪಂಚರು ಅದೀವಲ್ಲ. ಈಗ ನೀ ಬೈಲಾಟದ ನಡು ಹಂದೀ ಹಾಸಿಧಾಂಗ ಈ ಹುಡತುತು ಆಟಾ ಯಾಕ ಇಟ್ಟಿದೀಪಾ...." [೭೩] ಎಂದು ಅಡ್ಡಗಾಲು ಹಾಕಿದರೂ. "ಓಕಳಿಗೆ ಯಾವ ಅಡ್ಡಿ ಆಗಧಾಂಗ ನಾವ ಆಟಾ ಆಡ್ತೀವು...." ಎಂದಿಷ್ಟೇ ಹೇಳಿ ಶಿವಶಂಕರ ತನ್ನ ಕೆಲಸದಲ್ಲಿ ತೊಡಗಿದ.

ಪಂದ್ಯಾಟದ ದಿನದಂದು ಪ್ರಾಸ್ತಾವಿಕವಾಗಿ ಮಾತನಾಡುತ್ತ ಶಿವಶಂಕರ. ".... ನಮ್ಮೂರಿನಲ್ಲಿ ಹಾಲೋಕುಳಿ ನಡೆಯುತ್ತಿರುವುದು ಅಭಿಮಾನದ ಸಂಗತಿ. ಸಾಹಸ ಪ್ರದರ್ಶನದ ಈ ಕಾರ್ಯಕ್ರಮ ಅಶ್ಲೀಲವಾಗಿ

---

೭೨. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೩೪

೭೩. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೪೩

ಮಹಿಳೆಯರ ಮೇಲೆ ನೀರು ಉಗ್ಗುವುದಕ್ಕಿಂತ ಮೇಲು.... ನಾವು ನಮ್ಮ ತರುಣ ಸಂಘದಿಂದ ಮುಂದೆ ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದ್ದೇವೆ. ಮನುಷ್ಯ ದುಡಿಯುವುದು ಕೇವಲ ಹೊಟ್ಟೆ-ಬಟ್ಟೆಗಾಗಿ ಅಲ್ಲ. ನಮ್ಮ ಬುದ್ಧಿವಿಕಾಸವೂ ಇದರಲ್ಲಿದೆ. ನಮ್ಮ ವಿಚಾರವಂತಿಕೆಯನ್ನು ಬೆಳೆಸಬೇಕು. ಇಂಥ ಸಾಮಾಜಿಕ-ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ನಮ್ಮ ವೈಚಾರಿಕತೆ ಬೆಳೆಯುತ್ತದೆ. ಇದರಿಂದ ನಾವೆಲ್ಲ ಪರಸ್ಪರ ಅರಿವು ಮೂಡಿ ಹತ್ತಿರವಾಗುತ್ತೇವೆ. ಒಂದಾಗುತ್ತೇವೆ. ಮಾನಸಿಕ ನೆಮ್ಮದಿ...."[೨೪] ಎಂದು ತೂಕಬದ್ಧವಾಗಿ ಮಾತನಾಡಿದ್ದು ನೆರೆದ ಸಭಿಕರನ್ನೆಲ್ಲ ಮೂಕವಿಸ್ಮಿತರನ್ನಾಗಿ ಮಾಡಿತು. ಊರಜನ ಶಿವಶಂಕರನ ಮಾತುಗಳಿಗೆ ಮನಸೋತರು: ಸಾಧ್ಯವಾದಷ್ಟು ಸಹಕರಿಸಿ ಅವನೊಂದಿಗೆ ಕೈ ಜೋಡಿಸಲು ಮುಂದಾದರು. ರುದ್ರಗೌಡನ ತಮ್ಮನ ಮಗ ಉಮಾಕಾಂತ ಶಿವಶಂಕರನ ನಿಜವಾದ ವ್ಯಕ್ತಿತ್ವವನ್ನು ಅರಿತು ಅವನೊಂದಿಗೆ ಸಹಕರಿಸಲು ಸಿದ್ಧನಾದುದಷ್ಟೇ ಅಲ್ಲ. ಊರಹಿರಿಯ ವಯೋವೃದ್ಧ ಶಿವಲಿಂಗಪ್ಪಜ್ಜನಂತಹ ಅನೇಕ ಹಿರಿಯರು ಬೆನ್ನುತಟ್ಟಿ ಬೆಂಬಲಕ್ಕೆ ನಿಂತುದು ಶಿವಶಂಕರನ ಬದುಕಿನ ಮಹತ್ವದ ತಿರುವಾದಂತೆ. ಕಾಳಗಿಗೆ ಹೊಸಬದುಕಿನ ಉಸಿರಾಟ ಪ್ರಾರಂಭವಾಯಿತು. ಒಂದೇ ದಿನದಲ್ಲಿ ಶಿವಶಂಕರ ಊರ ಪಂಚರಲ್ಲಿ ತಾನೂ ಒಬ್ಬನಾಗಿದ್ದ. ಇದರಿಂದ ಶಶಿ-ಗೌರಕ್ಕರಿಗೆ ಎಲ್ಲಿಲ್ಲದ ಆನಂದ. ಅಂದೇ ರಾತ್ರಿ ಮಾಲಿಂಗಪುರದ 'ಪಾರಿಜಾತ' ನಡೆಯಿತು: ನೋಡಲು ಮನೆಯವರೆಲ್ಲ ಹೋದರು. ಇದೇ ಒಳ್ಳೆಯ ಸಂಧಿಯೆಂದು ರುದ್ರಗೌಡ ಶಿವಶಂಕರನ ಮನೆ ಕಳ್ಳತನ ಮಾಡಿಸಿ. ಹಟ್ಟಿಯಲ್ಲಿ ಕಟ್ಟಿದ್ದ ಎಮ್ಮೆ-ಕರುಗಳಿಗೆ ವಿಷಪ್ರಾಶನ ಮಾಡಿಸಿ ಕೊಲ್ಲುವುದರ ಮುಖಾಂತರ ಹೊತ್ತೇರುವುದರಲ್ಲಿ ಶಿವಶಂಕರನನ್ನು ಬೀದಿಯಲ್ಲಿ ನಿಲ್ಲಿಸಿದ: ಇದರಿಂದ ಕಾಳಗಿ ಬದುಕಿಗೆ ಕಾಳ್ಗಿಚ್ಚು ಬಿದ್ದಂತಾಯಿತು. ಪೋಲಿಸ ಕೇಸಾಗಿ ಕಳವಿನ ವಸ್ತುಗಳನ್ನು ಶೋಧಿಸುವ ಕಾರ್ಯಗಳು ನಡೆಯುವ ಬೆನ್ನಹಿಂದೆಯೇ ಗಿರಿಗೌಡನ ಕರಾಮತ್ತುಗಳೂ ಊರಲ್ಲಿ ಲೀಲಾಜಾಲವಾಗಿ ನಡೆಯಲು ಪ್ರಾರಂಭವಾದವು. ಗ್ರಾಮದ ನಿಸ್ಸಹಾಯಕರಿಗೆ. ಶೋಷಿತರಿಗೆ. ಅಬಲೆಯರಿಗೆ. ದೀನದಲಿತರಿಗೆ ಸಹಾಯಹಸ್ತ ನೀಡಿ ಶಿವಶಂಕರ ತಾನೇ ಕೈಸುಟ್ಟುಕೊಂಡಿದ್ದ. ಎಲ್ಲವನ್ನು ಕಳೆದುಕೊಂಡಿದ್ದ ಶಿವಶಂಕರನಿಗೆ ದಾರಿ ತೋಚದಾಯಿತು. ಸಾಲದೆಂಬಂತೆ ಶಶಿ ಬೇರೆ ಮುನಿಸಿನಿಂದ ಬನಹಟ್ಟಿ ದಾರಿಹಿಡಿದಿದ್ದಳು. ಅವನ ಬದುಕು ತೂತುಬಿದ್ದ ಹಡಗಿನಂತೆ ಸಾವಕಾಶವಾಗಿ ಮುಳುಗಲು ಪ್ರಾರಂಭಿಸಿತು. ತರುಣ ಸಂಘದ ಸದಸ್ಯರೆಲ್ಲ ಮೈಯಲ್ಲಾ ಕಣ್ಣಾಗಿ ಕಳುವಿನ ವಸ್ತುಗಳ ಪತ್ತೆ ಕಾರ್ಯದಲ್ಲಿ ತೊಡಗಿದರು.

ಕಾದಂಬರಿಗೆ ಮೆರುಗು ಕೊಟ್ಟ ಪಾತ್ರವೆಂದರೆ ಕಿಶೋರಿಯದು. ಕಿಶೋರಿಯ ಉದಾತ್ತ ನಡೆ-ನುಡಿಗಳು ಕಾದಂಬರಿಗೆ ಉತ್ತಮ ಮೊನಚು ತಂದುಕೊಟ್ಟಿದೆ. ಶಶಿಯ ಗೆಳತಿಯಾಗಿ ಕಾಳಗಿಗೆ ಕಾಲಿಟ್ಟ ಕಿಶೋರಿ ಉಮಾಕಾಂತನ ಮಡದಿಯಾಗಿ ಕಾಳಗಿಯಲ್ಲಿ ಕಾಲೂರಿನಿಂತ ಪ್ರಸಂಗ ತುಂಬ ವಿಶಿಷ್ಟವಾದುದು. ಸರಳ-ಸಜ್ಜನಿಕೆ. ಎಲ್ಲರೊಂದಿಗೆ ಬೆರೆಯುವ ಗುಣ. ಸ್ವಾಭಾವಿಕ ನಡೆನುಡಿಗಳಿಗೆ ಹೆಸರಾದ ಕಿಶೋರಿ. ಶಿವಶಂಕರನಿಗೆ

---

೨೪. ದು. ನಿಂ. ಬೆಳಗಲಿ : ಮೌನಕ್ರಾಂತಿ, ಪುಟ ೫೪

ಸಹಾಯುಹಸ್ತಕಳೂ ಆದುದಲ್ಲದೆ. ಅವನ ನಿಕೃಷ್ಟ ಬದುಕಿಗೆ ಮಮ್ಮಲ ಮರುಗುತ್ತಾಳೆ. ಈ ಮಧ್ಯೆ ಉಮಾಕಾಂತನ ಮೇಲೆ ಕಲ್ಲು ಬೀಳುತ್ತವೆ. ಅವನ ದಿಟ್ಟತನಕ್ಕೆ ಹೆದರಿ ವಿರೋಧಿಗಳು ಪಲಾಯನ ಮಾಡಿದ್ದಲ್ಲದೆ. ಮುಂದೊಂದು ದಿನ ಅವರೇ ಬಂದು ತಾವು ಮಾಡಿದ ತಪ್ಪನ್ನು ಒಪ್ಪಿಕೊಂಡು ಕಾಲುಹಿಡಿಯುತ್ತಾರೆ. ಇದು ಕಾದಂಬರಿಯಲ್ಲಿ ತುಂಬಾ ಚೆನ್ನಾಗಿ ಮೂಡಿಬಂದಿದೆ.

ರುದ್ರಗೌಡನ ಬಾಲಂಗೋಚಿ ಗುರುಸಿದ್ಧಪ್ಪನ ಎಮ್ಮೆ ಕರುವೊಂದು ಸಾಯುತ್ತದೆ. ಅದನ್ನು ಎತ್ತಿ ಹಾಕಲು ಕೇರಿಯಲ್ಲಿ ಎಲ್ಲರನ್ನು ಕೈಕಾಲು ಹಿಡಿದು ಕರುವನ್ನು ಎತ್ತಿಹಾಕುವಂತೆ ಗೋಗರೆದು. ಹಣದಾಸೆ ತೋರಿಸಿದ್ದು ಎಲ್ಲವೂ ವ್ಯರ್ಥವಾದಾಗ ಶೆಟ್ಟಿ ಅನಿವಾರ್ಯವಾಗಿ ಶಿವಲಿಂಗಪ್ಪಜ್ಜನ ಕಾಲಿಗೆ ಬಿದ್ದು. "ಕಾಕಾ. ನೀವೇನ ಹೇಳ್ತಿರಿ. ನಾ ಕೇಳಾಕ ತಯಾರ ಅದನು ಗೌಡನ ಸಂಗ್ತಿ ಬಿಡ್ತನು. ಊರ ದವೀದಾಗ ಬರ್ತನು. ನನ್ನ ಬ್ಯಾರೆ ಇಡಬ್ಯಾಡ್ರಿ. ನನ್ನ ಕಡೆ ಏನ ತಪ್ಪಾಗೇತಿ ಹೇಳ್ರಿ. ಒಪ್ಕೊಂತೀನು...."[೭೫] ಕಣ್ಣೀರುಗರೆದಾಗ ಅವನಿಗೆ ಸಂಘದವರೆಲ್ಲ ತಾಕೀತು ಮಾಡಿ ದಂಡ ಕಟ್ಟಿ ದೈವದಲ್ಲಿ ಸೇರಿಸಿಕೊಂಡದ್ದು. ಊರಲ್ಲಿ ಒಂದು ಹೊಸಗಾಳಿಯೇ ಬೀಸಿದಂತಾಯಿತು. ಗುರುಸಿದ್ಧಪ್ಪನಂಥ ಅನೇಕರು ತಂತಮ್ಮ ತಪ್ಪುಗಳನ್ನು ಒಪ್ಪಿಕೊಂಡು ಸಂಘಕ್ಕೆ ಸೇರಿಕೊಂಡರು.

ಇದೇ ವೇಳೆಗೆ ಶಿವಶಂಕರನ ಕಳುವಾದ ವಸ್ತುಗಳ 'ತಲಾಷ್' ಕೈಗೊಂಡ ಸಂಘದ ಗೆಳೆಯರು ಸ್ವಲ್ಪವಾದರೂ ಸುಳಿವು ಸಿಕ್ಕರೆ ಸಾಕೆಂದು ಹವಣಿಕೆಯಲ್ಲಿರುವಾಗಲೇ. ಕಂಬಾರ ಬಾಳೇಶಿ ಐನಾಪುರಕ್ಕೆ ಹೋದಾಗ. ಉಗಾರದ ರೈಲುನಿಲ್ದಾಣದಲ್ಲಿ ಕಮಲಿಯುಟ್ಟುಕೊಂಡ ಪತ್ತಲ ನೋಡಿ ಹೌಹಾರಿದ. ಸಾವಕಾಶವಾಗಿ ವಿಳೆಬಿಚ್ಚಿದಾಗ ಅದು ಶಶಿಯದೇ ಎಂಬುದು ಖಾತ್ರಿಯಾದುದಲ್ಲದೆ. ಗೆಣೆಯ ನಾಗಪ್ಪ ಕೊಟ್ಟ ಬಗ್ಗೆಯೂ ಕಮಲಿ ಹೇಳಿದಾಗ. ಬಾಳೇಶಿ ಕಾಳಗಿಗೆ ಬಂದವನೇ ಸುದ್ದಿ ತಿಳಿಸಿದ. ಸುದ್ದಿ ತಿಳಿದ ಉಮಾಕಾಂತ ಶಿವಲಿಂಗಪ್ಪಜ್ಜ ಎಲ್ಲರೂ ನಾಗಪ್ಪನನ್ನು ಬೆದರಿಸಿದಾಗ. 'ಕಳ್ಳತನದ ಹಂಚಿಕೆ ರುದ್ರಗೌಡನದೆಂದೂ ಅದಕ್ಕೆ ಸೂತ್ರಧಾರ ಗಿರಿಗೌಡನೆಂದೂ. ಅದರ ಮುಖಂಡತ್ವ ತನ್ನದೇ ಎಂದು ನಾಗಪ್ಪ ಒಪ್ಪಿಕೊಂಡ. ಕಳ್ಳತನದ ಕಥೆಯನ್ನು ತಿಳಿದು ಊರಹಿರಿಯರು ಸಂತೋಷಗೊಂಡುದಲ್ಲದೆ. ಮುಂದಿನ ಕ್ರಮಕ್ಕಾಗಿ ಆತುರಗೊಂಡು. ಲಸಮನನ್ನು ಹುಡುಕಿಕೊಂಡು ಕೇರಿಯತ್ತ ಹೋಗಿ. ಸೋಮಾರಿಯಾದ ಲಸಮನನ್ನು ಒಪ್ಪಿಸಿದರು. ಇನ್ನೊಬ್ಬ ಕಳ್ಳ ಮಲ್ಲ ಮನೆಯಲ್ಲಿಯೇ ಇದ್ದು. ಮೊದಮೊದಲು ಕಳ್ಳತನವನ್ನು ಒಪ್ಪಿಕೊಳ್ಳಲು ಹಿಂಜರಿದರೂ ಸಂಘದವರ ಉಡದಹಿಡಿತಕ್ಕೆ ಸೋಲೊಪ್ಪಿಕೊಂಡಾಗ. ಸಂಘದವರೆಲ್ಲ ನಿಟ್ಟುಸಿರು ಬಿಟ್ಟರು. ಶಿವಲಿಂಗಪ್ಪಜ್ಜನ ಮುಂದಾಳುತನದಲ್ಲಿ ರುದ್ರಗೌಡನ ಮನೆಗೆ ಹೋಗಿ. "ಗೌಡ್ರು. ಈಗ ಒಂದ ಮಾತಹೇಳಿ ಹೋಗಲು ಬಂದೀವು. ಶಂಕ್ರಪ್ಪನ ಮನಿ ಕುಡಗಾದದ್ದು ಪತ್ತಾ ಹತ್ತೇತಿ. ತುಡಗ ಮಾಡಿದ ಮಂದಿ ಒಪ್ಕೊಂಡ ಎಲ್ಲಾ ಹಕ್ಕೀಕತ್ತ ಹೇಳ್ಯಾರು....." ರಟ್ಟಿಗಿ ಹಗ್ಗ ಬಿದ್ರ ನಿಮಗೂ ಚಂದಲ್ಲ. ನಮಗೂ ಚಂದಲ್ಲ. ಊರ ಅಪಮಾನ ಆಧಾಂಗ

---

೭೫. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೧೭೦

ಅವ್ರಪ್ಪಂಗ ಉತ್ತಮಮನಸ್ಯಾ. ಅಂವ್ನ ಸೆಗಣಾನs ನೀವ ತಿಂದರೀ.... ಗೌಡ್ರ "[೭೬] ಶಿವಲಿಂಗಪ್ಪಜ್ಜನ ಮಾತುಗಳು ಮೆತ್ತಗಾಗಿದ್ದರೂ ಸ್ಫೋಟಕವಾಗಿದ್ದವು. ರುದ್ರಗೌಡ. ರುದ್ರನಾಗಿಯೇ " ಏನ ಮಾಡ್ತಿರಿ. ಮಾಡ್ಕೋ ಹೋಗ್ರಿ. ನಾಯೇನ ತುಡಗ ಮಾಡ್ಡಿಲ್ಲ. ನಮ್ಮಲ್ಲಿ ಯಾ ಸಾಮಾನಿಲ್ಲ. ಪೈಲೇನ ಹೇಳೇನಿ. ಅಲ್ಲಿ ಪೋಲಿಸ ಠಾಣೆ. ಕೋರ್ಟುಕಚೇರಿ ಅದಾವು ಹೋಗಿ ಫಿರ್ಯಾದಿ ಕೊಡ್ರಿ.... ಸರಳ ಇಲ್ಲಿಂದ ಹೊರಗ ಹೋಗ್ರಿ. ಇನ್ನೊಮ್ಮೆ ನಮ್ಮನೀ ಕಟ್ಟೀಕಲ್ಲ ಏರಿದ್ರ ನೋಡ್ರಿ...."[೭೭] ಬೈದು ಕಳಿಸಿದಾಗ ಅನಿವಾರ್ಯವಾಗಿ ಸಂಘದ ವತಿಯಿಂದ ಪೋಲಿಸ ಕಂಪ್ಲೆಂಟ ಕೊಡಬೇಕಾಯಿತು: ಲಸಮ. ನಾಗಪ್ಪ. ಮಲ್ಲನನ್ನು ಅರೆಸ್ಟ್ ಮಾಡಿದ ಪೋಲಿಸರು ಗಿರಿಗೌಡನಿಗಾಗಿ ವ್ಯಾಪಕ ಶೋಧ ನಡೆಸಿದರು.

ಶಾರದಾ. ಕಿಶೋರಿ ಹಾಗೂ ಕಿರಿಯ ಮಗನೊಂದಿಗೆ ರುದ್ರಗೌಡನ ಮನೆಗೆ ಹೋಗಿ ತನ್ನ ಅತ್ತೆಯನ್ನು ಮನೆಗೆ ಕರೆದು ತಂದು ಶುಶ್ರೂಷೆ ಮಾಡತೊಡಗಿದಳು. ಇದಕ್ಕೆ ಶಿವಶಂಕರ-ಉಮಾಕಾಂತರು ಸಂತುಷ್ಟಗೊಂಡರು. ಸಾವಕಾಶವಾಗಿ ಶಶಿ ಹಳ್ಳಿಯ ವಾತಾವರಣಕ್ಕೆ ಒಗ್ಗಿಕೊಳ್ಳತೊಡಗಿದ್ದು. ಕಿಶೋರಿ ಉಮಾಕಾಂತರ ಸಂಬಂಧ ಗಟ್ಟಿಗೊಂಡಿದ್ದು. ಅದರೊಂದಿಗೆ ಗ್ರಾಮದಲ್ಲಿ ಇನ್ನೂ ಅನೇಕ ಸಾಮಾಜಿಕ ಕಾರ್ಯಗಳು ನಡೆಯುತ್ತವೆ. ಅಕ್ಕನ ಬಳಗವೊಂದು ಅಸ್ತಿತ್ವಕ್ಕೆ ಬಂದುದಲ್ಲದೆ. ಊರಲ್ಲಿ ಶಿಶುವಿಹಾರ ತೆರೆಯಲಾಯಿತು. ಕುಡುಕ ತಲೆಹಿಡುಕ ಗಂಡನಿಂದ ಬಿಡುಗಡೆ ಪಡೆದ ಹೌಶಿ ಆಯಾ ಆಗಿ ಕೆಲಸಕ್ಕೆ ತೊಡಗಿದರೆ. ತೇರದಾಳದ ನಿರ್ಮಲಾ ಶಿಕ್ಷಕಿಯಾಗಿ ಬಂದಳು. ಚರ್ಮಗಾರಿಕೆ ಸಂಘವೊಂದು ಸ್ಥಾಪನೆಗೊಂಡಾಗ ಮಾರುತಿಯೇ ಅದರ ಜವಾಬ್ದಾರಿ ಹೊತ್ತ. ಊರಲ್ಲಿ ಸಹಕಾರಿ ಸಂಘದ ಕಿರಾಣಿ ಅಂಗಡಿಯೊಂದನ್ನು ತೆರೆದಾಗ ಕಾಳಗಿಗಷ್ಟೇ ಅಲ್ಲ. ಸುತ್ತಮುತ್ತಲಿನ ಗ್ರಾಮಸ್ಥರಿಗೂ ಅದರಿಂದ ಉಪಯೋಗವಾಗತೊಡಗಿತು. ಹೆಚ್ಚು ಲಾಭಕ್ಕಿಂತ ಜನಸೇವೆಯೇ ಅದರ ಉದ್ದೇಶವಾಗಿರುವುದರಿಂದ ಅದು ಹೆಚ್ಚು ಜನಮೆಚ್ಚುಗೆ ಪಡೆಯಿತು. ಅದರ ಬೆನ್ನ ಹಿಂದೆಯೇ ಹಾಲುಉತ್ಪಾದಕರ ಒಕ್ಕೂಟವೊಂದು ತಲೆಯೆತ್ತಿ ನಿಂತುಕೊಂಡಿತು: ಕುರಿಸಾಕಾಣಿಕೆ ಕೇಂದ್ರಕ್ಕೆ ಬೀರಪ್ಪ ಮುಖಂಡನಾದ. ಗ್ರಾಮದ ಸುತ್ತಲೂ ಸುತ್ತಿಕೊಂಡ ಒಂದೊಂದೇ ಕಷ್ಟದ ಪದರುಗಳು ಸರಿಯುತ್ತ ಗ್ರಾಮಕ್ಕೆ ಹೊಸಚೈತನ್ಯ-ಹೊಸಹುರುಪು-ಹೊಸಉದ್ಯೋಗ-ಹೊಸಬೆಳಕು ಕಾಣತೊಡಗಿತು. ಈ ಹೊಸತನದ ಹಿಂದಿರುವ ಶಿವಶಂಕರ ಗ್ರಾಮದ ಪವಾಡಪುರುಷನಾದ. ಅವನ ಪವಾಡಕ್ಕೆ ಮಾರುಹೋಗದ ಜನರಿಲ್ಲ. ಅನೇಕ ರಿಕಾಮಿ ಯುವಕರು ಅವನತ್ತ ಬಂದು ತಂತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುತ್ತ ಸಹಾಯ ಹಸ್ತ ಚಾಚಿದರು. ಸೋಮಾರಿಗಳ. ಮನೆಮುರುಕರ. ಕುಡುಕರ ಆಗರವಾಗಿದ್ದ ಕಾಳಗಿ ಗ್ರಾಮ 'ಆದರ್ಶ ಗ್ರಾಮ' ವಾಗುತ್ತಿತ್ತು. ಹಳ್ಳಿಯ ಹರಟೆಯ ಸ್ಥಳಗಳೆಲ್ಲ ಬಿಕೋ ಎನ್ನಲಾರಂಭಿಸಿದವು. ಗೌಡನ ಓಂಬಾಲಕರು. ಮುಸುರೆಬಡಕರು. ಗೋಣುಹಾಕುವವರು ಗೌಡನ ಸಂಗ ತೊರೆದು ಬರುತ್ತಿರುವಲ್ಲಿ ಗುರುಸಿದ್ದಪ್ಪನ ಎಮ್ಮೆಕರುವಿನ ಪ್ರಕರಣ ತುಂಬ ಮಹತ್ವದ್ದಾಗಿತ್ತು.

---

೭೬. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೧೫೪

೭೭. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೧೫೫

ರುದ್ರಗೌಡನ ಹೆಂಡತಿ ಸುಟ್ಟುಕೊಂಡು ನೋವು ತಾಳದೆ ಚೀರಾಡುವ ಪ್ರಸಂಗದಲ್ಲಿ ದಾರಿತೋಚದ ರುದ್ರಗೌಡ. " ಬರ್‍ರ್ಯೋ.... ಬರ್‍ರ್ಯೋ.... ಒಳಗ ನನ ಹೇಣತಿ ಸುಟ್ಟಗೊಂಡಾಳು. ಲಗೂ ಯಾರಾದ್ರೂ ತ್ವಾಟಕ ಹೋಗಿ ಟ್ರ್ಯಾಕ್ಟರ್ ತರ್‍ರಿ...." [೭೮] ಚೀರಾಡುತ್ತಲೇ ಇರುವ ಗೌಡನನ್ನು ಜನ ದೂರದಿಂದಲೇ ನಿಂತು ನೋಡುವ ಪ್ರಸಂಗ ಕಾದಂಬರಿಗೆ ಗಾಂಭೀರ್ಯ ತಂದುಕೊಟ್ಟಂತಿದೆ. " ಬರ್‍ರ್ಯೋ.... ಬರ್‍ರ್ಯೋ.... ನಿಮ್ಮ ಕಾಲಿಗಿ ಬೀಳ್ತನ ಬರ್‍ರ್ಯೋ.... ಎಂದು ಕಣ್ಣೀರಿಟ್ಟು ಕೈಮುಗಿದು ಕರೆಯುವ ನೋಟ ಜನರಲ್ಲಿ ಅನುಕಂಪ ಹುಟ್ಟಿಸುವ ಬದಲಾಗಿ. " ಮಗನ ಸೊಕ್ಕಿತ್ತು.... ದೇವ್ರು ಇಳಿಸಿದ..... ರಗಡ ಮಾಡ್ಯಾನು. ಎರಡೂ ಕೈಯಿಂದ ಸುರಕೊಳ್ಳಲಿ.... ಮಗಾ ಮಂದೀ ಹೊಲಾಮನಿ ನುಂಗಿ ಏರಿ ಕುಂತಿದ್ವ. ಮಂದೀನ ಬಡಿಸಿದ.... ತುಡಗ ಮಾಡಿಸಿದ. ಈಗ ಮಂದಿ ಬೇಕಾಗ್ಯಾರ.... ರೊಕ್ಕ ಐತಿ.... ಸೊಕ್ಕ ಐತಿ.... ಬಳಕೊಳ್ಳಲಿ...." [೭೯] ಎಂಬಂತಹ ಆಕ್ರೋಶದ ಮಾತುಗಳನ್ನೇ ಹುಟ್ಟಿಸಿತ್ತು. ಕೊನೆಗೆ. ".... ರುದ್ರಗೌಡ ಕಳುವಾದ ಶಿವಶಂಕರನ ವಸ್ತುಗಳನ್ನು ಪೋಲಿಸರಿಗೆ ಒಪ್ಪಿಸಬೇಕು. ಮೋಸದಿಂದ ಗೇಣಿದಾರನೆಂಬ ನೆಪದಲ್ಲಿ ಪಡೆದ ಶಿವಶಂಕರ. ಮಾರುತಿ ಹಾಗೂ ಇತರರ ಹೊಲಗಳನ್ನು ಬಿಡಬೇಕು. ಒತ್ತೆಯ ರೂಪದಲ್ಲಿ ಇಟ್ಟುಕೊಂಡ ಇನ್ನಿತರ ಆಭರಣಗಳನ್ನೂ. ಬೇರೆ ವಸ್ತುಗಳನ್ನೂ ಹಿಂದಿರುಗಿಸಬೇಕು. ಸಾಲಕೊಟ್ಟ ಬಡ್ಡಿಯಲ್ಲಿ ಅನ್ಯಾಯದ ಹಣವನ್ನು ಬಿಡಬೇಕು. ಮುಂದೆ ತಂದೆ ಮಗ ಇಬ್ಬರೂ ಊರವರ ಜೊತೆ ಸಹಕರಿಸಬೇಕು...." [೮೦] ಇನ್ನೂ ಅನೇಕ ಕರಾರುಗಳನ್ನು ಹಾಕಿ ಸಂಘದವರು ರುದ್ರಗೌಡನನ್ನು ದವೀದೊಳಗೆ ಸೇರಿಸಿಕೊಂಡರು. ಎಲ್ಲರನ್ನೂ ಸಮಾನ ರೀತಿಯಲ್ಲಿ ಕಂಡು ಸಂರಕ್ಷಿಸಬೇಕಾದ ಕಾನೂನು ಮಾಡಲಾರದ ಕೆಲಸವನ್ನು. ಕಾನೂನು ರಕ್ಷಕರು ಹೊಣೆಹೊತ್ತು ತಾವು ನಿರ್ವಹಿಸಬೇಕಾದ ಕರ್ತವ್ಯವನ್ನು. ಮರೆತ ಕಾರ್ಯವನ್ನೂ ಗ್ರಾಮದ ಜನರ ಐಕ್ಯತೆ-ಒಗ್ಗಟ್ಟು. ಸರಿಯಾದ ರೀತಿಯಲ್ಲಿ ಪರಿಹರಿಸಿತ್ತು. ಪ್ರಾಮಾಣಿಕ ದೃಢವಾದ ನಿಲುವಿಗೆ ಜಯ ದೊರೆಯಿತು. ಊರೆಲ್ಲ ಒಂದಾದಂತೆ ಎಲ್ಲರೂ ಸರಿಬೆರೆತುಕೊಂಡಿದ್ದರು. ಕಾಳಗಿ ಗ್ರಾಮದ ಐಕ್ಯಕ್ಕೆ. ನೆಮ್ಮದಿಗೆ ಗೌಡತಿ ತನ್ನ ಪ್ರಾಣಾರ್ಪಣೆಯನ್ನೇ ಮಾಡಿದ್ದೊಂದು ವಿಚಿತ್ರ: ಆದರೂ ಸತ್ಯವಾಗಿತ್ತು. ಈ ಮಧ್ಯೆ ಸುಮಾ ಊರವರೊಂದಿಗೆ ಬೆರೆತುದು. ಶಶಿ ಗ್ರಾಮದ ಜನಜೀವನದೊಂದಿಗೆ ಬೆರೆತು ಸಂತೋಷದಿಂದ ದಿನಗಳೆಯುತ್ತಿದ್ದುದು. ಅದರ ಬೆನ್ನಹಿಂದೆಯೇ ಶಿವಶಂಕರನಿಗೆ ಸೊಲ್ಲಾಪುರ ಕಾಲೇಜೊಂದಕ್ಕೆ ನೇಮಕಾತಿಯಾದರೂ ಗ್ರಾಮದ ಸುಧಾರಣೆಗಾಗಿ ಅದನ್ನು ತಿರಸ್ಕರಿಸಿ ಕಾಳಗಿಯಲ್ಲಿಯೇ ಇರಬೇಕೆಂಬ ಅವನ ನಿರ್ಧಾರಕ್ಕೆ ಶಶಿ ಹೃದಯಾರೆ ಒಪ್ಪಿಕೊಂಡದ್ದು. ಕಿಶೋರಿ ಜಾನೂರಿನ ಹೈಸ್ಕೂಲಿಗೆ ರಾಜೀನಾಮೆ ನೀಡಿ ಅದು ಶಿವಶಂಕರನಿಗೇ ದೊರೆಯುವಂತೆ ಮಾಡಿದ್ದು. ಕಾದಂಬರಿಗೆ ಹೊಸ ಮೆರುಗನ್ನು ನೀಡಿದ್ದಲ್ಲದೆ. ತನ್ನ ಗುರಿ ಮುಟ್ಟುವುದರಲ್ಲಿ ಈ ಎಲ್ಲ ಘಟನೆಗಳು ಊರುಗೋಲಾಗಿವೆ.

ಮಾಯಣ್ಣ ಕಾಳಗಿಗೆ ಹೊಸದಾಗಿ ಬಂದ ಪ್ರಾಥಮಿಕ ಶಾಲಾ ಶಿಕ್ಷಕ. ಜೀವನದಲ್ಲಿ ಅನೇಕ ಕಷ್ಟ-ನಷ್ಟಗಳನ್ನು ಅನುಭವಿಸಿದ ಆತನಲ್ಲಿ ಕರ್ತವ್ಯಪ್ರಜ್ಞೆ ಸಹಜವಾಗಿಯೇ ಇತ್ತು: ಅದರೊಂದಿಗೆ ಬದುಕಿನ ಹೊಸ ಬೆಳಕಿಗೆ

---

೭೮. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೧೮೭

೭೯. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೧೮೮

೮೦. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೧೯೧

ಕಾತರನಾದವ. ಹೌಶಿಯ ನಡೆ-ನುಡಿಗಳು ಮಾಯಣ್ಣನಿಗೆ ತುಂಬ ಒಡಿಸಿದವು. ಹೌಶಿಗೂ ಅಷ್ಟೇ. ಆತನ ಸರಳ-ಸಜ್ಜನಸ್ವಭಾವಕ್ಕೆ ಮಾರುಹೋಗಿದ್ದಳು. ನೋವುಂಡ ಎರಡೂ ಮನಗಳು ಪರಸ್ಪರ ಬೆಸೆಯುವುದಕ್ಕೆ ಬಹಳ ದಿನ ಕಾಯಬೇಕಾಗಿರಲಿಲ್ಲ: ಪರಸ್ಪರರಲ್ಲಿ ಅನುರಾಗ ಅರಳಿತು. ಜಾಡು ತಿಳಿದ ಶಿವಶಂಕರ ಒಂದು ದಿನ ಮಾಯಣ್ಣನಿಗೆ ಹೌಶಿಯ ಕತೆಯನ್ನೆಲ್ಲ ಹೇಳಿ ಅವಳನ್ನು ಮದುವೆಯಾಗುವ ಇಚ್ಛೆ ಕೇಳಿದಾಗ. ಮಾಯಣ್ಣ 'ಜಾತಿಗಿಂತ ನೀತಿ ದೊಡ್ಡದು' "ಅದೇನಾರೆ ಇರ್‍ಲಿ ಹೌಶಿ ನನ್ನವಳು...."[೮೧] ಎಂದೆನ್ನುತ್ತ ಮನಸಾರೆ ಒಪ್ಪಿಕೊಂಡದ್ದು ಶಿವಶಂಕರನ ಆದರ್ಶಕ್ಕೆ ಸಿಕ್ಕ ಜಯ. ಈ ಜಯದೊಂದಿಗೆ ಕಾದಂಬರಿ ಸುಖಾಂತವಾಗುತ್ತದೆ. ಒಗ್ಗಟ್ಟೇ ಬಲವೆಂಬುದನ್ನು ಸಾಬೀತುಪಡಿಸುತ್ತದೆ.

ಗಾಂಧೀಜಿಯ ಗ್ರಾಮರಾಜ್ಯ-ರಾಮರಾಜ್ಯದ ಕನಸಿನಂತೆ ಮೂಡಿ ಬಂದ ಪ್ರಸ್ತುತ ಕಾದಂಬರಿಯ ಮುಖ್ಯ ಪಾತ್ರ ಶಿವಶಂಕರ. ಕಲಿತರೂ ಹಳ್ಳಿಗಾಗಿ ಹಳ್ಳಿಗರ ಮಧ್ಯದಲ್ಲಿದ್ದುಕೊಂಡು. ಅನೇಕ ಕಷ್ಟ. ಕಾರ್ಪಣ್ಯಗಳ ಮಧ್ಯದಲ್ಲಿಯೂ ತನ್ನಂತ ಅನೇಕ ಯುವಕರ 'ದಂಡು' ಕಟ್ಟಿ. ಗ್ರಾಮಸುಧಾರಣೆಗೆ ಕೈಹಾಕಿದ್ದು. ಅದರಲ್ಲಿ ಯಶಸ್ಸನ್ನೂ ಕಂಡದ್ದು. ಯುವಕರಿಗೆ. ವಿಶೇಷವಾಗಿ ಗ್ರಾಮೀಣ ಪ್ರದೇಶದ ತರುಣರಿಗೆ ಶಿವಶಂಕರ ತುಳಿದ ದಾರಿ ಒಂದು ಉದಾಹರಣೆಯಾಗಿ ಕಂಡುಬಂದರೆ. ಬೆಳಗಲಿಯವರ ಶ್ರಮ ಸಾರ್ಥಕವಾದೀತು. ಕಾದಂಬರಿಯಲ್ಲಿ ಕೇವಲ ಹಳ್ಳಿಯ ಸಮಸ್ಯೆಗಳನ್ನು ಮಾತ್ರ ಹೆಕ್ಕುತ್ತ ಹೋಗದೆ. ಸಮಸ್ಯೆಗಳಿಗೆ ಪರಿಹಾರಗಳನ್ನೂ ಕಂಡುಕೊಳ್ಳುತ್ತ. ಅವುಗಳನ್ನು ಸಮರ್ಥವಾಗಿ ಪ್ರತಿಪಾದಿಸುತ್ತ ಹೋಗಿದ್ದು ಕಾದಂಬರಿಯ ಯಶಸ್ಸಿಗೆ ಕಾರಣವಾಗಿದ್ದಲ್ಲದೆ. ಗ್ರಾಮೀಣ ಬದುಕನ್ನು ವಾಸ್ತವ ಪಾತಳಿಯಲ್ಲಿ ಚಿತ್ರಿಸಿದ್ದು ಬೆಳಗಲಿಯವರ ಬರವಣಿಗೆಯ ವಿಶೇಷತೆ. ಇಂಥ ಕಥೆ-ಕಾದಂಬರಿಗಳು ಇನ್ನಷ್ಟು ಸಂಖ್ಯೆಯಲ್ಲಿ ಬಂದಿದ್ದರೆ. ಗ್ರಾಮೀಣ ಜನತೆಯಲ್ಲಿ ಪ್ರಜ್ಞಾವಂತ ಶಕ್ತಿಯೊಂದು ಸಹಜವಾಗಿಯೇ ಬೆಳೆಯಲು ಸಹಾಯವಾಗುತ್ತಿತ್ತು: ಹಾಗಾಗದಿರುವುದು ಒಂದು ವಿಪರ್ಯಾಸದ ಸಂಗತಿ. ಇಂದಿನ ಸಾಮಾಜಿಕ. ರಾಜಕೀಯ. ಆರ್ಥಿಕ ಪರಿಸ್ಥಿತಿಯಲ್ಲಿ ಅಧಿಕಾರದಲ್ಲಿರುವವರು ಭ್ರಷ್ಟರಾದರೆ. ಅದಕ್ಕೆ ಸಿಕ್ಕ ನಲುಗಿದ ಯುವಕರು ಭ್ರಮನಿರಸನ ಹೊಂದುತ್ತಿದ್ದಾರೆ. ಪರಿಸ್ಥಿತಿಯನ್ನು ಒಳ್ಳೆಯದಕ್ಕೆ ಬದಲಾವಣೆ ಮಾಡುವ ದಾರಿ ಕಾಣದೆ. ಎತ್ತೆತ್ತಲೂ ಜಾರಿಬೀಳುವ. ಹೋಳು-ಹೋಳಾಗಿ ಒಡೆದು ಹೋಗುವ. ಒಬ್ಬರನ್ನೊಬ್ಬರು ಪರಚುತ್ತ. ಮೈಮನ ನೋಯಿಸಿಕೊಳ್ಳುವ ದಾರುಣ ಸ್ಥಿತಿ ಸಹಜಗಮ್ಯವಾಗುತ್ತಿದೆ. ಇಂಥ ವಿಷಮ ಸಂದರ್ಭದಲ್ಲಿ ಬೆಳಗಲಿಯವರ ಪ್ರಸ್ತುತ ಕಾದಂಬರಿ ಯುವಕ-ಯುವತಿಯರಲ್ಲಿ. ಅದೂ ವಿದ್ಯಾವಂತ ಯುವಪೀಳಿಗೆಯಲ್ಲಿ ಹೊಸಪ್ರಜ್ಞೆ ಅರಳಬೇಕು. ಕ್ರಿಯಾಶೀಲತೆ ಬೆಳೆಯಬೇಕು. 'ಮೌನಕ್ರಾಂತಿ'ಯಾಗಿ ಆದರ್ಶಗ್ರಾಮಗಳಾಗಬೇಕೆಂಬ ಸಂದೇಶ ಹೊತ್ತು ಬಂದುದು ಸಕಾಲಕ್ಕೆ ಬಂದ ಜೀವರಸದಂತಿದೆ. ಹಳ್ಳಿಯೊಂದರ 'ಪರಿಪೂರ್ಣಬದುಕ'ನ್ನು ಚಿತ್ರಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ಕಾದಂಬರಿಗೆ ಮೆರುಗು ನೀಡಿದ ಪಾತ್ರಗಳೆಂದರೆ. ಹೌಶಿ. ಕಿಶೋರಿ ಹಾಗೂ ಮಾಯಣ್ಣ. ಕಿಶೋರಿಯ ನಡೆ-ನುಡಿ. ಅವಳ ಸ್ನೇಹಮಯ ನಡವಳಿಕೆ. ಮತ್ತೊಬ್ಬರಿಗಾಗಿ ಮಾಡುವ ತ್ಯಾಗಮನೋಭಾವ. ಜೀವನವನ್ನು

---

೮೧. ದು. ನಿಂ. ಬೆಳಗಲಿ : ಮೌನಕ್ರಾಂತಿ. ಪುಟ ೨೦೩

ಗಂಭೀರಸ್ವರದಲ್ಲಿಯೇ ಸರಳವಾಗಿ ಸ್ವೀಕರಿಸುವ ಗುಣ. ದಾಂಪತ್ಯದ ಅರಿವು ಮೂಡಿಸಿ ಶಶಿಯಂಥ ಗೆಳತಿಯನ್ನು ಪಟ್ಟಣದ ವ್ಯಾಮೋಹದಿಂದ ಮುಕ್ತಿಗೊಳಿಸಿ ಹಳ್ಳಿಯ ಒಲವಿಗೆ ಹಚ್ಚಿದ ರೀತಿ. ಓದಗರಿಗೆ ತುಂಬ ಹಿಡಿಸುತ್ತದೆ. ಅಲ್ಪಮಟ್ಟಿಗೆ ಓದಿನ ಅರಿವಿದ್ದ ಹೌಶಿ ಸಂಪ್ರದಾಯದ ಕಟ್ಟುಪಾಡುಗಳಲ್ಲಿಯೇ ಬದುಕಬೇಕೆಂದರೂ. ಅದೇ ಅವಳಿಗೆ ಕುತ್ತಾದುದನ್ನು ಕಂಡು ಅನಿವಾರ್ಯವಾಗಿ ಮೈಮಾರಲು ಇಚ್ಛಿಸದೆ ಮೈಮುರಿದು ಉಣ್ಣಲು ಇಚ್ಛಿಸಿದ ರೀತಿ ತುಂಬ ಒಡಿಸುತ್ತವೆ. ಇದೊಂದು ಪ್ರಗತಿಗಾಮಿ ಧೋರಣೆಯಾಗಿ ಕಾಣುತ್ತದೆ. ಮಾಯಣ್ಣ ಶಿಕ್ಷಕನಾಗಿ ಬಂದವ. ಹಳ್ಳಿಗಷ್ಟೇ ಅಲ್ಲದೆ ಇಡೀ ಸಮಾಜಕ್ಕೆ ಒಂದು ಪಾಠ ಕಲಿಸಿದ್ದು: ಕೆಳವರ್ಗದ ಅದೂ ' ನಾಯಿಮುಟ್ಟಿದ ಗಡಿಗೆ 'ಎಂದೆನ್ನುವ ಹೌಶಿಯನ್ನು ಮನಸಾರೆ ಒಪ್ಪಿ ಮದುವೆಯಾದುದು ಕಾದಂಬರಿಗೆ ಮತ್ತಷ್ಟು ಕಸುವನ್ನು ತಂದುಕೊಟ್ಟಿದೆ. ಸದ್ದುಗದ್ದಲವಿಲ್ಲದೆ ಕಾದಂಬರಿಯಲ್ಲಿ ಅನೇಕ ಕ್ರಾಂತಿಕಾರಕ ಪರಿವರ್ತನೆಗಳನ್ನು ಕಾಣಿಸುತ್ತ. ' ಮೌನಕ್ರಾಂತಿ ' ಯೆಂಬುದಕ್ಕೆ ಸಾರ್ಥಕ ವ್ಯಾಖ್ಯೆಯನ್ನೇ ನೀಡುತ್ತದೆ.

ಕಾದಂಬರಿಯಲ್ಲಿ ಅನೇಕ ಮೈನವಿರೇಳಿಸುವ ಘಟನೆಗಳು ನಡೆಯುತ್ತವೆ. ಶಿವಶಂಕರನ ಮನೆಯ ಸರ್ವಸ್ವವೂ ಕಳೆದುಹೋದುದು. ಎಮ್ಮೆ-ಕರುವಿಗೆ ವಿಷವಿಟ್ಟ ಪ್ರಸಂಗ. ಎಲ್ಲಕ್ಕಿಂತ ಹೆಚ್ಚಾಗಿ ಕಾದಂಬರಿಯ ಕೊನೆಯ ಹಂತ ಅತ್ಯಂತ ಪರಿಣಾಮಕಾರಿಯಾಗಿದೆ. ರುದ್ರಗೌಡನ ಹೆಂಡತಿ ಮೈಸುಟ್ಟುಕೊಂಡು ಕರಕಾದ ಪ್ರಸಂಗದಲ್ಲಿ ಊರಿಗೇ ಭದ್ರಗೌಡನಂತಿದ್ದ ರುದ್ರಗೌಡ ಅಸಹಾಯಕನಾಗಿ ' ಬರ್‍ರ್ಯೋ.... ಬರ್‍ರ್ಯೋ.... ಉಳಿಸ್ರೋ....' ಎಂದು ಕೂಗುತ್ತ ಕಂಡ-ಕಂಡವರ ಕಾಲುಹಿಡಿಯುವ ನೋಟ ಭೀಭತ್ಸವಷ್ಟೇ ಅಲ್ಲ. ಕರುಣಾಜನಕವೂ ಆಗಿರುವುದರೊಂದಿಗೆ. ' ಮಾಡಿದ್ದುಣ್ಣೋ ಮಾರಾಯಾ ' ಎಂಬುದನ್ನು ನೆನೆಪಿಸಿಕೊಡುತ್ತದೆ. ಊರವರ ಬಹಿಷ್ಕಾರದ ' ಲಕ್ಷ್ಮಣ ರೇಖೆ 'ಗೆ ಬಲಿಯಾಗಿ ಕಿರಾಣಿ ಅಂಗಡಿ ಗುರುಸಿದ್ದಪ್ಪ. ರುದ್ರಗೌಡರು ದಂಡತೆತ್ತು ಊರವರೊಂದಿಗೆ ಸಹಕರಿಸುತ್ತ ಬಾಳುವೆ ನಡೆಸಲು ಒಪ್ಪಿಕೊಂಡ ರೀತಿ ' ಒಕ್ಕಟ್ಟಿನಲ್ಲಿ ಬಲವಿದೆ '. ಐಕ್ಯತೆಯಲ್ಲಿ ಎಂಥ ಶಕ್ತಿಯಿದೆಯೆಂಬುದನ್ನು ಸಾಬೀತು ಪಡಿಸುತ್ತದೆ.

ಶಾರದಾ. ತನ್ನ ಸೊಸೆ ಕಿಶೋರಿಯೊಂದಿಗೆ ರುದ್ರಗೌಡನ ಮನೆಗೆ ಹೋಗಿ ಅತ್ತೆಯನ್ನು ಮನೆಗೆ ಕರೆತಂದು ಆರೈಕೆ ಮಾಡುತ್ತ ಮುದುಕಿಯನ್ನು ತುಂಬ ಪ್ರೀತಿ-ವಿಶ್ವಾಸದಿಂದ ನೋಡಿಕೊಳ್ಳುವ ಪ್ರಸಂಗ ಗ್ರಾಮೀಣರಲ್ಲಿ ಗಾಢವಾಗಿರುವ ಮಾನವೀಯತೆ ಮತ್ತು ಕರ್ತವ್ಯಪ್ರಜ್ಞೆಗೆ ಸಾಕ್ಷಿಯಾಗಿದೆ. ರುದ್ರಗೌಡನ ದಾರ್ಷ್ಟ್ಯ. ದೌರ್ಜನ್ಯಗಳು. ಮನೆಯವರೆಗೆ ಹೋದಾಗಲೂ ಮಾತನಾಡಿಸದ ರುದ್ರಗೌಡ ಹಾಗೂ ಅವನ ಹೆಂಡತಿಯ ಧೋರಣೆಯಿಂದಾಗಿ ಅವಮಾನವಾದರೂ ಎದೆಗುಂದದ ಶಾರದಾ ಕಿಶೋರಿಯರು ಮುದುಕಿಯನ್ನು ಆರೈಕೆ ಮಾಡಿದ ರೀತಿ ಅವರಲ್ಲಿನ ಸಹನೆ-ಸಂಭಾವಿತಗುಣಗಳಿಗೆ ಮತ್ತಷ್ಟು ಶೋಭೆ ತಂದಂತಿವೆ. ಇವರ ಆರೈಕೆಯಿಂದ ಇನ್ನಷ್ಟು ಬದುಕುವ ಆಸೆಹೊತ್ತ ಮುದುಕಿಯ ಕಂಗಳಲ್ಲಿನ ಕಾಂತಿ. ಬದುಕಿಗೆ ಬೇಕಾದುದು ಹಣ-ದರ್ಪ-ಅಧಿಕಾರ-ಅಂತಸ್ತುಗಳಲ್ಲವೆಂಬುದನ್ನು ಸಾರಿಸಾರಿ ಹೇಳಿದಂತಿದೆ. ಗ್ರಾಮವೊಂದರ ಐಕ್ಯ. ಒಗ್ಗಟ್ಟು. ಸಹಬಾಳ್ವೆ. ಸಹಕಾರ. ಪರಸ್ಪರರ ನೋವು ನಲಿವುಗಳಲ್ಲಿ ಸಹಭಾಗಿತ್ವ ಪಡೆವ ರೀತಿ. ವರ್ಣ-ವರ್ಗಭೇದಗಳನ್ನು ಮೀರಿ ಬೆಳೆಸುವ ರೀತಿ ಒಂದೆಡೆಯಾದರೆ. ಪುಂಡಾಟಿಕೆಯ.

ದರ್ಪ. ಅಂತಸ್ತಿನ ಹಮ್ಮು-ಬಿಮ್ಮು. ಗೌಡಿಕೆಯ ಗತ್ತು. ಕುಡುಕರ ಜೀವನ. ಕಳ್ಳತನದ ಭಾನಗಡಿಗಳು. ಹೀಗೆ ಹಳ್ಳಿಯ ಎರಡೂ ಮುಖಗಳನ್ನು ತೋರಿಸುತ್ತ ಹೋಗಿರುವ ಕಾದಂಬರಿ ತನ್ನ ನಿಜವಾದ ಗುರಿಯನ್ನು ಮುಟ್ಟುವಲ್ಲಿ ಸಫಲವಾಗಿದೆ; ಆದರೂ ಅಲ್ಪಸ್ವಲ್ಪ ಕೊರತೆಯ ಸೆಳಕೂ ಅಲ್ಲಿ ಕಾಣದಿರದು.

ಕಾದಂಬರಿಯ ರಚನಾ ಕಾಲವನ್ನು ಗಮನಿಸಿದರೆ. ಆ ಕೊರತೆಯ ಸೆಳಕು ನಮಗೆ ಗೋಚರವಾಗುತ್ತದೆ. ಸಾಮಾಜಿಕ ಪ್ರಗತಿಪರ ಕಾರ್ಯಗಳೆಂದು ಲೇಖಕರು ಪಟ್ಟಿಮಾಡುವ ಯೋಜನೆಗಳೆಲ್ಲ ಈಗಿನಷ್ಟು ಅಂದಚೆಂದದ ಹೆಸರನ್ನಾಗಲಿ. ಮಹತ್ವವನ್ನಾಗಲಿ ಅಂದು ಪಡೆದಿರಲಿಲ್ಲ. ವರ್ಣ-ವರ್ಗಭೇದ. ಜಾತಿಭೇದ. ರಾಜಕೀಯ ಪಕ್ಷಭೇದ. ದ್ವೇಷ-ಅಸೂಯೆಗಳು. ಈಗಿನಷ್ಟು ಅಂದು ಅನಾಹುತಕಾರಿ ರೂಪದಲ್ಲಿರಲಿಲ್ಲ. ಇಂಥ ಅಲ್ಪ-ಸ್ವಲ್ಪ ಕೊರತೆ ಏನೇ ಇದ್ದರೂ ಸಮರ್ಥವಾದ ವಸ್ತು-ಭಾಷೆ-ಶೈಲಿಯಿಂದಾಗಿ ಕಾದಂಬರಿ ಗ್ರಾಮಜೀವನದ ರೀತಿಯನ್ನು ಸಮರ್ಥವಾಗಿ ಚಿತ್ರಿಸುತ್ತ. ತನ್ನ ಗುರಿಮುಟ್ಟಿದೆ; ಗ್ರಾಮೀಣರ ಬದುಕನ್ನು ಕಂಡುಂಡ ಲೇಖಕರಿಗೆ ಇಂಥ ಚಿತ್ರಣವೊಂದು ಸಹಜ-ಸರಳ ಕೈವಶವಾಗಿದೆ. " ಗ್ರಾಮೀಣ ಸಮಸ್ಯೆಗಳ ಸುತ್ತ ಸಾಂದ್ರವಾದ ಅನುಭವವನ್ನು ಗಟ್ಟಿಗೊಳಿಸುವ ' ಮೌನಕ್ರಾಂತಿ ' ಮಹತ್ವದ ಕಾದಂಬರಿ. ಇದು ಸಮಕಾಲೀನ ಸಂದರ್ಭದಲ್ಲಿ ವಿಶಿಷ್ಟವಾದುದು ".[೮೨] ಅಲ್ಲದೆ ಇಂಥ ಅನೇಕ ಕಾದಂಬರಿಗಳು ಕನ್ನಡದಲ್ಲಿ ಮೂಡಿ ಬಂದಿದ್ದರೆ ನಮ್ಮ ಸಾಮಾಜಿಕ ಚಿತ್ರಣವೇ ಬೇರೆಯಾಗುತ್ತಿತ್ತು.

" ಬೆಳಗಲಿಯವರ ಈ ಕಾದಂಬರಿ ಪ್ರಗತಿಶೀಲ ಹಾಗೂ ಬಂಡಾಯ ಚಳುವಳಿಗಳ ನಡುವಿನ ಚರ್ಚೆಗೆ ಉಪಯುಕ್ತವಾಗಬಲ್ಲುದು "[೮೩] ಇದರಲ್ಲಿ ಬಂಡಾಯವಿದೆ - ಕ್ರಾಂತಿಯಿದೆಯಾದರೂ. ಅದು ಗಾಂಧೀಜಿ ಮಾರ್ಗದಲ್ಲಿ ನಡೆದು ತನ್ನ ಸಫಲತೆಯನ್ನು ಕಂಡುಕೊಂಡಿದೆ. ಪ್ರಗತಿಯಿದೆಯಾದರೂ. ಪ್ರಗತಿಶೀಲ ಪಂಥದ ತೀವ್ರತೆಯಿರದೆ ನವೋದಯದ ಕಳಕಳಿಯಿಂದಲೇ ಗ್ರಾಮವನ್ನು ಕಂಡ ರೀತಿ ಸಾಹಿತ್ಯಸಂದರ್ಭದಲ್ಲಿ ಬೆಳಗಲಿಯವರ ಬರವಣಿಗೆಗೆ ವಿಶೇಷ. ವಿಶಿಷ್ಟ ಸ್ಥಾನವಿದೆಯೆಂಬುದನ್ನು ಪ್ರಚುರಪಡಿಸುತ್ತದೆ. ಸಾಮಾಜಿಕ ಕಳಕಳಿಯ ಒತ್ತಡವೇ ಅವರ ಅನೇಕ ಕಾದಂಬರಿಗಳಲ್ಲಿ ಕೆಲಸ ಮಾಡಿದ್ದು ಗೋಚರಿಸುತ್ತದೆ; ಲೇಖಕನೊಬ್ಬನಲ್ಲಿ ಅದು ಸಹಜವೂ ಕೂಡ. ಖಡ್ಗಕ್ಕಿಂತ ಪೆನ್ನು. ಕಾನೂನಿಗಿಂತ ಮನಸ್ಸು. ಅನುಕಂಪಕ್ಕಿಂತ ಅನುಸರಣೆ. ಸಮಾಜದ ಪರಿವರ್ತನೆಗೆ ಕಾರಣವಾಗಬಲ್ಲವೆಂಬುದನ್ನು ಪ್ರತಿಪಾದಿಸುವ ಪ್ರಸ್ತುತ ಕಾದಂಬರಿ ಕನ್ನಡ ಕಾದಂಬರಿ ಪರಂಪರೆಯಲ್ಲಿ ಮೂಡಿ ಬಂದ ಒಂದು ಉತ್ತಮ ಕೃತಿ.

**ಪ್ರಾದೇಶಿಕತೆ :**

ಒಂದು ಕೃತಿಯನ್ನು ' ಪ್ರಾದೇಶಿಕ ' ವೆಂದು ಗುರುತಿಸುವಲ್ಲಿ. ಅಲ್ಲಿನ ಭೌಗೋಳಿಕತೆ. ಭಾಷೆ. ಸಂಸ್ಕೃತಿಗಳು ಮಹತ್ವದ ಅಂಶಗಳು. ಪ್ರಸ್ತುತ ಕಾದಂಬರಿಯಲ್ಲಿ ಬೆಳಗಲಿಯವರು ಬಿಜಾಪುರ ಪ್ರದೇಶದ ಬಳಕೆಗನ್ನಡದ ಸಹಜ-

---

೮೨. ಜಿ. ಎಂ. ಹೆಗಡೆ : (ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ) ಕಾತ್ರಾಳ ರತ್ನಿಯ ಚಾದಂಗಡಿ ಪುಟ ೩೩೬ ರಿಂದ

೮೩. ನಟರಾಜ್ ಹುಳಿಯಾರ್ (ಲಂಕೇಶ ಪತ್ರಿಕೆಯಲ್ಲಿ) : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೩೬ ರಿಂದ ಆಯ್ದುಕೊಂಡದ್ದು

ಸುಂದರವಾದ ನುಡಿಗಟ್ಟುಗಳನ್ನು. ಗಾದೆಮಾತುಗಳನ್ನು ಸಂದರ್ಭಕ್ಕೆ ತಕ್ಕಂತೆ ಬಹಳಷ್ಟು ಹಿತಮಿತವಾಗಿ ಬಳಸಿಕೊಂಡಿದ್ದಾರೆ. ಓದುವುದಕ್ಕೆ ಹೆಚ್ಚು ಸರಳವೂ. ಅರ್ಥೈಸುವುದಕ್ಕೆ ಹೆಚ್ಚು ಸುಲಭವೂ ಆಗುವಂತೆ ಪ್ರಾದೇಶಿಕ ಭಾಷೆಯ ಪ್ರಯೋಗ ಲೇಖಕರ ಕೈಯಲ್ಲಿ ಕಲಾತ್ಮಕತೆಯನ್ನು ಪಡೆದಿದೆ. ಬೆಳಗಲಿಯವರು ಪ್ರಾದೇಶಿಕ ಭಾಷೆಗೇ ಜೋತುಬೀಳದೆ. ತುಂಬ ಸಂಯಮದಿಂದ. ವಸ್ತುವಿನ ಓಟಕ್ಕೆ ಬೇಕಾದಷ್ಟು. ಕಥೆಯ ಸಹಜ ನಡೆಗೆ ಅವಶ್ಯವಿದ್ದಷ್ಟು. ಬನಹಟ್ಟಿಯ ಸುತ್ತಲಿನ ಬಾಯಿಮಾತನ್ನು ಬಳಸಿಕೊಂಡಿದ್ದಾರೆ. ಅವರ ಉಳಿದ ಪ್ರಾದೇಶಿಕ ಕಾದಂಬರಿಗಳಿಗೆ ಹೋಲಿಸಿದರೆ. `ಮೌನಕ್ರಾಂತಿ`ಯಲ್ಲಿ ಪ್ರಾದೇಶಿಕ ಭಾಷಾ ಸೊಗಡು ತುಂಬ ಹಿತಮಿತವಾಗಿದೆ. ತಮ್ಮ ಹಿಂದಿನ ಪ್ರಾದೇಶಿಕ ಕಾದಂಬರಿಗಳಲ್ಲಿ ಅನುಭವಿಸಿದ `ಸಾಂಸ್ಕೃತಿಕ ಪಾತಳಿಯ ಕೊರತೆ`ಯನ್ನು ಈ ಕಾದಂಬರಿಯಲ್ಲಿ ಸರಿಪಡಿಸಿದಂತೆ ಕಾಣುವಷ್ಟರಮಟ್ಟಿಗೆ ಬೆಳಗಲಿಯವರು ಪ್ರಾದೇಶಿಕ ಸಂಸ್ಕೃತಿಯನ್ನು ತುಂಬ ಚೆನ್ನಾಗಿ ತಂದಿದ್ದಾರೆ. ಪ್ರಾದೇಶಿಕ ಭಾಷೆ ಮಿತವಾಗಿದ್ದರೂ ಸಮರ್ಥವಾಗಿದೆ. ಅಲ್ಲಿನ ಗಾದೆಮಾತು-ನುಡಿಗಟ್ಟುಗಳ ಸಹಜ-ಸರಳ-ಸಂಯಮದ ಬಳಕೆಯಿಂದಾಗಿ ಕಾದಂಬರಿಗೆ ಹೊಸ ಮೊನಚು-ಮೆರುಗು ಬಂದಿದೆ.

**ಸ್ಥಳ-ಪಾತ್ರ :**

`ಮೌನಕ್ರಾಂತಿ` ಕೇವಲ ಯಾವುದೇ ವರ್ಣ-ವರ್ಗಕ್ಕೆ ಸೀಮಿತವಾದ ಕಾದಂಬರಿಯಲ್ಲ. ಇಲ್ಲಿ ಮುಖ್ಯವಾದುದು ಇಡೀ ಗ್ರಾಮೀಣರ ಬದುಕು. ಹೀಗಾಗಿ ವಿವಿಧ ಸ್ತರಗಳ ವಿವಿಧ ವೃತ್ತಿಯ. ವಿವಿಧ ಸ್ವಭಾವದ ಪಾತ್ರಗಳನ್ನು ಚಿತ್ರಿಸುತ್ತ ಹೊರಟ ಬೆಳಗಲಿಯವರು. ವಿದ್ಯೆ-ಸಂಸ್ಕಾರ-ಸಂಸ್ಕೃತಿ. ಅವರ ಆಚಾರ-ವಿಚಾರಗಳ ಹಿನ್ನೆಲೆಯಲ್ಲಿಯೇ ಹೆಸರಿಸಿದ್ದಾರೆ. ಶಿವಶಂಕರ. ಸದಾಶಿವಪ್ಪ. ಲೋಕಪ್ಪ. ರಾಚಪ್ಪ. ಸಮಗಾರ ಸಿದ್ದಣ್ಣ. ಶಿಕ್ಷಕ ಮಾಯಣ್ಣ. ಕಂಬಾರ ಬಾಳೇಶಿ. ಲೋಕೂರ ಶಿವಲಿಂಗಪ್ಪಜ್ಜ. ಡ್ರೈವರ ಹುಸೇನಿ. ಉಮಾಕಾಂತ. ಮಾರುತಿ. ನೀಲಕಂಠಪ್ಪ. ಜಕ್ಕಪ್ಪ. ಬಡಿಗೇರ ಕಾಳಪ್ಪ. ಶಿವರಾಯ. ಕೆರಕಲಕಟ್ಟಿ ರಾಮಣ್ಣ. ಗಿರಿಸಾಗರ ಚನಬಸು— ಮೊದಲಾದ ಪಾತ್ರಗಳು ಕಾದಂಬರಿಯಲ್ಲಿನ ಪ್ರಗತಿಗಾಮಿಧೋರಣೆಯ ಪಾತ್ರಗಳಾದರೆ. ರುದ್ರಗೌಡ. ಗಿರಿಗೌಡ. ಗುರುಸಿದ್ಧಪ್ಪ. ಗೇನು. ನಾಗಪ್ಪ. ಮಲ್ಲ. ಲಸಮ. ಮೊದಲಾದ ಪಾತ್ರಗಳು ಕಾದಂಬರಿಯಲ್ಲಿ ಚಿತ್ರಣಗೊಂಡ ಗ್ರಾಮಕಂಟಕ ಪಾತ್ರಗಳು: ಇಂಥ ಪುರುಷಪಾತ್ರಗಳಲ್ಲದೆ. ಸ್ತ್ರೀ ಪಾತ್ರಗಳ ಸಂಖ್ಯೆ ಕಾದಂಬರಿಯಲ್ಲಿ ಕಡಿಮೆಯಿದ್ದರೂ ತುಂಬ ಔಚಿತ್ಯಪೂರ್ಣ - ಅರ್ಥಪೂರ್ಣವಾದ ಪಾತ್ರಗಳಾಗಿವೆ. ಶಶಿ. ಹೌಶಿ. ಕಿಶೋರಿ. ಶಾರದಾ. ಗೌರಕ್ಕ. ಗಿರಿಜಾ. ಸುಮಾ. ನಿರ್ಮಲಾ. ಸುಮಾಳ ಅತ್ತೆ. ಕಮಲಿ. ರತ್ನಾ. ಸಮಗಾರ ಸಿದ್ದಣ್ಣನ ಹೆಂಡತಿ— ಇವುಗಳಲ್ಲಿ ಹೆಚ್ಚಿನ ಸ್ತ್ರೀಪಾತ್ರಗಳೆಲ್ಲ ಉದಾತ್ತ ಪಾತ್ರಗಳೇ ಆಗಿದ್ದು. ಕಾದಂಬರಿಗೆ ಹೆಚ್ಚಿನ ಉದಾತ್ತತೆಯನ್ನು ತಂದು ಕೊಡುವಲ್ಲಿ ಯಶಸ್ವಿಯಾದ ಪಾತ್ರಗಳಾಗಿವೆ. ಒಟ್ಟಿನಲ್ಲಿ ಪ್ರಸ್ತುತ ಕಾದಂಬರಿಯಲ್ಲಿ ಹೆಸರಿಸಲಾದ ಪಾತ್ರಗಳೆಲ್ಲ ಗ್ರಾಮೀಣ ಪರಿಸರದವುಗಳೇ ಆಗಿವೆ.

ಕಾದಂಬರಿಗೆ ಕಾಳಗಿಯೇ ಕೇಂದ್ರಸ್ಥಳ. ಕಥಾ ವಸ್ತು ಕಾಳಗಿಯ ಸುತ್ತಲೇ ತಿರುಗಾಡಿದರೂ ಕೂಡ ಅಲ್ಲಲ್ಲಿ ಪ್ರಾಸ್ತಾವಿಕವಾಗಿ ಸುತ್ತಮುತ್ತಲಿನ ಊರುಗಳ ಉಲ್ಲೇಖವೂ ಬರುತ್ತದೆ. ಈ ಕಾದಂಬರಿಯಲ್ಲಿ

ಭೌಗೋಳಿಕ ಸೀಮೆಯೇನೋ ಇದೆಯಾದರೂ ಕೂಡ ಅದು ಹೆಚ್ಚುಮಟ್ಟಿಗೆ ಕಾಳಗಿಗೆ ಮಾತ್ರ ಹೆಚ್ಚು ಅಂಟಿಕೊಂಡಂತಿದೆ.

**ಆಡುಭಾಷೆಯ ಸತ್ವಯುತ ಬಳಕೆ :**

ಜನಪಟ್ಟಿ ಸುತ್ತಮುತ್ತಲಿನ ಆಡುಭಾಷೆಯನ್ನು ಪ್ರಸ್ತುತ ಕಾದಂಬರಿಯಲ್ಲಿ ಅರ್ಥಪೂರ್ಣವಾಗಿ ಬಳಸಿರುವುದರಿಂದ. ಅವಶ್ಯವಾದೆಡೆಯಲ್ಲೆಲ್ಲ ಹಿತಮಿತವಾಗಿ ಬಳಸಿರುವುದರಿಂದ ಕಾದಂಬರಿಯ ಅಂದ ಮತ್ತಷ್ಟು ಹೆಚ್ಚಾಗಿದೆ. ಬೆಳಗಲಿಯವರು ಹಿಂದಿನ ಕಾದಂಬರಿಗಳಲ್ಲಿ ಬಳಸಿದಷ್ಟು ಹೆಚ್ಚಿನ ಪ್ರಮಾಣದ ಬಳಕೆಯನ್ನಿಲ್ಲಿ ಮಾಡದಿದ್ದರೂ. ಬಳಸಿದಷ್ಟು ಕಾದಂಬರಿಯ ವಸ್ತುವಿಗೆ ಮೆರುಗು ತಂದಿದೆ: ವಸ್ತುವಿನ ಓಟಕ್ಕೆ ಹೊಸಚಾಲನೆ ನೀಡಿದಂತೆ ಗ್ರಾಮೀಣ ಭಾಷೆ ಬಳಕೆಗೊಂಡಿದೆ. " ಪ್ರಾದೇಶಿಕ ಭಾಷೆಯ ಪ್ರಯೋಗ ಬೆಳಗಲಿಯವರ ಕೈಯಲ್ಲಿ ಕಲಾತ್ಮಕವಾಗಿದೆಯೆಂದರೆ. ಉತ್ಪ್ರೇಕ್ಷೆಯಾಗದು. ಉತ್ತಮ ವಸ್ತು. ಮನಮುಟ್ಟುವ ಶೈಲಿ ಇವೆಲ್ಲ ಈ ಕಾದಂಬರಿಯ ವೈಶಿಷ್ಟ್ಯಗಳಾಗಿವೆ "[೮೪] ' ಕಲಾತ್ಮಕತೆ ' ಎಂಬ ಮಾತು ಸಂಖ್ಯೆಗಿಂತ ಸತ್ವಕ್ಕೆ ಹೆಚ್ಚು ಸೂಕ್ತವಾದುದು :

" ಇಲ್ಲೇ ಅತ್ತೀ ಮನಿಗಿ ಹೋಗಿದ್ನಿರಿ...." (ಪುಟ ೨೪)

" ಎಲ್ಲಾ ಖರ್ಚ ಕೊಡದೇನ ಮಾಡ್ತಾನು ? ಅಲ್ಲಿ ಅಪ್ಪ ಬಡೂರ ಗೋಣ ಮುರ್ದ ಗಳಸ್ತಾನು ! ಇಲ್ಲಿ ಮಗಾ ರೊಕ್ಕದ ಸೊಕ್ಕ ತೋರಸ್ತಾನು ! ಗಂಡಗಟ್ಟಿ ಹಾಕಿ ಕೈಮಣ್ಣ ಮಾಡಿಕೊಂಡಿದ್ರ ತಿಳೀತಿತ್ತು" (ಪುಟ ೩೭)

" .... ನಿನ್ನಿ ಚೆಂಜಿಕಿ ನಮ ಮಾರುತ್ಯಾ ಅದೇನೋ ಅಂದಂತಲ್ರೀ.... ಸಾಲ್ಯಾಗ ಅದೇನೋ ನಡೀತಂತ...." (ಪುಟ ೩೯)

" ಯಪಾ ನನ್ನ ಒಬ್ನ ಗಂಡಮಗಾ ಉಳಿಸಿಕೊಡ್ರಿ...." (ಪುಟ ೪೮)

" ತಮಾ. ಊರಾಗ ಕೆಟ್ಟ ಮಂದಿ. ಹುಶಾರಾಗಿರು. ಕಾಲಕೆಟ್ಟಹೋಗೇತಿ " (ಪುಟ ೪೬)

" ತಮಾ ಬಿಡ. ಹೆಸರ ಹೇಳಿದ್ಲು ಮುಗೀತಲ್ಲ. ಸುಮ್ನ ಮತ್ತ ತ್ರಾಸ ಕೊಡ್ತಿ" (ಪುಟ ೬೫)

" ಶಂಕ್ರೆಪ್ಪ ನೀ ಸಣ್ಣಾಂವ ಖರೆ. ಆದ್ರ ತಿಳಿವಳಿಕೆ ಐತಿ.... ವಯಸ್ಸಾದವ್ರಿಗೇ ಒಮ್ಮೊಮ್ಮಿ ತಿಳಿವಳಿಕೆ ಇರುವುದಿಲ್ಲ. ಬುದ್ಧಿ ಕಮ್ಮಿ ಇರ್ತೈತಿ.... ಬುದ್ಧಿ ಇದ್ರೂ ಇನ್ನೊಬ್ರ ತೋರಿಸಿಕೊಡಬೇಕಾಗ್ತೈತಿ.... ನಿನ್ನಂತಾವ್ರು ಸರಿಯೋ ತಪ್ಪೋ ಅಂತ ಹೇಳಿರ ಆಗ ತಿಳಿತೈತಿ.... ಹಿಂದಿಂದೆಲ್ಲಾ ಬಿಟ್ಟ ಬಿಡೂದ...." (ಪುಟ ೬೭)

" .... ಇದ ಊರಾಗ ಬೆಳದಾಂವಾ. ಇಲ್ಲಿ ಅನ್ನಾ ತಿಂದ ದೊಡ್ಡಾಂವ ಆದಾಂವಾ.... ಅನ್ಯಾಯ ನೋಡಿ ಸುಮ್ಮ ಕೂಡ್ರುದು ಒಳ್ಳೇದಲ್ಲ ಅಂತ ಹೇಳಿನಿ.... ಪಾಪ ಮಾರುತ್ಯಾನ ಮ್ಯಾಲ ಕಲ್ಲ ಬಿದ್ದದ್ಕ ನೀಂವ ಅನ್ಯಾಯ ಅಂತೀರಿಲ್ಲೋ...." (ಪುಟ ೬೮)

" ತಮ. ದೇವ್ರು ನಿನ್ನ ತೆಲ್ಯಾಗ ಎಂತಾ ಬುದ್ಧಿ ಹಾಕ್ಯಾನು ! ನಮ್ಮೂರಾಗ ರತ್ನ ಇದ್ದಂಗ ಅದೀ. ನಮಗ ಗೊತ್ತ ಇರಲಿಲ್ಲ.... ನಿನ್ನಿ ನಿನ್ನ ಮಾತ ಕೇಳೇನಿ. ಏನ ಮಾತಪಾ ! ನೀ ಇಷ್ಟ ಶಾಣ್ಯಾ ಆಗೇದಿ ಅಂತ ನನಗ ಗೊತ್ತ ಇರಲಿಲ್ಲ.

---

೮೪. ಜಿ. ಎ. ಕಕ್ಕಿಲಾಯ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೫೦ ರಿಂದ

ನಮ್ಮೂರ ದೈವ ತೆರೀತೈತಿ.... ಬಾ ಮ್ಯಾಲ ಓರ್ಯಾರ ಕುಂತ ಜಾಗದಾಗ ಬಾ.... ಸರ್‍ಯೋ ಬಿಕನೇಸಿಗೋಳ ಕುಂತಾವ ನೋಡ ಲೋಡಿಗಿ ಭಾರ ಆಗಿ...."( ಪುಟ ೭೨)

" ಸಾವ್ಕಾಸ್ರಿ ಸಾವ್ಕಾರ್ ! ಬಿದ್ವೀರಿ ಜ್ವಾಕೀ ! ನಿಮ ಹೊಟ್ಟೆಯೊಂದ ಟನ್ ಭಾರ. ನೀವು ನೆಲಕ್ಕ ಬಿದ್ರ ಇಲ್ಲಿ ಒಂದಾಳ ತಗ್ಗಾಗದ್ರು...." (ಪುಟ ೮೯)

" ಗೌಡ್ರ ನೀಂವ ಸಾವ್ಕಾರ್ರು. ಗೌಡ್ರ ಆದ್ರ ಮನ್ಯಾಗ ನಿಮಪುರ್ತೆ. ಇದ ಸರ್ಕಾರಿ ರಸ್ತಾ. ಬಾಯಿಗಿ ಬಂದಾಂಗ ಅನಬ್ಯಾಡ್ರಿ. ಚಲೂ ಅಲ್ಲ. ನಾಲಿಗಿ ಹಗರ ಬಿಡಬ್ಯಾಡ್ರಿ...." (ಪುಟ ೯೫)

" .... ಏನೋ ಗೌಡಾ. ಹೊಲ್ಯಾರು. ಸಮಗಾರು ಅಂತ ಜಾತಿ ತಗೊಂಡ ಮಾತಾಡ್ತೀ....? ಕಡೀತೈತೇನ ?" (ಪುಟ ೯೬)

" ಮಗಾ. ಸಮಗಾರ್‍ನ. ಹೊಲ್ಯಾರ್‍ನ ಎತ್ತಿ ಕುಂಡ್ಸಾಕ ಹತ್ಯಾನು. ಲಗ್ನ ಆದ್ರೂ ಆ ಹೌಸಿನ್ನ ಇಟಗೊಂಡಾನ ಕಾಣತೈತಿ.... ಆಗಲಿ.... ಆಗಲಿ " (ಪುಟ ೧೦೦)

" ನಿಮ್ಮ ಅಡಚಣೀ ಆಪತ್ತಿನ್ಯಾಗ ಇರ್‍ಲಿ ಅಂತ ತಂದನೀ.... ಮುಂದ ನನ್ನ ಪಗಾರ ಸುರು ಆಗತೈತಿ " (ಪುಟ ೧೧೯)

" ಮೂಕ ಪ್ರಾಣಿ ಅದನ್ಯಾಕ ಒದೀತಿಯೋ...." (ಪುಟ ೧೩೩)

" ಹರ್‍ಯಾಗ ಇದೇನ ಕೆಲ್ಸಾ ತಂದರಿ...." (ಪುಟ ೧೪೮)

" ಯಾಕೋ ತಮಾ. ತಂಪ ಆಗೇತೇನ. ಕೆಮ್ಮಾಕ ಹತ್ತೇದಿ ? ಅಗಸುದ್ದಿ ಗಿಗಸುದ್ದಿ ಮಾಡ್ಕೋ ಕೆಮ್ಮೂದ ಚಲೂ ಅಲ್ಲ...." (ಪುಟ ೧೫೧)

" ಮತ ಹ್ಯಾಣತಿ ಅಂದ ಮ್ಯಾಲ ಗಂಡನ ಮನ್ಯಾಗ ಇರ್‍ಲಾಕ ಬೇಕಲಾ " (ಪುಟ ೧೫೯)

" .... ಬರ್‍ಯೋ ನನ ಹೇಣತಿ ಸುಟಗೊಂಡಾಳ ಬರ್‍ಯೋsss ದವಾಖಾನಿಗಿ ಒಯ್ಯೂಣ ಬರ್‍ಯೋ...." (ಪುಟ ೧೮೭)

– ಇತ್ಯಾದಿ ಹಳ್ಳಿಗರ ಬದುಕಿನೊಂದಿಗೆ ಬೆಸೆದುಕೊಂಡ ವಿಶಿಷ್ಟವಾದ ಈ ಬಾಯ್ಮಾತುಗಳೆಲ್ಲ ಗ್ರಾಮೀಣರ ಬದುಕಿನ ಭಾಷ್ಯಗಳಾಗಿವೆ. ಇಡೀ ಕಾದಂಬರಿ ಪ್ರಾದೇಶಿಕ ಭಾಷೆಯಲ್ಲಿ ಮೂಡಿ ಬರದಿದ್ದರೂ ಕೂಡ ಸಂದರ್ಭೋಚಿತವಾಗಿ. ಅರ್ಥಪೂರ್ಣವಾಗಿ ಬೆಳಗಲಿಯವರು ಗ್ರಾಮೀಣಭಾಷೆಯನ್ನು ಬಳಸಿಕೊಂಡು ಕಾದಂಬರಿಗೆ ಹೆಚ್ಚಿನ ಬಲವನ್ನು ತುಂಬಿದ್ದಾರೆ.

**ದೇಸೀ ಮಾತುಗಳು :**

' ಮೌನಕ್ರಾಂತಿ ' ಗ್ರಾಮೀಣಪರಿಸರದಲ್ಲಿ ಒಡಮೂಡಿದ ಕಾದಂಬರಿಯಾಗಿದ್ದು. ಗ್ರಾಮೀಣರ ಬದುಕು ಅಕೃತಕವಾಗಿದ್ದು. ಅಸಹಜತೆ ಕಾಣದು. ಅದು ಅವರ ನಡೆನುಡಿಯಲ್ಲೂ ಗೋಚರಿಸುತ್ತದೆ. ಹೀಗಾಗಿ ಕಾಳಗಿ ಸುತ್ತಲೇ ಹೆಣೆದುಕೊಂಡ ಕಾದಂಬರಿಯಾದುದರಿಂದ ವಿಶಿಷ್ಟವಾದ ಗ್ರಾಮ್ಯ ಪದಗಳು ಕಾದಂಬರಿಯಲ್ಲಿ ಕಾಣುತ್ತವೆ :

ಬಿರಿ. ಕಣ. ಪಡಸಾಲೆ. ಮುಕುರು. ಪೆಂಟಿ. ಉದ್ರಿ. ಐ. ಬರಾಕ. ಹೋಗಾಕ. ಮಿಡಚಿ. ಜತನ. ಕೇಳ್ತಬಾ. ಹೇಳ್ತಬಾ. ಆತು. ರೊಕ್ಕ. ಮರ್ಜಿ. ಒಂಚೂರ. ಬನ್ನಿ. ಹ್ವಾದ್ನಿ. ಒಜ್ಜೀ. ತ್ರಾಸ. ತಮಾ. ಇಚಾರ. ಅನಕೋತ. ಹೇಳ್ಕೋತ. ಹುಲಕಿ. ಸಳ್. ಬಾಂಡಿ. ವಡಕಿ. ಒಗ್ಗಾಲಿ. ಲಾಗ. ಕಾಸಡೆ. ನೊಗ. ನೆಗೆಣ್ಣಿ. ಕ್ಯಾಂತಿ. ಐತಿ. ಇನಾ. ಹಲಬು. ಸ್ವಾರೀ. ಸಂಸೇ ಮುಂತಾದ ದೇಸಿಮಾತುಗಳೊಂದಿಗೆ ಅಲ್ಲಲ್ಲಿ ವಿಶಿಷ್ಟಾರ್ಥದ ಗ್ರಾಮೀಣ ಪದಪುಂಜಗಳನ್ನೂ ಬಳಸಿರುವುದು ಕಂಡು ಬರುತ್ತದೆ. ಗುಡಚಾಪಿಕೀಳು (ಸಾಮಾನು ಸರಂಜಾಮುಗಳೊಂದಿಗೆ ಬೇರೆಡೆ ಹೋಗು). ಪೀಕಪಾಸಿ (ಭೂಕಂದಾಯ). ಮುಸುಕಿನ ದೊಣ್ಣೆಯವ (ಒಳಗೊಂದು ಹೊರಗೊಂದು ಇರುವವ). ಮೈತುಂಬ ಕಣ್ಣಾಗಿರು (ಸದಾ ಜಾಗೃತವಾಗಿರು). ಹಲ್ಲುಗಿಂಜು (ನಟನೆ ಮಾಡುತ್ತ ಒಪ್ಪಿಕೊಳ್ಳು). ಉರತಾವಳಿ (ಕಂಟಕವಾಗು). ಹಲ್ಲಾಗ ನಾಲ್ಗಿ ಬಿಗಿ ಹಿಡಿ (ಸುಮ್ಮನಿರು), ಪರ್ಲಹರಿ (ಬಿಡುಗಡೆ ಹೊಂದು) – ಮುಂತಾದವುಗಳು.

**ಗ್ರಾಮೀಣ ಬೈಗುಳಗಳು :**

ಬೆಳಗಲಿಯವರ ಉಳಿದ ಕಾದಂಬರಿಗಳಿಗೆ ಹೋಲಿಸಿದರೆ. ಇಲ್ಲಿ ಗ್ರಾಮೀಣ ಬೈಗುಳಗಳ ಬಳಕೆ ತುಂಬ ಕ್ವಚಿತ್ತಾಗಿ ಕಾಣುತ್ತದೆ. ಅದೂ ಸಂದರ್ಭಕ್ಕೆ ತಕ್ಕಷ್ಟೇ ಬಳಕೆಗೊಂಡು ವಸ್ತುವಿಗೆ ಮತ್ತಷ್ಟು ಕಸುವು ತುಂಬಿದೆ. ಭೋಸಡಿ. ಭೋಸಡಿ ಮಕ್ಕಳು. ಬಾಡ್ಯಾಗೋಳ. ಮಸಿ ಮಸೂತಿ ಆಗ್ಲಿ. ಬೆಂಕಿ ಬಿದ್ದ ಸಾಯಲಿ. ಅವ್ನ ಹೆಣಾ ಎತ್ಲಿ. ಓಸ ನಿರ್ವೂಸ ಆಗ್ಲಿ. ಹಿರಿಬ್ಯಾನಿ ಹತ್ತಲಿ. ದುರಗವ್ನ ಬ್ಯಾಸಿ ಬರ್ಲಿ. ಬಿಕನೇಸಿಗೋಳ. ಹರಾಮಖೋರ. ಕಡೀತೈತೇನ. ಹೊಯ್ಕಳ್ಳಲಿ. ಹಾದರಗಿತ್ತೀ. ಹಾದರಗಿತ್ತೀ ಮಗಾ. ಹಾಂಟ್ಯಾ. ಕಸ್ಮಾಲಗೇಡಿ. ಸೂಳಿಮಕ್ಕ. ಮಗಾ ಇತ್ಯಾದಿ ಗ್ರಾಮೀಣ ಬೈಗುಳಗಳು ಇಲ್ಲಿ ಕಾಣುತ್ತವೆ.

**ದ್ವಿರುಕ್ತಿ - ಜೋಡುನುಡಿಗಳು :**

ಇಂಥ ಪದಗಳ ಬಳಕೆಯಿಂದಾಗಿ. ಕೃತಿಗೆ ಸಹಜತೆ ಬರುವಂತೆ ಕಥೆಗೆ ಇನ್ನಷ್ಟು ಕಸುವು ಬರುತ್ತದೆ. ಪ್ರಸ್ತುತ ಕಾದಂಬರಿಯಲ್ಲಿ ಇಂಥ ಪದಗಳನ್ನು ಬೆಳಗಲಿಯವರು ಹೇರಳವಾಗಿ ಬಳಸದಿದ್ದರೂ ಹಿತವಾಗಿ ಬಳಸಿದ್ದಾರೆ : ಹುಳುಹುಳು. ಲವಲವಿಕೆ. ಬಿದ್ದುಬಿದ್ದು. ಬ್ಯಾರೆಬ್ಯಾರೆ. ತಮ್ಮತಮ್ಮ. ಕಾಣಾಕಾಣಾ. ಸರಸರ. ಇರ್ಲಿಇರ್ಲಿ. ಬಿಕ್ಕಿಬಿಕ್ಕಿ. ಕೇಳಿಕೇಳಿ. ತಿರುಗಿತಿರುಗಿ. ಚಿಂತಿಸಿಚಿಂತಿಸಿ. ನುಂಗಿ ನುಂಗಿ. ಧಣಧಣ. ಸುಡುಸುಡು. ಹಾಹಾ. ಉಂಡುಉಂಡು. ಹಂತಹಂತ. ಕೇಳಿಕೇಳಿ. ಛೆಛೆ. ಬ್ಯಾಡಬ್ಯಾಡ. ಮುಳುಮುಳು. ವ್ಯರ್ಥವ್ಯರ್ಥ. ಬಣಬಣ. ದುರುದುರು. ಹೊಸಹೊಸ. ಬರ್ರ್ಯೋಬರ್ರ್ಯೋ. ಎದೆಎದೆ. ಕಿಡಿಕಿಡಿ. ಬಿಡ್ರಿಬಿಡ್ರಿ. ಕುಂಯ್‌ಕುಂಯ್. ಕುಡದಕುಡದ. ಇತ್ಯಾದಿ ದ್ವಿರುಕ್ತಿಗಳು ಕಾದಂಬರಿಯಲ್ಲಿ ಬಳಕೆಗೊಂಡು ಭಾಷೆಗೆ ಮತ್ತಷ್ಟು ಶಕ್ತಿ ತುಂಬಿವೆ.

ಬಟ್ಟೆ-ಬರೆ. ತೋಟ-ಪಟ್ಟಿ. ವಸ್ತು-ಒಡವೆ. ದನಕರು ಗಿನಕರು. ಆಳುಕಾಳು. ಸಾಲಸೋಲ. ಕಾಳುಕಡ್ಡಿ. ಚೂರುಪಾರು. ಗಡಿಬಿಡಿ. ಕಸಮುಸರೆ. ಮೇವುಮಿಡಚಿ. ಲಗುಬಗೆ ನೀರುಸಿಡಿ. ದೀನದಲಿತ. ಕಷ್ಟನಷ್ಟ ಹೊಲಮನೆ. ಸಹಾಯ ಸೌಹಾರ್ದ. ಸಹಾಯ-ಸಹಕಾರ. ತಳಮಳ. ಅಪ್ಪಿತಪ್ಪಿ. ಅಂಗಡಿ-ಗೊಂಗಡಿ. ಮಾತುಕತೆ. ತಿಂಡಿತೀರ್ಥ.

ಸಾವುನೋವು. ಸುತ್ತಮುತ್ತ. ಖಂಡತುಂಡ. ಚಂಡಾಳ ಚೌಕಡಿ. ಕಾಯಿಪಲ್ಲೆ. ತಿರಗಿಮುರಗಿ. ಸಿಟ್ಟುಸೆಡವು. ಮೈಕೈ. ಶಿಕ್ಷಪಕ್ಷಾ. ಅಕ್ಕಪಕ್ಕ. ಓನ್ನೆಲೆಮುನ್ನೆಲೆ. ಕಕ್ಕಾವಿಕ್ಕಿ. ಹಿಂದುಮುಂದು. ಅತ್ತಇತ್ತ. ಊರ್‍ಗೀಗೀರ್‍ಗೀ. ಸಿಹಿ-ಖಾರ. ರಾಡಿರೊಜ್ಜು. ಕಸಕಡ್ಡಿ. ಕುಳ್ಳಕಟ್ಟಿಗೆ. ಅಗಸುದ್ಧೀ ಗಿಗಸುದ್ಧೀ. ಕೂಲಿನಾಲಿ. ಸುಣ್ಣಬಣ್ಣ. ಬೇರುಗೀರು. ಬೀಗರು-ಬಿಜ್ಜರು. ಚಿಕ್ಕಪುಟ್ಟ ಇತ್ಯಾದಿ ಅರ್ಥಸಾಮಿಪ್ಯವಿರುವ ಇಂಥ ಜೋಡು ನುಡಿಗಳ ಬಳಕೆಯಿಂದಾಗಿ ಕಾದಂಬರಿ ಇನ್ನಷ್ಟು ಸಹಜವಾಗಿ ಓದಿಸಿಕೊಂಡು ಹೋಗುತ್ತದೆ.

**ಗಾದೆಮಾತು - ಪಡೆನುಡಿಗಳು :**

ಬನಹಟ್ಟಿ ಸುತ್ತಮುತ್ತಲಿನ ಪ್ರದೇಶದ ಆಡುಭಾಷೆಯಲ್ಲಿನ ಸಹಜ ಪ್ರಚಲಿತ ಗಾದೆಮಾತುಗಳನ್ನು ಪಡೆನುಡಿಗಳನ್ನು ಬಳಸುವುದರಲ್ಲಿ ಬೆಳಗಲಿಯವರದು ಎತ್ತಿದ ಕೈ. ಆದರೆ ಈ ಕಾದಂಬರಿಯಲ್ಲಿ ಹೇರಳವಾದ ಬಳಕೆ ಕಾಣದಿದ್ದರೂ ಮೋಹಕವಾಗಿ ಬಳಸಿ ಕಾದಂಬರಿಗೆ ಭಾಷಿಕ ಸೌಂದರ್ಯವನ್ನು ತಂದುಕೊಟ್ಟಿದ್ದಾರೆ. ಸಂದರ್ಭಕ್ಕೆ ತಕ್ಕಂತೆ ಅಲ್ಪಸ್ವಲ್ಪ ಬದಲಾವಣೆ ಮಾಡಿಯೂ ಬಳಸಿದ್ದಾರೆ :

" ಬಡವಿಯಾದ ಆಕೆಯ ಕೋಪ ದವಡೆಗೆ ಮೂಲವಷ್ಟೇ " (ಪುಟ ೧೬)

" .... ರೊಟ್ಟಿಯೇ ಜಾರಿ ತುಪ್ಪದಲ್ಲಿ ಬೀಳು...." (ಪುಟ ೧೯)

" ....ಪುಸ್ತಕದ ಬದನೆಕಾಯಿ...." (ಪುಟ ೨೪)

" ನಾಯಿ ಮುಟ್ಟಿದ ಗಡಿಗೆ " (ಪುಟ ೨೬)

" ಸಬಲರಾದ ದುಷ್ಟರನ್ನು.... ಶಬ್ದಶಕ್ತಿ ಇತ್ತೇಹೊರತು. ರಟ್ಟೆಯ ಬಲ...." (ಪುಟ ೪೮)

" .... ದುಷ್ಟರ ವೈರತ್ವ ಸಲ್ಲದು...." (ಪುಟ ೪೬)

" ಇನಾ ತೆಲಿಮ್ಯಾಲ ಮಾಸ ಆರಿಲ್ಲ...." (ಪುಟ ೪೪)

" ಮೊದಲ ತುತ್ತಿಗೆ ಬಂದ ಕಲ್ಲುಗಳನ್ನು...." (ಪುಟ ೪೫)

" ಜೀವಿ ಸಮಾಜ ಬಿಟ್ರ ಆತ ಬಾಳಲಾರ...." (ಪುಟ ೫೪)

" .... ವ್ಯಕ್ತಿ ಒಳ್ಳೆಯವನಾದರೆ ಊರಿಗೆ ಒಳ್ಳೆಯದು. ವ್ಯಕ್ತಿ ಕೆಟ್ಟವನಾದರೆ ಊರಿಗೆ ಕೇಡು " (ಪುಟ ೫೪)

" .... ಸಿರಿವಂತ ಎತ್ತು ಈಯ್ತು ಎಂದರೆ ಕೊಟ್ಟಿಗೆಯಲ್ಲಿ ಕಟ್ಟು ಎನ್ನುತ್ತೇವೆ "(ಪುಟ ೫೫)

" ಹಣವಂತ ಹಣ ಕೊಟ್ಟು ಪಶ್ಚಿಮಕ್ಕೆ ಸೂರ್ಯ ಹುಟ್ಟುತ್ತಾನೆಂದರೆ ಹೌದು...." (ಪುಟ ೫೫)

" ಜೇನುಗೂಡಿಗೆ ಕಲ್ಲು ಬೀರಿದಂತಾಗಿತ್ತು...." (ಪುಟ ೫೬)

" ನಾಕಮಂದ್ಯಾಗ ತೂಕದಿಂದ ಮಾತಾಡಿ ಲೋಕಾ ಗೆಲ್ತಾರು...." (ಪುಟ ೬೬)

" .... ಹಾಂವಿಗೆ ಹಾಲ ಕುಡಿಸಿಧಾಂಗ...." (ಪುಟ ೯೯)

" .... ಬುತ್ತಿ ಕಟ್ಟಿಕೊಂಡ ಹುಡುಕಿದರೂ ಇಂತಾ ವರಾ ಸಿಗೂದಿಲ್ಲ...." (ಪುಟ ೧೦೦)

" .... ಬೆಂಕಿಯಲ್ಲಿ ಚಗಳ ಚೆಲ್ಲಿದಂತೆ...." (ಪುಟ ೧೦೬)

" .... ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಡಬಾರದು...." (ಪುಟ ೧೧೭)

" .... ಕುರುಡ ಬಯಸಿದ್ದೂ ಒಂದು ಕಣ್ಣು...." (ಪುಟ ೧೧೯)

" .... ಕೈಯಾಗ ಬಳಿ ಇಟ್ಟಾವ್ರಂಗ ಸೀರಿ ಉಟ್ಕೊಂಡ ಗಂಡಜೊಗತ್ಯಾರ...." (ಪುಟ ೧೨೬)

" .... ಮಂಗ್ಯಾ ತ್ವಾಟ ಹಾಳ ಮಾಡಿಧಾಂಗ...." (ಪುಟ ೧೩೦)

" ಈಗ ಅಗಲಾಂದ ತಗೀ ಅಂದರ ಬಗಲಾಂದ ತಗೀಬ್ಯಾಡ...." (ಪುಟ ೧೩೪)

" ....ಹಸದ ಹುಚ್ಚನಾಯಿ ಹಿಟ್ಟಿನ ಚೀಲ ಹರಿದಾಂಗ...." (ಪುಟ ೧೩೪)

" .... ಹೊಟ್ಟಿ ಕಡದವರ ತಾವು ಅಜಿವಾಣ ತಿನ್ನಬೇಕಲ್ಲ...." (ಪುಟ ೧೪೮)

" ಇತ್ತ ಕೋಲೂ ಮುರಿಬಾರ್ದು, ಅತ್ತ ಹಾವೂ ಸಾಯಬೇಕಿತ್ತು...." (ಪುಟ ೧೫೩)

" .... ಒಪ್ಪಾರೆ ಮೀಸೆ ಬೋಳಿಸ್ತೀನ...." (ಪುಟ ೧೬೬)

" .... ಏನ ಬಾಯಾಗ ಬಟ್ಟ ಹಾಕೊಳ್ಳು ಸಣ್ಣ ಕೂಸಗೋಳಲ್ಲ...." (ಪುಟ ೧೬೮)

" ತಮ್ಮ ಫಲಭೋಗ ತಾವ ಉಣ್ಣತಾರು...." (ಪುಟ ೧೬೮)

" .... ಮನಸ್ಸಾಗ.... ನಾಕಮಂದಿ ಬೇಕ...." (ಪುಟ ೧೬೯)

" .... ಎರಡೂ ಕೈಯಿಂದ ಸುರಕೊಳ್ಳಲಿ...." (ಪುಟ ೧೮೮)

" .... ರೊಕ್ಕ ಐತಿ.... ಸೊಕ್ಕಐತಿ.... ಬಳಕೊಳ್ಳಲಿ...." (ಪುಟ ೧೮೮)

" ಬಿದ್ದ ಗೂಳಿಗಿ ಆಳಿಗೊಂದ ಕಲ್ಲು" (ಪುಟ ೧೮೯)

" .... ಮನೆಗೆದ್ದು ಮಾರುಗೆದ್ದೆ...." (ಪುಟ ೨೦೧)

– ಇತ್ಯಾದಿ. ಇಂಥ ಸಹಜ ಸುಂದರ ಗಾದೆ ಮಾತು ಪಡೆನುಡಿಗಳು. ಅಲ್ಲಲ್ಲಿ ಒಂದೊಂದು ಒಡಪುಗಳನ್ನು ಕಾದಂಬರಿಯಲ್ಲಿ ಔಚಿತ್ಯಪೂರ್ಣವಾಗಿ ಬಳಸಿ ಕೃತಿಗೆ ಭಾಷಿಕ ಗಾಢತೆಯನ್ನು ತಂದುಕೊಟ್ಟಿದೆ.

**ಪ್ರಾದೇಶಿಕ ಸಂಸ್ಕೃತಿ :**

' ಮೌನಕ್ರಾಂತಿ 'ಯಲ್ಲಿ ಉತ್ತರ ಕರ್ನಾಟಕದ ಜನಪದ ಸಂಸ್ಕೃತಿ ಕೆನೆಗಟ್ಟಿ ನಿಂತಿದೆ. ಬನಹಟ್ಟಿಯಂಥ ಗ್ರಾಮೀಣ ಪರಿಸರದಲ್ಲಿ ಶಿಕ್ಷಕರಾಗಿದ್ದ ಬೆಳಗಲಿಯವರಿಗೆ ಅಲ್ಲಿನ ಬದುಕು ಸಹಜಗೋಚರವಾಗಿರುವದರಿಂದಲೇ ಸ್ವಾನುಭವದ ಹಿನ್ನೆಲೆಯಲ್ಲಿಯೇ ಸುತ್ತಮುತ್ತಲಿನ ಸಂಸ್ಕೃತಿಯನ್ನು ಚೆನ್ನಾಗಿ ತಮ್ಮ ಕಾದಂಬರಿಗಳಲ್ಲಿ ತಂದಿದ್ದಾರೆ. ತಮ್ಮ ಹಿಂದಿನ ಕಾದಂಬರಿಗಳಿಗಿಂತ ಹೆಚ್ಚಾಗಿ ಇಲ್ಲಿ ಪ್ರಾದೇಶಿಕ ಸಂಸ್ಕೃತಿಗೆ ಸ್ಥಾನ ಕೊಟ್ಟಿದ್ದಾರೆ. ಗ್ರಾಮೀಣರ ಆಟ-ಪಾಟ. ಹವ್ಯಾಸ. ಆಚಾರ-ವಿಚಾರ. ಅವರ ಸಹಜ ನಡೆ-ನುಡಿಗಳು. ಅಲ್ಲಿನ ಹಬ್ಬ-ಹರಿದಿನಗಳು. ಮುಂತಾದ ಗ್ರಾಮೀಣರ ಬದುಕಿನ ಬಹುಮುಖ ನೆಲೆ-ಬೆಲೆಗಳನ್ನು ಚೆನ್ನಾಗಿ ಚಿತ್ರಿಸುತ್ತ ದಟ್ಟವಾದ ' ಗ್ರಾಮಪರಿಸರ 'ವೊಂದನ್ನು ನಿರ್ಮಿಸಿದ್ದಾರೆ.

ಉತ್ತರ ಕರ್ನಾಟಕದಲ್ಲಿ 'ಓಕಳಿ'ಗೆ ವಿಶಿಷ್ಟ ಸ್ಥಾನವಿದೆ. ಇದು ಸ್ವರೂಪದಲ್ಲಿ 'ಹೋಳಿ' ಆಚರಣೆಯಂತೆಯೇ ಕಂಡರೂ ಕೂಡ ಇಲ್ಲಿ ರಾಡೀ ನೀರನ್ನು ಹೆಂಗಳೆಯರಿಗೆ ಗೊಜ್ಜುತ್ತ ಪುರುಷರು ಆಡುವ ಇದು ಹಳ್ಳಿಗರಲ್ಲಿ ತುಂಬ ಜನಪ್ರಿಯವಾದ ಹಬ್ಬ. ನೀರೋಕುಳಿ-ಹಾಲೋಕುಳಿಗಳನ್ನು ಆಚರಿಸುವ ಕ್ರಮ 'ಮೌನಕ್ರಾಂತಿ'ಯಲ್ಲೂ ಬರುತ್ತದೆ. ಇತ್ತೀಚೆಗೆ ಈ ಹಬ್ಬ ಹಳ್ಳಿಗಳಲ್ಲಿ ವಿಪರೀತ ಬದಲಾವಣೆ ಕಂಡು. ಕೇವಲ ಕಾಮುಕರ. ಕುಡುಕರ. ಕುಚೇಷ್ಟೆಗಳಾಗಿ ನಿಂತಿವೆ. ಗ್ರಾಮೀಣರನ್ನೆಲ್ಲ ಬೆಸೆದು ಸಹಕಾರದ-ಸಹಬಾಳ್ವೆಯ ನೆಲೆಯನ್ನು ಒದಗಿಸುವ ಇಂಥ ಎಷ್ಟೋ ಹಬ್ಬಗಳಿಂದು ತಮ್ಮ ಮೂಲಉದ್ದೇಶವನ್ನೇ ಕಳೆದುಕೊಂಡದ್ದು ವಿಷಾದಕರ ಸಂಗತಿ. ನೀರೋಕುಳಿ ಮುನ್ನಾದಿನ ಕಬಡ್ಡಿ ಪಂದ್ಯಾಟಗಳು. ಇಲ್ಲಿ ನೆರೆದ ಜನರಿಗೆ ಶಿವಶಂಕರನ ಮಾತು ಸಮ್ಮೋಹನಗೊಳಿಸಿದ ರೀತಿ. ಆಟಗಳು ಜನರಲ್ಲಿ ಐಕ್ಯತೆ-ಒಗ್ಗಟ್ಟು. ಪರಸ್ಪರ ಅರಿವನ್ನು ಮೂಡಿಸುವ ಸಹಕಾರಿಯೆಂಬುದಕ್ಕೆ ಸಾಕ್ಷಿಯಾಗಿವೆ.

ಹಳ್ಳಿಗರ ಬದುಕು ಸಾಹಸಮಯವಾದುದು. ಶಕ್ತಿಪ್ರದರ್ಶನ ಅವರ ಬದುಕಿನ ಅವಿಭಾಜ್ಯ ಅಂಗ. ಕಂಬಯೇರಿ ಬೆಳ್ಳಿಕಡಗ ಪಡೆವ ಮೈನವಿರೇಳಿಸುವ ಶಕ್ತಿಪ್ರದರ್ಶನಕ್ಕೆ ಕಾದಂಬರಿ ಅವಕಾಶ ನೀಡಿದೆ. ವಿವಿಧ ರಸಾಯನಗಳನ್ನು ಸವರಿದ ಕಂಬ ಜಾರುಬಂಡೆಯಂತೆ ಯಾರನ್ನೂ ಹತ್ತಿಸಿಕಕೊಳ್ಳದಿದ್ದರೂ. ಅನೇಕ ಕಾಳಗಿಯ ಸಾಹಸಿಗರು ಪ್ರಯತ್ನಿಸುತ್ತಲೇ ಇದ್ದರು. ಕೊನೆಗೂ ಶಿವರಾಯ ಸಾಹಸ ಮೆರೆದಾಗ ಹಳ್ಳಿಗರಿಗೆಲ ಸಂತೋಷವಾದಂತೆ. ಶಿವರಾಯನಿಗೆ ಬೆಳ್ಳಿಕಡಗ ಪಡೆದ ಖುಷಿ. ಮಲ್ಲಕಂಬದಂಥ ಈ ಶಕ್ತಿಪ್ರದರ್ಶನದ ರಾತ್ರಿಯೇ ಶ್ರೀಕಷ್ಣ ಪಾರಿಜಾತ ಬೈಲಾಟ. ಬೈಲಾಟವೆಂದರೆ. ಹಳ್ಳಿಗರಿಗೆ ಎಲ್ಲಿಲ್ಲದ ಸಂತೋಷ. ಅದೂ 'ಪಾರಿಜಾತ' ವೆಂದರೆ ಹಳ್ಳಿಗರು ಬಾಯಿಬಾಯಿ ಬಿಡುತ್ತಾರೆ. ಉತ್ತರ ಕರ್ನಾಟಕದ ಪ್ರತಿಹಳ್ಳಿಗಳಲ್ಲಿಯೂ ಇಂಥ ಬೈಲಾಟಗಳನ್ನು ಇಂದಿಗೂ ಹಬ್ಬದ ರಾತ್ರಿ ತುಂಬ ಹುರುಪಿನಿಂದಲೇ ಆಡುತ್ತಾರೆ-ನೋಡುತ್ತಾರೆ. ನಾಲ್ಕು ಬದಿಗೆ ಚಕ್ಕಡಿ ಗಾಲಿಗಳನ್ನು ಹೂತು. ಅಡ್ಡ ಮರದ ತೊಲೆಗಳನ್ನಿಟ್ಟು ಮೇಲೆ ಫಳಿ ಜೋಡಿಸಿದರೆ ಸಾಕು ಸಿದ್ಧವಾಗುತ್ತದೆ. ಬೈಲಾಟದ ರಂಗಮಂದಿರ. ಕಾಳಗಿಯಲ್ಲಿ ಓಕಳಿಯಂದು ನಡೆದ ಮಹಾಲಿಂಗಪುರದ 'ಪಾರಿಜಾತ' ವನ್ನು ನೋಡಲು ಬಯಲಿನಲ್ಲಿಯಷ್ಟೇ ಅಲ್ಲದೆ. ಮನೆಮಾಳಿಗೆಗಳ ಮೇಲೂ ಜನಸೇರಿದ್ದು ಹಳ್ಳಿಗರ ಹವ್ಯಾಸದ ಸಹಜಮನೋಧರ್ಮ; ಅವರು ನಾಟಕ ನೋಡುವ ರೀತಿಯನ್ನು ಕಣ್ಣಿಗೆ ಕಟ್ಟುವಂತೆ ಕಾದಂಬರಿ ಚಿತ್ರಿಸಿದೆ.

ಹಳ್ಳಿಗಳಲ್ಲಿ ಗಂಡನ ಹೆಸರನ್ನು ಹೇಳುವುದೆಂದರೆ ಹೆಣ್ಣುಮಕ್ಕಳಿಗೆ ಎಲ್ಲಿಲ್ಲದ ನಾಚಿಕೆ; ಪ್ರೀತಿ. ಒಡಪುಗಳನ್ನು ಸೇರಿಸಿ ಹೆಸರು ಹೇಳುವ ಪದ್ಧತಿ ಗ್ರಾಮೀಣ ಹೆಣ್ಣುಮಕ್ಕಳಲ್ಲಿ ಸಹಜ. ಅದನ್ನು ನೋಡುವುದೇ ಒಂದು ರೀತಿಯ ಮೋಜು. ಶಶಿ ಪದವೀಧರೆಯಾದರೂ. ಗಂಡನ ಹೆಸರನ್ನು ಒಡಪು ಸೇರಿಸಿ ಹೇಳುವಷ್ಟರಲ್ಲಿಯೇ ನಾಚಿ ನೀರಾಗಿ ಹೋಗಿದ್ದಳು. ನಾಗರಿಕತೆಗೂ ಹಳ್ಳಿಯ ಸಂಸ್ಕೃತಿಗೂ ಒಂದಿಷ್ಟು ಸಂಘರ್ಷ ಕಾದಂಬರಿಯಲ್ಲಿ ನಡೆದುದು ಕಂಡುಬರುತ್ತದೆಯಾದರೂ. ಕೊನೆಯಲ್ಲಿ ಗ್ರಾಮೀಣ ಸಂಸ್ಕೃತಿಯೇ ಗೆಲುವು ಪಡೆಯುತ್ತದೆ. ಕಾಳಗಿಗಿಂತ ಹೆಚ್ಚಿನ ನಗರೀಕರಣವನ್ನು ಕಂಡ ಬನಹಟ್ಟಿಯ ಪರಿಸರಕ್ಕೆ ಒಗ್ಗಿಹೋಗಿದ್ದ ಶಶಿ ಕಾಳಗಿಯಲ್ಲಿ ಜೀವನ ನಡೆಸುವುದು ದುಸ್ತರವೆನಿಸುತ್ತದೆ. ಗಂಡನ ಮೇಲೇನೋ ಪ್ರೀತಿಯಿದೆ. ಆದರೆ ಅಲ್ಲಿನ ಹೊಲಸು ವಾಸನೆ. ಅಲ್ಲಿಯೇ ಎಮ್ಮೆ-

ಕರುಗಳ ಮಲಮೂತ್ರದ ಗಬ್ಬುವಾಸನೆ. ಉಸಿರುಗಟ್ಟಿಸುವ ವಾತಾವರಣ. ಆಧುನಿಕ ಸಲಕರಣೆಗಳಾದ ಪಂಖಾ-ಫ್ರಿಜ್ ಇತ್ಯಾದಿಗಳಿಲ್ಲದೆ ಬದುಕುವುದು ಅವಳ ಮೈಮೇಲೆ ಬರುತ್ತದೆ. ಕೊನೆಗೆ ಕಿಶೋರಿಯ ಸಾಂದರ್ಭಿಕ ಉಪದೇಶದಿಂದಾಗಿ. ಹಳ್ಳಿಯಲ್ಲಿಯೇ ಎಲ್ಲರೊಂದಿಗೆ ಬೆರೆತು ಬದುಕುವ ರೀತಿ ತುಂಬ ಮನಾಕರ್ಷಕವಾಗಿದೆ. ಇದಕ್ಕೆ ಸುಮಾಳ ಪರಿವರ್ತನೆಯೂ ಇನ್ನೊಂದು ಸಾಕ್ಷಿ. ಗ್ರಾಮೀಣ ಬದುಕಿನಲ್ಲಿ ಸಣ್ಣಪುಟ್ಟ ಕಳ್ಳತನಗಳು. ಕುಡಿತದ ಚಟಗಳು. ಎರಡನೇ ಸಂಬಂಧಗಳು. ಇಂಥ ಅನೇಕ ಅನಾಚಾರಗಳು ಸಹಜವಾಗಿರುತ್ತವೆ. ತರತಮ ಭಾವನೆಗಳೇನೇ ಇದ್ದರೂ ಶಿವಶಂಕರ ಸಮಗಾರ ಸಿದ್ದಪ್ಪನನ್ನು 'ಕಾಕಾ....' ಎಂದು ಸಂಬೋಧಿಸಿ ಮಾತನಾಡುವ ರೀತಿ ಹಳ್ಳಿಗಳ ಭಾವಬಂಧನಕ್ಕೆ ಮೂಕಸಾಕ್ಷಿ. ಹಳ್ಳಿಗರಲ್ಲಿ ಸಹಕಾರ. ನಿಷ್ಕಲ್ಮಷ ಪ್ರೀತಿ. ಸಹಜ-ಸರಳ ನಡೆ-ನುಡಿಗಳು ಅವರ ಬದುಕಿನೊಂದಿಗೆ ಬೆಸೆದುಕೊಂಡ ಉತ್ತಮ ಗುಣಗಳೆಂದೇ ಹೇಳಬಹುದು. ಪ್ರಸ್ತುತ ಕಾದಂಬರಿಯಲ್ಲಿ ಬೆಳಗಲಿಯವರು 'ಉತ್ತಮ ಸಾಂಸ್ಕೃತಿಕ ಪಾತಳಿ'ಯನ್ನೇ ನಿರ್ಮಿಸಿದ್ದಾರೆಂದು ಹೇಳಿದರೆ ಉತ್ಪ್ರೇಕ್ಷೆಯಾಗದು. ಅನೇಕ ವಿಶಿಷ್ಟ ಕಾರಣಗಳಿಂದಾಗಿ. 'ಮೌನಕ್ರಾಂತಿ' ಗ್ರಾಮೀಣರ ಬದುಕನ್ನು ಮಾರ್ಮಿಕವಾಗಿ ಚಿತ್ರಿಸುವ ಉತ್ತಮ ಪ್ರಾದೇಶಿಕ ಕಾದಂಬರಿ.

**ಕಾತ್ರಾಳ ರತ್ನಿಯ ಚಾದಂಗಡಿ (೧೯೯೮) :**

'ದೇವದಾಸಿ' ಕಾದಂಬರಿಯಾದ ಬಳಿಕ ಬದುಕಿನಲ್ಲಿ ಅನೇಕ ಏರಿಳಿತಗಳನ್ನು ಕಂಡ ಬೆಳಗಲಿಯವರಿಗೆ. 'ಕಾತ್ರಾಳ ರತ್ನಿ'ಯನ್ನು ಬರೆಯಲು ಏಳೆಂಟು ವರ್ಷಗಳೇ ಬೇಕಾದುವು. ೩೩೨ ಪುಟಗಳಷ್ಟು ಬಂದಿಷ್ಟ ಸುದೀರ್ಘವಾಗಿರುವ ಈ ಕಾದಂಬರಿ ಬಿಚ್ಚಿಡುತ್ತ ಹೋಗುವ ಗ್ರಾಮೀಣ ಬದುಕಿನ ಚಿತ್ರ ಇಂದಿನ ಭಾರತೀಯ ಸಾಮಾಜಿಕ ಜೀವನದ 'ಯಥಾವತ್' ಚಿತ್ರಣವಾಗಿದೆ. ದೇಶದ 'ಸ್ವಾತಂತ್ರ್ಯ ಸುವರ್ಣ ಮಹೋತ್ಸವ' ಸಂದರ್ಭದಲ್ಲಿಯೂ ಹದಗೆಟ್ಟ ನಮ್ಮ ಹಳ್ಳಿಗಾಡಿನ ಒಂದು ಜ್ವಲಂತ-ಜೀವಂತ ಚಿತ್ರಣ ಇದಾಗಿದೆ. ನೂರಾರು ಬಗೆಯ. ನೂರಾರು ಪಾತ್ರಗಳು ಹಾಸುಹೊಕ್ಕಾಗಿರುವ ಈ ಕೃತಿ ಕನ್ನಡ ಪ್ರಾದೇಶಿಕ ಕಾದಂಬರಿ ಪ್ರಪಂಚಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆಯೆಂದರೆ ಅತಿಶಯವಾಗಲಿಕ್ಕಿಲ್ಲ. ಲೇಖಕರೇ ಪ್ರಸ್ತಾವನೆಯಲ್ಲಿ ಹೇಳುವಂತೆ. "ಈ ಕಾದಂಬರಿಯ ಬೇರು. ಕಾಂಡ. ಟಿಸಿಲು. ಟೊಂಗೆಗಳೆಲ್ಲ. 'ನಂದೂರು' ಎಂಬ ಒಂದು ಕಾಡುಹಳ್ಳಿಯಲ್ಲಿಯೇ ನೆಲೆ ನಿಂತಿವೆ: ಇಂದು-ಹಿಂದಿನ ಎನ್ನದೆ ಎಂದೆಂದಿಗೂ ಹಳ್ಳಿಗಳಲ್ಲಿ ಕಂಡು ಬರುತ್ತಿರುವ 'ಬಾರಾಭಾನಗಡಿ-ತಾರಾತಿಗಿಡಿ'ಗಳಲ್ಲಿಯೇ. ಊರಿಗೆ ಒಳಿತನ್ನು ಬಯಸಿದ. ಹಲವರ ಕಣ್ಣಲ್ಲಿ 'ಅನೀತಿ'. 'ಓಡಿಬಂದವ'ಳಾಗಿದ್ದರೂ ನೈತಿಕ ಸ್ಥೈರ್ಯ ಹೊಂದಿದ್ದ ರತ್ನಾಳ ಹೋರಾಟದ ಬದುಕು. ಅದು ಅವಳ ಚಾದಂಗಡಿಯ ಮುಖಾಂತರವೇ ನಡೆದ ರೀತಿಯನ್ನು ಹೇಳುವ ಪ್ರಸ್ತುತ 'ಕಾತ್ರಾಳ ರತ್ನಿಯ ಚಾದಂಗಡಿ' ಗ್ರಾಮೀಣ ಪರಿಸರವನ್ನು ಚಿತ್ರಿಸುವ ವಾಸ್ತವರೂಪದ ಕೃತಿ.

'ನಂದೂರು' ಒಂದು ಹಳ್ಳಿ. ಬಿಸನಾಳ-ಜಮಖಂಡಿ ರಸ್ತೆಯ ಪಕ್ಕದಲ್ಲಿರುವ ಈ ಊರಿಗೆ 'ಕಾತ್ರಾಳ ರತ್ನಿಯ ಚಾದಂಗಡಿ'ಯೊಂದು ಪ್ರಖ್ಯಾತವಾದ ಹೊಟೇಲು: ಅದೇನು ಅಂಥ ವಿಶಾಲವಾದ. ವಿಸ್ತೃತ ಆರ್.ಸಿ.ಸಿ. ಕಟ್ಟಡವಲ್ಲ.

ಅಲಂಕೃತ ವಿಭಾಗಗಳೂ. ಆಧುನಿಕ ಪೀಠೋಪಕರಣಗಳೂ ಇಲ್ಲ. ತಾರಾಸಂಸ್ಕೃತಿಯ ಹೋಟೇಲಂತೂ ಮೊದಲೇ ಅಲ್ಲ. ಮನೆಯ ಬಲಗೋಡೆಗೆ ಹೊಂದಿದ ಒಂದು ಸಾದಾ ಕಟ್ಟಡ. ಆ ಗೋಡೆಗೆ ಹೊಂದಿ ಮನೆಗೆ ಸಂಪರ್ಕವಿರಿಸಿಕೊಂಡ ಒಂದು ಬಾಗಿಲು: ಚಾದಂಗಡಿಯ ಮುಖ್ಯ ಬಾಗಿಲು ಉತ್ತರದಿಕ್ಕಿಗೆ. ಅಂದರೆ ಬಸ್‌ನಿಲ್ದಾಣದಿಂದ ಊರಿನತ್ತ ಬರುವ ಮುಖ್ಯ ರಸ್ತೆಗೆ ಹೊಂದಿಕೊಂಡಿತ್ತು. ಚಾದಂಗಡಿಯ ಬಾಗಿಲ ಮೇಲೆ ಎಂದೋ ಬರೆಸಿದ. ಅದೀಗ ಅಕ್ಷರಗಳೆಲ್ಲ ಮಾಸಿಹೋದ ಒಂದು ಚಿಕ್ಕದಾದ ನಾಮಫಲಕ. ಎಡಬದಿ ಒಂದು ಮೊಟ್ಟೆಯಾಕಾರದ ವರ್ತುಲದಲ್ಲಿ ಸವದತ್ತಿ ಎಲ್ಲಮ್ಮನ ಚಿತ್ರ. ಬಲಬದಿಯಲ್ಲಿ ' ರೇಣುಕಾ ಟೀ ಕ್ಲಬ್ ' ಎಂಬ ದೊಡ್ಡ ಅಕ್ಷರಗಳು. ಕೆಳಗೆ ಸಣ್ಣ ಅಕ್ಷರಗಳಲ್ಲಿ ಮಾಲಕರು : ' ಚೆನ್ನಪ್ಪ ಸಿದ್ರಾಮ ಅರಕೇರಿ (ಕಾತ್ರಾಳ) ' ಎಂದಿದ್ದು. ಆ ನಾಮಫಲಕ ನಾಮ ಮಾತ್ರಕ್ಕೆ. ಪ್ರಾಚೀನ ಇತಿಹಾಸ ಮರೆತು. ಅರ್ವಾಚೀನ ಇತಿಹಾಸವನ್ನು ನೆನಪಿಟ್ಟಂತೆ. ಊರವರಿಗೆ ಸುತ್ತಲಿನ ಹತ್ತು ಹಳ್ಳಿಯವರಿಗೆ. ಚಿರಪರಿಚಿತವಾದ ಹೆಸರೆಂದರೆ. ' ಕಾತ್ರಾಳ ರತ್ನಿಯ ಚಾದಂಗಡಿ ' ಎಂದೇ. ಚೆನ್ನು ಅಪಘಾತದಲ್ಲಿ ತೀರಿಕೊಂಡ ಮೇಲೆ ರತ್ನಾಳೇ ಆ ಹೊಟೇಲಿಗೆ ಮಾಲಿಕಳು. ಆ ರಸ್ತೆಯಲ್ಲಿ ಸಂಚರಿಸುವ ಗ್ರಾಮಸ್ಥರಿಗೆ ' ನಂದೂರ ' ಎಲ್ಲಿ ಎಂದು ಕೇಳಿದರೆ. ಒಂದೊಂದು ಸಲ ಗೊತ್ತಿಲ್ಲದೆ ಹೇಳದೇ ಇರಬಹುದು. ಆದರೆ ' ಕಾತ್ರಾಳ ರತ್ನಿಯ ಚಾದಂಗಡಿ ' ಎಲ್ಲಿ ಎಂದು ಕೇಳಿದರೆ ತಟ್ಟನೇ ಅದರ ಸ್ಥಳ-ವಿವರ ಹೇಳಿಬಿಡುತ್ತಾರೆ. ' ಕಾತ್ರಾಳ ರತ್ನಿಯ ಚಾದಂಗಡಿ 'ಯ ಊರೇ ' ನಂದೂರು ' ಎಂಬಷ್ಟು ಪ್ರತೀತಿ ಪಡೆದ ಹೊಟೇಲು. ಒಂದು ಬಗೆಯ ಅನೈತಿಕ ಔರಸ ಪುತ್ರಿಯಾಗಿ. ಬೇರೆಬೇರೆ ಜಾತಿಯ ತಂದೆತಾಯಿಗಳ ಅಕ್ರಮ ಸಂತಾನವಾಗಿ ಹುಟ್ಟಿ-ಬೆಳೆದಿದ್ದ ರತ್ನಾ ಯಾವುದೇ ಒಂದು ಜಾತಿಯ ' ಲಾಂಛನ 'ಕ್ಕೆ ಒಳಗಾಗದವಳು. ವಿಧವೆಯಾದ ಅವಳು. ಒಂದಿಷ್ಟು ಇದ್ದಿಲನ್ನು ಸಣ್ಣಗಾಗಿ ಅರೆದು ಅದರಲ್ಲಿ ಜಾಲಿಅಂಟಿನ ಪುಡಿ ಸೇರಿಸಿ. ಒಂದು ಡಬ್ಬಿಯಲ್ಲಿ ಇಟ್ಟಿರುತ್ತಿದ್ದು. ಸ್ನಾನ ಮಾಡಿದ ನಂತರ ಚೆನ್ನುನ ಫೋಟೋಕ್ಕೆ ಊದಕಡ್ಡಿ ಚುಚ್ಚಿ. ಹಸಿಮಾಡಿಟ್ಟಿದ್ದ ಇದ್ದಲಿನ ಪುಡಿಯನ್ನು ಎರಡೂ ಹುಬ್ಬಿನ ನಡುವೆ ಹಚ್ಚಿಕೊಂಡರೆ ಅಲ್ಲಿಗೆ ಅವಳ ಭಕ್ತಿ ಮುಗಿಯಿತು: ಅನಂತರ ಹೊಟೇಲಿನ ಗಲ್ಲೆ ಮೇಲೆ ಕೂಡ್ರುತ್ತಿದ್ದಳು. ಅನೇಕ ಕಷ್ಟ-ಕಾರ್ಪಣ್ಯ, ನೋವು-ನಲಿವು. ಬದುಕಿನ ಏರಿಳಿತಗಳ ಮಧ್ಯದಲ್ಲಿಯೂ ರತ್ನಾಳ ' ದೇವರು ಕೊಟ್ಟ ಸೌಂದರ್ಯ ' ಮಾತ್ರ ಮಾಸಿರಲಿಲ್ಲ. ಹೊಟೇಲು ತಿಂಡಿ-ತಿನಿಸುಗಳಿಗಿಂತ ಅವಳ ಮುಖಸೌಂದರ್ಯಕ್ಕಾಗಿಯೇ ಜೊಲ್ಲು ಸುರಿಸುವ ಅನೇಕ ಗಿರಾಕಿಗಳು ಬಂದುಹೋಗುತ್ತಿದ್ದರೂ. ರತ್ನಾ ಮಾತ್ರ ಸ್ವರ್ಗದಲ್ಲಿರುವ ಚೆನ್ನುನ ಆತ್ಮಕ್ಕೆ ಎರಡು ಬಗೆದಿರಲಿಲ್ಲ.

ನಾವಲಗಿ ರಾಚಪ್ಪ ಒಬ್ಬೊಂಟಿಗ. ಹೆಂಡತಿ ತೀರಿಹೋದಾಗ. ಹೆಂಗಸರಿಲ್ಲದ ಮನೆಯಲ್ಲಿ ಕೈ-ಬಾಯಿ ಸುಟ್ಟುಕೊಳ್ಳುತ್ತ ಕಸ್ತೂರಿಯನ್ನು ಜೋಪಾನ ಮಾಡುತ್ತಿದ್ದವ. ಸೋತ ಮುಖಹೊತ್ತು ಬಸ್ ನಿಲ್ದಾಣಕ್ಕೆ ಬಂದ ರಾಚಪ್ಪನನ್ನು ತಡೆದು ರತ್ನಾ ಮಾತನಾಡಿಸಿದಾಗ. " ಏನ ಹೇಳೂದ ರತ್ನಕ್ಕಾ....! ಹೆಂಗ್ಸರಿಲ್ಲದ ಮನೀ ! ನಮ್ಮ ಹುಡುಗೀ.... ದೊಡ್ಡಾಕಿ ಆಧಾಂಗ ಕಾಣತೈತಿ.... ಮನ್ಯಾಗ ಹುಡುಗಿ ಜೋಡಿ ಇರ್ಲಾಕ ನೆರಮನೀ ಪಾರತಿಗಿ ಹೇಳಿ ಹೊಂಟೇನಿ...." [೬೫] ತಾನು ಹೂನೂರಿನ ತಂಗಿ ಇರಪವ್ವಳ ಹತ್ತಿರ ಹೊರಟ ಅಸಹಾಯಕ ಸ್ಥಿತಿಯನ್ನು

---

೬೫. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ, ಪುಟ ೧೧

ತೋಡಿಕೊಂಡಾಗ. "…. ಅದ್ಯಾಕಪಾ. ನಾವಿಲ್ಲೇನ. ತಡೀ ನಾನs ಬರ್ತನು…. ಎಲ್ಲಾ ಯವಸ್ತಾ ನೋಡೂಣಂತ…."[೮೬] ಎಂದೆನ್ನುತ್ತ ರತ್ನಾ ತನುಮನಧನದಿಂದ ಅವನೊಂದಿಗೆ ಹೊರಟೇ ಬಿಟ್ಟಳು. ಹೀಗೆ ಈ ಕಾದಂಬರಿಯಲ್ಲಿ ಸಂಭವಿಸುವ ಘಟನೆಗಳೆಲ್ಲವೂ 'ಕಾತ್ರಾಳ ರತ್ನಿಯ ಚಾದಂಗಡಿ'ಯ ಸಂಬಂಧವನ್ನು ಸಾಧಿಸಿಕೊಳ್ಳುತ್ತ ಅವು. ರತ್ನಾಳ ಸಮಯಪ್ರಜ್ಞೆ. ಆತ್ಮವಿಶ್ವಾಸ. ಧೈರ್ಯ. ಆಲೋಚನೆ. ಸಂಯಮ. ಸಹಾನುಭೂತಿ. ತೀರ್ಮಾನಗಳಿಗೆ ಸವಾಲಾಗುತ್ತ ಹೋಗುವುದು ಪ್ರಸ್ತುತ ಕಾದಂಬರಿಯ ವಿಶೇಷತೆ. ತಾನೊಬ್ಬಳಲ್ಲದೆ. "…. ಸವಡಿದ್ರ ….ನಾವಲ್ಲಾರ ರಾಚಪ್ಪನ ಮನೀಗಿ ಬಾ. ಕಸ್ತೂರಿ ದೊಡ್ಡ ಆಧಾಂಗ ಕಾಣತೈತಿ…."[೮೭] ಎಂದೆನ್ನುತ್ತಾ ದಾರಿಯಲ್ಲಿ ಎದುರಾಗುವ ಅನೇಕ ಹೆಂಗಸರನ್ನು ಕರೆದುಕೊಂಡು. ರಾಚಪ್ಪನ ಮಗಳನ್ನು ಐದು ದಿನ 'ಕೂಡ್ರಿಸಿ' ಉಡಿತುಂಬುವ ಕಾರ್ಯಕ್ರಮವನ್ನು ಮಾಡಿ ಮುಗಿಸಿದಾಗ ರಾಚಪ್ಪನ ಹೊರೆ ಇಳಿದಂತಾಗಿತ್ತು. ಅಂದಿನಿಂದ ಕಸ್ತೂರಿ ರತ್ನಾಳಲ್ಲಿ ತಾಯ್ತನವನ್ನೇ ಕಾಣತೊಡಗಿದಳು. ರತ್ನಾಳಿಗಿರುವ 'ಹಂಬಲ'ವೂ ಒಂದರ್ಥದಲ್ಲಿ ಈಡೇರಿದಂತಾಗಿತ್ತಲ್ಲದೆ. ಬಡವನಾದ ರಾಚಪ್ಪನ ಬದುಕಿಗೆ ಒಂದಿಷ್ಟು ಆಧಾರವೂ ಆದಂತಾಗಿತ್ತು.

ಧರೆಪ್ಪಗೌಡ ನಂದೂರಿನ ಹಣವಂತ. ಅವನ ಮಗ ದಾನೇಶಗೌಡ: ಏಕ ಮಾತ್ರ ಸಂತಾನ. ರೊಕ್ಕ-ಸೊಕ್ಕುಗಳೆರಡೂ ಇರುವ ತಂದೆ-ಮಕ್ಕಳಿಬ್ಬರೂ ಊರಿಗೆ ಕಂಟಕರಾದವರು. ದಾನೇಶಗೌಡ ಗಸ್ತಿಹೊಳೆಪ್ಪನ ಸೊಸಿ ಕಮಲೆಯನ್ನು ಹಾಡುಹಗಲೇ ತೋಟದಲ್ಲಿ ಕೆಡಿಸಿದ. ಊರ ಪಂಚಾಯ್ತಿ ಸದಸ್ಯನಾದ ಆತ. ಹಣದ ಮದದಿಂದ. ರಾಜಕೀಯ ಪೋಷಣೆಯಿಂದ ಆ ಕೇಸನ್ನು ಮುಚ್ಚಿಹಾಕಿದ್ದಲ್ಲದೆ. ಆ ಅಪವಾದವನ್ನು ಏನೂ ಅರಿಯದ ಮುಗ್ಧ ಎಲ್ಲನ ಮೇಲೆ ಹಾಕಿ ಅವನನ್ನು ಬಲಿತೆಗೆದುಕೊಂಡ: ಹಿಂದೆ ಸ್ವಾತಂತ್ರ್ಯ ಚಳುವಳಿಯಲ್ಲಿ ಗೀಗೀ ಪದಗಳನ್ನು ಹಾಡುತ್ತ ದೇಶದ ಜನರನ್ನೇ ಹುರಿದುಂಬಿಸಿದ್ದ ಹೊಳೆಪ್ಪನನ್ನು ದಾನೇಶಿ ನಂದೂರಿನಿಂದಲೇ ಗುಳೆ ಎಬ್ಬಿಸಿದ. ದಾನೇಶಿಗೆ ಗೌಡಿಕೆಯ ಸೊಕ್ಕಿದೆ. ಆ ಸೊಕ್ಕಿನ ಮತ್ತಿನಲ್ಲಿಯೇ. " ಇದೇನೋ ದುರ್ಗ್ಯಾ. ಕೇರಿಯೂ ಈಗ ಭಾಳ ಸುಧಾರಿಸ್ತಪಾ…. ಯಾವ ಅಂಜಿಕಿಲ್ದs ಹಟೇಲಕ ಬಂದ ಚಾ ಕುಡೀತೀರಿ…."[೮೮] ಹೊಲೆಯರ ವೃದ್ಧ ದುರ್ಗಪ್ಪ ಆತನೆದುರು ಹೊಟೇಲಿನಲ್ಲಿ ಚಾ ಕುಡಿದದ್ದೇ ಆತನ ತಪ್ಪಾಗಿತ್ತು. ಅಲ್ಲಿಯೇ ಇದ್ದ ರತ್ನಾಳಿಗೆ ಅದು ಸರಿಕಾಣದೆ. ದುರ್ಗಪ್ಪನಿಗೆ ಪ್ರತಿಭಟಿಸಲು ತಿಳಿಸಿದಾಗ. " ನೀ ಹುಚ್ಚೀ ಅದೀ ರತ್ನವ್ವಾ ! ಪೋಲಿಸ್ರು ಸಣಗೌಡ್ನ ಹಿಡೀತಿರ್ಲಿಲ್ಲ…. ತಿರಗಿ ದುರ್ಗಪ್ಪನs ಹಿಡಕೊಂಡು ಹೋಗ್ತಿದ್ರು…. ರೊಕ್ಕದ ಬಲಾ ಇದ್ದಾಗ ಬಡೂರ್ನ ಯಾರ ಕೇಳಬೇಕು ? ಅದೂ ಅಲ್ದ ಅಂವ ಪಂಚಾಯ್ತಿ ಮೆಂಬರ. ಅಪ್ಪ ಊರಾಗ ಪುಢಾರಿ. ಇಂತಾದ್ರಾಗ ದುರ್ಗಪ್ನ ತಕರಾರ ಯಾರ ಕೇಳ್ತಾರು ?"[೮೯] ಎಂದು. ಚಹ ಕುಡಿಯಲು ಬಂದು. ನಡೆದ ಸಂಗತಿಯನ್ನೆಲ್ಲ ನೋಡಿದವನೊಬ್ಬ ರತ್ನಾಳಿಗೆ ಹೇಳಿದ್ದರಲ್ಲಿ ಕಾನೂನುಗಳು ಕೇವಲ ಪುಸ್ತಕದಲ್ಲಿ ಮಾತ್ರ ಇವೆಯೆಂಬುದನ್ನು ನೆನಪಿಸಿಕೊಟ್ಟಂತಿದೆ. ಊರಲ್ಲಿ ಕಂಡಕಂಡ ಸುಂದರ

---

೮೬. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೧

೮೭. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೨

೮೮. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೪೦

೮೯. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೪೩

ಹೆಣ್ಣುಮಕ್ಕಳ ಸೆರಗಿಗಾಗಿ ಜೊಲ್ಲು ಸುರಿಸುತ್ತಿದ್ದ ದಾನೇಶಿಯ ಹೆಂಡತಿ ವಿಭಾ ಪುಣೆಯಲ್ಲಿಯೇ ತಳವೂರಿ ಕುಳಿತಿದ್ದ ಕಾರಣ ಮಾತ್ರ ದಾನೇಶಿಗೆ ತಿಳಿದಿರಲಿಲ್ಲ; ತಿಳಿದರೂ ಅವಳೆದುರು ಇವನ ಪುಂಗಿ ನಡೆಯದು. ಇವನಷ್ಟೇ ಏಕೆ. ಅತ್ತೆ ನಿಂಬೆವ್ವಳ. ಮಾವ ಧರೆಪ್ಪಗೌಡನ ದರ್ಪಗಳೂ ಅವಳೆದುರು ನಡೆಯವು. ಇದಕ್ಕೆ ತ್ರಿಪುರಾಂತಕ ಸ್ವಾಮಿಗೆ ವಿಭಾ ಬೋರಮಾಳ ಸರ ಕೊಟ್ಟ ಪ್ರಸಂಗವೇ ಸಾಕ್ಷಿ.

ಧರೆಪ್ಪಗೌಡ ಹಾಗೂ ಅವನ ಮಗ ದಾನೇಶಗೌಡರ ಭಾನಗಡಿಗಳು ಹೆಚ್ಚಾಗುತ್ತಿದ್ದ ಸಂದರ್ಭದಲ್ಲಿಯೇ ತ್ರಿಪುರಾಂತಕ ಸ್ವಾಮಿಯೊಬ್ಬ ನಂದೂರನ್ನು ಹೊಕ್ಕಿದ್ದ; ಧರೆಪ್ಪಗೌಡನ ಆಸರದಲ್ಲಿಯೂ ಬಿದ್ದಿದ್ದ. ಸಿರಸಲ್ಲಿ ಅದಾಗಲೇ ಹಸಿದ ನಾಯಿಯಂತೆ ಹಿಂಬಾಲಕನಾಗಿದ್ದಲ್ಲದೆ. ಸ್ವಾಮಿಗೊಂದು ಮರಿಸ್ವಾಮಿಯೂ ಊರಲ್ಲಿ ಬಂದಾಗಿತ್ತು. ಈ ಎಲ್ಲ ಚಂಡಾಳಿ-ಚೋಪಡಿ ಜನರೆಲ್ಲ ಸೇರಿ ಊರಲ್ಲಿ ದಾನಮ್ಮನ ಗುಡಿಯೊಂದನ್ನು ಕಟ್ಟುವ ಯೋಜನೆ ಹಾಕಿದ್ದರಲ್ಲದೆ. ಶುಭಮುಹೂರ್ತದಂದು 'ದಾನಮ್ಮ ದೇವಿಯ ಪುರಾಣ'ವನ್ನೂ ಪ್ರಾರಂಭಿಸಿದ್ದರು. ಸಾಕಷ್ಟು ಊರುಗಳಲ್ಲಿ ಎಷ್ಟೋ ಜನರಿಗೆ ಮಂಟಾ ಹಾಕುತ್ತ. ಅವರ ಹಣ ಗೆಬ್ಬಿ ಪರಾರಿಯಾಗುತ್ತಿದ್ದ ತ್ರಿಪುರಾಂತಕ ಸ್ವಾಮಿಗೆ ನಂದೂರಿನಲ್ಲಿ ಹಾಗಾಗದೆ ರಾತ್ರೋ ರಾತ್ರಿ ಮರಿಯೊಂದಿಗೆ ಓಡಿಹೋದದ್ದು ಆ ಊರಿನ ಪುಣ್ಯವೆಂದೇ ಹೇಳಬೇಕು. ರತ್ನಾಳೇ ಮುಂದಾಗುವ ದುರಂತವನ್ನು ತಪ್ಪಿಸಿ ಆ ಪುಣ್ಯಕಟ್ಟಿಕೊಂಡಿದ್ದಳು.

ಪರಪ್ಪಗೌಡ್ರು ಊರಿಗೆ ಉಪಕಾರವನ್ನು ಬಯಸಿದ ಸಾವುಕಾರರು. ಧರೆಪ್ಪಗೌಡನ ಕಿತಾಪತಿಗಳಿಗೆ ರೋಸಿಹೋದವರು. ಒಂದು ದಿನ ಇದ್ದಕ್ಕಿದ್ದಂತೆ ಪರಪ್ಪಗೌಡರ ಬಣಿವೆಗೆ ಬೆಂಕಿಬಿದ್ದು. ಒಂದೂವರೆ ಲಕ್ಷದಷ್ಟು ಬೆಲೆಬಾಳುವ ಜವಾರಿ 'ಜಾತಿಹೋರಿ'ಗಳು ಬೆಂಕಿಯಲ್ಲಿ ಸುಟ್ಟು ಕರಕಾಗಿ ಹೋಗಿದ್ದವು. ದಾನೇಶಿಯ ಭಾನಗಡಿಗಳಲ್ಲಿ ಇದೂ ಒಂದೆಂದು ಜನರಿಗೆ ಗೊತ್ತಿದ್ದರೂ. ಅನಾಹುತದ ಬಗ್ಗೆ ಸಹಾನುಭೂತಿ. ಕಳಕಳಿ. ಕಾಳಜಿ. ದುಃಖ. ನೋವು. ವ್ಯಥೆ. ಸಂತಾಪ. ಉದ್ವಿಗ್ನತೆ. ಉದ್ರೇಕ. ಆಕ್ರೋಶ. ಸಿಟ್ಟುಗಳನ್ನು ವ್ಯಕ್ತಪಡಿಸುತ್ತಿದ್ದರೂ. ಸಣಗೌಡನ ಹೆಸರು ಹೇಳುವ ಎದೆಗಾರಿಕೆಯಾಗಿರಲಿಲ್ಲ. "ಹಾದರಗಿತ್ತಿಮಕ್ಕು.... ಬಣವಿಗಿ ಬೆಂಕೀ ಹಚ್ಚೂದ ಹೋಗಲಿ.... ಬಂಗಾರದಂತಾ ಹೋರಿಗೋಳು ಸತ್ತು ಹ್ವಾದು...."[೯೦] ಎಂಬಂತಹ ಸಿಟ್ಟು ಹೊಟ್ಟೆಯಲ್ಲಿದ್ದರೂ. ಅದು ರಟ್ಟೆಗೆ ಬಂದಿರಲಿಲ್ಲ.

ಚಿಮ್ಮಲಮಡ್ಡಿಯ ಚಂದ್ರಾಳ ಬದುಕು ಕರುಣಾಜನಕವಾದುದು. ತಂದೆ-ತಾಯಿಯಿಲ್ಲದ ಅವಳಿಗೆ ಅಣ್ಣ-ಅತ್ತಿಗೆಯರೇ 'ದಂಧೆ'ಗೆ ನೂಕಲು ಸಿದ್ಧರಾಗಿದ್ದರು. ಕುಡುಕ ಅಣ್ಣ ಯಮನ್ಯಾ ಎರಡು ಸಾವಿರ ಹಣಪಡೆದು ಅವಳನ್ನು ದಾನೇಶಿಗೆ ಮಾರಿಕೊಂಡಿದ್ದ; ಸುದೈವಕ್ಕೆ ರತ್ನಾಳ ಚಾದಂಗಡಿಯೇ ಅವಳಿಗೆ ಆಶ್ರಯ ನೀಡಿದ್ದಲ್ಲದೆ. ಬಿಜಾಪುರದ ಮಹಿಳಾ ಆಶ್ರಮದಲ್ಲಿ ನೆಲೆ ಸಿಕ್ಕು. ಮುಂದೆ ಶ್ರೀಕಾಂತನ ಹೆಂಡತಿಯಾದದ್ದು ಚಂದ್ರಾಳ ಬದುಕಿನ ಸಾರ್ಥಕತೆಯಾಗಿತ್ತು. ಶ್ರೀಕಾಂತನೊಬ್ಬ ಹೊಸವಿಚಾರಧಾರೆಯ ಯುವಕನಾಗಿದ್ದು. ವಿದ್ಯಾರ್ಥಿಯಿದ್ದಾಗಲೇ ದೇವದಾಸಿ ಪದ್ಧತಿಯನ್ನು ವಿರೋಧಿಸಿದವ; ಅದನ್ನೀಗ ಆಚರಣೆಯಲ್ಲಿ ತಂದಿದ್ದನಷ್ಟೇ.

---

೯೦. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೯೮

ಜಾಲಿಬೆಂಚಿ ರತ್ನಪ್ಪ ಊರಲ್ಲಿ ಕಳ್ಳಬಟ್ಟಿ ಸರಾಯಿ ಮಾಡುತ್ತ, ಪುಂಡಾಟಿಕ ನಡೆಸುವವ. ಅಳಿಯ ಗಂಗಾರಾಮನನ್ನೂ ತನ್ನ ವೃತ್ತಿಗೇ ಹಚ್ಚಿ, ರತ್ನಾಳ ಹೊಟೇಲಿನೆದುರುಗಡೆ ಪಾನಪಟ್ಟಿಯಂಗಡಿಯೊಂದನ್ನು ಹಾಕಿಕೊಟ್ಟು, ಅದರಲ್ಲಿ ಮಟಕಾ ಬರೆಯುವುದಲ್ಲದೆ, ಕಳ್ಳಬಟ್ಟಿ ಸರಾಯಿಯನ್ನು ಮಾರಲು ಹಚ್ಚಿದ್ದ. ವಾಸನೆ ಓಡಿದ ಚಮಕೇರಿ ಪೋಲಿಸರು ಆ ಡಬ್ಬಿ ಅಂಗಡಿಯನ್ನು ಕಿತ್ತು ಹಾಕಿ ಗಂಗಾರಾಮನನ್ನು ಅರೆಸ್ಟ ಮಾಡಿ ಒಯ್ದು ಸುದ್ದಿ ತಿಳಿದ ರತ್ನಪ್ಪ, "ಯಾ ಮಗಾ ನನ ಅಳ್ಯಾನ ಮ್ಯಾಲ ಕಂಪ್ಲೇಟ ಕೊಟ್ಟ ಓಡಿಸ್ಯಾನು. ಅಂವ ಯಾಂವ ಗಂಡ್ಸ ಅದಾನು ನನ ಮುಂದ ಬರ್‍ಲಿ....!"[೯೧] ಎಂದು ತುರಾಡುತ್ತ ಬಸ್‌ನಿಲ್ದಾಣದಲ್ಲಿ ಚೀರಾಡುತ್ತ, "ನನ ಕಿಸೇದಾಗ ಸರಕಾರ ಐತಿ, ನನ ಕೈಯಾಗ ಎಮ್ಮೆಲ್ಲೇ ಅದಾನು.... ನನ ಮುಟಿಗ್ಯಾಗ ಪೋಲಿಸ್ರು ಅದಾರು...."[೯೨] ಎಂದು ಹುಚ್ಚು ಹಿಡಿದವರಂತೆ ಆವೇಶದಿಂದ ಒದರಾಡುವ ಈತನೇ ಒಂದು ದಿನ ಕಬ್ಬಿನ ಸೆಳೆಗಳ ಹಿಂದೆ ಕೈಕಟ್ಟಿಸಿಂತಿದ್ದು ನಂದೂರಿನ ಜನರು ಸರಾಗವಾಗಿ ಉಸಿರಾಡುವಂತೆ ಮಾಡಿತ್ತು. ಈ ಮಧ್ಯ ಕಸ್ತೂರಿಗೆ ನೋಡಲು ಬರುವ ಒಂದೊಂದು ವರಗಳು ಹೆಣ್ಣುನೋಡಿ ಪಾಸುಮಾಡಿದರೂ, ಊರವರ ಹರಕು ಬಾಯಿಯಿಂದಾಗಿ ಅಷ್ಟೇ ಸುಲಭವಾಗಿ ಸಂಬಂಧಗಳೆಲ್ಲ ಕೈಜಾರಿ ಹೋಗುತ್ತಿರುವುದು ಸಾವಲಗಿ ರಾಚಪ್ಪನಿಗೆ ದುಃಖಿಸುವಂತಾದರೆ, ರತ್ನಾಳಿಗೆ ಸಹಿಸಲಾರದ ನೋವು ತರುತ್ತಿತ್ತು; ಅದೂ ತನ್ನಿಂದಾಗಿಯೇ ಆ ಸಂಬಂಧಗಳೆಲ್ಲ ತಪ್ಪಿಹೋಗುತ್ತಿರುವುದು ತಿಳಿದಾಗ ರತ್ನಾ ಒಳಗೊಳಗೇ ಮರುಗುತ್ತಾಳೆ.

ದಾನೇಶಿಯ ಉಪಟಳ ತಾರಕಕ್ಕೆ ಮುಟ್ಟುತ್ತದೆ. ರಾಜೇಸಾಬನ ಹೆಂಡತಿ ಚಾಂದಬೀಯನ್ನು ಕಂಡು ಜೊಲ್ಲುಸುರಿಸಿದ್ದು, ಅವಳು ದಕ್ಕದಾದಾಗ ಮನೆಯ ಆಳು ಶೇಕಿಯ ಮೇಲೆ ಕೈಹಾಕಿದ್ದೂ ಫಲಿಸಲಿಲ್ಲ. ಕಸ್ತೂರಿಗೆ ಹೊಂಚುಹಾಕಿದ ದಾನೇಶಿ ಒಂದು ದಿನ ಧೈರ್ಯ ಮಾಡಿ, ಯಾರೂ ಇಲ್ಲದ ಸಮಯ ನೋಡಿ ಕಸ್ತೂರಿ ಮನೆಗೆ ಹೋಗಿ ಅವಳನ್ನು ಅಪ್ಪಿಕೊಳ್ಳುತ್ತಿದ್ದಂತೆಯೇ ಸಿಂಬೆವ್ವನ ಸೌಟಿನ ರುಚಿಯುಂಡಿದ್ದ. ಹಲವಾರು ಪ್ರಕರಣಗಳಲ್ಲಿ ಪೋಲಿಸರಿಗೆ ಬೇಕಾಗಿದ್ದ ದಾನೇಶಿ ಜಾತಿಸಿಂದನೆಯ ಅಪರಾಧದಲ್ಲಿ 'ರೆಡ್‌ಹ್ಯಾಂಡಾಗಿ' ಸಿಕ್ಕುಬಿದ್ದು ಪೋಲಿಸರ ಅತಿಥಿಯಾಗಿ ಚಮಕೇರಿ ಸೇರಿದ್ದ; ಧರೆಪ್ಪಗೌಡನಿಗೆ ಇದೊಂದು ನುಂಗಲಾರದ ತುತ್ತು. ಬೀಸುವ ದೊಣ್ಣೆ ತಪ್ಪಿದರೆ ಸಾಕೆಂದು ಐವತ್ತುಸಾವಿರ ರೂಪಾಯಿ ದಂಡತೆತ್ತು ಮಗನನ್ನು ಬಿಡಿಸಿಕೊಂಡು ಬಂದಿದ್ದ. ಆ ಐವತ್ತು ಸಾವಿರದೊಂದಿಗೆ ಅಡಿವೆಪ್ಪನ ಇಪ್ಪತ್ತೈದು ಸಾವಿರ ಸೇರಿ ಅದು ಶಾಲಾ ಸುಧಾರಣೆಗೆ ಬಳಕೆಯಾಯಿತು. ಹೊಸದಾಗಿ ರಚನೆಯಾದ 'ಶಾಲಾಸುಧಾರಣಾಸಮಿತಿ'ಗೆ ಪರಪ್ಪಸಾವುಕಾರರೇ ಅಧ್ಯಕ್ಷರು; ರತ್ನಾ, ಪಾಂಡು, ನಾಗಪ್ಪ, ಬೀರಪ್ಪ, ಮುಂತಾದವರು ಇತರ ಸದಸ್ಯರಾದರು. ಈ ಸಂದರ್ಭದಲ್ಲಿ ನಂದೂರಿನಲ್ಲಿ ಒಂದಿಷ್ಟು ನೆಮ್ಮದಿಯ ವಾತಾವರಣ ಕಾಣುತ್ತಿದ್ದಂತೆಯೇ, ಅನೇಕ ಸುಧಾರಣೆಗಳೂ ಆಗುತ್ತವೆ. ಆದರೆ ಈ ಮಧ್ಯ 'ದಾನೇಶಿ-ಕಸ್ತೂರಿ' ಪ್ರಸಂಗ ಮಾತ್ರ ರತ್ನಾಳ ಧೃತಿಗೆಡಿಸಿತ್ತು. ಅದಕ್ಕಾಗಿ ಅವಳೊಂದು ನಿರ್ಧಾರಕ್ಕೆ ಬರಬೇಕಾಗಿತ್ತು-ಬಂದಿದ್ದಳು.

---

೯೧. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ, ಪುಟ ೧೮೪

೯೨. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ, ಪುಟ ೧೮೫

ರತ್ನಾ ತನ್ನ ಕಾರ್ಯಸಾಧನೆಗಾಗಿ ಓಂಕಾರಿಯನ್ನು ಕರೆದು " ಈಗ ನೀ ಒಂದ ಕೆಲ್ಸಾ ಮಾಡಬೇಕಾಗೇತಿ.... ಹ್ಯಾಂಗೂ ನೀ ಗಂಡ್ಸ ಅದೀ.... ನಿನ್ನಲ್ಲಿ ತಾಕತ್ತ ಐತಿ.... ಇನಟ್ಟ ನೀ ಗಟ್ಟಿಯಾದ್ರ ನೀ ಬೇಕಾದ್ದ ಮಾಡ್ತಿ.... ಹೇಳ ಓಂಕಾರಿ "[೯೩] ಎಂದು ಓಂಕಾರಿಯನ್ನು ಹುರಿದುಂಬಿಸುತ್ತ. " ಓಂಕಾರಿ. ಅದ ನಿನಗ ನೀಗತೈತಿ.... ನೀ ಗಂಡ್ಸ ಅದೀ.... ನೀ ನೀಗಿಸಿ ತೋರ್ಸಬೇಕಾಗೇತಿ.... ನಿನಗs ಗೊತ್ತ. ನನಗs ಗೊತ್ತ.... ಈಗ ನನ್ನ ಮ್ಯಾಲ ನಿನ್ನ ಮನಸ್ಸ ಐತೇನ....? ಖರೆ ಹೇಳ ಅಂಜಬ್ಯಾಡ...."[೯೪] ರತ್ನಾ ದೃಢನಿಶ್ಚಯ ಮಾಡಿಯೇ ನಂದೂರಿನ ಭವಿಷ್ಯವನ್ನು ಬದಲಾಯಿಸುವ ರೀತಿಯಲ್ಲಿ ಓಂಕಾರಿಗೆ ಹೇಳುತ್ತ. " ಇಲ್ಲೀತನಾ ನಾ ನನ್ನ ಮರ್ವಾದಿ ಕಾಯ್ಕೊಂಡ ಬಂದsನಿ.... ಮಾನಾ ಜಪ್ಪಿಸಿಕೊಂಡ ಬಂದsನಿ ಈಗ ಒಂದ ಮತ್ವದ್ದ ಕೆಲ್ಸ ಐತಿ.... ಅದs.... ನೀ ಹ್ಯಾಂಗಾದ್ರೂ ಆ ಗೌಡನ ಮಗನ್ನ ಮುಗಸಬೇಕು.... ನನ ಹತೇಕ ಬರಬೇಕು.... ಇದು ಪಕ್ಕಾ.... ಆದರ ಭಾಳ ಇಚಾರಮಾಡೂ ಮಾತೈತಿ. ಓಂಕಾರೀ.... ಇದರಾಗ ಹುಂಬಗುತಿಗೀ ನಡೀದುಲ್ಲ.... ತಲೀ ಓಡಸ್ಬೇಕು.... ಭಾಳ ಎಚ್ರಬೇಕು.... ಇದ ನನಗ ನಿನಗ ಅಟ್ಟs ಗೊತ್ತಿರ್ಬೇಕು...."[೯೫] ನಂದೂರಿನ ಭವಿಷ್ಯಕ್ಕಾಗಿ ತನ್ನ 'ಶೀಲ'ವನ್ನೇ ಆಹುತಿ ನೀಡಲು ತಯಾರಾದ ರತ್ನಾಳ ವ್ಯಕ್ತಿತ್ವ ಅರ್ಥೈಸಿದಷ್ಟೂ ಬೆಳೆಯುತ್ತ ಹೋಗಿ ಅಗಾಧವಾದ ಎತ್ತರಕ್ಕೆ ನಿಲ್ಲುತ್ತದೆ.

ರಾತ್ರಿ ಚಿಮ್ಮಲಮಡ್ಡಿ ಯಮನ್ಯಾನ ಮನೆಯಿಂದ ನಂದೂರಿಗೆ ಬರುತ್ತಿರುವ ದಾನೇಶಿಗೆ ಓಂಕಾರಿಯಿಟ್ಟ ಗುರಿ ತಪ್ಪಲಿಲ್ಲ. ಅಗಾಧ ಕಾರ್ಯಸಾಧನೆಯಿಂದಾದ ತೃಪ್ತಿಯಿಂದ ಓಡಿ ಬಂದ ಓಂಕಾರಿ. 'ಎಲ್ಲ ಮುಗೀತ ಸಾವಕಾರ್ತಿ....!' ಎಂದ ಮಾತುಗಳನ್ನು ಕೇಳಿ ರತ್ನಾ ಓಗ್ಗಿದ್ದಷ್ಟೇ ಅಲ್ಲ. ನಂದೂರ ಗ್ರಾಮದ ತರುಣಿಯರಿಗೆಲ್ಲ ನಿರಾಳವಾಗಿ ಉಸಿರಾಡುವ ಭರವಸೆ ಹುಟ್ಟಿತ್ತು. ಮಾತುಕೊಟ್ಟಂತೆ ರತ್ನಾ ಓಂಕಾರಿಯ ಕೈಗಳನ್ನು ಬಿಗಿದಮುಕಿದರೆ. " ಬ್ಯಾಡ್ರೀ.... ಸಾವಕಾರ್ತಿ.... ಇನ್ನ ಆ ಪಾಪದಾಗ ಬೀಳೂದ ಬ್ಯಾಡ...."[೯೬] ವೆಂದು ನಯವಾಗಿಯೇ ಕೈಬಿಡಿಸಿಕೊಂಡದ್ದು ಅವನನ್ನು ಮಹಾಪುರುಷನ ಮಟ್ಟಕ್ಕೇರಿಸಿದೆ. ರಾತ್ರೋರಾತ್ರಿ ಪಣಜಿಗೆ ಹೊರಟು ನಿಂತ ಓಂಕಾರಿಗೆ. " ಓಂಕಾರೀ ಈಗ ನೀ ಹೋಗೂದ ಬ್ಯಾಡಾ.... ನೀ ಹ್ವಾದ್ರ ಮಂದ್ಗಿ ಸಂಸೇ ಬರ್ತೈತಿ. ಎಲ್ಲಿ ಹ್ವಾದಾ. ಈಗs ಯಾಕ ಹ್ವಾದಾ ಅಂತ ಸಂಸೇಕ ಕಾರ್ಣ ಆಗ್ತೈತಿ. ಹೋಗೂದ ಬ್ಯಾಡಾ.... ಇದ ನಿಂದs ಮನೀ.... ಇಲ್ಲೇ ಇರ.... ಮುಂದ ಏನಾಗತೈತೋ ನೋಡೂಣು...."[೯೭] ಪ್ರಸಂಗವನ್ನು ಎದುರಿಸುವ ಎದೆಗಾರಿಕೆಯಿಂದಲೇ ಓಂಕಾರಿಯನ್ನು ತನ್ನಲ್ಲಿಯೇ ಇರುವಂತೆ ಹೇಳುವ. ಸಾಂಕೇತಿಕ ಪ್ರಸಂಗದೊಂದಿಗೆ ಕಾದಂಬರಿ ಅರ್ಥಪೂರ್ಣ ಸಮಾಪ್ತಿ ಹೊಂದುತ್ತದೆ.

---

೯೩. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೨೬

೯೪. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೨೬

೯೫. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೨೬

೯೬. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೩೨

೯೭. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೩೨

ಪಾತ್ರಪ್ರಧಾನವಾದ ಪ್ರಸ್ತುತ ಕಾದಂಬರಿಗೆ ರತ್ನಾಳೇ ಕಥಾನಾಯಕಿ. 'ಚಾದಂಗಡಿ ರತ್ನಿ' ಎಂದಾಕ್ಷಣ ಥಟ್ಟನೆ ಕಲ್ಪನೆಯಲ್ಲಿ ಮೂಡಬಹುದಾದ ಚಿತ್ರವೆಂದರೆ. ನಖರಾಮಾಡುತ್ತ. ಮೋಹಗೊಳಿಸುವ 'ಹೆಣ್ಣು' ಎಂಬುದಾಗಿ! ಆದರೆ ಕಾದಂಬರಿಯ ಒಡಲಾಳದಲ್ಲಿರುವ 'ರತ್ನಿ' ಹಾಗಿಲ್ಲ ಬಿಲ್ಕುಲ್ ಹಾಗೇನಿಲ್ಲ! ಹುಳುಕು ಹುಡುಕುವವರಿಗೆ ಆಕೆ 'ಓಡಿ ಬಂದವಳು ರತ್ನಿ'. ಒಳತಿರುಳು ಬಲ್ಲ ಒಳ್ಳೆಯವರಿಗೆ 'ಬಂಗಾರದಂತವಳು' ರತ್ನಾ. ರತ್ನವ್ವ. ರತ್ನಕ್ಕ. ಎಲ್ಲಿಯೋ ಹುಟ್ಟಿ-ಬೆಳೆದು ನಂದೂರಿನಲ್ಲಿ ನೆಲೆಸಿಂತು. ತನ್ನ ಏಕಾಂಗಿ ಅಸಹಾಯಕ ಬದುಕಿನಲ್ಲಿಯೂ ಸದಾಕಾಲ ಊರ ಚಿಂತನೆಯನ್ನೇ ಬಯಸಿದುದು: ಹಂಬಲಿಸಿದವಳು. ಅವಳಿಗೆ ಯಾವುದೇ 'ಇಜಂ'ಗಳ ಜ್ಞಾನ-ಪರಿಜ್ಞಾನ ಇಲ್ಲದಿದ್ದರೂ. ಅವಳು ಒಬ್ಬ ಅಪ್ಪಟ ಸಮಾಜವಾದಿ ನೆಲೆಯಲ್ಲಿ ಕೆಲಸ ಮಾಡುತ್ತಾಳೆ. ಯಾವ ಸಿದ್ಧಾಂತಗಳ ಸ್ಲೋಗನ್‌ಗಳನ್ನು ಬಡಬಡಿಸದೆಯೂ. ಅವಳು ಕೈಕೊಳ್ಳುವ ನ್ಯಾಯಪರವಾದ ನಿಲುವುಗಳು ಇವತ್ತಿನ 'ಇಜಂ'ಗಳ ಉನ್ಮತ್ತವಾದಿಗಳನ್ನು ಆತ್ಮಾವಲೋಕನ ಮಾಡಿಕೊಳ್ಳುವಂತೆ ಎಚ್ಚರಿಸುತ್ತವೆ. "ಕೆಳಮಧ್ಯಮವರ್ಗದ ಈ ಹೆಣ್ಣಿನ ವ್ಯಕ್ತಿತ್ವದ 'ಋಜುತ್ವ'ವೇ ಮೇಲುವರ್ಗದ ಪ್ರತಿನಿಧಿಗಳಂತಿರುವ ಧರೆಪ್ಪಗೌಡ. ಅವನ ಮಗ ದಾನೇಶಗೌಡ. ಗಂಗಾಧರಗೌಡ. ಜಾಲಿಬೆಂಚಿ ರತ್ನಪ್ಪ ಹಾಗೂ ಅವನ ಅಳಿಯ ಗಂಗಾರಾಮು. ತ್ರಿಪುರಾಂತಕ ಸ್ವಾಮಿಗಳಂಥವರ 'ಬ್ಯುರೋಕ್ರಸಿ' (Bureacrucy) ಮತ್ತು 'ಹಿಪಾಕ್ರಸಿ' (Hypocrisy) ಗಳನ್ನು ಆಸ್ಫೋಟಿಸುವಲ್ಲಿ ಯಶಸ್ವಿಯಾಗುತ್ತದೆ. ಈ ಮೂಲಕ ಅತ್ಯಂತ ನಿರಾಯಾಸವಾಗಿ ವರ್ಣ-ವರ್ಗ ಸಂಘರ್ಷಗಳ ಸ್ವರೂಪವನ್ನು ವಿಶ್ಲೇಷಿಸುವ ತಾತ್ವಿಕ ನೆಲೆಯೊಂದು ರೂಪಿತವಾಗಿ ಈ ಕೃತಿ ಇನ್ನೂ ವಿಶೇಷ ಆಕರ್ಷಣೆಯನ್ನು ಸಂಪಾದಿಸಿಕೊಳ್ಳುತ್ತದೆ".[೯೮]

ಪ್ರಸ್ತುತ ಕಾದಂಬರಿಯಲ್ಲಿ ಸಂಭವಿಸುವ ಘಟನೆಗಳೆಲ್ಲವೂ 'ಕಾತ್ರಾಳ ರತ್ನಿಯ ಚಾದಂಗಡಿ'ಯ ಸಂಬಂಧವನ್ನು ಸಾಧಿಸಿಕೊಳ್ಳುತ್ತ ಅವು. ಅವಳ ಸಮಯಪ್ರಜ್ಞೆ. ಆತ್ಮವಿಶ್ವಾಸ. ಧೈರ್ಯ. ಆಲೋಚನೆ. ಸಂಯಮ. ಸಹಾನುಭೂತಿ. ತೀರ್ಮಾನಗಳಿಗೆ ಸವಾಲಾಗುತ್ತ ಹೋಗುವುದು ಈ ಕೃತಿಯ ವಿಶೇಷತೆ. ಪರಪ್ಪ ಸಾವ್ಕಾರ. ಓಂಕಾರಿ. ನಾಗಪ್ಪ. ಪಾಂಡು. ಮಾದೇವ. ರಾಜೇಸಾಬ. ಶ್ರೀಕಾಂತ. ರಾಚಪ್ಪ. ಬೀರಪ್ಪ ಇವರೆಲ್ಲರ ನೈತಿಕ ಬೆಂಬಲ ಹಾಗೂ ಸಾಂಘಿಕ ಶಕ್ತಿ ರತ್ನಾಳಿಗೆ ಸಾಕಷ್ಟು ಆತ್ಮಬಲವನ್ನು ತಂದುಕೊಡುವುದಲ್ಲದೆ. ಊರಿನಲ್ಲಿನ ದುಷ್ಟಅಷ್ಟಪದ ಶಕ್ತಿಗಳಿಗೆ ಪಾಠಕಲಿಸಲು ಸಹಾಯಕವಾಗುತ್ತದೆ. ನೂರೊಂದು ಜನ. ನೂರೊಂದು ಸಮಸ್ಯೆಗಳು! 'ನಂದೂರ' ಗ್ರಾಮದ. ಅದರ ಪರಿಸರದ ಆಗುಹೋಗುಗಳ ಚಿಂತನಕ್ಕೆ 'ಚಾವಡಿ'ಯಾಗಿದ್ದ ರತ್ನಾಳ ಚಾದಂಗಡಿ. ಅಲ್ಲಿ ಮಿಡಿಯುವ ಕತೆ-ಉಪಕತೆಗಳ ಅನೇಕ ಕವಲು ದಾರಿಗಳಿಗೆ ಒಂದು ಕೂಡು ನಿಲ್ದಾಣ. ಅದೊಂದು ಜಂಕ್ಷನ್ (Junction) ಊರಲ್ಲಿನ ಅನೇಕ ಭಾನಗಡಿಗಳಿಗೆ ಅಂತ್ಯರೂಪಿಸುವ ಕೇಂದ್ರಸ್ಥಳ. ಊರಲ್ಲಿಯೇ ಹುಟ್ಟಿ. ಊರಲ್ಲಿಯೇ ಬೆಳೆದು. ಊರ ಒಡೆಯರೆನಿಸಿಕೊಂಡ. ಧರೆಪ್ಪಗೌಡ ಹಾಗೂ ಅವನ ಮಗ ದಾನೇಶಗೌಡ. ಇವರು ತಮ್ಮ ವೈಯಕ್ತಿಕ ತೆವಲಿಗಾಗಿ. ಎಲ್ಲ ರೀತಿಯಲ್ಲಿ ತಮ್ಮ ಹಳ್ಳಿಯನ್ನೇ

---

೯೮. ಬಾಳಣ್ಣ ಶೀಗಿಹಳ್ಳಿ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೫೮-೫೫

ಬಲಿಗೊಡುತ್ತಿರುವುದನ್ನು ಕಂಡು. ಹಗಲಿರುಳು ತಳಮಳಿಸಿದವಳು: ಮಮ್ಮಲ ಮರುಗಿದವಳು. ಅಕ್ಷರಶತ್ರು. ಅಕ್ರಮಸಂತಾನವಾಗಿದ್ದರೂ. ತನ್ನದೇ ಆದ ವೈಚಾರಿಕ ನೆಲೆಯಲ್ಲಿ ಬದುಕುತ್ತ ದೀನ ದಲಿತರಿಗಾಗಿ ತನಗೆ ನೀಗಿದಷ್ಟು 'ಕೊಡುಗೈ' ಆದವಳು: ಆಸರೆ ನೀಡಿದವಳು. ಇದಕ್ಕೆ ಹೊಲೆಯರ ಲಸಮ್ಮಾ. ಚಂದ್ರಾ. ಕಸ್ತೂರಿ ಇನ್ನೂ ಅನೇಕರ ಪ್ರಸಂಗಗಳೇ ಸಾಕ್ಷಿ. ರತ್ನಾ ತನಗಾಗಿ ಏನನ್ನೂ ಬಯಸದ ನಿಸ್ವಾರ್ಥಿ. ಯಾವುದೇ ಧರ್ಮದ ಢಾಂಬಿಕ ಆಚರಣೆಗೆ ಜೋತುಬೀಳದ ರತ್ನಾ 'ಮಾನವ ಕುಲಂ ತಾನೊಂದೇ ವಲಂ' ಎಂಬಂತೆ ನಡೆದುಕೊಂಡವಳು. ಈ ಕಾರಣಕ್ಕಾಗಿಯೇ ರತ್ನಾಳನ್ನು ಜನ ಗೌರವಿಸುವುದು. "ಒಂದೊಂದ ಹಳ್ಳ್ಯಾಗ ರತ್ನಕ್ಕನಂಥ ಧಾಡಸಿ ಮತ್ತು ಜನಹಿತಾ ಮಾಡುವಂಥಾ ಹೆಂಗ್ಸರಿದ್ರ ಆ ಊರ ತಾನs ಸುಧಾರಣಾ ಆಗತೈತಿ.... ಇಂಥಾದ್ಕ ಶಿಕ್ಷಣ ಬೇಕಾಗಿಲ್ಲ. ಸಂಸ್ಕಾರ ಬೇಕು.... ಈಗ ನೋಡ್ರಿ. ರತ್ನಕ್ಕ ಏನ ಕಲ್ತಾಳು....? ಆಕೀ ಕಾಳಜೀ. ಕಳಕಳಿ ಮುಖ್ಯ. ರಗಡ ರೊಕ್ಕ ಇದ್ದಾವ್ರು ಅದಾರು. ಅವರ್ನ ತಗೊಂಡ ಏನ ಮಾಡೂದು ? ಭಾಳಷ್ಟ ಮಂದಿ ಊರ ಸುಲ್ಯಾವ್ರು ಇರ್ತಾರ ಹೊರ್ತು ಊರ ಕಲ್ಯಾಣ ಮಾಡಾವ್ರು ಕಮೀ ಇರ್ತಾರು...."[೯೯] ಎಂದೆನ್ನುವ ಶಿಕ್ಷಣಾಧಿಕಾರಿ ಶಿರೋಳ ಸಾಹೇಬ್ರ ಮಾತುಗಳಾಗಲಿ. "ಸಾಹೇಬ್ರ. ರತ್ನಾ ಅಂದ್ರ ನಮ್ಮೂರ ರತ್ನ ಇದ್ಧಾಂಗs ಅದಾಳು. ಎಷ್ಟೋ ಮಂದಿಗಿ ಆಕೀ ಕಿಮ್ಮತ್ತ ತಿಳಿದಿಲ್ಲ. ಆಕೆಯಷ್ಟು ಪರೋಪಕಾರ ಬುದ್ಧಿ. ಊರ ಕಾಳಜಿ ನಮಗೂ ಇಲ್ಲ...."[೧೦೦] ಎಂದೆನ್ನುವ ಪರಪ್ಪ ಸಾವುಕಾರರ ಮಾತುಗಳಾಗಲಿ. ರತ್ನಾಳ ಚಿನ್ನದಂಥ ಮನಸ್ಸಿಗೆ ವ್ಯಾಖ್ಯಾನ ಬರೆದಂತಿವೆ. "ಎಲ್ಲಾ ವಿಚಿತ್ರ ಐತಿ. ಇಲ್ಲೇ ಹುಟ್ಟಿ ಇಲ್ಲೇ ಬೆಳೆದ. ಊರ ಯಜಮಾನ ಅನಿಸಿಕೊಂಡ ಗೌಡಾ. ಅಂವ್ನಮಗಾ ಒಂದ ಕಡೆ ಊರ ಹಾಳಿಗಿ ಹಚ್ಚಾಕ ನಿಂತ್ರು. ಪಾಪ. ಎಲ್ಲ್ಯಾಕೋ ಏನೋ ಈ ಊರಾಗ ಬಂದ ಜನ್ಮಾ ಮಾಡ್ಕೋತ. ಊರ ಹಿತಾ ಮಾಡ್ಕೋತ. ತನಗ ನೀಗಿದಷ್ಟು ಬಡೂರ ಕಷ್ಟಕ್ಕೆ ಕೈ ಹಚ್ಕೋತ ಅದಾಳು. ಇಂಥಾ ಹೆಣಮಕ್ಕಳು ಸಿಗೂದು ಅಪರೂಪ...."[೧೦೧] ಅಡತ ವ್ಯಾಪಾರಿ ಪಂಚಯ್ಯಸ್ವಾಮಿಗಳ ಈ ಮಾತು ರತ್ನಕ್ಕಳ ಗುಣಸ್ವಭಾವಕ್ಕೆ ಹಿಡಿದ ಕನ್ನಡಿ.

ರತ್ನಾಳ ಪಾತ್ರ ಕಾದಂಬರಿ ಪ್ರಪಂಚದಲ್ಲಿಯೇ ಅಪರೂಪದ ದೃಷ್ಟಿ-ಸೃಷ್ಟಿ. ಮೌನಕ್ರಾಂತಿಯ ಶಿವಶಂಕರ ವಿದ್ಯಾವಂತನಾಗಿ. ಗ್ರಾಮೀಣ ಜೀವನವನ್ನು ಮೇಲೆತ್ತಿದರೆ. ರತ್ನಾ ವಿದ್ಯೆಯ ಸಂಪರ್ಕವಿಲ್ಲದೆ. ಕೇವಲ ನಿರಕ್ಷರಕುಕ್ಷಿಯಾದರೂ ಗ್ರಾಮಕ್ಕಾಗಿ ದುಡಿಯುತ್ತಾಳೆ. ಹೀಗಾಗಿ ಶಿವಶಂಕರನಿಗಿಂತಲೂ 'ರತ್ನಾ' ಒಂದಿಷ್ಟು ಉದಾತ್ತಳೆನಿಸುತ್ತಾಳೆ. ಕೌಟುಂಬಿಕ. ಸಾಮಾಜಿಕ ಹಾಗೂ ಆರ್ಥಿಕ ಸಂಕಷ್ಟಗಳಲ್ಲಿ ಸಿಲುಕಿ ಒದ್ದಾಡುವವರಿಗೆ ಜೀವರಸವಾಗಿ. ಅವರನ್ನು ಅನುಕಂಪದಿಂದ ಕಂಡು ಸಹಾಯನೀಡಿದ ಮಾನವೀಯ ಮೌಲ್ಯದ ಪ್ರತೀಕ ರತ್ನಾ. ಕಸ್ತೂರಿಗೆ. ಚಂದ್ರಾಳಿಗೆ. ಕಮಲಿಗೆ. ಹೊಲೆಯರ ಲಸಮನಿಗೆ. ರಾಜೇಸಾಬನಿಗೆ. ಹೀಗೆ ರತ್ನಾಳಿಂದ ಸಹಾಯ

---

೯೯. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೦೫

೧೦೦. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೦೫

೧೦೧. ದು. ನಿಂ. ಬೆಳಗಲಿ : ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೦೬

ಪಡೆದವರ ಪಟ್ಟಿ ಮಾಡುತ್ತ ಹೋದರೆ. ನಂದೂರಿನ ಬಹುತೇಕ ಕೆಳ ಹಾಗೂ ಮಧ್ಯಮ ವರ್ಗದವರೆಲ್ಲ ಆ ಪಟ್ಟಿಯಲ್ಲಿ ಸೇರಿಕೊಂಡುಬಿಡುತ್ತಾರೆ. ಒಂದೆಡೆ ನೊಂದವರಿಗೆ ನೆರಳಾಗುವ ರತ್ನಾ. ಇನ್ನೊಂದೆಡೆ ದುಷ್ಟಶಕ್ತಿಗಳನ್ನು ಸದೆಬಡಿಯುವ ಸಾಮರ್ಥ್ಯ ತನ್ನ ರಟ್ಟೆಯಲ್ಲಿಲ್ಲದಿದ್ದರೂ. ತನ್ನ ನಿರ್ಬಲತೆಯಲ್ಲಿಯೇ ಅವುಗಳ ತಡೆಗೆ ಸೆಣಸಿ. ಊರ ತರುಣಿಯರ ಶೀಲ ರಕ್ಷಣೆಗಾಗಿ ತನ್ನ 'ಶೀಲ'ವನ್ನೇ ಆಹುತಿ ನೀಡಲು ಸಿದ್ಧಳಾಗಿ. ದುಡ್ಡು ಹಾಗೂ ಅಧಿಕಾರದ ಮದದಿಂದ ಈಗ ಮತ್ತೆ ತಲೆಯೆತ್ತಿ ನಿಂತಿರುವ ಊಳಿಗಮಾನ್ಯ ಪದ್ಧತಿಯ ವಿರುದ್ಧ ರತ್ನಾ ಟೊಂಕ ಕಟ್ಟಿನಿಂತ ಕಥೆ. ಇಲ್ಲಿ ವಿಸ್ತಾರವಾಗಿ ಹಬ್ಬಿ ನಿಂತಿದೆ: ಅದು ಯಶಸ್ವಿಯೂ ಆಗಿದೆ.

ಬಾಹುಬಲ-ಧನಬಲದವರಿಗೆ ಕಾನೂನು ಕಾಲಕಸ. ಕಾಲ ಬದಲಾಗಿ ರಾಜಕೀಯ-ಸಾಮಾಜಿಕ ಸೌಲಭ್ಯಗಳ ಅನುಕೂಲವಾಗಿರುವ ಸ್ವತಂತ್ರ ಭಾರತದ ಬೆನ್ನಹಿಂದೆಯೇ. ಸ್ವಾತಂತ್ರ್ಯಪೂರ್ವದ ಊಳಿಗಮಾನ್ಯ ಪದ್ಧತಿ. ಅಳಿಸಿಹೋದಂತೆನಿಸಿದರೂ. ಈಗ ಅದು ಇನ್ನೊಂದು ರೀತಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕಾಣುತ್ತಿದೆ: ಅಲ್ಲಿ ಅಶಾಂತಿಯನ್ನು ಹರಡುತ್ತಿರುವುದು ಸಹಜಗೋಚರ. ರತ್ನಾಳಿಗೆ ತನ್ನ ವೈಯಕ್ತಿಕ ಚಿಂತೆಗಿಂತ ಸಾಮಾಜಿಕ ಕಾಳಜೀಯೇ ಹೆಚ್ಚಾಗಿದೆ. ನಂದೂರಿನ ಗ್ರಾಮಜೀವನಕ್ಕೆ ಕಂಟಕರಾದವರ ಬಗ್ಗೆ ಸದಾ ತಲೆಕೆಡಿಸಿಕೊಳ್ಳುವ. ಹಗಲು-ರಾತ್ರಿ ಕುದಿಯುತ್ತಿದ್ದವಳು: ಅದಕ್ಕೊಂದು ದಾರಿ ಕಾಣಲು ಪ್ರಯತ್ನಿಸುತ್ತಿದ್ದವಳು: ಕಂಡವಳು-ನೆಮ್ಮದಿ ತಂದವಳು. ಪ್ರಸ್ತುತ ಕಾದಂಬರಿಯ ಗುಣಾತ್ಮಕ ಅಂಶವೆಂದರೆ. ನಂದೂರಿನ ಸಮಸ್ಯೆಗಳನ್ನಷ್ಟೇ ಹೆಕ್ಕುತ್ತ ಹೋಗದೆ. ಆ ಸಮಸ್ಯೆಗಳಿಗೆ ಪರಿಹಾರ ಸೂಚಿಸಿದ್ದು. ಅದೂ ಅನಕ್ಷರಸ್ಥ ಸ್ತ್ರೀಯೊಬ್ಬಳಿಂದ! ಸ್ತ್ರೀಯೊಬ್ಬಳಲ್ಲಿ ಅಗಾಧ ಶಕ್ತಿಯಿದೆಯೆಂಬುದನ್ನು ಸಾದ್ಯಂತವಾಗಿ ಪ್ರತಿಪಾದಿಸುತ್ತ ಹೋಗುವ ಈ ಕಾದಂಬರಿ ತನ್ನ ಗುರಿಮುಟ್ಟುವುದರಲ್ಲಿ ಯಶಸ್ವಿಯಾಗಿದೆ. ತನ್ನ ಅಳಲನ್ನು ನುಂಗಿಕೊಂಡು ಇನ್ನೊಬ್ಬರ ಸಂತೋಷದಲ್ಲಿ ತೊಡಗಿಸಿಕೊಳ್ಳುವ ರತ್ನಾಳ ವಾತ್ಸಲ್ಯ ಹಾಗೂ ಪರೋಪಕಾರದ ರೀತಿ ಓದುಗರ ಮನಮಿಡಿಯುತ್ತದೆ. ಹೀಗಾಗಿ ರತ್ನಾ ಸಹೃದಯರ ಪ್ರೀತಿ-ಅನುಕಂಪ-ಅಭಿಮಾನವನ್ನೂ ಗಳಿಸಿಕೊಳ್ಳುತ್ತಾಳೆ. ವಾಸ್ತವ ಚಿತ್ರಣದ ಪ್ರಸ್ತುತ ಕೃತಿ. ಸಾಮಾಜಿಕ ಪರಿವರ್ತನೆಯು ಹಳೆ-ಹೊಸ ಜೀವನಮೌಲ್ಯಗಳ ನಡುವೆ ಘರ್ಷಣೆಯನ್ನುಂಟು ಮಾಡುತ್ತಿರುವುದರ ವಿವರಗಳನ್ನು ಕಾದಂಬರಿ ತನ್ನ ಒಡಲೊಳಗಿಟ್ಟುಕೊಂಡು. ಈವರೆಗೆ ತುಳಿಯಲ್ಪಟ್ಟ ಕೆಳ-ಮಧ್ಯಮ ಜಾತಿಯ ಜನತೆಯಲ್ಲಿ ಊಂಟಾಗಿರುವ ಪ್ರಜ್ಞೆ. ಸ್ವಾಭಿಮಾನದ ಅರಿವು. ಮಿಶ್ರಪ್ರತಿಕ್ರಿಯೆಗಳಿಗೆ ಅವಕಾಶ ಮಾಡಿಕೊಟ್ಟಿದೆ.

ಸರಸರನೆ ಬಂದು ಹೋಗುವ ಘಟನೆಗಳು ಸೂತ್ರಕ್ಕೆ ಭಾರವಾಗದೆ. ಹೃದ್ಯವಾದ ಸಂಬಂಧವನ್ನು ಸಂಘಟಿಸುತ್ತವೆ. ಘಟನಾವಳಿಗಳ ಹಾವಳಿಯಲ್ಲಿ ಕಥೆಯು ತನ್ನ ಮೂಲನೆಲೆಯನ್ನು ಕಳೆದುಕೊಳ್ಳದೆ ಪ್ರಾದೇಶಿಕ ವಲಯದಲ್ಲಿಯೇ ಸಂಚರಿಸುತ್ತದೆ. ಸಹಜ-ಸರಳವಾಗಿ ಓದಿಸಿಕೊಂಡು ಹೋಗುವ ದೃಷ್ಟಿಯಿಂದ ಪ್ರಸ್ತುತ ಕೃತಿಯ ಕಥಾಸಂವಿಧಾನ ತುಂಬ ಮೆಚ್ಚುಗೆಯಾಗುತ್ತದೆ. ಸ್ವತಂತ್ರ ಭಾರತದ ಸಾಧನೆ-ಸಿದ್ಧಿಗಳನ್ನು ಒರೆಗೆ ಹಚ್ಚುವ ಇದು ಪ್ರಗತಿವಾದಿಗಳ 'ಆತ್ಮಸಾಕ್ಷಿ'ಯನ್ನು ಕೆದಕಿ-ಬೆದಕಿ ಅವರಲ್ಲಿನ ಮೂಲಕಾಳಜಿಯನ್ನೇ ಪ್ರಶ್ನಿಸುತ್ತದೆ. ಇದೊಂದು ಸಮಾಜವಾದದ ಪ್ರಾಯೋಗಿಕ ಕೃತಿಯಾಗಿದೆಯೆಂದು ಹೇಳಿದರೆ ಅತಿಶಯವೆನಿಸದು. ಇಂದಿನ

ಭಾರತೀಯ ಸಾಮಾಜಿಕ ಜೀವನದ ಸಂದರ್ಭದಲ್ಲಿ ಒಟ್ಟು ಗ್ರಾಮೀಣ ಬದುಕಿನ ವಾಸ್ತವರೂಪದ ಚಿತ್ರವನ್ನೇ ತನ್ನ ಒಡಲಾಳದಲ್ಲಿಟ್ಟುಕೊಂಡ ಇದು 'ಗ್ರಾಮಬದುಕಿನ ದಟ್ಟ ಪರಿಸರ'ವನ್ನೇ ನಿರ್ಮಿಸುವುದರಿಂದ ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು', ಕಾರಂತರ 'ಚೋಮನದುಡಿ', ಅಣ್ಣಾರಾಯರ 'ನಿಸರ್ಗ', ರಾವಬಹದ್ದೂರರ 'ಗ್ರಾಮಾಯಣ', ಹಾಗೂ ದೇವನೂರು ಮಹಾದೇವರ 'ಒಡಲಾಳ'ಗಳನ್ನು ನೆನೆಪಿಸಿಕೊಡುವಷ್ಟು ಮತ್ತು ಅದೇ ಸಾಲಿನಲ್ಲಿ ನಿಲ್ಲಬಲ್ಲ ಸಮರ್ಥ-ಸಾರ್ಥಕ ಕೃತಿಯಾಗಿದೆ.

ಇದರಲ್ಲಿ ವಸ್ತುವಿನಷ್ಟೇ ಭಾಷೆ ಕೂಡ ಜೀವಂತವಾಗಿದೆ. ಆದುದರಿಂದಲೇ ಬೆಳಗಲಿಯವರು, ತಾವು ಅಪೇಕ್ಷಿಸಿದ ಪರಿಸರ-ಸನ್ನಿವೇಶಗಳನ್ನು ಜೀವಂತವಾಗಿ ನಿರ್ಮಿಸಿ, ಆ ಮೂಲಕ ನಿರೀಕ್ಷಿತ ಫಲಿತಾಂಶವನ್ನೇ ಪಡೆದಿದ್ದಾರೆ: ಸಮರ್ಥ ಲೇಖಕರ ಯಶಸ್ಸಿನ ಗುಟ್ಟಿರುವುದು ಅಲ್ಲಿಯೇ. ಬೆಳಗಲಿಯವರು ಬರೆಯುತ್ತ-ಬೆಳೆಯುತ್ತ ಬಂದವರು. ಹಾಗಾಗಿ ಅವರ ಪ್ರತಿಕಾದಂಬರಿಗಳಲ್ಲಿಯೂ ಒಂದೊಂದು ಸಾಹಿತ್ಯಿಕ-ಸಾಮಾಜಿಕ ಗುಣಾತ್ಮಕ ಅಂಶಗಳನ್ನು ಕಾಣಬಹುದು. ಸ್ವಾನುಭವದ ದಟ್ಟ ನಿರೂಪಣೆ, ಭಾಷಾಪ್ರಜ್ಞೆ, ವಸ್ತುವಿನ ಆಯ್ಕೆಯಲ್ಲಿನ ತೂಕಬದ್ಧತೆ, ನಿರೂಪಣಾ ವಿಧಾನ, ಹೃದ್ಯವಾದ ಅವರ ಬರವಣಿಗೆ ಶೈಲಿ - ಇವುಗಳೆಲ್ಲ ಕಾದಂಬರಿಯಿಂದ ಕಾದಂಬರಿಗೆ ಬೆಳೆಯುತ್ತ-ಬಲಿಯುತ್ತ ಬಂದಿರುವುದು ಅವರ ವಿಶೇಷ ಗುಣ. ಪರಿಸರಜನ್ಯವಾದ ಅನುಭವಗಳು ಬೆಳಗಲಿಯವರನ್ನು ಗಾಢವಾಗಿ ಆವರಿಸಿಕೊಂಡು, ಅವರನ್ನು ಸ್ಪಷ್ಟಕ್ರಿಯೆಯತ್ತ ಎಳೆದು ತಂದಿರುವುದನ್ನು ನೋಡಿದರೆ, ಪ್ರಸ್ತುತ ಕಾದಂಬರಿಯ ಸಂರಚನೆ ಅತ್ಯಂತ ಆಕರ್ಷಕವೂ, ಆಪ್ತವೂ ಅಷ್ಟೇ ಹೃದ್ಯವೂ ಆಗಿ, ಕೆಳವರ್ಗದ ಹಾಗೂ ಕೆಳಮಧ್ಯಮ ವರ್ಗದ ಗ್ರಾಮೀಣ ಬದುಕನ್ನು ಅತ್ಯಂತ ಸಜೀವವಾಗಿ 'ಕಾತ್ರಾಳ ರತ್ನಿಯ ಚಾದಂಗಡಿ' ತನ್ನಲ್ಲಿ ಪ್ರತಿಷ್ಠಾಪಿಸಿಕೊಂಡಿದೆ.

ಅನೇಕ ಸಂಕೀರ್ಣಗಳ ಮಧ್ಯದಲ್ಲಿಯೂ ಸ್ಥಾಯಿಯಾಗಿ ಮಿಡಿಯುವ ಸರಳತೆ ಅನುಭವಕ್ಕೆ ಬಾರದಿರದು. ಕೆಲವು ಸಲ ಘಟನೆಗಳು ಸಿನಿಮೀಯ ರೀತಿಯಲ್ಲಿ ಕಾಣುತ್ತಿದ್ದಂತೆಯೇ ಅವು ವಾಸ್ತವದ ಸ್ಪರ್ಶ ಪಡೆದುಕೊಳ್ಳುವುದರಿಂದಾಗಿ, 'ಕಾತ್ರಾಳ ರತ್ನಿಯ ಚಾದಂಗಡಿ'ಗೆ ಸಹಜವಾಗಿಯೇ ನಾಟಕ ಸ್ವರೂಪ ಪ್ರಾಪ್ತವಾಗಿದ್ದು, ಗ್ರಾಮೀಣ ಬದುಕಿನ ಸಂಕೀರ್ಣತೆಗಳನ್ನು ಸಹಜವಾಗಿ ಅಷ್ಟೇ ಯಥಾವತ್ತಾಗಿ ಚಿತ್ರಿಸಲು ಸಾಧ್ಯವಾಗಿದೆ. ಸ್ವತಂತ್ರ ಭಾರತದ, ಗ್ರಾಮೀಣ ಬದುಕಿನ ಎರಡೂ ಮಗ್ಗುಲಗಳನ್ನು ಸ್ಫಟಿಕಸ್ಪಷ್ಟವಾಗಿ ಚಿತ್ರಿಸುವ ಪ್ರಸ್ತುತ 'ಕಾತ್ರಾಳ ರತ್ನಿಯ ಚಾದಂಗಡಿ'ಯೊಂದು ಪ್ರಾದೇಶಿಕ ಕಾದಂಬರಿ ಪರಂಪರೆಯಲ್ಲಿ ಚರಿತ್ರೆಯಾಗಿ ಉಳಿಯಬಲ್ಲ ಒಂದು ಉತ್ತಮ ಕೃತಿ.

**ಪ್ರಾದೇಶಿಕತೆ :**

ಪ್ರಸ್ತುತ 'ಕಾತ್ರಾಳ ರತ್ನಿಯ ಚಾದಂಗಡಿ'ಯಲ್ಲಿ ಬೆಳಗಲಿಯವರು, ಸನ್ನಿವೇಶ ನಿರ್ಮಾಣಕ್ಕೆ, ಪರಿಸರದ ಪರಿಣಾಮಕ್ಕೆ, ಪಾತ್ರಗಳ ಜೀವಂತಿಕೆಗೆ ಬೇಕಾಗುವ ಶಿಷ್ಟ ಹಾಗೂ ಆಡುಭಾಷೆಗಳೆರಡನ್ನೂ ಅತ್ಯಂತ

ಸಮರ್ಪಕವಾಗಿ ಬಳಸಿಕೊಂಡಿದ್ದಾರೆ. ಅವರ 'ಭಾಷಾಪ್ರಜ್ಞೆ' ಹಾಗೂ ಸನ್ನಿವೇಶಗಳೊಂದಿಗೆ ಸಾಧಿಸಿಕೊಳ್ಳುವ ತನ್ಮಯತೆಯಿಂದಾಗಿ ಗೆದ್ದುಬಿಡುತ್ತಾರೆ: ಕಾದಂಬರಿ ತನ್ನ ಗುರಿಮುಟ್ಟುವುದರಲ್ಲಿ ಸಾರ್ಥಕತೆ ಪಡೆಯುತ್ತದೆ. ಒಂದು ಕೃತಿಯ ಪ್ರಾದೇಶಿಕತೆಯನ್ನು ನಿರ್ವಚಿಸುವ ನಿರ್ಧಿಷ್ಟ ಮಾನದಂಡಗಳಿಲ್ಲವಾದರೂ. ಯಾವ ಒಂದು ಕೃತಿ ತನ್ನ ಭಾಷೆ. ಸಂಸ್ಕೃತಿ. ಕನಸು-ಕಸಬು. ನಂಬಿಕೆ ಮೊದಲಾದವುಗಳ ಮೂಲಕ ಅಂಥ ಇತರೆಡೆಯ ಸಮಕಾಲೀನವಾದ ಬದುಕಿನ ಯಥಾರ್ಥ ದರ್ಶನಕ್ಕೆ ಕಾರಣವಾಗುತ್ತದೆಯೋ ಅಂಥವನ್ನು ಒಂದು ಉತ್ತಮ ಪ್ರಾದೇಶಿಕ ಕಾದಂಬರಿಯೆಂದು ಗುರುತಿಸಬಹುದು. ಈ ನಿಟ್ಟಿನಲ್ಲಿ ನೋಡುವಾಗ 'ಕಾತ್ರಾಳ ರತ್ನಿಯ ಚಾದಂಗಡಿ'ಯೊಂದು ಪ್ರಾದೇಶಿಕ ಕಾದಂಬರಿ ಪರಿಕರಗಳನ್ನೆಲ್ಲ ಅಂತರ್ಗತ ಮಾಡಿಕೊಂಡು ಮೂಡಿಬಂದ ಒಂದು ಉತ್ತಮ ಕೃತಿಯಾಗಿದೆ. ಇದರ ವಸ್ತು 'ನಂದೂರು' ಹಾಗೂ ಅದರ ಸುತ್ತಮುತ್ತಲಿನ ಪರಿಸರದಲ್ಲಿಯೇ ಸುಳಿದಾಡಿದರೂ. ಅದು ಯಾವ ಪ್ರದೇಶದಲ್ಲಾದರೂ ಕಾಣಬಹುದು. ರತ್ನಾಳಂಥ ಮಾನವೀಯ ಗುಣವುಳ್ಳ ಹೆಣ್ಣು ಯಾವುದೇ ಪ್ರದೇಶ. ಜನಾಂಗದ. ಧರ್ಮ. ಭಾಷೆಗಳಲ್ಲಿ ಕಾಣಬಲ್ಲವಳು; ಮಾನವೀಯತೆಗೆ ಇವಾವುಗಳ 'ಸೀಮೆ'ಯಿಲ್ಲ. ಅದು ಸೀಮಾತೀತವಾದುದು. ಭಾಷೆ ಸಂಸ್ಕೃತಿ (ಜನಜೀವನ) ಗಳೆರಡಕ್ಕೂ ಪ್ರಮುಖ ಸ್ಥಾನಕೊಟ್ಟ ಬೆಳಗಲಿಯವರು ಪ್ರಸ್ತುತ ಕೃತಿಯನ್ನು. ಒಂದು ಉತ್ತಮ ಪ್ರಾದೇಶಿಕ ಕಾದಂಬರಿಯನ್ನಾಗಿ ವಿರಚಿಸುವಲ್ಲಿ 'ಪ್ರಾದೇಶಿಕ ಪರಿಕರ'ಗಳನ್ನೆಲ್ಲ ಚೆನ್ನಾಗಿ ದುಡಿಸಿಕೊಂಡಿದ್ದಾರೆ. ಪಾತ್ರಗಳ ನಡೆ-ನುಡಿಗಳೆರಡರಲ್ಲಿಯೂ ಪ್ರಾದೇಶಿಕತೆಯ ಎರಕಹೊಯ್ದ ಬೆಳಗಲಿಯವರು ತಾವೊಬ್ಬ ಸಮರ್ಥ ಪ್ರಾದೇಶಿಕ ಕಾದಂಬರಿಕಾರರೆಂಬುದನ್ನು ಸಾಬೀತು ಪಡಿಸಿದ್ದಾರೆ.

**ಸ್ಥಳ - ಪಾತ್ರ :**

'ಕಾತ್ರಾಳ ರತ್ನಿಯ ಚಾದಂಗಡಿ'. ಇದೊಂದು ಪಾತ್ರಪ್ರಧಾನವಾದ ಕಾದಂಬರಿ. ನೂರೊಂದು ಪಾತ್ರಗಳ ಮುಖಾಂತರ 'ನಂದೂರಿನ' ನೂರೊಂದು ಸಮಸ್ಯೆಗಳನ್ನು ಬಿಚ್ಚಿಡುತ್ತ ಹೋಗುವ ಇದು ಪಾತ್ರರಚನಾ ದೃಷ್ಟಿಯಿಂದಲೂ ತುಂಬ ಮಹತ್ವಪೂರ್ಣ ಕಾದಂಬರಿ. ವ್ಯಕ್ತಿ-ವ್ಯಕ್ತಿಗಳ. ವರ್ಗ-ವರ್ಗಗಳ ಸಂಘರ್ಷವನ್ನು ಕಾದಂಬರಿಕಾರರು ಇದರಲ್ಲಿ ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ. ಸಾಹಿತ್ಯ ಮತ್ತು ಪ್ರತಿಭಟನೆ ಇವುಗಳ ಸಂಬಂಧವೇ ವೈಶಿಷ್ಟ್ಯಪೂರ್ಣವಾದುದು. "ನಿಜವಾದ ಲೇಖಕ ವಾಸ್ತವ ಮತ್ತು ಆದರ್ಶಗಳ 'ಡಲೆಕ್ಟಿಕ್'ನ್ನು ಒಟ್ಟಿಗೆ ಗ್ರಹಿಸಿ ಹಿಡಿದಿಡುವುದು ಸಾಧ್ಯವಾಗಬೇಕು. ಆಗ ಮಾತ್ರ ಅದು (ಸಾಹಿತ್ಯ) ನಿಜವಾಗಬಲ್ಲುದು "[೧೦೨] ಇದು ಒಂದು ಕಾದಂಬರಿಯ ಸೋಲು - ಗೆಲುವುಗಳನ್ನು ಖಚಿತಗೊಳಿಸುವ ಉತ್ತಮ ನಿಕಷವಾಗಿದೆ. ಈ ಕಾದಂಬರಿಯ ಪಾತ್ರಗಳು ಮಾನವ ಜೀವನದ ಬಗೆ ಬಗೆಯ ಮನೋಧರ್ಮ. ಗುಣಸ್ವಭಾವಗಳನ್ನು ಪ್ರತಿಮಿಸುತ್ತವೆ. ಇಲ್ಲಿನ ಕೆಲವೊಂದು ಪಾತ್ರಗಳಂತೂ ತಮ್ಮ ಸಜೀವತೆಯಿಂದಾಗಿ. ಆಂತರಿಕ ಶಕ್ತಿಯಿಂದಾಗಿ. ಸ್ವಭಾವ ವಿಕಲ್ಪತೆಯಿಂದಾಗಿ ಕಾದಂಬರಿಯ ಹೊರಗೂ ಜೀವಿಸಬಲ್ಲವು. ಅವುಗಳ ಚಟುವಟಿಕೆಗಳು. ಧ್ಯೇಯ

---

೧೦೨. ಯು. ಆರ್. ಅನಂತಮೂರ್ತಿ : ಅಕ್ಷರ ಪ್ರಕಾಶನ. ಸಾಗರ. ಪುಟ ೪೮

ಧೋರಣೆಗಳು. ವಿಶ್ವಾಸ-ಶ್ರದ್ಧೆಗಳು ಕಾದಂಬರಿಗಷ್ಟೇ ಸೀಮಿತವಾಗಿಲ್ಲ. ಊರ ಒಳಿತಿಗಾಗಿ. ಊರ ಹೆಣ್ಣುಮಕ್ಕಳ ಶೀಲಕ್ಕಾಗಿ ತನ್ನ 'ಶೀಲ'ವನ್ನೇ ಆಹುತಿ ನೀಡಲು ತಯಾರಾದ ರತ್ನಾಳ ಪಾತ್ರ ಕಾದಂಬರಿಗೆ ಕಟ್ಟುಬೆಸೆದಂತಿದೆ. ಕಾದಂಬರಿಗೆ ರತ್ನಾಳದೇ ಪ್ರಮುಖವಾದ ಪಾತ್ರವಾಗಿದ್ದು. ಅವಳೊಬ್ಬ ಅನಕ್ಷರಕುಕ್ಷಿಯಾಗಿದ್ದರೂ. ಅಕ್ಷರಸ್ಥರಿಗಿಂತಲೂ ಹೆಚ್ಚು ಸಂಯಮ. ಸಮಯಪ್ರಜ್ಞೆ. ಬುದ್ಧಿವಂತಿಕೆ. ತೀರ್ಮಾನ ತೆಗೆದುಕೊಳ್ಳುವ ಜಾಣ್ಮೆ. ಮಾನವೀಯತೆ. ಅನುಕಂಪ. ಕರುಣೆ ಒಟ್ಟಿನಲ್ಲಿ ಒಂದು ಉತ್ತಮ ವ್ಯಕ್ತಿಗಿರಬೇಕಾದ ಒಳ್ಳೆಯ ಗುಣಗಳೆಲ್ಲ ಅವಳಿಗಿದ್ದು. ನಮಗಿಂದು ಬೇಕಾದುದು ಕೇವಲ ವಿದ್ಯೆಯಲ್ಲ. ಅದಕ್ಕಿಂತ ಹೆಚ್ಚಾಗಿ ಒಳ್ಳೆಯ ಸಂಸ್ಕಾರವೆಂಬುದನ್ನು ಎತ್ತಿ ತೋರಿಸುತ್ತದೆ.

ಧರೆಪ್ಪಗೌಡ ಹಾಗೂ ಅವನ ಮಗ ದಾನೇಶಗೌಡ ಕಾದಂಬರಿಯ ಪ್ರತಿನಾಯಕರಾಗಿದ್ದು. ಕಥನಕ್ರಿಯೆಗೆ. ಅದರ ರಭಸಕ್ಕೆ ಕಾರಣೀಭೂತರಾದಂತೆಯೇ ರತ್ನಾಳಲ್ಲಿ ಹುದುಗಿದ ಮಾನವೀಯತೆಯ ಪ್ರಕಟಣೆಗೆ ಕಾರಣರಾಗುತ್ತಾರೆ. ಕಾದಂಬರಿಯ ಕೇಂದ್ರಬಿಂದು ರತ್ನಾಳ ಚಾದಂಗಡಿಯಾದಂತೆ . ಕಾದಂಬರಿಗೆ ಮುಖ್ಯಪಾತ್ರ ರತ್ನಾಳಾದರೂ. ನಾವಲಗಿ ರಾಚಪ್ಪ. ಓಂಕಾರಿ. ಪಾಂಡು. ಮಾದೇವ. ಶ್ರೀಕಾಂತ. ಚಂದ್ರಾ ಕಸ್ತೂರಿ. ರಾಜೇಸಾಬ. ನಾಗಪ್ಪ. ಬೀರಪ್ಪ. ಸಾವುಕಾರ ಪರಪ್ಪಗೌಡ ಪಂಚಯ್ಯಸ್ವಾಮಿ. ಶರೋಳ ಸಾಹೇಬ್ರು ಮುಂತಾದ ಸಮಾನಮನಸ್ಕರ ಹಾಗೂ ಅವಳ ನೈತಿಕಬಲಕ್ಕೆ ಇನ್ನಷ್ಟು ಶಕ್ತಿ ತುಂಬುವ ಪಾತ್ರಗಳಾಗಿವೆ. ಊರಲ್ಲಿಯೇ ಹುಟ್ಟಿ ಊರಲ್ಲಿಯೇ ಬೆಳೆದ ಧರೆಪ್ಪಗೌಡನಂಥ ಹಾಗೂ ಅವನ ಮಗನಂತವರು. ಇವನೊಂದಿಗೆ ತ್ರಿಪುರಾಂತಕಸ್ವಾಮಿ ಹಾಗೂ ಅವನ ಮರಿ. ಸಿರಸಲ್ಲಿ. ಯಮನ್ಯಾ. ಕಾಳ್ಯಾ. ನರಸ್ಯಾ. ಗಂಗಾಧರಗೌಡ. ಜಾಲಿಬೆಂಚಿ ರತ್ನಪ್ಪ ಮತ್ತು ಅವನ ಅಳಿಯ ಗಂಗಾರಾಮ. ಅಡಿವೆಪ್ಪ ಮತ್ತು ಅವನ ಮಕ್ಕಳು. ಪೀರ್‍ಯಾ. ಸುರೇಶಾ. ಮುಂತಾದ ಊರಿಗೆ ಕಂಟಕವಾದ ಪಾತ್ರಗಳು ಕಾದಂಬರಿಯಲ್ಲಿವೆ. ಇವುಗಳಲ್ಲದೆ. ಸಿದ್ಧಾರಿ. ಚಾಂದಬೀ. ಕಾಳಪ್ಪ. ಬಾಳು. ಚನಗಿರಿ. ಆತ್ಮಾರಾಮ. ನರಸಪ್ಪ. ಲಸಮ್ಯಾ. ದುರ್ಗಪ್ಪ. ಸಗರೆಪ್ಪ. ನರಗುಂದಕರ. ಪಾರತೆವ್ವ ಮುದಕಿ. ಅನ್ನಪೂರ್ಣ. ಹೀಗೆ ಪಟ್ಟಿಮಾಡುತ್ತ ಹೋದರೆ ಕಾದಂಬರಿಯಲ್ಲಿ ಪಾತ್ರಗಳ ದಂಡೇ ನಮ್ಮೆದುರು ನಿಲ್ಲುತ್ತದೆ. ಪ್ರಸ್ತುತ ಕಾದಂಬರಿಯಲ್ಲಿನ ಪಾತ್ರಗಳು ವರ್ಣ-ವರ್ಗಗಳಡಿಯಲ್ಲಿ ನಿರೂಪಿತವಾಗಿದ್ದು: ವೈವಿಧ್ಯಮಯವಾಗಿವೆ. ಇಲ್ಲಿ ಬರುವ ಪಾತ್ರಗಳೆಲ್ಲ ಸಾಮಾನ್ಯವಾಗಿ ಗ್ರಾಮೀಣರಲ್ಲಿ ಕಾಣುವ ಸಹಜ ನಾಮಗಳೇ ಆಗಿದ್ದೊಂದು ವಿಶೇಷ. ಅದರಂತೆ ಇದು ನಂದೂರಿನ ಕಥೆಯಾದರೂ ಅದರ ಸುತ್ತಮುತ್ತಲಿನ ಗ್ರಾಮಗಳೂ ಉಲ್ಲೇಖಗೊಂಡಿವೆ.

**ಆಡುಭಾಷೆಯ ಸತ್ವಯುತ ಬಳಕೆ :**

ಯಾವುದೇ ಕಾದಂಬರಿಯ ಕ್ರಿಯೆ ಎರಡು ಸ್ತರಗಳಲ್ಲಿ ನಡೆಯುತ್ತದೆ. ಮೊದಲನೆಯದು. ಘಟನೆಗಳ ಸ್ತರ: ಈ ಘಟನೆಗಳಲ್ಲಿ ಅನೇಕ ಪಾತ್ರಗಳು ಘಟನೆಗಳ ಪ್ರೇರಕವಾಗಿಯೋ ಅಥವಾ ಅವುಗಳ ಬಲಿಗಳಾಗಿಯೋ ಭಾಗವಹಿಸುತ್ತವೆ. ಎರಡನೆಯದು. ಭಾಷಿಕವಾದುದು: ಪ್ರಸ್ತುತ ಕಾದಂಬರಿಯ ವಸ್ತುವಿಗೆ 'ವ್ಯಾಪಕತ್ವ'

ವಿದ್ವರೂ. ಅದು ಉತ್ತರಕರ್ನಾಟಕದ ಭಾಷೆಯಲ್ಲಿ ತನ್ನ ಹರವನ್ನು ಬಿಚ್ಚಿಕೊಂಡಿದೆ. ಬನಹಟ್ಟಿ ಸುತ್ತಮುತ್ತಲಿನ ಬಾಯ್ಮಾತನ್ನು ಬೆಳಗಲಿಯವರು ಈ ಕಾದಂಬರಿಯಲ್ಲಿ ಅತ್ಯಂತ ಮನೋಜ್ಞವಾಗಿ ಬಳಸಿಕೊಂಡಿದ್ದಾರೆ. ಸಹಜ - ಸರಳ - ಅಕೃತಕವಾಗಿ ಬಾಯ್ಮಾತನ್ನು ಕೃತಿಯಲ್ಲಿ ಬಳಸಬಲ್ಲರೆಂಬುದಕ್ಕೆ ಈ ಕಾದಂಬರಿಯೇ ಸಾಕ್ಷಿ. ದೇಸೀ . ಭಾಷೆಯ ಸಮರ್ಥ ಬಳಕೆಯಿಂದಾಗಿ ಈ ಕೃತಿಗೆ ಇನ್ನಷ್ಟು ಕಸುವು ಬಂದಿದೆ :

" ಮಳ್ಳಗೇನ ಆಗಬೇಕನs ? ಎಬಡೇಸಿಗೋಳ್ಳ ತಂದ.... ರತ್ನಾ ಜಳಕಾ ಮಾಡೂ ಮುಂದ ಮೈಗಿ ಸಾಬಾಣ ಸದೇಕ ಹಚ್ಕೊಳುದುಲ್ಲ...." (ಪುಟ ೯)

" ಲಸಮಕ್ಕ ಗಂಟ ಬಿದ್ದಿ. ಚಲೂ ಆತ. ಒಂಚೂರ ಸವಡಿದ್ರ ಕೈ ತಕ್ಕೊಂಡ ನಾವಲ್ಗಾರ ರಾಜಪ್ಪನ ಮನೀಗಿ ಬಾ...." (ಪುಟ ೧೨)

" ನೀ ಮನ್ಯಾಂವ ಅದೀ. ಮನ್ಯಾಂವ ಆಗೇ ಇರ. ಆ ಕೆಟ್ಟ ಇಚಾರೆಲ್ಲಾ ಮನಸಿನ್ಯಾಗ ತಗದ ಹಾಕ...." (ಪುಟ ೩೨)

" ತಮಾ. ನೀ ಇನಾ ಸಣ್ಣಾಂವಾ.... ಲಗ್ನ ಆದರೇನಾತು ವಯಾ ಸಣ್ಣದs ! ಹೀರಿ ಹೆಣಮಕ್ಕಳ್ನ ಅಕ್ಕಾ. ಅವ್ವಾ. ಅಂತ ಮಾತಾಡ್ಸಬೇಕಪಾ.... ನಿನ ಹ್ಯಾಣತಿಗಿ ಯಾರರೆ ಹೀಂಗs ಅಂದರ ನಿನಗ ಹ್ಯಾಂಗ ಅನಸ್ತೈತಿ...." (ಪುಟ ೪೨)

" ತಂಗೀ ಏನ ಮಾಡೂದವಾ ! ಕಂಡೂ ಕಂಡೂ ತಪ್ಪ ಯಾವ್ದು. ಸರಿ ಯಾವ್ದು ಹೇಳಾಕ ತಯಾರಿಲ್ಲ.... ಕಾಲs ಕೆಟ್ಟ ಹೋತ ತಂಗೀ....! ಕಾಯ್ದೆ ಬಡೂರ ಕಡೆ ಇರೂದುಲ್ಲ...." (ಪುಟ ೫೫)

" ನೀವ ಅನಕಾ ನನ್ನ ಜಾಗಾದ ಮ್ಯಾಲ ಕುಂಡ್ರಿ...." (ಪುಟ ೫೭)

" ತಮಾ. ನಾವ ಕಪ್ಪ ಬಸ್ಯಾಗ ಚಾ ಕುಡೀದುಲ್ಲ.... ಸ್ಟೀಲ ವಾಟಕಾದಾಗ ಹಾಕೊಂಡಬಾ.... ಕಪ್ಪಾಬಸೀ ನಮಗ ನಿಷಿದ್ಧ...." (ಪುಟ ೭೩)

" ಹೌದವಾ ತಂಗೀ. ಅಲ್ಲೇ ಅದೀವು. ರಾಯಾನ ಹೇಣತಿ ಮನ್ಯಾವ್ರು ಬಡೂರಾದ್ರೂ ಚಲೂಮಂದಿ. ರಾಯಾನೂ ಒಂಚೂರ ಈಗ ಹಾದ್ಗಿ ಹತ್ಯಾನು...." (ಪುಟ ೧೦೭)

" ಸಾಕೋ ಯಪಾ ಪಾಂಡುರಂಗಾ. ನೀ ಖರೆ ಮನಸ್ಯಾ ಅದಿ. ನನಗ್ಗೊತ್ತು. ನಿಮಪ್ಪ ನಾ ದೋಸ್ತ್ರು. ಅಂವ ಸತ್ತಾಗ ನನ ಕೈಯs ಮುರ್ದ್ಹಾಂಗ ಆಗಿತ್ತು. ಒಂದs ಮನ್ಯಾವ್ರು ಇದ್ದಾಂಗ ಇದ್ದೀವು ನಿನಗೂ ಗೊತ್ತೈತಲಾ.... ನಮ ಗೀಗೀ ಮ್ಯಾಳದಾಗ ಡಪ್ಪ ಬಾರ್ಸಾಕ ಬರ್ತಿದ್ದಾ. ಹಿಮ್ಯಾಳ ಮನಸ್ಯಾ. ದೇವ್ರಂತಾವ.... ನೀ ತಗೊಂಡ್ರ ಮನ್ಯಾಂದ ಮನ್ಯಾಗs ಉಳಧಾಂಗಾತು...." (ಪುಟ ೧೦೯)

" ಏನಪಾಂತಂದ್ರು.... ಮೊನ್ನೆ ಒಂದ ಪ್ರಸಂಗ ಆಯ್ತು.... ಏನಪಾಂತಂದ್ರು...." (ಪುಟ ೧೧೭)

" ಯಪಾ. ನನ ಕಡೀಂದ ತಪ್ಪಾಗೇತಿ ! ಒಮ್ಮೆ ಹೇಳಿದರೂ ಅಷ್ಟs ನೂರಸಾರೆ ಹೇಳಿದರೂ ಅಷ್ಟs. ಇನ್ನೊಮ್ಮೆ ಇಂತಾ ಕೆಲ್ಸಕ್ಕ ಕೈ ಹಾಕೂದುಲ್ಲಾ. ಖರೇ ದಾನಮ್ಮನ ಆಣೀ ಮಾಡಿ ಹೇಳ್ತನು...." (ಪುಟ ೧೨೫)

" ನೀವ ಯಾನ ತಿಳ್ಕೋತೀರಿ ತಿಳ್ಕೋರಿ....! ನಾ ಸರಾ ಕೊಟ್ಟದ್ದ ಖರೆ ಐತಿ; ಆ ಸ್ವಾಮಿ ಅದ್ನ ತಗೊಂಡ ಹ್ವಾದದ್ದೂ ಖರೆ ಐತಿ ದ್ಯಾವ್ರು ಪೂಜಿ ಮಾಡ್ಸಿರ ನನಗಂಡಾ ಹಾದ್ಯಾಗ ಬರ್‍ತಾನಂತ ನಂಬಿದ್ನಿ...." (ಪುಟ ೧೪೭)

" ಅಲೇಲೇ ಚಂದ್ರೀ.... ಇಲ್ಯಾಕ ಬಂದದೀಯ....?" (ಪುಟ ೧೫೫)

" ಎಲಾ ಇವ್ನವ್ನ....! ಇವರ್‍ನ ದುರ್ಗವ್ವ ಎತಿಕೊಂಡ ಹೋಗ್ಲಿ....! ಆ ಕತ್ತೀಮಗಾ ಯಮನ್ಯಾಂದನs ಇದೆಲ್ಲಾ ಕಿತಬಿ ಕಾಣತೈತಿ...." (ಪುಟ ೧೬೦)

" ನಿಮ್ಮೂರೇನ ಸಮಾಧಾನದಿಂದ ಇರೂವಾಂಗ ಕಾಣೂದುಲ್ಲಾ ! ಹೆಂಗ್ಸರ್‍ನ ಜಗ್ಗೂದು. ಉರ್‍ಲ ಹಾಕೊಂಡ ಸಾಯೂದು. ಜನಾವರ್‍ನ ಕೊಲ್ಲೂದು. ಬಣವೀ ಸುಡೂದು. ಖೂನಿ ಮಾಡೂದು. ಮಂದೀನ ಹಾಳಮಾಡೂದು. ಹೊಸಾ ಅಂಗಡಿ ಸುರು ಮಾಡೂದು...." (ಪುಟ ೧೬೭)

" ಅಕೀ ಅನೂನಕಿ ಅಂದ್ರು.... ಈ ಬೀಗತನಾ ಬ್ಯಾಡ ಅಂತಾಳು...." (ಪುಟ ೧೯೬)

" ತಂಗೀ. ಹಿಂದಿನ ಜಲ್ಮದಾಗ ನೀ ನಮ ಹಿರ್‍ಯಾನ ತಂಗಿ ಆಗಿರಬೇಕು.... ಈಗ ಒಬ್ಬಾಕಿ ತಂಗಿ. ಅನುಕೂಲ ಇದ್ದಾಕಿ ಅಣ್ಣನ ಅಡಚಣಿ ನೋಡಲಾರ್‍ದಕ. ಒತ್ತೀ ಇಡಾಕ ತನ ಕೊಳ್ಳಾನ ಬಂಗಾರ ಸರಾ ಬಿಚ್ಚಿಕೊಟ್ಟಾಳು.... ಜಗಾ ಎಲ್ಲಾ ಕೆಟ್ಟ ಧಾಣಾದ್ರೂ. ನಿಮ್ಮಂತಾವ್ರು ಅದಾರಂತs ಮಳೀಬೆಳೀ ಆಗತಾವು...." (ಪುಟ ೨೦೧)

" ಅಲ್ಲೋ ಮಳ್ಳ. ಎಲ್ಲಾ ಮಾತಕತೀ ಆಗೂ ಪೈಲೇನs ಯಾಕ ಇಚಾರ ಮಾಡ್ಲಿಲ್ಲಾ....? (ಪುಟ ೨೧೩)

" ಕಾಕಾ. ರತ್ನಾ ಎಂತಾಕೇ ಇರ್‍ಲಿ. ಆ ಮಾತ ಬಿಡ.... ಈಗ ನಮ್ಮನೀ ಮುಂದಿನ ಅಪ್ಪಾ-ಮಗನ ಭಾನಗಡಿಗಿ ಊರs ನಡಿಗಿ ಹೋಗೇತಿ. ಹಕನಾಕ ನಾಕಾರ ಜೀಂವ ಹ್ವಾದೂ. ಇದೇನ ನಿನ ಕಣ್ಣಿಗಿ ಕಂಡಿಲ್ಲೇನ....?" (ಪುಟ ೨೧೯)

" ಯಣಾ. ಮಂದಿ ಏನಾರೆ ಅನ್ಲಿ.... ಅನಾವ್ರು ಹಿಂದ ಅಂತಾರು.... ಮುಂದ ನಿಸ್ತರಸಾಕ ಯಾರೂ ಬರೂದುಲ್ಲ...." (ಪುಟ ೨೩೫)

" ಎಟ ದೊಡ್ಡಾಕಿ ಆಗ್ಯಾಳು....? ಮಸ್ನಿ ಮಸ್ನಿ ಈಟ ಇತ್ತು ಈ ಪೋರಿ" (ಪುಟ ೨೪೨)

" ಹಾಂಗೇನಾಗೂದಿಲ್ರಿ ಸಾಹೇಬ್ರು. ಇನ್ನ ಅಂಪ್ನ ಕಡೀಂದ ಯಾವ ತಪ್ಪೂ ಆಗಧಾಂಗ ನಾ ಖಾತ್ರೀ ಅದನೀ...." (ಪುಟ ೨೫೩)

" ತಮ್ಮಾ. ಅಡವ್ಯಾನ ಮನೀ ತೊಲಬಾಗಲಾ ಜಮಕಂಡೀ ಕಡೆ ಮೋತಿ ಮಾಡೇತಿ.... ಸಾಲೀಕಡಿ ಯಾಕ ?" (ಪುಟ ೨೮೧)

" ಅದ್ನs ಬರ್‍ತನೋಪಾ. ಅದಕಿಂತ ಪೈಲೇ ಪರಸಂಗ ಕೇಳ್ರಿ.... ಸುಗ್ಗಿ ಮಾಡ್ಸಿಕೊಳ್ಳಾಕ ಮಾಂವ ನನ್ನ ಕರ್‍ಸಿದ್ದಾ. ನಾಯೇನಪಾ. ಅಕ್ಕನ ಮಗಳ ಅದಾಳಂತ ಆಕೀ ಮೋತಿ ನೋಡಿ ಹ್ವಾದ್ನಿ.... ಮುಡಿಸಿಕೊಂಡ್ರು...." (ಪುಟ ೨೯೨)

"…. ಪೈಲೇನs ನಮ್ಮಕ್ಕನ ಮಗಳ್ನ ಹಾರೂಗೇರ್ಯಾವ್ರು ನೋಡಿ ಹೋದ್ರಂತ…. ನಾ ಇದ್ದಾಗs ಅವ್ರ ಗಟ್ಟಿ ಮಾಡಾಕ ಬರ್ರ್ಬೇಕs….?" (ಪುಟ ೨೯೨)

"ಹೌದs ಯಕಾ. ಎಡ್ಮೂರ ತಿಂಗ್ಳಾತು…. ಗೌಡ್ತಿ ಸಸೀ ಇತ್ತ ಮೋತೀ ಹಾಕೇ ಇಲ್ಲ. ಬರಾಕಿ ಇದ್ರ ಅಂದs ಬರ್ರಿದ್ಳು…." (ಪುಟ ३२२)

"ಯಾರ ಮುಂದೂ ಉಸಲ ಒಡಿಬ್ಯಾಡ ಓಂಕಾರಿ…. ಹೋಗು ಮನಕೋ ಹೋಗು. ಎಂದ ನೀ ಈ ಕೆಲ್ಸಾ ಮುಗಸ್ತಿ ಅಂದ ಹತೇಕ ಬಾ…. ಈ ಮಾತ ನಿನ ಹೊಟ್ಯಾಗ ಇರ್ಲಿ…. ಹೋಗ…." (ಪುಟ ३३६)
–ಇತ್ಯಾದಿ ಪರಿಸರ ಜನ್ಯವಾದ ಪ್ರಸ್ತುತ ಕಾದಂಬರಿ ತನ್ನ ಭಾವಭಾಷೆಗಳೆರಡರಲ್ಲಿಯೂ ಸಹಜತೆಯನ್ನೂ ಸರಳತೆಯನ್ನೂ ಸಾಧಿಸಿಕೊಳ್ಳುತ್ತ ದಟ್ಟವಾದ ಗ್ರಾಮೀಣ ಪರಿಸರವನ್ನೇ ಸೃಷ್ಟಿಸಿದೆ.

**ದೇಸೀ ಮಾತುಗಳು :**

'ಕಾತ್ರಾಳ ರತ್ನಿಯ ಚಾದಂಗಡಿ'ಯು ಗ್ರಾಮೀಣ ಪರಸರದ ಕಾದಂಬರಿಯಾಗಿದ್ದು. ಉತ್ತರ ಕರ್ನಾಟಕದ ಜನಜೀವನದ ಒಳನೋಟಗಳನ್ನು ಅರ್ಥಪೂರ್ಣವಾಗಿ ಚಿತ್ರಿಸುತ್ತದೆ. ಪ್ರಸ್ತುತ ಕಾದಂಬರಿಯಲ್ಲಿ ವಿವಿಧ ಪಾತ್ರಗಳ ದೇಸೀ ಮಾತುಗಳಾಗಿರದೇ ಅವು ನಮ್ಮ ಗ್ರಾಮೀಣರ ನಿತ್ಯದ ಮಾತುಗಳಾದುದೂ ವಿಶೇಷ. ವರ್ಗ-ವರ್ಣ-ಲಿಂಗಭೇದಗಳಿಗನುಗುಣವಾಗಿ. ದೇಸೀ ಮಾತಿನ ರೀತಿಯಲ್ಲಿಯೂ ವಿಭಿನ್ನತೆಯಿರುವುದು ತುಂಬ ಗಮನೀಯ. 'ದೇಸೀ' ಇಲ್ಲದ ಭಾಷೆ ಭಾಷೆಯೇ ಅಲ್ಲ. ಅದು ಬೆಡಗು ಇಲ್ಲದ ಬೋಳುನುಡಿ; "ದೇಸೀಯ ಸೊಗಸಿಲ್ಲದ ಮಾತು ನರಗಂಪಿಲ್ಲದ ಹೂವು ಒಂದೇ".[೧೦೩] ದೇಸೀನುಡಿ ಅಥವಾ ನಾಡುನುಡಿ. ಒಂದು ರೀತಿಯಲ್ಲಿ ಕೃತಿಯ ಸಂಭಾಷಣೆಗೆ. ಭಾಷಾಚಲನೆಗೆ ಶಕ್ತಿಯನ್ನು ತುಂಬಿ. ಅದಕ್ಕೆ ಸಹಜ ಕಸುವನ್ನು ತಂದು ಕೊಡುತ್ತದೆ. ಪ್ರಸ್ತುತ ಕೃತಿಯ ಉಸಿರಾಟ ಉತ್ತರ ಕರ್ನಾಟಕದಲ್ಲಿರುವುದರಿಂದ. ಆ ಉಸಿರಿನ ಮಿಡಿತಗಳನ್ನು ತನ್ನಲ್ಲಿ ತುಂಬಿಕೊಂಡು ಸಹಜಸುಂದರವಾಗಿ ಕಾಣುತ್ತದೆ. ಐತಿ. ಚಾಕ್ಕ. ಮಾರಾಯಾ. ಕಿಸಕ್. ತಾಂಬಡಿ. ತಲಬು. ಇಮಾರತಿ. ಯಣಾ. ಯವಾ. ಯಪಾ. ಇಸ್ಕೂ. ಸಾಬಾನ. ಸದೇಕ. ಹಾಂಗಾರ. ಫ್ವಂಟೀನಿ. ಇರ್ಲಾಕ. ಹೆಂಗಸ್ತೀ. ಛೀ. ನೋಡಾಕ್ರಿ. ಪಡಸಾಲಿ. ಸುರಗಿ. ಆಯಾರ. ಠಬರು. ಬಿರ್ಸ್ಸಾ. ತಟ್ಟು. ಮೆಟ್ಟು. ನುಚ್ಚು. ನದರ. ಕಡಾಯಿ. ಖಬರ. ನಾಲು. ಇಚಾರ. ಬೈಲಕಡೆ. ಕಿಟ್ಲಿ. ಹ್ಯಾಣತಿ. ಅಂವ. ಇಂವ. ಇನಾ. ಚಲೂ. ಕಮಿ. ಉಟ್ಟ. ಗದ್ಲ. ಹಸೂ, ತಿಪ್ಪಿ. ಹರ್‍ಯಾಗ. ಅನಕಾ. ತಡ್ಯೂ. ಸವಡ. ಯಕ್ಕಾ. ಯವ್ವಾ. ಸೋಟ. ದೀಡೀ. ಹಾರಗಾಲ. ಹಾರ. ಪ್ಯಾಟಿ ನೋಡ್ನಿ. ಬ್ರ. ತಿಂದ್ನಿ. ಕಿತಬೀ. ಸಳ್. ಬುಗಟಿ. ಸಪ್ಪ. ಬಾಟಿ. ಚಕಾರ. ಕ್ಯಾಸಿ. ಪಸಂತ. ಗಡ್ಯಾಳ. ತುಸುದ್ರಾಗ. ಬರ್‍ಯಾಕೆ. ವಂತಿಕೆ. ಏನಪಾಂತಂದ್ರ. ನೋಡಿದ್ರುಪ್ಲೆ. ಮುಕಣಿಕಾಳು. ಉಜಳಸೀ. ಐಯ. ಚಾಲಿವರಿ. ಗಜ್ಯಾಳ. ಅನೂನಕಿ. ತಾಬಾಣ. ತಗಲ. ಲೋಡಪೀಕರ, ಪುತ್ಯಾ, ಪರಬಾರೆ, ಅಂವಸ್ರ. ಬಿರಿ, ಬಡೂರು, ಬಗ್ರು, ಜರಕಡ್ತ. ಸಧೇಕ ಸಂಚಿ. ಗಪ್ಪಗಾರು. ವಜನ. ಕಾಯಾಸ. ಧಾಡಸಿ. ಆಚಿಕ. ಈಚಿಕ. ಒಗ್ಯಾಣ. ಇತ್ಯಾದಿ ನಾಡುನುಡಿಗಳನ್ನು

೧೦೩. ಶಂಭಾ ಜೋಶಿ : ಕಂನ್ನುಡಿಯ ಹುಟ್ಟು. ಪುಟ ೧೧೧

ಸಹಜವಾಗಿ ಬಳಸಿದಂತಯೇ ಬೆಳಗಲಿಯವರು ವಿಶಿಷ್ಟಾರ್ಥ ಪದಗಳನ್ನೂ ಅಷ್ಟೇ ಸಹಜವಾಗಿ ತಮ್ಮ ಈ ಕೃತಿಯಲ್ಲಿ ಬಳಸಿಕೊಂಡಿದ್ದಾರೆ.

**ವಿಶಿಷ್ಟಾರ್ಥದ ಪದ - ಪುಂಜಗಳು :**

ವಿಶಿಷ್ಟಾರ್ಥದ ಪದ ಅಥವಾ ಪದಪುಂಜಗಳನ್ನು 'ಕಾತ್ರಾಳ ರತ್ನಿಯ ಚಾದಂಗಡಿ'ಯ ಒಡಲಾಳದಲ್ಲಿಟ್ಟ ಬೆಳಗಲಿಯವರು ಕಾದಂಬರಿಗೆ ಪ್ರಾದೇಶಿಕ ಮೊನಚು-ಮೆರುಗನ್ನು ತಂದುಕೊಟ್ಟಿದ್ದಾರೆ : ಐದೇಶಿ (ಬೈಗುಳ ಸುರಿಸು). ಕಾಲುಕೀಳು (ಹೆದರಿ ಓಡಿಹೋಗು). ಕೊಳ್ಳಾಗ ಕಟ್ಟು (ಮದುವೆ ಮಾಡು). ಆಯ (ಕಾಣಿಕೆರೂಪದ ಕಾಳುಕಡಿ). ವಾಜಮಿ (ಯೋಗ್ಯ). ಸಾಗೋಳಿ (ಪ್ರಾಸಂಗಿಕ ಉಪಯೋಗ). ಗೆಬ್ಬಿ (ಉಪಾಯವಾಗಿ ಇಸಿದುಕೋ). ಹಜಾಮತಿ ಮಾಡು (ಮೋಸಮಾಡು). ವಾಟಾಗಟಿ (ಮಾತುಕತೆ). ಬಾಯಾಗ ಗಡ್ಡಿ ಕೊಟ್ಟ (ಅವಕಾಶ ತಪ್ಪಿಸು). ಅಕ್ಕೀಕಾಳು ಚೆಲ್ಲಿಕೊಡು (ಮದುವೆಮಾಡಿಕೊಡು). ಬಿನ್ನಾಯಿ (ಬಿಟ್ಟೀಕೂಳು). ರಿವಾಜು (ಪದ್ಧತಿ). ದಂಧೆ (ಸೂಳೆಗಾರಿಕೆ). ಶಂಭರಟಕ್ಕೇ (ನೂರಕ್ಕೆ ನೂರರಷ್ಟು). ಪರ್ಲಹರಿ (ಸಂಬಂಧ ಕಡಿಕೊಳ್ಳು). ಪೊಟ್ಟ್ಯಾಗ ಹಾಕೋ (ಕ್ಷಮಾಪಣೆ ಮಾಡು). ಕಷ್ಟ (ಕ್ಷೌರ). ಹೋಳಿಗಿ ಹೊಡಸು (ಮದುವೆಯೂಟ ಮಾಡಿಸು). ಆದಾವತಿ (ಪೂರ್ವವೈರತ್ವ): ತಗಲ (ಮೋಸ-ಸುಳ್ಳು). ಪಿಟ್ಲಾ (ತೆಳುವಾದ ಕಡಲೆ ಹಿಟ್ಟಿನ ಝುಣಕಾ). ಎಡಜಾಂವಿ (ಮೂರ್ಖ). ಕಿತಬಿ (ಭಾನಗಡಿ). ಹಕನಾಕ (ಅಕಾರಣ). ಜಟ್ಟಕಡಿ (ಮುಗಿದುಹೋಗು). ಬಗಲಬಚ್ಚಾ (ಹಿಂಬಾಲಕ). ಕಾಯಾಸಕಟ್ಟು (ಕಲ್ಪಿಸು). ದರಕಾರ (ಕಾಳಜಿ). ಠಬರು (ದರ್ಬಾರು). ಅನೂನಕಿ (ಅಭಿಪ್ರಾಯ). ದೀಡ (ಒಂದೂವರೆ) ಇತ್ಯಾದಿ ವಿಶಿಷ್ಟಾರ್ಥದ ನುಡಿಗಳು ಈ ಕೃತಿಯಲ್ಲಿ ಹಾಸುಹೊಕ್ಕಾಗಿ ಬಳಕೆಗೊಂಡು ಸಹಜಸೌಂದರ್ಯವನ್ನು ತಂದುಕೊಟ್ಟಿವೆ.

**ಗ್ರಾಮೀಣ ಬೈಗುಳಗಳು :**

ಗ್ರಾಮೀಣರು ತಮ್ಮ ಮಾತಿನ ಮಧ್ಯದಲ್ಲಿ ಬಳಸುವ ಬೈಗುಳಗಳು. ಅವರ ಮಾತಿಗೆ ನೈಜ ಆಕರ್ಷಣೆಯನ್ನು ತಂದು ಕೊಡುತ್ತವೆ. ಗ್ರಾಮೀಣರಲ್ಲಿ ಸಹಜ ಬಳಕೆಗೊಳ್ಳುವ ಪದಗಳನ್ನು ತಮ್ಮ ಕೃತಿಗಳಲ್ಲಿ ಬಳಸುತ್ತ ಪ್ರಾದೇಶಿಕ ಭಾಷಾಗುಣಧರ್ಮದ ವಾಸ್ತವತೆಯನ್ನು ಮತ್ತು ಪಾತ್ರಗಳ ಸಹಜ ಸೊಲ್ಲಿನ ರೀತಿಯನ್ನು ಬೆಳಗಲಿಯವರು ತುಂಬ ಮನೋಜ್ಞವಾಗಿ ನೀಡಿದ್ದಾರೆ. ಇಂಥ ಬೈಗುಳಗಳು. ಭಾವನೆಗಳ ಅಭಿವ್ಯಕ್ತಿಯಾದ ಭಾಷೆಗೆ ಮೆರುಗನ್ನು ತಂದು ಕೊಡುವುದರಲ್ಲಿ ಸಂದೇಹವಿಲ್ಲ. 'ಕಾತ್ರಾಳ ರತ್ನಿಯ ಚಾದಂಗಡಿ' ಯಲ್ಲಿ ಹೇರಳವಾದ ಬಳಕೆಯಿಲ್ಲದಿದ್ದರೂ. ಹಿತಮಿತವಾದ ಬಳಕೆಯಿದೆ : ಮಳ್ಳಗೇನ ಆಗಬೇಕು. ಎಬಡೇಸಿಗೋಳ. ಮಗನಾ. ರಂಡಿ. ಮಗಾ. ಕತ್ತೀಮಗಾ. ಬಿಕನಾಸಿ. ಹಾದರಗಿತ್ತೀ. ಹೊಯ್ಮಾಲಿ. ಹುಚಪ್ಯಾಲಿ. ಮಳ್ಳ ನನಮಗನ. ಹಾದರಗಿತ್ತೀ ಮಕ್ಳ. ಬಾಡ್ಯಾಗೋಳು. ಎಲಾ ಇಷ್ನವ್ವ. ಇವಕ್ಕ ದುರಗವ್ವನ ಬ್ಯಾಸಿ ಬರ್ಲಿ. ಇವರ್ನ ದುರ್ಗವ್ವ ಎತ್ತಿಕೊಂಡ ಹೋಗ್ಲಿ. ಪೊಲಿಸೂಳೀಮಗಾ ಹಾದರಗಿತ್ಯಾರು. ಮಂಗ್ಯಾ. ಕತ್ತೆ. ಎಪರೇಸಿ. ನಾಚಿಗ್ಗೇಡಿ.

ಕಸ್ಮಾಲಗೇಡಿ. ಲಡಮೂ. ಭಾಮಟ್ಯಾ. ಥೆ ನಿನ ಮಂಜ್ಯಾಳಹೋಗ್ಲಿ. ಇತ್ಯಾದಿ ಬೈಗುಳ ನುಡಿಗಳಲ್ಲಿ ಸಮಕಾಲೀನ ಸಮಾಜದ ಸ್ಪಷ್ಟ ಚಿತ್ರವನ್ನೇ ಲೇಖಕರು ನೀಡಿದ್ದಾರೆ.

**ದ್ವಿರುಕ್ತಿ - ಜೋಡುನುಡಿಗಳು :**

ಆಡುನುಡಿಗೆ ಒತ್ತು ಕೊಟ್ಟು ಅದರ ಅರ್ಥವನ್ನು ಗಟ್ಟಿಗೊಳಿಸುವುದಕ್ಕೆ ದ್ವಿರುಕ್ತಿಗಳ ಬಳಕೆ ಅವಶ್ಯವೆನಿಸುತ್ತದೆ. ಬೇರೆ ಬೇರೆ. ಬಣ್ಣ ಬಣ್ಣದ. ದಡ್ಡಿದಡ್ಡಿ. ಹುಳುಹುಳು. ಪಳಾಪಳಾ, ಚ್ಯುಚ್ಯು. ಜುರುಜುರು ಗಾವುದಗಾವುದ. ಹೆಚ್ಚುಹಚ್ಚು. ಸಹಿಸಿಸಹಿಸಿ. ಆಗಲಿಆಗಲಿ. ಕೈಕೈ. ಪುಡಿಪುಡಿ. ಬಳಿಬಳಿ. ಬಡಬಡ. ಗಿಜಿಗಿಜಿ. ಮತ್ತೆಮತ್ತೆ. ಹಣೆಹಣೆ. ತಮ್ಮತಮ್ಮ. ಕಂಡೂಕಂಡೂ. ಕೇಳಿಕೇಳಿ. ಪುರುಪುರು. ಓಹೋ. ಹೌದುಹೌದು. ಶಿವಶಿವ. ತಿಕ್ಕಿತಿಕ್ಕಿ. ಸಾವಕಾರ್ರಿ ಸಾವಕಾರ್ರಿ. ಎದೆಎದೆ. ಅತ್ತುಅತ್ತು. ಸೇರಿಸೇರಿ. ಮನೆಮನೆ. ಹೊರಳಿಹೊರಳಿ. ಟಕಟಕ. ಮರಾಮರಾ. ದುಡ್ಡುದುಡ್ಡು. ಸಹಸ್ರಸಹಸ್ರ. ಅನ್ನಅನ್ನ. ಹೊಸಹೊಸ. ತೇಕುತ್ತ ತೇಕುತ್ತ. ವಟಾವಟಾ. ಬುರುಬುರು. ಹೊಡಮಳ್ಳಿ ಹೊಡಮಳ್ಳಿ. ಗದಗದ. ಕೆದಕಿಕೆದಕಿ. ಫಟ್‌ಫಟ್. ಅಗೆದು ಅಗೆದು. ಮನ್ಯಾಗಮನ್ಯಾಗ. ಬಿಕ್ಕಿಬಿಕ್ಕಿ. ಮುಸಿಮುಸಿ. ಬಳಬಳ. ಕಣ್ಣುಕಣ್ಣು. ಸುಡುಸುಡು. ಓಸುಕಿಓಸುಕಿ. ಯವ್ವಾಯವ್ವಾ. ಮೂಡಿಮೂಡಿ. ಚಿಂದಿಚಿಂದಿ. ಮಸ್ನಿಮಸ್ನಿ. ಇರ್ಲಿಇರ್ಲಿ. ಹುಯ್‌ಹುಯ್. ಹಾಂಹಾಂ. ಹಂತಹಂತ. ಘಂಘಂ. ಗಂಗಂ. ಜಗ್ಗಿಜಗ್ಗಿ. ಜಿದ್ದುಜಿದ್ದು. ನಕ್ಕುನಕ್ಕು. ಜಳಜಳ. ದುಡದ ದುಡದ. ಕುಚುಕುಚು. ಇತ್ಯಾದಿಗಳು.

ದೇಸೀ ಭಾಷೆಯಲ್ಲಿ ಎಂದಿನಿಂದಲೂ ಅಡಕಗೊಂಡು ಬಳಕೆಯಾಗುವ ಜೋಡುನುಡಿಗಳನ್ನು ಔಚಿತ್ಯವಾಗಿ ತಮ್ಮ ಈ ಕಾದಂಬರಿಯಲ್ಲಿ ಬಳಸಿದ್ದಾರೆ : ತಜಿವಿಜಿ. ಕಲ್ಲುಮಣ್ಣು. ಎಡಬಲ. ಮಾಜೀಆಜೀ. ಪುರಾಣಪ್ರವಚನ. ಕಲಿಯಿರಿ-ಕಲಿಸಿರಿ. ಗದ್ದಲ-ಗೊಂದಲ. ಚೀರಾಟ-ಕೂಗಾಟ. ಹೊಲಸು-ಹೇಸಿಗೆ. ಹಾವ-ಭಾವ. ರೀತಿ-ನೀತಿ. ಕಲ್ಲು-ಬಂಡೆ. ಗಿಡಗಂಟೆ. ಕುಂಕುಮ-ಭಂಡಾರ. ಸುಖದುಃಖ. ನೋವು-ನಲಿವು. ಕಷ್ಟಕಾರ್ಪಣ್ಯ. ಹಾಲಾಹೈನಾ. ಸುಣ್ಣಬಣ್ಣ. ಹೊತ್ತಾಯಾಳೆ. ಮೇವುಮಿಡಚಿ. ಕಾಳುಕಡಿ. ತೋಟಪಟ್ಟಿ. ಮೈಕೈ. ಕಳ್ಳಕಕಲಾತಿ. ಕುಲಾಜಾತಿ. ಮದವಿಪದವಿ. ಕೂಲಿ-ಕುಂಬ್ಳಿ. ಟಕಮಕ. ಸಳಮಳ. ಸೋಡಚೀಟಿ-ಬಿಡುಗಡೆ. ತಳಮಳ. ಥಾಣಾ-ಡಂಗುರ. ಹಿಂದಿಲ್ಲ-ಮುಂದಿಲ್ಲ. ಇರುಸು-ಮುರುಸು. ಉಪ್ಪು-ಖಾರ. ಪಾತ್ರೆ-ಪಗಡ. ರೆಕ್ಕೆ-ಪುಕ್ಕ. ಅಸ್ತ-ವ್ಯಸ್ತ. ಗೌರವ-ಅಗೌರವ. ಖರೆ-ಖೊಟ್ಟಿ. ಮೇಲು-ಕೀಳು. ಸ್ವಾಭಿಮಾನ-ನಿರಭಿಮಾನ. ಪಾನಪಟ್ಟಿ. ವೇಷಭೂಷಣ. ಜಗಮಗ. ಕೆಲಸಾ-ಬಗಸಿ. ಕೋಪತಾಪ. ಆಸ್ತಿ-ಪಾಸ್ತಿ. ಛೆಟ್-ಪಟ್. ಹಣ್ಣುಗಾಯಿ-ನೀರುಗಾಯಿ. ರೊಕ್ಕಾ-ಗಿಕ್ಕಾ. ಆಡಾ-ಪಾಡಾ. ದೇಖರೇಖಿ. ಸಿಡಿಮಿಡಿ. ಅಕ್ಕ-ಪಕ್ಕ. ತಟ-ಪಟ. ತಡ-ಬಡ. ವಶೀಲಿ-ಗಿಶೀಲಿ. ಗುಡಿ-ಪಡಿ. ಗಿಡಾ-ಪಡಾ. ತಂಗುಳ-ಬಂಗುಳ. ಗುಡಿಗುಂಡಾರ. ದಯಾ-ಮಯಾ. ಚಿಕ್ಕೋಡಿ-ಪಕ್ಕೋಡಿ. ಸಾಧಕ-ಬಾಧಕ. ಹಣ್ಣು-ಹಂಪಲ. ಇತ್ಯಾದಿಗಳು.

**ಗಾದೆಮಾತು - ಪಡೆನುಡಿಗಳು :**

ಬೆಳಗಲಿಯವರು ಉತ್ತರಕರ್ನಾಟಕದಲ್ಲಿ ಸಹಜ ಬಳಕೆಯಲ್ಲಿರುವ ಪಡೆನುಡಿಗಳನ್ನು ಈ ಕೃತಿಯಲ್ಲಿ ತುಂಬ ಔಚಿತ್ಯಪೂರ್ಣವಾಗಿ ಬಳಸಿದ್ದಾರೆ. ಕೆಲವು ಸಲ ಇದ್ದಕ್ಕಿದ್ದಂತೆ ಬಳಸಿದರೆ. ಇನ್ನು ಕೆಲವು ಸಲ ಅಲ್ಪ ಬದಲಾವಣೆಯೊಂದಿಗೆ ಬಳಸಿಕೊಂಡು ಕಾದಂಬರಿಗೆ ಕಸುವು ತುಂಬಿದ್ದಾರೆ.

" ಹೆಬ್ಬಟ್ಟಿನ ಸಹಿ ಬಾಳಿಗೆ ಕಹಿ " (ಪುಟ ೪)

" ಒಬ್ಬಳು ಹೆಣ್ಣು ಕಲಿತರೆ ದೇಶ ಕಲಿತಂತೆ " (ಪುಟ ೪)

" ದೇವ್ರು ವರಾ ಕೊಟ್ರೂ ಪೂಜಾರಿ...." (ಪುಟ ೮)

" ....ಬಾಳೀ ಪಡಾ ಹ್ವಕ್ಕ ಮಂಗ್ಯಾ ಪಡಾನs ಹಾಳ ಮಾಡಿಥಾಂಗ...." (ಪುಟ ೨೩)

" ಬೆಳೆಯ ಸಿರಿಯನ್ನು ಮೊಳಕೆಯಲ್ಲಿ...." (ಪುಟ ೧೬)

" ಅತ್ತೆಗೊಂದು ಕಾಲ ಸೊಸೆಗೊಂದು ಕಾಲ " (ಪುಟ ೧೭)

" ....ಕುಲಗೇಡಿ ಇದ್ರೂ ವರಗೇಡಿ ಇರ್ಬಾರ್ದಂತ...." (ಪುಟ ೨೪)

" ಮುಂದ ಮದವಿಪದವಿ ಎಂದೋ ಎನೋ ನಂದೋರಾಜಾ...." (ಪುಟ ೨೩)

" ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿ...." (ಪುಟ ೩೩ ಹಾಗೂ ೮೨)

" ....ಅನ್ನದಲ್ಲಿ ಬಂದ ಕಲ್ಲಿನಂತೆ...." (ಪುಟ ೬೮)

" ಹೊಟ್ಟೆಹೊರೆಯಲು ಹಲವು ವೇಷ " (ಪುಟ ೭೧)

" ಬಣವಿಗೆ ಬೆಂಕಿ ಬಿದ್ರು, ಹಿರ್‍ಕೊಂಡಷ್ಟs ನಂದ...." (ಪುಟ ೮೬)

" ಬೆಂಕಿ ಹಚ್ಚಾವ್ರಿಗೇನು ? ದೇವ್ರೇನ ಮನ್ನಾರೇನ. ಎಲ್ಲ ಒಂದs" (ಪುಟ ೯೯)

" .... ಉತ್ಮರ ಕಾಲ ಎಂದೋ ಮುಗದ ಹೋಗೇತಿ...." (ಪುಟ ೧೦೩)

" ಬಂಗಾರವಿಲ್ಲದಿದ್ದರೂ ಬಂಗಾರದಂಥ ಮಾತಿರಬೇಕು " (ಪುಟ ೧೧೪)

" .... ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತೆ...." (ಪುಟ ೧೩೦)

" .... ಮೀಸೆ ಮಣ್ಣಾಗದಂತೆ ತಿರುಗಾಡು...." (ಪುಟ ೧೩೮)

" .... ಬಂದ ದಾರಿಗೆ ಸುಂಕವಿಲ್ಲದಂತೆ...." (ಪುಟ ೧೪೬)

" .... ಅರಳೆ ಗಂಟೀನ ಮೇಲೆ ಲಾಗ ಹಾಕುವವನಿಗೆ...." (ಪುಟ ೧೬೦)

" ಕಚ್ಚುವ ನಾಯಿ ಬೊಗಳುವುದಿಲ್ಲ" (ಪುಟ ೧೯೦)

" .... ಲಳಿಗೆ ಹಾಕಿ ತೆಗೆದ ನಾಯಿಬಾಲಗಳೇ...." (ಪುಟ ೨೦೨)

" ತೆಲಿ ಮ್ಯಾಲಿನ ಮಾಂಸ ಆರಿಲ್ಲ. ನನಗ ಬುದ್ಧಿ ಹೇಳ್ತಿಯೇನ ?" (ಪುಟ ೨೨೬)

" .... ಅದೇನೋ ' ಸಾಡೇಸಾತಿ ' ಯೇಳೂವರೀ ವರ್ಸ ಕಾಡತ್ಯೆತೆಂತ...." (ಪುಟ ೨೩೭)

"…. ಹಾಲಾಗ ಹುಳಿ ಹಿಂಡಾಕ ಭಾಳಮಂದಿ ಕೈಯಾಗ…." (ಪುಟ ೨೩೯)

"…. ನಮಾಜ ಮಾಡಲು ಹೋಗಿ ಅವರ ಕೊರಳಿಗೆ ಮಸೀದಿ ಬಿದ್ದಂತೆ…." (ಪುಟ ೨೫೮)

"…. ಸಾವು ಸುಳ್ಳ ಹೇಳಿ ಒಂದ ಕಲ್ಯಾಣ ಮಾಡಬೇಕಂತ…." (ಪುಟ ೨೫೮)

"ಪಾಪೀ ದುಡ್ಡ ಪ್ರಾಯಶ್ಚಿತಕ್ಕಲ್ಲದ ಬ್ಯಾರೆ ಕೆಲಸಕ್ಕ…." (ಪುಟ ೨೬೨)

"…. ರೊಟ್ಟಿ ಜಾರಿ ತುಪ್ಪದಾಗ ಬಿದ್ದಾಂಗ…." (ಪುಟ ೨೬೪)

"…. ಕುಂಡ್ಯಾಗೇನ ಹಲ್ಲ ಬಂದಾವೇನ ?" (ಪುಟ ೨೬೮)

"…. ಜಗದಾಗ ಬುತ್ತೀ ಕಟಗೊಂಡ ಹುಡುಕ್ಯಾಡಿದ್ರೂ ಸಿಗೂದಿಲ್ಲ…." (ಪುಟ ೨೯೧)

"…. ಉಗುಳ ದಾಟದ…." (ಪುಟ ೨೯೪)

"ರೋಗಿ ಬಯಸಿದ್ದನ್ನೇ ವೈದ್ಯ ಹೇಳಿದಂತೆ" (ಪುಟ ೨೯೭)

"…. ಎಲುಬಿಲ್ಲದ ನಾಲಿಗೆ…." (ಪುಟ ೩೦೬)

"ಹುಟ್ಟಗುಣಾ ಹುಗದ್ರೂ ಹೋಗುದುಲ್ಲಂತಾರು…." (ಪುಟ ೩೧೭) –ಇತ್ಯಾದಿಗಳು.

**ಪ್ರಾದೇಶಿಕ ಸಂಸ್ಕೃತಿ :**

ಬೆಳಗಲಿಯವರ ಸಾಹಿತ್ಯಿಕ ವಿಶೇಷತೆಯೆಂದರೆ. ಅವರಲ್ಲಿನ ಸ್ವಾನುಭವ. ಪರಿಸರ ಜನ್ಯವಾದ ಅವರ ಕಾದಂಬರಿಗಳಲ್ಲಿ ಅಲ್ಲಿನ ಜನಜೀವನದ ಸಶಕ್ತ ವಿವರಣೆಯನ್ನೇ ಹೊಂದಿವೆ. ಉತ್ತರ ಕನಾಟಕದ ಬದುಕಿನ ಒಳನೋಟಗಳನ್ನು ಬಿಚ್ಚಿಡುವ ಈ ಕಾದಂಬರಿ ಗ್ರಾಮೀಣರ ಆಟಪಾಟ. ಹವ್ಯಾಸ. ನಡೆ-ನುಡಿ. ಆಚರಣೆ. ಹಬ್ಬ-ಹರಿದಿನ. ಸಂಪ್ರದಾಯ. ಪರಂಪರೆಗಳನ್ನು ಚೆನ್ನಾಗಿ ವಿವರಿಸಿದೆ. ತಮ್ಮ ಪ್ರಾರಂಭಿಕ ಪ್ರಾದೇಶಿಕ ಕೃತಿಗಳಿಗಿಂತ ಇಲ್ಲಿ 'ಜೀವನದ ಪಾತಳಿ' ಚೆನ್ನಾಗಿ ಮೂಡಿಬಂದಿದ್ದು. ಬೆಳಗಲಿಯವರ ಪ್ರಾದೇಶಿಕ ಕಾದಂಬರಿಗಳನ್ನು. ಕೇವಲ ಅವುಗಳಲ್ಲಿನ ಭಾಷೆಯಿಂದಷ್ಟೇ. ಅವುಗಳನ್ನು 'ಪ್ರಾದೇಶಿಕ'ವೆಂದು ನಿರ್ಧರಿಸಲಾಗದು. ಅಲ್ಲಿ ಚಿತ್ರಣಗೊಂಡ 'ಜನಜೀವನ' ಅವರ ಭಾಷೆಯಷ್ಟೇ ಪ್ರಧಾನವಾದುದಾಗಿದೆ. ಗ್ರಾಮೀಣರ ಬದುಕಿನ ನೆಲೆ-ಬೆಲೆಗಳನ್ನು ಚೆನ್ನಾಗಿ ಚಿತ್ರಿಸುವ 'ಕಾತ್ರಾಳ ರತ್ನಿಯ ಚಾದಂಗಡಿ'ಯೊಂದು ಉತ್ತಮ ಪ್ರಾದೇಶಿಕ ಕಾದಂಬರಿಯೆನ್ನಲು ಅಲ್ಲಿ ಬರುವ 'ಜನಜೀವನ'ದ ಜೀವಂತ ಚಿತ್ರಣಗಳೂ ಒಂದು ಮುಖ್ಯ ಕಾರಣ.

ಗ್ರಾಮೀಣ ಹೊಟೇಲುಗಳು ಆಯಾ ಊರಿನ 'ಚಾವಡಿ'ಗಳಂತೆ ಅಲ್ಲಿ ಜನರು ಪರಸ್ಪರ ಚರ್ಚಿಸುವ ವಿಷಯಗಳು ಅವರ ಬದುಕಿಗೆ ಹಿಡಿದ ಕನ್ನಡಿ. ಅಲ್ಲಿ ಬರುವ ಜನ. ಅವರ ನಡೆ-ನುಡಿ. ಹಾವ-ಭಾವಗಳ ಬಗ್ಗೆ ಚಿತ್ರಿಸುವ ಕಾದಂಬರಿ. ಚಾದಂಗಡಿಯ ಗೋಡೆಗಳ ಬಗ್ಗೆಯೂ ಹೆಚ್ಚಿನ ಕಾಳಜಿವಹಿಸಿದೆ. ಅಲ್ಲಿ ಅಂಟಿಸುವ ಜಾಹೀರಾತುಗಳು. ಸಿನಿಮಾ ಪೋಸ್ಟರುಗಳು. ಲೋಕೋಭಿನ್ನ ರುಚಿಯಾಗಿವೆ. 'ಗೋಡೆ ಸಂಸ್ಕೃತಿ' ಯಿಂದಲೇ ತನ್ನ ಮೈಬಿಚ್ಚಿಕೊಳ್ಳುವ ಕಾದಂಬರಿ ಅದನ್ನು ಚೆನ್ನಾಗಿ ವಿವರಿಸಿದೆ. ಬೆಳಗಲಿಯವರು ತಮ್ಮೆಲ್ಲ ಕಾದಂಬರಿಗಳಲ್ಲಿ 'ಎಲ್ಲಮ್ಮನ ಭಕ್ತಿ-ಆಚರಣೆಗಳಿಗೆ ವಿಶೇಷಸ್ಥಾನ' ನೀಡಿದ್ದಾರೆ. ಎಲ್ಲಮ್ಮ ಉತ್ತರ ಕರ್ನಾಟಕದ ಗ್ರಾಮೀಣ

ಬದುಕಿನ ಆರಾಧ್ಯದೈವ. ರತ್ನಾಳ ಗಂಡ ಚೆನ್ನು ಎಲ್ಲಮ್ಮದೇವಿಯ ಅನನ್ಯ ಭಕ್ತನಾದರೆ. ರತ್ನಾ ಭಕ್ತಿಯ ಹೆಸರಿನಲ್ಲಿ ನಡೆಯುವ ಭಾನಗಡಿಗಳಿಗೆ ರೋಸಿಹೋಗಿ. 'ನಿರ್ಲಿಪ್ತ ಭಕ್ತಳಾಗಿ' ಬದುಕು ನಡೆಸಿದ್ದು ಕಾದಂಬರಿಯ ವೈಶಿಷ್ಟ್ಯಪೂರ್ಣ ನಡೆಯಾಗಿದೆ.

ಹೆಣ್ಣುಮಕ್ಕಳು 'ದೊಡ್ಡವರಾದಾಗ' ಗ್ರಾಮೀಣರಲ್ಲಿ ವಿಶೇಷ ಆಚರಣೆಯೇ ನಡೆಯುತ್ತದೆ. ನಾವಲಗಿ ರಾಚಪ್ಪನ ಮಗಳು ಕಸ್ತೂರಿ 'ದೊಡ್ಡಾಕಿ' ಆದಾಗ ಅವಳನ್ನು ಐದು ದಿನ ಕೂಡ್ರಿಸಿ. ಸೋಬಾನೆ ಹಾಡಿಸಿ. ಐದನೇ ದಿನ ಸ್ವಾಮಿಗಳನ್ನು ಕರೆತಂದು. ಪೂಜೆ ಮಾಡಿಸಿ. ಮನೆ ಶುದ್ಧಿ ಮಾಡಿಸಿದ ಬಳಿಕ ಅವಳಿಗೆ ಹೊಸ ಸೀರೆ ಉಡಿಸಿ. ಅವಳ ಉಡಿ ತುಂಬುತ್ತಾರೆ. ಕಾದಂಬರಿಯಲ್ಲಿ ಇದು ಚೆನ್ನಾಗಿ ಚಿತ್ರಣಗೊಂಡಿದೆ. ಹೆಂಗ್ಸರಿಲ್ಲದ ರಾಚಪ್ಪನ ಮನೆಗೆ ರತ್ನಾಳೇ ಸ್ವತಃ ಹೋಗಿ ತನುಮನಧನದಿಂದ ಈ ಕಾರ್ಯಕ್ರಮವನ್ನು ನಡೆಸಿಕೊಡುತ್ತಾಳೆ. ಗ್ರಾಮೀಣರ ಬದುಕಿನಲ್ಲಿ ಇದೊಂದು ವಿಶೇಷ ರೀತಿಯ ಆಚರಣೆಯೆಂದೇ ಹೇಳಬಹುದು. ವಧುಪರೀಕ್ಷೆಯಲ್ಲಿಯೂ ಹಳ್ಳಿಗರ ನಂಬಿಕೆ ತುಂಬ ವಿಚಿತ್ರವಾದುದು. ವಧುವನ್ನು ಶೃಂಗರಿಸಿ ವರಪಕ್ಷದವರಿಗೆ ತೋರಿಸುವುದು ವಾಡಿಕೆಯಾದರೂ. ವಧುವಿನ ನೆತ್ತಿಯ ಮೇಲೆ ಕಂಬ-ಜಂತಿ ಬರದಂತೆ ಕೂಡ್ರಿಸಿ ತೋರಿಸುವುದು ಅವರ ಪದ್ಧತಿ. ಹೀಗೆ ಕೂಡಿಸಿ ತೋರಿಸಿದರೆ ಅದು ಅಪಶಕುನವೆಂಬುದು ಅವರ ಬಲವಾದ ನಂಬಿಕೆ. ವಧುವಿನ ಪಾದ-ಹೆಜ್ಜೆ. ಬೆರಳು-ಮೊನಕೈಗಳನ್ನು ಪರೀಕ್ಷಿಸುವುದು. ದಾರದಿಂದ ಅಳತೆ ಮಾಡಿ ನೋಡುವುದು ತುಂಬ ಕುತೂಹಲಕಾರಿ ಸಂಗತಿ. ಕಸ್ತೂರಿಯ 'ಪರೀಕ್ಷಾ' ಪ್ರಸಂಗದಲ್ಲಿ ಈ ಎಲ್ಲವುಗಳನ್ನು ಕಾದಂಬರಿ ಚೆನ್ನಾಗಿ ಚಿತ್ರಿಸಿದೆ.

ಗ್ರಾಮೀಣರು ಕಲಾರಾಧಕರು. ಅಲ್ಲಿ ಬೈಲಾಟ. ಹಾಡುಪಾಡುಗಳಂತೆ. ಉತ್ತರಕರ್ನಾಟಕದ 'ಗೀಗೀ ಮೇಳಗಳು' ದೇಶದಲ್ಲಿಯೇ ಪ್ರಸಿದ್ಧವಾದ ತಂಡಗಳು. ಒಂದೊಮ್ಮೆ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಈ ಮೇಳಗಳ ಪಾತ್ರ ಅಗಾಧವಾಗಿತ್ತು. ಜನರಲ್ಲಿ 'ರಾಷ್ಟ್ರಪ್ರಜ್ಞೆ' ತುಂಬುವಲ್ಲಿ ಇಂಥ ಮೇಳಗಳು ವಹಿಸಿದ ಪಾತ್ರ ಚಿರಸ್ಮರಣೀಯ. ಆದರೆ ಇಂಥ ಕಲಾವಿದರೀಗ ಅನಾಥರಾಗುತ್ತಿರುವ ದೃಶ್ಯ ಕರುಳು ಹಿಂಡುತ್ತದೆ. ಗಸ್ತಿಹೊಳೆಪ್ಪನ ಸ್ಥಿತಿ ಕಾದಂಬರಿಯಲ್ಲಿ ಮನಮಿಡಿಯುವಂತೆ ಮೂಡಿ ಬಂದಿದೆ. ಒಂದೊಮ್ಮೆ ತನ್ನ ಗೀಗೀ ಪದಗಳಿಂದ ದೇಶವನ್ನೇ ಎಚ್ಚರಿಸಿದ್ದ ಹೊಳೆಪ್ಪ ಊರು ಬಿಟ್ಟು ಹೋಗುವ ಪ್ರಸಂಗ. ಇಂದು ಕಲಾವಿದರ ಸ್ಥಿತಿ ಹೇಗಿದೆಯೆಂಬುದಕ್ಕೆ ಜೀವಂತ ಸಾಕ್ಷಿಯಾಗಿ ನಿಂತಿದೆ.

ಉತ್ತರ ಕರ್ನಾಟಕದಲ್ಲಿ 'ಓಕಳಿ'ಗೆ ವಿಶೇಷ ಸ್ಥಾನವಿದೆ. ಓಕಳಿ ಹೊಂಡಕ್ಕೆ ನೀರು ತುಂಬುವುದರಿಂದ ಹಿಡಿದು ಅದನ್ನು ಆಡುವವರೆಗೆ ಇರುವ ಆಚರಣೆ ಈ ಭಾಗದ ಜನರ ಆಸೆ-ಅಭಿರುಚಿಗಳನ್ನು ಪ್ರತಿಬಿಂಬಿಸುತ್ತದೆ. ರತ್ನಾ ಓಕಳಿಯಾಡುವ ಚೆನ್ನಿ ಮತ್ತು ಪೈಲ್ವಾನ ಸಿದ್ದು ನಾಯಕನ ಔರಸಪುತ್ರಿ. ತಾರುಣ್ಯ ತುಂಬಿದ ವಿಶೇಷ ವೇಷವಾದ ಕಿರುಗಚ್ಚೆ. ಬಿಗಿದ ಹರಕು ಸೀರೆ. ಹರಕು ಕುಪ್ಪಸ. ತಲೆಗೆ ಬಿಗಿದ ಸೆರಗು. ಎರಡೂ ಕೈಗಳಲ್ಲಿ ಹೆಬ್ಬಿ ಜರಲುಗಳನ್ನು ಹಿಡಿದ ಡೊಂಬರ ಯುವತಿಯರಿಗೆ ನೀರುಗ್ಗುವ ಈ ಆಚರಣೆ ಅತ್ಯಂತ ರಮ್ಯಮನೋಹರವಾದುದು. ಸಾಮಾನ್ಯವಾಗಿ

ಮಾರುತಿದೇವರ ಜಾತ್ರೆಯಲ್ಲಿ ನಡೆಯುವ ಇಂಥ ಆಚರಣೆಗೆ ಗ್ರಾಮೀಣರ ಬದುಕಿನಲ್ಲಿ ವಿಶೇಷ ಪ್ರಾಧಾನ್ಯತೆಯಿದೆ. ಆದರೆ ಕಾಲಬದಲಾದಂತೆ ಸಾವಕಾಶವಾಗಿ ಈ ಆಚರಣೆ ಅಶ್ಲೀಲದತ್ತ ತಿರುಗಿಕೊಂಡಾಗ. ಅಲ್ಲಲ್ಲಿ ಇದು ನಿಂತು ಹೋದರೂ. ಅಲ್ಪಸ್ವಲ್ಪ ತನ್ನ ಅಸ್ತಿತ್ವವನ್ನು ಹಳ್ಳಿಗಳಲ್ಲಿ ಇನ್ನೂ ಉಳಿಸಿಕೊಂಡಿರುವುದು ಕಾಣುತ್ತದೆ. ಪ್ರಸ್ತುತ ಕಾದಂಬರಿಯಲ್ಲಿ ಓಕಳಿಯ ಬಗ್ಗೆ ಉತ್ತಮ ವಿವರಣೆಯಿದ್ದು. ಕೋರಳ್ಳಿಯ ಓಕಳಿಯೇ ರತ್ನಾಳ ಜನನಕ್ಕೆ ಕಾರಣವಾದುದು ಈ ಕಾದಂಬರಿಯ ಒಡಲಾಳದ ಗುಟ್ಟು.

ಗ್ರಾಮೀಣರು ಸತ್ತವರಿಗೆ ತೋರುವ ಅನುಕಂಪ ಆದರಣೀಯವಷ್ಟೇ ಅಲ್ಲ. ಅನುಕರಣೀಯವೂ ಹೌದು. ರತ್ನಾ. ಸೀತವ್ವನನ್ನು ಕರೆದುಕೊಂಡು ರೊಟ್ಟಿ. ಪಲ್ಲೆ. ಅನ್ನ. ಮೊಸರು ಬುತ್ತಿ ಕಟ್ಟಿಕೊಂಡು ಸತ್ತ ಎಲ್ಲಪ್ಪನ ಮನೆಗೆ 'ಮಾತನಾಡಿಸಲು' ಹೋಗಿದ್ದು. ಗ್ರಾಮೀಣರ ಅನುಕಂಪ. ಸಹಾಯ-ಸಹಕಾರ-ಸಹಾನುಭೂತಿ-ಸೌಹಾರ್ದಗಳಿಗೆ ಸಾಕ್ಷಿ. ರೋಗಿಗಳ ಹಾಗೂ ಸತ್ತವರ ಬಗ್ಗೆ ಹಳ್ಳಿಗಳಲ್ಲಿ ಇಂದಿಗೂ ಅನುಕಂಪ-ಕರುಣೆ ಇದೆ. ಕಾದಂಬರಿ ಈ ಚಿತ್ರಣಕ್ಕೆ ವಿಶೇಷ ಗಮನ ನೀಡಿದೆ. ದೇವರು-ದಿಂಡರು-ಪುರಾಣ-ಪುಣ್ಯಕಥೆಗಳ ಬಗೆಗೆ ಗ್ರಾಮೀಣರಲ್ಲಿ ಎಲ್ಲಿಲ್ಲದ ಶ್ರದ್ಧೆ-ಭಕ್ತಿ. 'ದಾನಮ್ಮ ದೇವಿಯ ಮಹಾತ್ಮೆ'ಯ ಬಗ್ಗೆ ತ್ರಿಪುರಾಂತಕಸ್ವಾಮಿ ಹೇಳುವ ಪುರಾಣ ಕೇಳಲು ಹೋಗುವ ನಂದೂರಿನ ಜನರ ಬಗ್ಗೆ ಕಾದಂಬರಿಯಲ್ಲಿ ಸ್ವಾರಸ್ಯಕರವಾದ ವಿವರಣೆಯಿದೆ. ತ್ರಿಪುರಾಂತಕನ ನಯವಂಚಕತನವೇನೋ ಅಲ್ಲಿದೆಯಾದರೂ. ಪುರಾಣ-ಪುಣ್ಯಕಥೆಗಳಿಗಂತೂ ಹಳ್ಳಿಗರ ಬದುಕಿನಲ್ಲಿ ಪೂಜ್ಯಸ್ಥಾನವಿರುವದಂತು ಸತ್ಯಸ್ಯ ಸತ್ಯ.

ಉತ್ತರ ಕರ್ನಾಟಕದ ಜನಜೀವನದಲ್ಲಿನ ಸಾಮಾಜಿಕ ಸಂಬಂಧಗಳು. ವಿವಿಧ ಸಂಪ್ರದಾಯಗಳು. ನಂಬಿಕೆಗಳು. ಆಚರಣೆಗಳು. ಮಡಿ-ಮೈಲಿಗೆಗಳು. ಸಹಾಯ-ಸಹಕಾರ. ಅನುಕಂಪ. ಕರುಣೆ. ನಾಟಕ. ಕಲಾವಿದರು. ಗೌಡಿಕಿ. ಆಳುಮಕ್ಕಳು ಹೀಗೆ ಒಟ್ಟು ಒಂದು ಸಮುದಾಯದ ಜೀವಂತ ಚಿತ್ರವೇ ಇದರಲ್ಲಿ ಮೂಡಿ. ಪ್ರಾದೇಶಿಕ ಜೀವನದ ವೈಭವವನ್ನಾಗಿಸಿಕೊಳ್ಳುವ ವರ್ಣನೆಯಿದೆ. ಪ್ರಾದೇಶಿಕ ಪರಿಕರಗಳ ಅರ್ಥಪೂರ್ಣ ಬಳಕೆಯ. ಗ್ರಾಮೀಣ ಜೀವನದ ಜೀವಂತ ಚಿತ್ರಣವಿರುವ 'ಕಾತ್ರಾಳ ರತ್ನಿಯ ಚಾದಂಗಡಿ' ಒಂದು ಉತ್ತಮ ಪ್ರಾದೇಶಿಕ ಕಾದಂಬರಿ: ಕನ್ನಡ ಕಾದಂಬರಿ ಪ್ರಪಂಚಕ್ಕೆ ಇದೊಂದು ವಿಶಿಷ್ಟ ಕೊಡುಗೆ. ಪ್ರಾದೇಶಿಕ ಕಾದಂಬರಿ ಪರಂಪರೆಯಲ್ಲಿ ಚರಿತ್ರೆಯಾಗಿ ಉಳಿಯಬಲ್ಲ ಒಂದು ಉತ್ತಮ ಕೃತಿ.

**ವೇಶ್ಯಾ ಸಮಸ್ಯೆಯ ಕಾದಂಬರಿಗಳು :**

ವೇಶ್ಯಾವಾಟಿಕೆ ಭಾರತಕ್ಕಂಟಿದ ಕ್ಯಾನ್ಸರ. ಮೊದ-ಮೊದಲು ಧರ್ಮದ ಆವರಣದಲ್ಲಿ ಹುಟ್ಟಿಬೆಳೆದ ಇದು. ಕಾಲಕ್ರಮದಲ್ಲಿ ಹೊಟ್ಟೆಹೊರೆಯುವ ಉದ್ಯೋಗವಾಗಿ. ಇಂದು ವಿಲಾಸಿ ಬದುಕಿನ ಕರಾಳ ಕೈಗಳಂತೆ ಬೆಳೆದು ನಿಂತು ಏಡ್ಸನಂಥ ಮಹಾರೋಗಕ್ಕೆ ದಾರಿಮಾಡಿಕೊಟ್ಟಿದೆ. ಸೂಳೆಗಾರಿಕೆ ಮನುಕುಲಕ್ಕೆ ಅಂಟಿದ ರೋಗ. ಸುಸಂಸ್ಕೃತ ಜಗತ್ತಿನಲ್ಲಿ ಅನಾಗರಿಕ ವ್ಯವಹಾರ. ಮನುಷ್ಯ ಪ್ರಾಣಿಗಿಂತ ಭಿನ್ನವೆಂದು ಸಾಧಿಸುವಲ್ಲಿ. ಅವನ ಲೈಂಗಿಕತೆಯ ವ್ಯವಸ್ಥೆಯೂ ಒಂದು ಕಾರಣ. ವೇಶ್ಯಾವಾಟಿಕೆ ವಿಶ್ವದಾದ್ಯಂತ ಸಮಸ್ಯೆಯಾದರೂ. ವಿಭಿನ್ನ ಪ್ರದೇಶದಲ್ಲಿ ಅದಕ್ಕೆ ಕಾರಣ - ಪರಿಹಾರಗಳೂ ವಿಭಿನ್ನವಾಗಿವೆ. ಸೂಳೆಗಾರಿಕೆಯಂಥ ಹೀನಪ್ರವೃತ್ತಿಯನ್ನು 'ದೇವದಾಸಿ' ಎಂದು

ಕರೆಯುವುದರಲ್ಲಿಯೇ ಅವರ ಮೋಸಗಾರಿಕೆಯ ಬೇರುಗಳಿವೆ. ಮಾನವನ ವೈರುದ್ಧ್ಯ ಕ್ರಿಯೆಗಳಿಗೆಲ್ಲ ದೇವರು-ದಿಂಡರು. ಧರ್ಮ-ಕರ್ಮಗಳ ಮುದ್ರೆಯೊತ್ತಿ ಮೋಸಮಾಡುವುದು ಮೊದಲಿಸಿಂದಲೂ ನಡೆಯುತ್ತಲೇ ಬಂದಿದೆ. ದೇವದಾಸಿ. ಸೂಳೆ. ವೇಶ್ಯೆ. ವ್ಯಭಿಚಾರಿ. ಈ ಪದಗಳಲ್ಲಿ ಸಾಕಷ್ಟು ಅರ್ಥವ್ಯತ್ಯಾಸವಿದ್ದರೂ. 'ಅನೈತಿಕತೆ' ಮಾತ್ರ ಸಾಮಾನ್ಯ ಸಂಗತಿ. ಈ ಕಾರಣಕ್ಕಾಗಿಯೇ ಇತ್ತೀಚೆಗೆ ಈ ಎಲ್ಲ ಪದಗಳನ್ನು ಒಂದೇ ಅರ್ಥದಲ್ಲಿ ಗ್ರಹಿಸುವ ವಾಡಿಕೆಯಾಗಿದೆ.

ಮನುಕುಲಕ್ಕೆ ಸವಾಲಾದ ಈ ಸಮಸ್ಯೆಯನ್ನು ಕುರಿತು ಬೆಳಗಲಿಯವರು ತಮ್ಮ ಬಹುತೇಕ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆಯಾದರೂ. 'ವೇಶ್ಯಾವಾಟಿಕೆ'ಯನ್ನೇ ವಸ್ತುವಾಗಿರಿಸಿಕೊಂಡ ಪೂರ್ಣಪ್ರಮಾಣದ ಕೃತಿಯೆಂದರೆ. 'ದೇವದಾಸಿ'. ಬೆಳಗಲಿಯವರು 'ದೇವದಾಸಿ'ಯನ್ನು ಐತಿಹಾಸಿಕ ನೆಲೆಯಲ್ಲಿ ಸೆರೆಹಿಡಿಯುವ ಪ್ರಯತ್ನ ಮಾಡದೆ ಸಾಮಾಜಿಕ ಪರಿವರ್ತನೆ ಅಥವಾ ಅವರ ಮಾತಿನಲ್ಲಿಯೇ ಹೇಳುವುದಾದರೆ ವಿಮೋಚನೆಯ ಕಾರ್ಯರಂಗದಲ್ಲಿ ವಿರಚನೆಗೈದಿದ್ದಾರೆ. ಕನ್ನಡ ಕಾದಂಬರಿ ಪ್ರಪಂಚದಲ್ಲಿ ದೇವದಾಸಿ ಪದ್ಧತಿಯನ್ನು ಕುರಿತಾದ ಇಷ್ಟೊಂದು ಸುದೀರ್ಘ ಹಾಗೂ ಜೀವಂತಿಗೆಯ ಕೃತಿ ಇನ್ನೊಂದಿಲ್ಲವೆಂದರೆ ಅತಿಶಯವಾಗದು. ಬೆಳಗಲಿಯವರ ಸಾಮಾಜಿಕ ವಿಶ್ಲೇಷಣೆ. ಮನಃಶಾಸ್ತ್ರೀಯ ತಳಹದಿಯ ನಿರೂಪಣೆ ತುಂಬ ಮೆಚ್ಚಬೇಕಾದುದು. ಸಮಸ್ಯೆಯ ವಿರಾಟ್‌ಸ್ವರೂಪವನ್ನು ತೊಳೆ-ತೊಳೆಯಾಗಿ ಬಿಚ್ಚಿಡುತ್ತ; ಅದಕ್ಕಿರುವ ಆರ್ಥಿಕ. ಸಾಮಾಜಿಕ. ಧಾರ್ಮಿಕ. ಮತ್ತು ರಾಜಕೀಯ ಕಾರಣಗಳನ್ನು ಶೋಧಿಸಿದ್ದಾರೆ. ಸ್ವತಂತ್ರ ಭಾರತದ ಶಾಪವಾಗಿರುವ ದೇವದಾಸಿ ಪದ್ಧತಿಯ ಸುತ್ತಮುತ್ತ ಹಬ್ಬಿಕೊಂಡಿರುವ ವಿಷವರ್ತುಲವನ್ನು ಚೆನ್ನಾಗಿ ಚಿತ್ರಿಸುತ್ತ ಹೋದ ಬೆಳಗಲಿಯವರು ಪ್ರಾದೇಶಿಕ ದಟ್ಟ ಪರಂಪರೆಯನ್ನು ಕಾದಂಬರಿಯಲ್ಲಿ ನಿರ್ಮಿಸಿದ್ದಾರೆ.

ಪ್ರಗತಿಶೀಲರಿಂದಲೇ ವೇಶ್ಯಾಸಮಸ್ಯೆಯನ್ನು ಕುರಿತ ಸಾಹಿತ್ಯಸೃಷ್ಟಿ ಕನ್ನಡದಲ್ಲಿ ಆರಂಭವಾಯಿತೆನ್ನಬಹುದು. ಕಾದಂಬರಿಯೇ ಅವರ ಪ್ರಮುಖ ವಾಹಿನಿಯಾಯಿತು. ಅ.ನ.ಕೃ. ಅವರ 'ಸಂಜೆಗತ್ತಲು'. 'ಶನಿಸಂತಾನ'. ತ.ರಾ.ಸು. ಅವರ 'ಮಸಣದ ಹೂ' ಆರಂಭಿಕ ಕಾದಂಬರಿಗಳಾದರೆ. ಬಸವರಾಜ ಕಟ್ಟೀಮನಿಯವರ 'ಬೀದಿಯಲ್ಲಿ ಬಿದ್ದವಳು'. 'ಖಾನಾವಳಿ ನೀಲಾ'. 'ಪಾತರಗಿತ್ತಿ' ಈ ಸಮಸ್ಯೆಯನ್ನೇ ಚಿತ್ರಿಸುವ ಉತ್ತಮ ಕಾದಂಬರಿಗಳು. 'ಗೆಜ್ಜೆಪೂಜೆ'. 'ಮೈಮನಗಳ ಸುಳಿಯಲ್ಲಿ' ಹೀಗೆ ಅನೇಕ ಕಾದಂಬರಿಗಳು ಕನ್ನಡದಲ್ಲಿ ಮೂಡಿಬಂದಿವೆ. ಈ ಸಾಮಾಜಿಕ ಸಮಸ್ಯೆಯನ್ನು ಪ್ರಾಸಂಗಿಕವಾಗಿಯೂ. ಪೂರ್ಣವಾಗಿಯೂ. ಅನೇಕ ಕಾದಂಬರಿಗಳು ಚಿತ್ರಿಸಿವೆಯಾದರೂ. ಸಾಮಾಜಿಕನೆಲೆ. ಸಾಂಸಾರಿಕಸ್ಥಿತಿ-ಗತಿ. ಧಾರ್ಮಿಕ ಅಂಧಶ್ರದ್ಧೆಯ ಪರಿಸರ. ವ್ಯಕ್ತಿಗಳ ಪರಿಸ್ಥಿತಿ ಹಾಗೂ ಅದರ ಪ್ರಭಾವ-ಪರಿಣಾಮ-ಪರಿಹಾರಗಳೆಲ್ಲವನ್ನೂ ಚಿತ್ರಿಸಿದ ಶ್ರೇಯಸ್ಸು ಬೆಳಗಲಿಯವರದು.

## ದೇವದಾಸಿ (೧೯೯೧) :

ವಿಶ್ವವ್ಯಾಪಿ ಸಮಸ್ಯೆಗೆ ಪ್ರಾದೇಶಿಕ ಹಿನ್ನೆಲೆಯ ಕಾರಣಗಳೊಂದಿಗೆ ಪರಿಹಾರ ಹುಡುಕುವ: ಅಸ್ಪೃಶ್ಯತೆ. ಅಜ್ಞಾನ. ಮೂಢನಂಬಿಕೆ. ಬಡತನ. ಸಂಪ್ರದಾಯಬದ್ಧ ಶೋಷಣೆ ಮೊದಲಾದ ಕೆಳವರ್ಗದವರ ರೋಗಗಳಿಗೆ ಇಂದಿನ ಸರಕಾರದ

ನೀತಿ - ಸಾಮಾಜಿಕ ನ್ಯಾಯದ ಚೌಕಟ್ಟಿನಲ್ಲಿ ಪರಿಹಾರ ಹುಡುಕಿದ ' ದೇವದಾಸಿ ' ಈ ದಶಕದ ಗಮನಾರ್ಹ ಕೃತಿ. ಹೆಣ್ಣು ತಾನಾಗಿಯೇ ಸೂಳೆಯಾಗುವುದಿಲ್ಲ: ಅವಳನ್ನು ಸಮಾಜ ಸೂಳೆಯನ್ನಾಗಿಸುತ್ತದೆ. ಸೂಳೆಗಾರಿಕೆ ಸುಖ-ಸಂತೋಷದ ವೃತ್ತಿಯಾಗಿ ಸ್ವೀಕೃತಗೊಂಡಿಲ್ಲ. ಅದೊಂದು ಅನಿವಾರ್ಯ ಬದುಕಿನ ಅಕ್ಟೋಪಸ್‌ನ ಸೆರೆ ! ಮುಗ್ಧ ಹೆಣ್ಣುಗಳ ಮಾರಣಹೋಮವೇ ವೇಶ್ಯಾವಾಟಿಕೆ. ಇಲ್ಲಿ ಹೆಣ್ಣುಮಕ್ಕಳು ಸಂಪೂರ್ಣ ದೋಷಿಗಳೆಂದು ಹೇಳಲಾಗದು: ಸಾಂಸಾರಿಕ-ಸಾಮಾಜಿಕ-ಧಾರ್ಮಿಕ ಮುಖವಾಡಗಳಿಗೆ ಬಲಿಯಾಗುವ ಅವರು ಪರಿಸ್ಥಿತಿ-ಪರಿಸರಗಳ ಕೈಗೂಸು.

ವಿಜಾಪುರ-ಬೆಳಗಾವಿ ಜಿಲ್ಲೆಗಳ. ಅಷ್ಟೇ ಯಾಕೆ ಭಾರತೀಯ ಕೆಳವರ್ಗದ ಹೆಣ್ಣುಮಕ್ಕಳನ್ನು ಎಲ್ಲಮ್ಮನಿಗೆ ಅಥವಾ ಇನ್ನಾವುದೋ ' ದೇವರಿಗೆ ಬಿಟ್ಟು ' ಅವರನ್ನು ಸೂಳೆಯರನ್ನಾಗಿಸುವ ದುಷ್ಟ ಸಂಪ್ರದಾಯದ ಮೂಲ ಸುಳಿವು ಸಿಗಲಾರದಷ್ಟು ಹಿಂದಿನದು: ಲಕ್ಕಿ ಆ ಅರ್ಥಹೀನ ಸಂಪ್ರದಾಯಕ್ಕೆ ಶರಣಾದ ಜಾನವಾಡದ ಸೂಳೆ. ಸಿದ್ಲಿಂಗಶೆಟ್ಟಿಯನ್ನೇ ತನ್ನ ನಂಬಿಗಸ್ಥ ಖಾಯಂ ಗೆಣೆಯನನ್ನಾಗಿಸಿಕೊಂಡ ಲಕ್ಕಿ. ತನ್ನ ಏಕಮಾತ್ರ ಪುತ್ರಿ ವಿಮಲಾಳಿಗೂ ಮುತ್ತು ಕಟ್ಟುವ. ಅವಳನ್ನೂ ಮುಂಬೈನಂಥ ಮಹಾನಗರಕ್ಕೆ ' ದಂಧೆ 'ಗೆ ಕಳಿಸುವ ಬಲವಾದ ಹಂಬಲಹೊಂದಿದವಳು. ವಿಮಲ ಹೈಸ್ಕೂಲು ಕಲಿಯುವ ಮುಗ್ಧೆ. ತಾಯಿಯ ಅನಾಚಾರಕ್ಕೆ ಹೇಸಿಕೊಂಡ ವಿಮಲ. ತಾಯಿಯ ಬದುಕನ್ನು ಕಣ್ಣಾರೆ ಕಂಡೂ. ಅದೇ ' ದಂಧೆ 'ಗೆ ಹೋಗಲು ಇಷ್ಟವಿಲ್ಲ: ಲಕ್ಕಿಗೆ ಮಗಳ ನಡೆ ಸರಿಬರದು. ತಳಮಳದಲ್ಲಿಯೇ ಕುದಿಯುತ್ತಿದ್ದ ಲಕ್ಕಿಗೆ ಬುಡಬುಡಕ್ಯಾನ ಶಕುನ ಮತ್ತಷ್ಟು ಚಾಲನೆ ತುಂಬಿತ್ತು. ಪಾರ್ವತಿ ಅದೇ ಕೇರಿಯ ವಿಧವೆ. ಕೇರಿಯ ಮೂಢನಂಬಿಕೆ-ಸಂಪ್ರದಾಯಗಳನ್ನು ವಿರೋಧಿಸುವ ಅವಳಿಗೆ ಕೂಲಿ-ಕುಂಬಳಿಯೇ ದೈನಂದಿನ ಬದುಕಿಗೆ ಉಸಿರು. ಬುಡಬುಡಕ್ಯಾನ ಢೋಂಗಿ ವೃತ್ತಿಯನ್ನರಿತ ಅವಳು. " ಇದೇನ ಹೇಳ್ತಿ ಬಿಡಪಾ. ಹಕ್ಕಿಯೇನ ಹೇಳ್ತಾವು ? ಅವೇನ ಮನಸ್ಯಾರಾಂಗ ಮಾತಾಡ್ತಾವೇನ ? ನೀನs ಸ್ವತಾ ಹುಟ್ಟಿಸಿಕೊಂಡ ಹೇಳ್ತಿ ಆತು. " ೧೦೪ ಪಾರ್ವತಿಯ ಅಸಹನೆಯ ಈ ಮಾತುಗಳು ಲಕ್ಕಿಗೆ ಸಹನೆಯಾಗದೆ. " ಪಾರೀ ನೀಯೇನ ನಮ್ಮ ಉಸಾಬರಿ ಮಾಡಬ್ಯಾಡಾ ನಾ ಕೇಳ್ತನು ಅಂವಾ ಬುಡಬುಡಿಕೆಪ್ಪಾ ಹೇಳ್ತಾನು ! ನೀ ಯಾಕ ನಡಬರ್‍ಕ ? ನಿನಗ ರಗಡ ಹೇಳೇನಿ ನಮ ಸುದ್ದಿಗಿ ಬರಬ್ಯಾಡಾ ಅಂತ...." ೧೦೫ ಎಂದು ತನ್ನ ಪ್ರತಿರೋಧ ಒಡ್ಡಿದರೆ. " ಅಮ್ಮಾ ಇದೇನಂತೀ ? ಹಕ್ಕಿ ಶಕುನ ಸುಳ್ಳ ಅಂದಾವು ರಕ್ತಕಾರಿ ಸೆಟದ ಹೋಗ್ತಾರು. ಇದ ದೇವಿ ಯಲ್ಲಮ್ಮನ ಶಾಪ ಐತಿ.... ಅದ್ನs ಹಕ್ಕಿ ಹೇಳೇತಿ..." ೧೦೬ ಎಂದು ಬುಡಬುಡಿಕೆಯವ ತಾನೂ ಒಂದಿಷ್ಟು ಹೆದರಿಸಿದ್ದ. ಲಕ್ಕಿಯ ಮುತ್ತುಕಟ್ಟುವ ಯೋಜನೆಗೆ ನಾಗಿ. ರೇಣಕಿ. ಸಾಬ್ಯಾ. ತಾತೋಬಾ. ಇನ್ನೂ ಅನೇಕರು ಬೆಂಗಾವಲಾಗಿ ನಿಂತಾಗ ವಿಮಲಳಿಗೆ ದಾರಿ ತೋಚದಂತಾಗಿ. " ಚಿಗವ್ವಾ. ನನಗೇನ ತಿಳಿಧಾಂಗ ಆಗೇತಿ. ಮನ್ಯಾಗ ಅವ್ವಾನ ಕಾಟ ನೋಡಿರ. ಎಲ್ಲಿಯಾದ್ರೂ ಕೆರಿ-ಭಾಂವಿ ಹುಡುಕುಹಾಂಗ ಅನಸ್ತೈತಿ.... ೧೦೭ ವಿಮಲಳ ಒಡಲಾಳದ ನೋವಿಗೆ. " ನೀಯೇನ ಅಳಬ್ಯಾಡ ತಂಗೀ. ನಿಮವ್ವನ

---

೧೦೪. ದು. ನಿಂ. ಬೆಳಗಲಿ : ದೇವದಾಸಿ. ಪುಟ ೫

೧೦೫. ದು. ನಿಂ. ಬೆಳಗಲಿ : ದೇವದಾಸಿ. ಪುಟ ೫

೧೦೬. ದು. ನಿಂ. ಬೆಳಗಲಿ : ದೇವದಾಸಿ. ಪುಟ ೫

೧೦೭. ದು. ನಿಂ. ಬೆಳಗಲಿ : ದೇವದಾಸಿ. ಪುಟ ೭

ಕಾರಾಗಿರಿ ಏನೇನ ನಡೀತೈತಿ.... ನಾವೆಟ್ಟ ನಿಮವ್ವಗ ಹೇಳಿದ್ರೂ. ಆಕೀ ತೆಲ್ಯಾಗ ದೆವ್ವs ಇಳೀವಲ್ತು. ಯಲ್ಲವ್ವ ಯಲ್ಲವ್ವ ಅಂತಾಳು. ಯಲ್ಲವ್ವದೇವಿ ! ದೇವ್ರು ಹೀಂಗ ಕೆಟ್ಟ ಕೆಲ್ಸಾ ಮಾಡಂತ ಎಂದೂ ಹೇಳೂದುಲ್ಲಾ. ಇದೆಲ್ಲಾ ತಪ್ಪ ತಿಳಿವಳಿಕೆ.... ನೀ ಒಂದೀಟ ಗಟ್ಟಿಯಾಗು. ನಿನ ಸಾಲಿ ಮುಗೀಲಿ. ಮುಂದ ಏನಾಗತೈತೋ ನೋಡೂಣು" ೧೦೮ ದೇವರು ದಿಂಡರಲ್ಲಿ ನಂಬಿಕೆಯಿದ್ದರೂ. ಮೂಢಸಂಪ್ರಾದಯ-ಆಚರಣೆಗಳನ್ನು ಸೇರದ ಪಾರ್ವತಿ ಸಾಂತ್ವನ ಹೇಳಿದಳು.

ವೀರೇಶಿ ಜಾನವಾಡದ ಬಾರೀಗಿಡದ ಗಂಗಪ್ಪನ ಏಕಮಾತ್ರ ಪುತ್ರ: ಮೆಟ್ರಿಕ್‌ನಲ್ಲಿ ಎರಡು ಸಲ ಲಾಗಾ ಹೊಡೆದು ದಾಟಿದ ವೀರೇಶಿಗೆ ಹೊಂಡಾಗಾಡಿ ಮೇಲೆ ಕುಳಿತು ಅಪ್ಪನ ದುಡ್ಡಿನಲ್ಲಿ ಶೋಕಿ ಮಾಡುವ ಹುಚ್ಚು. ದಾರಿಯಲ್ಲಿ ಎದುರಾದ ಪಾರ್ವತಿ. ವಿಮಲಾಳಿಗೆ ಶಿಳ್ಳು ಹಾಕುತ್ತ ಹೊಂಡಾಗಾಡಿ ಹತ್ತಿರಕ್ಕೇ ತಂದು ದಾಟುತ್ತಾ " ಊರಬಾಡ್ಯಾಗೋಳು ಸೊಕ್ಕು ನೆತ್ತಿಗೇರೇತಿ ! ಹೆಣಮಕ್ಕಳು. ಹುಡುಗರು. ಅನ್ನೂ ಖಬರ ಸೈತ ಇಲ್ದಾಂಗ ಆಗೇತಿ ! ಹೆಂಗ್ಸರ್ನ ಇವು ಕಂಡೇ ಇಲ್ಲ ಕಾಣತೈತಿ ! ಮನ್ಯಾಗ ಇವ್ರಿಗಿ ಅವ್ವಾ. ಅಕ್ಕಾ. ತಂಗೀ ಅದಾರಿಲ್ಲೋ.... ನಡಬರ್ಕ ರೊಕ್ಕ ಬಂದ ಇವ್ಕ. ಮಂಗ್ಯಾಗ ಸೆರೀ ಕುಡಿಸಿಧಾಂಗ ಆಗೇತಿ...." ೧೦೯ ಪಾರ್ವತಿಯ ಸಂತಾಪದ ಬಿರುನುಡಿಗಳ ರುಚಿಯುಂಡ ವೀರೇಶಿ. ಸ್ವಲ್ಪದಿಗಳಲ್ಲಿಯೇ ಪ್ರಕಾಶನ ಸಹಚರ್ಯದಿಂದಾಗಿ ಒಬ್ಬ ಹೊಸ ಮನುಷ್ಯನಾದ. ಪ್ರಕಾಶ. ಚೆನ್ನಪ್ಪ ದೇಸಾಯಿಯವರ ಹಿರಿಯಮಗ; ಸ್ನಾತಕೋತ್ತರ ಪದವೀಧರ. ನೌಕರಿ ಮಾಡುವ ಅವಶ್ಯಕತೆಯಿಲ್ಲದ. ಸಹೃದಯಿಯಾದ ಆತನಿಗೆ ಊರಕೇರಿಯ ಸುಧಾರಣೆ ಹಾಗೂ ದೇವದಾಸಿ ವಿಮೋಚನಾ ಚಳುವಳಿಯಲ್ಲಿ ಸಹಜ ಆಸಕ್ತಿ ಹುಟ್ಟಿಕೊಂಡಿತು. ವೀರೇಶಿಯಂಥ ಯುವ ಉತ್ಸಾಹಿಯನ್ನು ಕಟ್ಟಿಕೊಂಡು. ಯಾರು-ಯಾವ ಮುಲಾಜನ್ನು ನೋಡದೆ ಹರಿಜನ ಕೇರಿಯ ಸುಧಾರಣೆಗೆ ಕೈಹಾಕುತ್ತಾನೆ: ಅದಕ್ಕೆ ತಂದೆ ಚೆನ್ನಪ್ಪನೂ ಸಹಮತಿಸುತ್ತಾನೆ. ಚೆನ್ನಪ್ಪ ದೇಸಾಯಿ ಹಳೆಕಾಲದ ಮನುಷ್ಯನಾದರೂ. ಹೊಸಹೊಸ ಬದಲಾವಣೆಗಳಿಗೆ ಒಗ್ಗಿಕೊಳ್ಳುವವ. ' ಹೊಸಲು ನೋಡಿ ಬಸಿರಾದಂತೆ ' ತಾನೂ ವಿಧಾನಸಭೆಯ ಚುನಾವಣೆಗೆ ನಿಲ್ಲಲು ಬಯಸಿದ ಚೆನ್ನಪ್ಪನ ಮಾತುಗಳು ಒರಟಾದರೂ ಮನಸ್ಸು ಮಾತ್ರ ತುಂಬ ಒಳ್ಳೆಯದು. ಹಣಮಂತನ ಚಾದಂಗಡಿಯಲ್ಲಿ ಹರಿಜನರ ಪ್ರವೇಶ. ತೋಟದಾಳು ಬಸಣ್ಣೆಯನ್ನು ಕಾಣುವ ದೃಷ್ಟಿ. ತಾತೋಬಾನ ಕುರಿತಾದ ತಿರಸ್ಕಾರ. ಗಂಗಪ್ಪನಿಗೆ ಅಂತರ್ಜಾತಿ ವಿವಾಹದ ಬಗ್ಗೆ ಹೇಳುವ ಹಿತನುಡಿಗಳು. ಹರಿಜನಕೇರಿಯ ಉದ್ಧಾರಕ್ಕೆ ಅವನು ಕೊಟ್ಟ ನೈತಿಕ ಬೆಂಬಲ - ಇವುಗಳೆಲ್ಲ ಚೆನ್ನಪ್ಪ ದೇಸಾಯಿಯ ಹೃದಯವೈಶಾಲ್ಯಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ. ತಂದೆಯಲ್ಲಿ ಅಳಿದುಳಿದ ಒಂದಿಷ್ಟು ಅಹಂಗಳನ್ನು ಪ್ರಕಾಶ ತನ್ನ ವಿದ್ಯಾಸಂಸ್ಕಾರದಿಂದ ಸರಿಪಡಿಸಿದ್ದ.

ರೇಣುಕಿ ಗುಲಾಬಿಯ ತಾಯಿ. ಬೆನಕಟ್ಟಿಯ ನಬಿ ರೇಣುಕಿಯ ಖಾಯಂ ಗಿರಾಕಿ. ಹಸಿಬಿಸಿ ಮನಸ್ಸಿನ ಗುಲಾಬಿಗೆ ತಾಯಿಯ ದೈನಂದಿನ ಸರಸ-ಸಲ್ಲಾಪಗಳು. ಅದೀಗ ಯೌವ್ವನದಲ್ಲಿ ಕಾಲಿಡುತ್ತಿದ್ದ ಅವಳ ಮನಸ್ಸು ಲಂಗು-

---

೧೦೮. ದು. ನಿಂ. ಬೆಳಗಲಿ : ದೇವದಾಸಿ. ಪುಟ ೭

೧೦೯. ದು. ನಿಂ. ಬೆಳಗಲಿ : ದೇವದಾಸಿ. ಪುಟ ೨೩-೨೪

ಲಗಾಮಿಲ್ಲದ ಕುದುರೆಯಂತೆ ಸಹಜ ಉದ್ರೇಕಗೊಳ್ಳುವಂತೆ ಮಾಡಿದ್ದವು. ಗುಲಾಬಿ-ವಿಮಲರಿಬ್ಬರೂ ಬೆನಕಟ್ಟಿ ಹೈಸ್ಕೂಲಿನಲ್ಲಿ ಓದುತ್ತಿದ್ದ ಸಹಪಾಠಿಗಳು. ಕ್ಯಾಸೆಟ್ಟುಗಳ ಹುಚ್ಚಿನಿಂದಾಗಿ ಗುಲಾಬಿಯನ್ನು ' ಕ್ಯಾಸೆಟ್ ಗುಲಾಬಿ ' ಎಂದೇ ಎಲ್ಲರೂ ಅವಳನ್ನು ಕರೆಯುತ್ತಿದ್ದರು. ತಾನೂ ಸಿನಿಮಾ ತಾರೆಯಾಗಬೇಕೆಂಬ ಗುಲಾಬಿಯ ಮನಸ್ಸು ಸೆಕ್ಸ ಪುಸ್ತಕಗಳನ್ನೇ ಬಯಸುತ್ತಿತ್ತು- ಓದುತ್ತಿತ್ತು. ಗುಲಾಬಿಯ ನಡೆನುಡಿಗಳನ್ನು ಸೇರದ ವಿಮಲ. " ಮನ್ಯಾಗ ನಿಮವ್ವಗೂ ಗೊತ್ತಾಗೂದುಲ್ಲ ! ಭಾಳ ಸಲಿಗಿ ಕೊಟ್ಟಾರು. ಮನಸ್ಸಿಗಿ ಬಂಧಾಂಗ ಮಾಡ್ತಿ ಆತು ನಿನ್ನ ಮನಸ್ಸಿನ್ಯಾಗ ಇಂಥ ಹೊಲಸ ವಿಚಾರ ಇದ್ರ. ನೀ ನಮ್ಮನಿಗಿ ಬರಬ್ಯಾಡಾ. ನನ್ನ ಜೋಡಿ ಮಾತಾಡಬ್ಯಾಡಾ.... ಇದs ಕಡೀ ಮಾತು...." [೧೧೦] ಖಂಡತುಂಡವಾಗಿ ಹೇಳಿದಾಗ. ಸತ್ತನಾಯಿಯಂತೆ ನೆಲಕ್ಕೆ ಬಿದ್ದ ಕಾಮಪ್ರಚೋದಕ ಪುಸ್ತಕವನ್ನು ಎದೆಗವಚಿಕೊಂಡು ಗುಲಾಬಿ ಮನೆ ದಾರಿ ಹಿಡಿದಿದ್ದಳು. ' ಗುಲಾಬಿ 'ಯಷ್ಟೇ ಥಳಕು ಬಳುಕನ್ನು ಹೊಂದಿದ್ದ ಮಗಳಿಗೆ ಮುತ್ತು ಕಟ್ಟಿಸಿ. ರೊಕ್ಕವನ್ನು ಸಲಿಕೆಯಿಂದ ಬಳೆಯಬೇಕೆಂಬ ಯೋಚನೆಯಲ್ಲಿ ರೇಣಕಿ ಇದ್ದರೆ. ನಬಿ ಗುಲಾಬಿಗೆ ' ತಾರಾಲೋಕ 'ದಲ್ಲಿ ಸೇರಿಸಲು ಮಿರಜ ದಾರಿ ಹಿಡಿಸಿದ್ದ. ಗುಲಾಬಿಯನ್ನು ಅರಬ್ಬ್ ಮೂಲದ ಶೇಖ ಅಲ್ತಾಫನಿಗೆ ಮಾರಿ ಕೈತುಂಬ ಹಣಪಡೆದ ಖುಷಿಯಲ್ಲಿ ಬೆನಕಟ್ಟಿ ದಾರಿ ತುಳಿಯದೆ. ಮೋಜಿನಲ್ಲಿಯೇ ಅತ್ತಿತ್ತ ನಬಿ ತಿರುಗಾಡುತ್ತಿದ್ದರೆ. ಗುಲಾಬಿ ಕಾಮಪಿಪಾಸುಗಳ ಕೈಯಲ್ಲಿ ಹೊಸಗಿದ ಹೂವಿನಂತಾಗಿದ್ದಳು. ರೌರವನರಕದ ಪ್ರತ್ಯಕ್ಷ ಅನುಭವ ಪಡೆದ ಗುಲಾಬಿ ಅರೆಹುಚ್ಚಿಯಂತೆ ' ಕೆಂಪುದ್ವೀಪ 'ದಿಂದ ತಪ್ಪಿಸಿಕೊಂಡು ' ಕೊಂಡವನ ' ಕೈಯಿಂದ ಜಾರಿ ಬರಬೇಕಾದರೆ ಸಾಕುಬೇಕಾಯಿತು. ಕೊನೆಗೂ ಜಾನವಾಡದ ಆಸರೆಗೆ ಬಂದಾಗ ತೊಯ್ದು ಗುಬ್ಬಿಯಂತೆ ಮುದುಡಿ ಮುದ್ದೆಯಾಗಿ ಹೋಗಿದ್ದಳು. ಇತ್ತ ರೇಣಕಿ ಮಗಳ ಅಪಹರಣದ ನೋವು ತಾಳಲಾರದೆ ಬಾವಿಹಾರಿ ಪ್ರಾಣತೆತ್ತರೆ. ನಬಿಯ ಪ್ರಾಣ ಹಾರುಗೇರಿ ಕ್ರಾಸಿನಲ್ಲಿ ಬಿದ್ದಿತ್ತು.

ಸಾಬ್ಯಾ ಹೆಣ್ಣೂ ಅಲ್ಲದ ಗಂಡೂ ಅಲ್ಲದ ' ಪ್ರಾಣಿ '. ಕೇರಿಯಲ್ಲಿ ಅದೊಂದು ವಿಶೇಷ ಜೀವಿ. ನಪುಂಸಕ ಗಂಡುಜೋಗಿ. ತಲೆಗೂದಲು ಬಿಟ್ಟು ಸೀರೆಯುಟ್ಟು. ಎಲ್ಲಮ್ಮನ ಭಕ್ತನಾದ ಅವನನ್ನು ' ಸಾಬ್ಯಾ' ಎಂದು ಯಾರಾದರೂ ಕರೆದರೆ ಬಲು ಸಿಟ್ಟು. " ನನಗ ಸಾಬ್ಯಾ ಅನಬ್ಯಾಡಾ.... ಸಾಬಿ ಅನ್ನು. ಬೇಕಾರ ಸಾಬತಿ ಅನ್ನು ಸಾಬವ್ವಾ ಅನ್ನು. ಇನಾ ಬೇಕಾರ ಸಾಬತ್ತಿ ಅನ್ನು.... ನೀ ನನಗ ಗಂಡ್ಸರ ಹೆಸರ್ಲೇ ಕರಿಬ್ಯಾಡಾ ನೋಡವಾ. ಕರಿಬ್ಯಾಡಾ ಹಾ ಆಂ...." [೧೧೧] ಎಂದು ಮೈಮಣಿಸುತ್ತ ಹಾವಭಾವದಿಂದ ಬಲಗೈ-ಎಡಗೈ ಹೊರಳಿಸುತ್ತ ತನ್ನನ್ನು ' ಸಾಬ್ಯಾ' ಎಂದವರಿಗೆಲ್ಲ ಹೇಳುತ್ತಿದ್ದ. ಸಾಬ್ಯಾ ವಿಮಲಾಳಿಗಾಗಿ ಒಂದು ಶ್ರೀಮಂತ ಗಿರಾಕಿಯೊಂದನ್ನು ತಂದು. ಲಕ್ಕಿಯಿಲ್ಲದ ಸಮಯದಲ್ಲಿ ಬಂದು ಬಾಲಬಿಚ್ಚಿದರೆ. " ನನ ಹಾಂಟ ಕುಡದವ್ನ. ಸರಳ ಇಲ್ಲಿಂದ ಹೋಗ್ತಿಯೋ. ಏನ್ ' ಚಪ್ಪಲಿ ' ತಗೋಲ್ಲ್ಯೋ ! ನೀ ಗಂಡ್ಸರೆ ಇರು. ಹೆಣ್ಣಾರೆ ಇರು. ಅದನ್ನ ತಗೊಂಡ ಏನ ಮಾಡೂದೈತ್ಯೋ ಚೋದು ! ಇನ್ನೊಮ್ಮೆ ನಮ್ಮನೀ ಕಟ್ಟಿಕಲ್ಲ ಏರಿದ್ರ ಚರ್ಮಾ ಸುಲೀತೀನು ನಾಚ್ಚಿಗೇಡಿ...." [೧೧೨] ಎಂದು ಅವನ

೧೧೦. ದು. ನಿಂ. ಬೆಳಗಲಿ : ದೇವದಾಸಿ. ಪುಟ ೨೯

೧೧೧. ದು. ನಿಂ. ಬೆಳಗಲಿ : ದೇವದಾಸಿ. ಪುಟ ೩೫

೧೧೨. ದು. ನಿಂ. ಬೆಳಗಲಿ : ದೇವದಾಸಿ. ಪುಟ ೩೬

ಬಾಲಕತ್ತರಿಸಿದ್ದಲ್ಲದೆ. " ಯಾವ ಸಾವ್ಕಾರು ಶ್ರೀಮಂತ್ರು ಬೇಕಾದರ ನೀನs ಇಟ್ಟಗೋ. ಹೆಣ್ಣಂತ ಬ್ಯಾರೆ ಹೇಳ್ತಿ.... ಹೋಗು ನೀನs...." ೧೧೩ ಎಂದು ಮಂಗಳಾರತಿ ಮಾಡಿ ಕಳಿಸಿದಳು. ಸಾಬ್ಯಾ ಅವಳ ಉಗ್ರ ಅವತಾರಕ್ಕೆ ಹೆದರಿ. ಯವ್ವಾ ಇಮಲೀ ಮೆಯ್ಯಾಗ ದೇವಿ ಬಂದಾಳ್ರೆ ಎಂದೆನ್ನುತ್ತ ಅಲ್ಲಿಂದ ಹಾರ್ಗಾಲ ಬಿದ್ದವ. ಮುಂದೆ ಅವಳೆಲ್ಲಿಯಾದರೂ ಭೇಟಿಯಾದಾಗಲೆಲ್ಲ ಮರೆಯಾಗುತ್ತಿದ್ದ.

ತಾತೋಬಾ ಕೇರಿಯ ಹಿರಿಯ: ಶ್ರೀಮಂತ ಬೇರೆ. ತನ್ನ ಹೆಣ್ಣುಮಕ್ಕಳನ್ನೆಲ್ಲ ಮುಂಬಯಿಯ ಕೆಂಪುದ್ವೀಪಕ್ಕೆ ಕಳಿಸಿ ಹಣಗಳಿಸುತ್ತಿದ್ದರೆ ಪೋಲಿಸು. ರಾಜಕಾರಣಿಗಳನ್ನು ಕೈಗೆ ತೆಗೆದುಕೊಂಡು ಅವರಿಗೂ ತುಪ್ಪ ಒರಿಸಿ. ' ದೊಡ್ಡವ್ರಿಗೆ ' ಹೆಣ್ಣುಗಳನ್ನು ಸಪ್ಲೈ ಮಾಡುತ್ತ. ಕೆಲವರನ್ನು ' ಕೊಂಡು ' ಮುಂಬೈಗೆ ಮಾರುತ್ತ ತನ್ನ ಶ್ರೀಮಂತಿಕೆಯನ್ನು ಇನ್ನಷ್ಟು ಹೆಚ್ಚಿಸಿಕೊಂಡಿದ್ದ. ಚಂದ್ರಾ ತಾತೋಬಾನ ಹಿರಿಯ ಮಗಳು. ಮುಂಬೈನಲ್ಲಿ ಅರವಿಂದ ಪರಮಾರನೆಂಬ ದೊಡ್ಡಕುಳವನ್ನು ಹಿಡಿದು ರೊಕ್ಕ ಹೆಕ್ಕುತ್ತಿದ್ದವಳು. ಜಾನವಾಡಕ್ಕೆ ಬಂದಾಗಲೆಲ್ಲ ' ಹೊಸಮಾಲು 'ಗಳನ್ನು ಖರೀದಿಸುವವಳೇ. ಬಾಗಿ ಜಗದಾಳ ಪರಪ್ಪನ ಮಗಳು. ಒಂದಿಷ್ಟು ಬಡವನಾದ ಪರಪ್ಪ ಹೆಂಡತಿ ಚಂದ್ರಿಯ ತಾಳಕ್ಕೆ ತಕ್ಕಂತೆ ಕುಣಿಯುವವ. ಬಾಗಿ ಚಿಕ್ಕವಳಿದ್ದಾಗಲೇ ಅವಳಿಗೆ ಮುತ್ತು ಕಟ್ಟಿಸುವ ಹರಕೆ ಹೊತ್ತ ಚಂದ್ರಿ ಅದನ್ನೀಗ ಪೂರ್ಣಗೊಳಿಸಿ ಅವಳನ್ನು ಚಂದ್ರಾಳೊಂದಿಗೆ ಮುಂಬೈಗೆ ಕಳಿಸಿಕೊಡಲು ' ಮುಂಗಡ ' ಕೂಡ ಪಡೆದಿದ್ದಳು. ಇದನ್ನರಿತ ವಿಮಲಳಿಗೆ ಕೋಪ ಬಂದರೆ. ಪಾರ್ವತಿಗೆ ಇದನ್ನು ಹೇಗಾದರೂ ತಡೆಯಬೇಕೆಂಬ ಹಂಬಲ. ಏನೂ ಅರಿಯದ ಬಾಗಿಗೆ ಮುತ್ತುಕಟ್ಟಿ ಸಾಂಕೇತಿಕ ಲಗ್ನದ ಕಾರ್ಯ ಮಾಡಿ. ಹಿರಿಯ ಜೋಗತಿ ಚೌರವ್ವ. " ಉಣ್ಣಾಕ ಇದs ಚರಿಗೀ ಖಾಯಂ ಉಪ್ಯೆಕ ಮಾಡಿಕೋಬೇಕು. ಜೋಗಾಡ್ಲಾಕ ಇದs ಪರಡೀ ತಗೊಂಡ ಹೋಗಬೇಕು. ಇವೆಡ್ಡೂ ದೇವಿ ಸಂಪತ್ತಂತ ತಿಳಿ...." ೧೧೪ ಎಂದು ಪರಡೀ. ಚರಿಗೀ ಕೊಡುತ್ತ. ದೇವದಾಸಿ ಪಾಲಿಸಬೇಕಾದ್ರ ನಿಯಮಗಳನ್ನು ಉಪದೇಶಿಸಿದಳು. ಬಲಿಕೊಡುವ ಪ್ರಾಣಿಯಂತೆ. ಏನೂ ಅರಿಯದ ಮುಗ್ದ ಬಾಗಿ ಪಿಳಿಪಿಳಿ ಕಣ್ಣುಬಿಡುತ್ತ ಹಿರಿಯಳ ಮಾತುಗಳನ್ನು ಕೇಳುತ್ತಿತ್ತಷ್ಟೇ. ಊಟಕ್ಕೆ ತಯಾರಾಗುವ ಸಂದರ್ಭದಲ್ಲಿಯೇ ಪೋಲಿಸ ಜೀಪ ಬಂದು ನಿಂತಾಗ. ಅದರಿಂದಿಳಿದ ಪೋಲಿಸು. ವೀರೇಶಿ. ಪ್ರಕಾಶರನ್ನು ಕಂಡ ಜನ ಸಾವಕಾಶವಾಗಿ ಕರಗಿಹೋದರೆ ನರಿಬುದ್ಧಿಯ ತಾತೋಬಾ ಜಾಣತನದಿಂದಲೇ ' ಖಾಕಿ 'ಗಳ ಕಿಸೆ ಬೆಚ್ಚಗೆ ಮಾಡಿ ಬಾಗಿಯನ್ನು ಅಲ್ಲಿಂದ ದೂರವಿರಿಸಿದ್ದ. ಕಣ್ಣಾಮುಚ್ಚಾಲೆಯಾಡಿದಂತೆ ಆ ಪ್ರಸಂಗ ಕೈತಪ್ಪಿ ಹೋಗಿ ಪ್ರಕಾಶ. ವೀರೇಶಿಗೆ ಕೈಕೈ ಓಸುಕಿಕೊಳ್ಳುವಂತಾದರೆ. ಪಾರ್ವತಿ. ವಿಮಲಾ ಬೆಕ್ಕಸ ಬೆರಗಾಗಿ ನೋಡುತ್ತಿದ್ದರು. ಪ್ರಕಾಶನಿಗೆ ಕೇರಿಯ ಭಾನಗಡಿಗಳೆಲ್ಲ ತಲೆಚಿಟ್ಟು ಹಿಡಿಸುತ್ತವೆ. ಗುಲಾಬಿಯ ಅಪಹರಣ. ರೇಣಕಿಯ ಆತ್ಮಹತ್ಯೆ. ಲಕ್ಕಿಯ ಹುಚ್ಚು. ಸಾಬ್ಯಾನ ಆಟ. ಸಾಲದೆಂಬಂತೆ ಬಾಗಿಯ ಪ್ರಕರಣ ಹೀಗೆ ಒಂದರ ಮೇಲೊಂದರಂತೆ ನಡೆಯುತ್ತಿದ್ದ ಭಾನಗಡಿಗಳನ್ನು ನೆನಸಿಕೊಂಡಷ್ಟು ಮೈಉರಿಯುತ್ತಿತ್ತು. ಅದಕ್ಕಾಗಿ ಆತ ಟೊಂಕ ಕಟ್ಟಿ ನಿಂತು ' ಜಾನುವಾರು 'ಗಳಂತಿದ್ದ ಕೇರಿಯ ಜನರನ್ನು ಸುಧಾರಿಸಲೇಬೇಕೆಂದು ಪಣತೊಟ್ಟ.

---

೧೧೩. ದು. ನಿಂ. ಬೆಳಗಲಿ : ದೇವದಾಸಿ. ಪುಟ ೩೭

೧೧೪. ದು. ನಿಂ. ಬೆಳಗಲಿ : ದೇವದಾಸಿ. ಪುಟ ೫೦

ಕೇರಿಯಲ್ಲಿ ಅನೇಕ ಅನಾಚಾರ-ಭಾನಗಡಿಗಳು ನಡೆಯುತ್ತಿದ್ದಂತೆಯೇ. ಕೇರಿಯ ಏಕಮಾತ್ರ ದೇವಾಲಯ ದುರ್ಗವ್ವನ ಗುಡಿ. ಅದೇನೋ ಕಲ್ಲುಗಳಿಂದ ನಿರ್ಮಾಣವಾಗಿದ್ದು ಗಟ್ಟಿಮುಟ್ಟಾಗಿದೆ. ಕಸ-ಕೊಳೆ. ಎಲೆಯಡಿಕೆ. ತಂಬಾಕು. ತಿಂದು ಉಗುಳಿದ ಕೆಂಪು-ಹಳದಿ ಕಲೆಗಳು. ಅಲ್ಲಲ್ಲಿ ಒಣಗಿದ ಸಿಂಬಳ. ಉಗುಳಿನ ಮಿಂಚು. ಬೀಡಿತುಂಡುಗಳು. ತಂಬಾಕಿನ ಕರಕು. ತಿಂಡಿತಿಂದು ಅಲ್ಲಲ್ಲಿ ಚೆಲ್ಲಿದ ಎಣ್ಣೆಯ ಕಾಗದದ ಚೂರುಗಳು. ಮುಸುರೀ ಕಣಗಳಿಗೆ ಮುತ್ತಿದ ನೊಣಗಳು. ಹರಕು ಚಿಂದಿ. ಕಸಕಡ್ಡಿ. ಉಸುಬುಮಣ್ಣು. ಹತ್ತಾರುವರ್ಷಗಳಿಂದ ಸುಣ್ಣಬಣ್ಣ ಕಾಣದ ಆ ಗುಡಿಯ ಗೋಡೆಗಳಿಗೆ ತಗಣಿ ಒರೆದ. ಆ ಒಣಗಿದ ರಕ್ತದಿಂದಲೇ ಮೂಡಿಸಿಂತ ನೂರಾರು ಬಗೆಯ ಚಿತ್ತಾರಗಳು. ರಕ್ತಬೀಜಾಸುರನಂತೆ ನಿರಾಳವಾಗಿ ಇನ್ನೂ ತಮ್ಮ ವಂಶಾಭಿವೃದ್ಧಿಯಲ್ಲಿ ತೊಡಗಿದ್ದು. ಈಗಾಗಲೇ ಅನೇಕ ಬಗೆಯ ಶೋಷಣೆಗೆ ಒಳಗಾದವರನ್ನೇ ಹಗಲುರಾತ್ರಿ ಶೋಷಿಸುತ್ತ ಸಂದುಗೊಂದುಗಳಲ್ಲಿ ಬೀಡುಬಿಟ್ಟ ತಗಣಿಗಳು. ಗುಡಿ ನೋಡಿದರೆ ಸಾಕು ವಾಕರಿಕೆ ಬರುವಂತಿತ್ತು. ಅದನ್ನೆಲ್ಲ ಸ್ವಚ್ಛಗೊಳಿಸಿ ಸುಣ್ಣಬಣ್ಣ ಹಚ್ಚುವ ಕೆಲಸಕ್ಕೆ ಪಾವಾಡಿ. ವೀರೇಶಿ ಒಪ್ಪಿಕೊಂಡು. ಅದನ್ನು ಚೊಕ್ಕಟಗೊಳಿಸಿ ಅದಕ್ಕೊಂದು ಹೊಸಕಳೆ ತಂದುಕೊಟ್ಟಿದ್ದರು. ಕೈಬೆರಳ ಮೇಲೆ ಎಣಿಸುವಷ್ಟು ಜನರು ಸಭೆಯಲ್ಲಿ ಪಾಲ್ಗೊಂಡಿದ್ದರು. ಸಾಂಗಲಿಯ ಪರಿವರ್ತನ ಸಂಸ್ಥೆಯ ಪದಾಧಿಕಾರಿಗಳು. ಅತಿಥಿಗಳಾದರೆ. ತಾತೋಬಾನನ್ನೇ ಆ ಸಭೆಯ ಅಧ್ಯಕ್ಷನನ್ನಾಗಿ ಮಾಡಿದ್ದರು. ಪ್ರಕಾಶ. ಸುಧಾರಣೆಯ. ಜನರ-ಕೇರಿಯ. ವೇಶ್ಯೆಯರ ಬದುಕಿನ ಸ್ಥಿತಿ-ಗತಿಗಳ ಬಗ್ಗೆ ಪ್ರಾಸ್ತಾವಿಕವಾಗಿ ವಿವರಿಸಿದ. 'ದೇವದಾಸಿ' ಪದ್ಧತಿಯ ಮೇಲೆ ಪಿಎಚ್.ಡಿ. ಮಾಡುತ್ತಿದ್ದ ಮಾರುತಿ ಗಾಯಕವಾಡ ಸುದೀರ್ಘವಾಗಿ 'ದೇವದಾಸಿ' ಪದ್ಧತಿಯನ್ನು ವಿವರಿಸಿ ಅದೊಂದು ಹೀನ ಸಂಪ್ರದಾಯವೆಂದು ಹೇಳಿದ ಎಳೆಯನ್ನೇ ಹಿಡಿದ ಅವಿನಾಶ. "ವೇಶ್ಯಾವೃತ್ತಿ ಆಚರಿಸಾವ್ರು ಇದಕ್ಕೆ ಸಹಾಯ ಮಾಡಾವ್ರು. ಕರ್ಕೊಂಡ ಬಂದವ್ರು ಇದರಿಂದ ಉಪಜೀವನ ಮಾಡಾವ್ರು. ಒತ್ತಾಯದಿಂದ ಈ ವೃತ್ತಿಗೆ ಹಾಕಾವ್ರು.... ಅಂದ್ರ ದೇವದಾಸಿ ಆದಾವ್ರಿಗೂ ಮತ್ತು ಬಿಡಾವ್ರಿಗೂ ಶಿಕ್ಷಾ ಐತಿ...." ೧೧೫ ಎಂದೆನ್ನುತ್ತ. ಮಾರುತಿ ಗಾಯಕವಾಡ ಮಾಡುವ ಸಂಶೋಧನಾ ಸರ್ವೆಗೆ ಸಹಕರಿಸುವಂತೆ ಹೇಳುತ್ತ. 'ದೇವದಾಸಿ'ಯಿಂದ ಹೊರಬಂದವರಿಗೆ ಅವರ ಉಪಜೀವನಕ್ಕಾಗಿ ಸರಕಾರದಿಂದ ಸಹಾಯ ಕೊಡಿಸಲಾಗುತ್ತದೆಯೆಂದು ತಿಳಿಹೇಳಿದ್ದ. ಮುಂದೆ ಇದೇ 'ಪರಿವರ್ತನ್' ಸಂಸ್ಥೆಯ ಅವಿನಾಶ. ಮಾರುತಿ. ರಾಜು ಮೋಳೆ. ಶಿಲ್ಪಾ ಅಷ್ಟೇಕರ. ಸುಲಭಾ ತಾಸಗಾಂವ್ಕರ. ಕುಸಮಾ ಕುಲಕರ್ಣಿ ಮತ್ತೊಮ್ಮೆ ಕೇರಿಗೆ ಬಂದು 'ಜಟಾನಿರ್ಮೂಲನ' ಕಾರ್ಯಕ್ರಮ ನಡೆಸಿ ಯಶ್ವಿಯಾಗುತ್ತಾರೆ. ಮೊದಮೊದಲು ತಮ್ಮ ಜಿಡ್ಡುಗಟ್ಟಿದ ಜಡೆ ತೆಗೆಸಿಕೊಳ್ಳಲು ನಿರಾಕರಿಸಿದ ಜೋಗತಿಯರು. ಸತ್ಯಕ್ಕ. ನಾಗಿ ಮೊದಲಾದ ನಾಲ್ಕೈದು ಜೋಗತಿಯರ ತಲೆಯ ಸಿಕ್ಕು ಬಿಡಿಸಿದ್ದು. ಕತ್ತರಿಸಿದ್ದು. 'ಜಟಾನಿರ್ಮೂಲನ' ಕಾರ್ಯಕ್ರಮದ ಯಶಸ್ಸು ಎಂದೇ ಹೇಳಬಹುದು. ಮುಂದೆ ದೇವದಾಸಿ ಪುನರ್ವಿವಾಹ ಕಾರ್ಯಕ್ರಮವೊಂದನ್ನು ಹಮ್ಮಿಕೊಳ್ಳಲು ಯೋಜಿಸಿದ 'ಪರಿವರ್ತನ' ಸಂಘದವರಿಗೆ ಇದು ಭಾರೀ ಚಾಲನೆಯನ್ನೇ ತಂದುಕೊಟ್ಟಿತು.

---

೧೧೫. ದು. ನಿಂ. ಬೆಳಗಲಿ : ದೇವದಾಸಿ. ಪುಟ ೧೧೧

ಈ ಮಧ್ಯೆ ಲಕ್ಕಿ ಬೆನಕಟ್ಟಿ ಸಂತೆಯಲ್ಲಿ ಕಾಲು ಮುರಿದುಕೊಂಡು ಆಸ್ಪತ್ರೆ ಸೇರಿದ್ದಳು. ಈಗ ಮತ್ತಷ್ಟು ಹುಚ್ಚು ಹಿಡಿದವಳಂತೆ ವರ್ತಿಸುತ್ತಿದ್ದಳು. ಏನೇನೋ ವಟಗುಡುವ ಅವಳಿಗೆ ' ದೇವರಭ್ರಾಂತಿ 'ಯೇ ಹಿಡಿದಿತ್ತು. ವಿಮಲ ಎಸ್.ಎಸ್.ಎಲ್.ಸಿ. ಫಸ್ಟಕ್ಲಾಸ ಪಾಸಾದರೂ. ತಾಯಿಯ ಚಿಂತೆಯಲ್ಲಿ ಅದೇನು ದೊಡ್ಡದೆನಿಸಿರಲಿಲ್ಲ. ಲಕ್ಕಿ ಕೊನೆಗಾಲದಲ್ಲಿ ತನ್ನ ವೃತ್ತಿಗೆ ಹೇಸಿಕೆಪಟ್ಟಿದ್ದಳಲ್ಲದೆ. " ತಂಗೀ. ಆ ಹರ್‍ಕಿಗಿರ್‍ಕಿ ಹಾಳಾಗಲಿ. ಹೋಗಲಿ. ಅದ ಬ್ಯಾಡಾವಾ ತಂಗೀ ಬ್ಯಾಡಾ.... ಯಲ್ಲವ್ವೇನ ತೆಲ್ಯಾಗ ಭಾಂಡಾರ ಹಾಕೋರಿ. ಸೂಳಿತನಾ ಮಾಡ್ರಿ ಅಂತ ಎಲ್ಲಿ ಹೇಳ್ಯಾಳು....? ಅದೂ ಒಂದು ಹುಚ್ಚುಚ್ಚಾರ ನಡತೀನ ಕಾರ್‍ಣ.... ನೀ ಚಲೂ. ಉತ್ಮ ಹುಡುಗನ್ನ ಲಗ್ನಾ ಆಗಾಕೆ. ನಿನ ಮನಸ್ಗಿ ಬಂದಾವ್ನ ನೀ ಆಗ...." ೧೧೬ ಎಂದೆನ್ನುತ್ತ. " ....ಸೂಳ್ಯರ ಜಲ್ಮಾ ಅದ ಜಲ್ಮೇನs ತಂಗೀ....! ನಾಯಿಗಿಂತ ಕಮೀ.... ಇಮಲಾ. ನೀ ಚಲುತ್ನಾಂಗಿ ಬಾಳು. ಅಂದಾಗ ನಿನಗ ಸುಖಾ ಆಗಲೆಂಥ ಹೇಳಿದ. ಇಮುಲಾ. ಈ ಇಸ್ವಾಸಗೇಡಿ ಮತ್ತ ಮೋಸಾ ಮಾಡೂ ಕೆಟ್ಟಕೆಟ್ಟ ಗಂಡ್ಸರ ಜೋಡಿ ಇರೂದು ಅದೆಂತಾ ಸುಕಾನ....? ಅದೇನ ಸುಕಾ....? ಥೂ ಹೊಲಸ ಜಲ್ಮಾ ತಂದ....! ಬಚ್ಚಲಮೋರ್‍ಯಾನ ಕೊಳಚಿ ಇದ್ದಾಂಗ ತಂಗೀ...." ೧೧೭ ಎಂದೆನ್ನುವ ಲಕ್ಕಿಯಲ್ಲಿ ದಾರ್ಶನಿಕ-ವೈಚಾರಿಕ ಸ್ವಾನುಭವವೇ ಸೇರಿಕೊಂಡಿತ್ತು. ತಾಯಿಯ. " ನಾಕ ಮಂದ್ಯಾಗ ಹೌದ ಅನ್ನಿಕೋ ಹಾಂಗ ಚೆಂದಾಗಿಬಾಳ್ವೆ ಮಾಡ ಬ್ಯಾಡವಾ ತಂಗೀ. ಆ ಹೊಲಸ ಜಲ್ಮ ಬ್ಯಾಡಾ. ಇದ ನನಗs ಮುಗದ ಹೋಗಲಿ.... ಸಿಕ್ಕಸಿಕ್ಕಾವ್ರ ಜೋಡಿ ಮಕ್ಕೋಬ್ಯಾಡಾ.... ಸಿಕ್ಕಸಿಕಾವ್ನ ಕರ್‍ಕೋಬ್ಯಾಡಾ.... ಮನಿಗ ಬರೂ ಗೇಣ್ಯಾರೆಲ್ಲಾ ಮೋಸಾ ಮಾಡಾವ್ರs.... ಚಲೂ ಒಬ್ಬ ಗಂಡನ್ನ ನೋಡಿ ಲಗ್ನಾ ಆಗಾಕೆ.... ಈರೇಶಿ...." ೧೧೮ ಎಂದ ಮಾತುಗಳು ವಿಮಲಳ ಬದುಕಿನ ದಿಕ್ಕಿಗೆ ಹೊಸ ಚೈತನ್ಯ ತಂದುಕೊಟ್ಟಿದ್ದವು. ಮರುದಿನ ಲಕ್ಕಿಯ ತುಂಡು ತುಂಡಾದ ದೇಹದ ಭಾಗಗಳು ರೇಲ್ವೆ ಹಳಿಯ ಮೇಲೆ ಬಿದ್ದಿದ್ದವು. ವಿಮಲಳ ಊರುಗೋಲೂ ಮುರಿದಂತಾದಾಗ. ಪಾರ್ವತಿಯೇ ತಾಯಿಸ್ಥಾನದಲ್ಲಿ ನಿಂತಳು. ಪ್ರಕಾಶ. ವೀರೇಶಿಯರಂತೂ ಇದ್ದೇ ಇದ್ದರು.

ಗೋಕಾಕದ ಬೀಗರು ಪ್ರಕಾಶನ ತಂಗಿಯ ನಿಶ್ಚಯಕ್ಕಾಗಿ ಬಂದವರು. ಅಲ್ಲಿದ್ದ ವಿಮಲಳು ಹೊಲೆಯರವಳೆಂದರಿತು. ಅವಳಿಗೆ ಅಪಮಾನಗೊಳಿಸಿದ ಕ್ರಮ ಪ್ರಕಾಶನಿಗೆ ಸರಿಬರದೆ ಅವರ ಬೀಗತನವನ್ನೇ ಬೇಡವೆಂದಿದ್ದ: ಚೆನ್ನಪ್ಪ ಮಗನ ಮಾತಿಗೆ. " ತಮಾ ಇವ್ರೇನ ಖರೇಲಿಂಗಾಯ್ತರೇನ....? ಈ ಸೂಳೀಮಕ್ಳು.... ಅಲ್ಲಲ್ಲ.... ಇವ್ರು ಮನ್ಯಾಗ ಬಸವಣ್ಣನ ಫೋಟೋ ಹಾಕ್ಯಾರು ಪಡಸಾಲಿ ತುಂಬ ಶರಣರ ವಚನಗಳಿಗೆ ಕಟ್ಟು ಹಾಕಿಸಿ ಗ್ವಾಡಿಗಿ ತೂಗ ಬಿಟ್ಟಾರು. ಈ ಸ್ವಾಮಿಗೋಳ ವಚನಾ ಹೇಳ್ತಾರು. ಮತ್ತ ಈ ಹುಡುಗೀ ಹೊಲ್ಯಾರಕ್ಕಂತ ಅಪಮಾನ ಮಾಡ್ತಾರು.... ಪೈಲೇನ ಇವ್ರು ಇರೂದ ಗೊತ್ತಿದ್ರ ಮನೀಗಿ ಬರಗೊಡ್ತಿರಲಿಲ್ಲ...." ೧೧೯ ಎಂದು ಚೆನ್ನಪ್ಪ ವಿಮಲಾಳನ್ನು ಅಪಮಾನಗೊಳಿಸಿದ್ದಕ್ಕೆ ದಾನಯ್ಯನನ್ನು ಪಲ್ಲಿ

---

೧೧೬. ದು. ನಿಂ. ಬೆಳಗಲಿ : ದೇವದಾಸಿ. ಪುಟ ೨೯

೧೧೭. ದು. ನಿಂ. ಬೆಳಗಲಿ : ದೇವದಾಸಿ. ಪುಟ ೨೦೦

೧೧೮. ದು. ನಿಂ. ಬೆಳಗಲಿ : ದೇವದಾಸಿ. ಪುಟ ೨೭೪

೧೧೯. ದು. ನಿಂ. ಬೆಳಗಲಿ : ದೇವದಾಸಿ. ಪುಟ ೩೦೨

ಜಾಡಿಸಿದಂತೆ ಜಾಡಿಸಿಹಾಕಿದ್ದ. ಸಂಬಂಧ ಮುರಿದ ಬಗ್ಗೆ ಅಷ್ಟೇನು ನೋವಾಗದಿದ್ದರೂ ವಿಮಲಾಳನ್ನು ಹೀಯಾಳಿಸಿದ್ದಕ್ಕೆ ತಂದೆ-ಮಕ್ಕಳಿಬ್ಬರಿಗೂ ನೋವಾಗಿತ್ತು. ಮಹಾಂತನ ಬಲವಾದ ಇಚ್ಛೆ ಹಾಗೂ ಸಂಬಂಧ ಮುರಿದುದಕ್ಕೆ ಜಾನವಾಡದ ಕೆಲವು ಆಗದವರೇ ಕಾರಣವೆಂದರಿತಾಗ. ಗೋಕಾಕದವರು ಮತ್ತೆ ಶಾಲಿನಿಯನ್ನು ತಮ್ಮ ಸೊಸೆಯನ್ನಾಗಿ ಸ್ವೀಕರಿಸಲು ತಯಾರಾದುದು ಸತ್ಯಕ್ಕೆ ಸಿಕ್ಕ ಜಯವಾಗಿತ್ತು.

ಪ್ರಕಾಶ. ವೀರೇಶಿಯರ ಪ್ರಯತ್ನದ ಫಲವಾಗಿ ಜಾನವಾಡ ಕೇರಿಗೆ ಹೊಸಚೈತನ್ಯ ಬಂದಂತಾಯಿತು. ಬಾಲವಾಡಿಯೊಂದನ್ನು ತೆರೆದಾಗ. ಸಹಜವಾಗಿಯೇ ಅನೇಕರಿಂದ ದೇಣಿಗೆ ಹರಿದು ಬಂತು. ವಿಮಲಾ. ಶೋಭಾ. ಶಾಲಿನಿಯರು ಶಿಕ್ಷಿಕಿಯರಾಗಿ ಸೇರಿಕೊಂಡರೆ. ಪಾರ್ವತಿ ಆಯಾ ಆದಳು. "ಹೊಲ್ಯಾರು ಉತ್ತಮ ಹುಡುಗರ್‍ಗಿ ಸಾಲಿಬರ್‍ಯಾಣ ಕಲಿಸ್ತಾರಂತ...."[೧೨೦] ಎಂದು ಅನೇಕರು ಮೂಗು ಮುರಿದರೂ. ವಿದ್ಯಾರ್ಥಿಗಳ ಸಂಖ್ಯೆ ನೂರು ದಾಟಿದ್ದು ಸೋಜಿಗವಷ್ಟೇ ಅಲ್ಲ ಸತ್ಯಸಂಗತಿ. ಬಾಲವಾಡಿಯ ಪಕ್ಕದ ಕಟ್ಟೆಗೆ ಕೂತು ಶಿಳ್ಳು ಹಾಕುತ್ತಿದ್ದ ಶಾಂತವೀರನನ್ನು ಉಪಾಯವಾಗಿ ಅಲ್ಲಿಯ ಜಾಗಬಿಡಿಸಿ. ರಾಜಕೀಯ ಆಶ್ರಯವಿದ್ದ ಅವ್ವಪ್ಪನಿಗೂ ಪಾಠಕಲಿಸಲಾಯಿತು. ಇದೇ ಸೇಡಿಗಾಗಿ ಕಾತ್ರಾಳದಿಂದ ಭರಮೂನನ್ನು ಕರೆತಂದು ಗೂಂಡಾಗಿರಿ ಮಾಡಿಸಲು ಯೋಚಿಸಿದ ಕರಬಸಪ್ಪ. ನಿಜಗುಣಿ ಕೈಕೈ ಹಿಸುಕಿಕೊಳ್ಳುವಂತಾಯಿತು. ಕಾತ್ರಾಳದ ಭರಮು. ಹೆಂಡತಿ-ಮಗಳನ್ನು ಏಕಕಾಲಕ್ಕೆ ಕೊಚ್ಚಿಹಾಕಿ ಜೈಲಿಗೆ ಹೋಗಿ ಬಂದವ. ವಿಮಲ ಸೋದರತ್ತೆಯ ಮಗಳೆಂದು ಜಾನವಾಡಕ್ಕೆ ಬಂದು ಒದೆ ತಿಂದು ಹೋದ ಭರಮೂನನ್ನು ನಿಜ್ಯಾ ಮತ್ತೆ ಕರೆತಂದು ಊರಲ್ಲಿ ಹೂಲಿ ಎಬ್ಬಿಸಿದರೆ. ಅದು ಬೇರೆ ಮಾರ್ಗವನ್ನೇ ಹಿಡಿಯಿತು. ನೋಡಲು ಭಯಂಕರನಾಗಿದ್ದ ಭರಮು ಪ್ರಕಾಶನ ಹೃದಯವೈಶಾಲ್ಯಕ್ಕೆ ಮಾರುಹೋಗಿ ತನ್ನ ಗೂಂಡಾಗಿರಿ ವೃತ್ತಿಯನ್ನು ತ್ಯಜಿಸಿ. ಜಾನವಾಡದಲ್ಲಿಯೇ ಕಟ್ಟಿಗೆ ಅಡ್ಡೆಯೊಂದನ್ನು ತೆರೆದು ಬದುಕಲು ಪ್ರಾರಂಭಿಸಿದ್ದು ಪ್ರಕಾಶನ ವ್ಯಕ್ತಿತ್ವಕ್ಕೆ ಕಳಶವಿಟ್ಟಂತಾಗಿತ್ತು. ಈ ಮಧ್ಯ 'ಪಾರ್ವತಿ-ಬಸಣ್ಣ' ಉಡಕಿ ಆಗಲು ನಿರ್ಧರಿಸಿದರೆ. ದೇವಿ-ವಿಠ್ಠಲರೂ ಮದುವೆಯಾಗಲು ಸಿದ್ಧರಾಗಿದ್ದುದು ಪ್ರಗತಿಪರ ಧೋರಣೆಯೇ ಆಗಿತ್ತು. ವೀರೇಶಿ. ಪ್ರಕಾಶರು ತಮ್ಮ ಶ್ರಮಕ್ಕೆ ಇಷ್ಟು ಒಳ್ಳೆಯ ಫಲ ಸಿಗುವುದೆಂದು ಎಣಿಸಿರಲಿಲ್ಲ. ತಮ್ಮ ಊಹೆಗೂ ಮೀರಿ ಕೇರಿ ಹೊಸತನವನ್ನು ಕಾಣತ್ತಿತ್ತು. ಕಾಡು. ಪರಸ. ಮಲ್ಲೇಶಿ. ಪರಪ್ಪ. ಪಾವಾಡೆಪ್ಪ ಎಲ್ಲರೂ ಪ್ರಕಾಶ ವೀರೇಶಿಯರ ಕನಸು ನನಸಾಗುವಂತೆ ಬೆಂಬಲಕ್ಕಿದ್ದು ದುಡಿಯುತ್ತಿದ್ದುದು ಪ್ರಾಮಾಣಿಕತೆಗೆ ಎಂದೆಂದೂ ಬೆಲೆಯಿದೆಯೆಂಬುದನ್ನು ಸಾಬೀತುಪಡಿಸುವಂತಿತ್ತು.

ಶಾಂತವೀರನ ಪ್ರಕರಣದ ಬೆನ್ನಹಿಂದೆಯೇ ನಾಗೇಶಿ ಒದೆತಿಂದು ಆಸ್ಪತ್ರೆ ಸೇರಬೇಕಾಯಿತು. ಶಾಲೆಮುಗಿಸಿಕೊಂಡು ತಮ್ಮ ಪಾಡಿಗೆ ತಾವು ಮನೆಯತ್ತ ಹೊರಟ. ವಿಮಲಾ. ಪಾರ್ವತಿಯರನ್ನು ತಡೆದು. ತನ್ನ ಮಗಳನ್ನು ಹೊಡೆದ ಸಂತಾಪದಿಂದ ಭುಸಗುಡುತ್ತಿದ್ದ ನಾಗೇಶಿ. "ನಿಮಗೆಲ್ಲಾ ಸೊಕ್ಕ ಬಂದsತಿ....! ನಿಮಗ ಆ ಪರಕ್ಯಾ ಮತ್ತು ಈರ್‍ಯಾನ ಕೂಲ ಐತೆಂತ ಏರಿ ಕುಂತರ್‍ರಿ....! ಮಕ್ಕ ಹೊಲಗೇರಿ ಸುಧಾರಣೆ ಮಾಡ್ತಾರಂತ.

೧೨೦. ದು. ನಿಂ. ಬೆಳಗಲಿ : ದೇವದಾಸಿ. ಪುಟ ೩೮೮

ಅವ್ರಿಗೆ ಕಮ್ಮಗ ನಿಮ ಸಿಂವಿ ಹತ್ತೇತಿ...." ೧೨೧ ಎಂದು ಬೈದಾಗ, ಅಲ್ಲಿಯೇ ಹಾದುಹೊರಟ ಬಸಣ್ಣಿ-ಭರಮುಗೆ ಕೇಳಿಸಿ, ಭರಮೂನಿಂದ ಒಕ್ಕಂಡಿ ಬೀಳುವಂತೆ ಒದೆತಿಂದು ದವಾಕಾನಿ ಸೇರಿದ್ದ. ನಾಗೇಶಿಗೆ ಪಿ.ಎಸ್.ಆಯ್. ಮಹೇಶ ಪಾಟೀಲನ ಜಬರದಸ್ತ ಮಾತುಗಳು ಇನ್ನಷ್ಟು ಹೆದರಿಸಿದ್ದವು. ಹೀಗೆ ಊರಲ್ಲಿ ದುಷ್ಟ-ಅಷ್ಟಪದಶಕ್ತಿಗಳು ಒಂದೊಂದಾಗಿ ಕರಗುತ್ತ ಹೊಸಬೆಳಕು ಮೂಡುತ್ತಿದ್ದಂತೆ, ವೀರೇಶಿ-ವಿಮಲಾರಲ್ಲಿ 'ಹೊಸಪ್ರೀತಿ' ಕಾಲಿಟ್ಟಿತ್ತು. ಮೊದಲು ಉಡಾಳನಂತಿದ್ದ ವೀರೇಶಿ ಇಷ್ಟೊಂದು ಬದಲಾಗಬಹುದೆಂದು ವಿಮಲಾ ಕನಸಿನಲ್ಲಿಯೂ ತಿಳಿದಿರಲಿಲ್ಲ. ವೀರೇಶಿ ಕೇರಿಯ ಅನೇಕರಿಗೆ ವೃದ್ಧಾಪ್ಯ ವೇತನ ಮಂಜೂರು ಮಾಡಿಸಿದ್ದ. ಇದರಿಂದ ವಿಮಲಳಿಗೆ ಇನ್ನೂ ಸಂತೋಷ.

ಮಹೇಶ ಪಾಟೀಲರು ಮುಂಬಡ್ತಿ ಪಡೆದು ಹಾವೇರಿಗೆ ವರ್ಗವಾದಾಗ, ಜಾನವಾಡದ ಜನರೆಲ್ಲ ಅವರಿಗೋಸ್ಕರ ಸತ್ಕಾರಸಮಾರಂಭವೊಂದನ್ನು ಏರ್ಪಡಿಸಿದ್ದರು. ಒಬ್ಬ ಮಹಾನ್ ವ್ಯಕ್ತಿಯನ್ನು ಕರೆತರುವಂತೆ, ಪಲ್ಲಕ್ಕಿ ಒಯ್ದಾಗ ಅದನ್ನು ನಯವಾಗಿ ತಿರಸ್ಕರಿಸಿದ ಪಾಟೀಲ ಬುದ್ಧ-ಬಸವ-ಅಂಬೇಡ್ಕರರ ಭಾವಚಿತ್ರಗಳನ್ನು ಪಲ್ಲಕ್ಕಿಯಲ್ಲಿಟ್ಟು, ತಾನು ಕಾಲ್ನಡಿಗೆಯಲ್ಲಿಯೇ ಪತ್ನಿಸಮೇತನಾಗಿ, ಹಿರಿಯ ಅಧಿಕಾರಿ ಪ್ರಭುದೇವರೊಂದಿಗೆ ವೇದಿಕೆಯನ್ನೇರಿದ್ದ. ಪಾಟೀಲರನ್ನು ಸತ್ಕರಿಸಿದ ಜನ, ಕಾಣಿಕೆಗಳ ಮಹಾಪೂರವನ್ನೇ ಹರಿಸಿದರು. ಜನರ ಪ್ರೀತಿದ್ಯೋತಕವಾಗಿ ಕೇವಲ ತನಗೊಂದು ಜೊತೆ ಬಟ್ಟೆ, ಪತ್ನಿಗೊಂದು ಸೀರೆ-ಕುಪ್ಪಸ ಮಾತ್ರ ಸ್ವೀಕರಿಸಿದ ಪಾಟೀಲರು ಮಿಕ್ಕಸಾಮಾನುಗಳನ್ನೆಲ್ಲ ಬಾಲವಾಡಿಗೆ, ಬಡವರಿಗೆ ಮರಳಿಕೊಟ್ಟದ್ದು ಅವರಲ್ಲಿ ದಕ್ಷತೆಯ ಜೊತೆಗೆ ಹೃದಯವೈಶಾಲ್ಯವೂ ಇದೆಯೆಂಬುದನ್ನು ಏಕಕಾಲಕ್ಕೆ ತಿಳಿಸಿದಂತಿತ್ತು. ತಮ್ಮ ಸತ್ಕಾರಕ್ಕೆ ಪ್ರತಿವಂದನೆ ಸಲ್ಲಿಸುತ್ತ ಪಾಟೀಲರು, "ಅನಾಥ ಮಕ್ಕಳ್ನ ಜ್ವಾಪಾನ ಮಾಡಿರ ಪುಣ್ಯಾ ಬರ್ತತೆಂತ ಎಲ್ಲರೂ ಹೇಳ್ತಾರು.... ನೀವ ದೊಡ್ಡ ಮನಸ ಮಾಡಿ ನಿಮ್ಮ ಮಗಳನ್ನು, ಊರಮಗಳನ್ನು ನಮ್ಮ ಉಡ್ಯಾಗ ಹಾಕ್ರಿ. ನನಗ ಬೇಕಾದ ನಿಮ್ಮ ಮಗಳು ಅಂದ್ರು.... ಅಂದ್ರ ಗುಲಾಬಿ.... ಆಕೀನ ನಮ್ಮ ಹೊಟ್ಟೀಲೆ ಹುಟ್ಟಿದ ಮಗಳಂತೆ...." ೧೨೨ ಜ್ವಾಪಾನ ಮಾಡುತ್ತೇವೆಂದಾಗ ನೆರೆದ ಜನರೆಲ್ಲರ ಕಣ್ಣುಗಳು ಹನಿಗೂಡಿದ್ದವು. ಕೆಸರಲ್ಲಿ ಹುಟ್ಟಿದ ಕಮಲ ದೇವರ ಪೂಜೆಗೆ ಸಲ್ಲುವಂತೆ 'ಗುಲಾಬಿ' ಪಾಟೀಲರ ಉಡಿ ತುಂಬಿದ್ದಳು. ಪ್ರಕಾಶ-ವೀರೇಶಿಯರ ಸಾಮಾಜಿಕ ಸುಧಾರಣಾ ಪಥಕ್ಕೆ ಕಳಸವಿಟ್ಟಂತೆ, ನೊಂದ-ಅನಾಥ ಜೀವಿಗೆ ಆಶ್ರಯವಿತ್ತದ್ದು ಪಾಟೀಲ ದಂಪತಿಗಳ ಅನುಕಂಪ ಅಗಾಧವಾದುದು. ಗುಲಾಬಿಯನ್ನು ಕಳಿಸುವ ಪ್ರಸಂಗವಂತೂ ಹೃದಯಹಿಂಡುವಂತಿತ್ತು. ವೀರೇಶಿ, ವಿಮಲಾ, ಗುಲಾಬಿಯನ್ನು ಜೀಪಿನಲ್ಲಿ ಬಿಟ್ಟು ಬರಲು ಹಾವೇರಿಗೆ ಹೋದರು. "ಇನ್ನೂ ಒಂದಿಷ್ಟು ಕಲ್ತ ನಾ ಏನಾದರೂ ಮಾಡಬೇಕಂತ ವಿಚಾರ, ಹಿಂದಕ ಸಾಂಗ್ಲಿ ಶಿಲ್ಪಾ ಅಷ್ಟೇಕರ ಹೇಳಿಧಾಂಗ, ನಾನೂ ಈ ದೇವದಾಸಿ ಪದ್ಧತಿ ನಿರ್ಮೂಲನದ ಕೆಲಸಕ್ಕೆ ತೊಡಗಬೇಕಂತ.... ಪ್ರಕಾಶ, ವೀರೇಶಿ ಇದನ್ನs ಹೇಳ್ತಾರು, ಅವರೂ ಸಹಾಯಕ್ಕೆ

---

೧೨೧. ದು. ನಿಂ. ಬೆಳಗಲಿ : ದೇವದಾಸಿ, ಪುಟ ೪೨೮

೧೨೨. ದು. ನಿಂ. ಬೆಳಗಲಿ : ದೇವದಾಸಿ, ಪುಟ ೪೩೩

ಅದಾರು. ನಮ್ಮ ಸಮಾಜ ನಾವs ಸುಧಾರಿಸಲಿಲ್ಲಂದ್ರ ಇನ್ಯಾರು ಸುಧಾರ್‍ಸಬೇಕು ?"[೧೨೩] ವಿಮಲಳ ಈ ಮಾತುಗಳನ್ನು ಪಾಟೀಲರು ಕೇಳಿ ಸಂತೋಷಪಟ್ಟಂತೆ. 'ವೀರೇಶಿ-ವಿಮಲ' ರಿಬ್ಬರೂ ಇನ್ನಷ್ಟು ಓದಿ ನಂತರ ಮದುವೆಯಾಗುವಂತೆ ಹೇಳಿ-ಹರಿಸಿ ಅವರಿಗೆ ಬೀಳ್ಕೊಟ್ಟರು. "ನಾವ ಕೆಲಸಾ ಮಾಡೂ ವ್ಯವಸ್ಥಾಕs ಒಂದ ಸ್ವರೂಪಕೊಟ್ಟು. ನಾವೂ ಒಂದ ಸಂಸ್ಥಾ ಅಂತ ಕಟ್ಟಬಹುದು. ಪ್ರಕಾಶನೂ ಅದs ಅಂತಾರು. ನಾವೂ ಸ್ಟಡೀ ಕಂಟೀನ್ಯೂ ಮಾಡ್ಕೋತ.... ಅದರಕೂಡ ಈ ಕೆಲಸಾನೂ ಮಾಡ್ಕೋತ ಇರೂಣು.... ಅಷ್ಟರಾಗ ನಮ್ಮನ್ಯಾಗ ಬಿರುಗಾಳಿನೂ ಶಾಂತ ಆಗಿರತೈತಿ.... ಮನ್ಯಾವ್ರು ಸಲುವಾಗಿ ನಾಯೇನ ಅಷ್ಟತಲೀ ಕೆಡಿಸಿಕೊಂಡಿಲ್ಲ ಬಿಡು.... ಅದನ್ನ ಹ್ಯಾಗೂ ಬಗೀಹರಸಾಕ ಬರತೈತಿ.... ನಿಂದ ಒಳ್ಳೇ ನಿರ್ಧಾರ ನನ್ನ ಕಬೂಲಿ ಐತಿ...."[೧೨೪] ವೀರೇಶಿ ವಿಮಲಳ ಧ್ಯೇಯೋದ್ದೇಶಕ್ಕೆ ಬೆನ್ನೆಲುಬಾಗಿ ನಿಂತ: ಲೇಖಕರೂ ತಮ್ಮ ಉದ್ದೇಶದ ಈಡೇರಿಕೆಯೊಂದಿಗೆ ಕಾದಂಬರಿಗೆ ಅಂತ್ಯ ನೀಡುತ್ತಾರೆ.

'ದೇವದಾಸಿ' ಕಾದಂಬರಿ ನಾಲ್ಕುನೂರಾ ನಲವತ್ತೊಂದು ಪುಟಗಳ ಬೃಹತ್‌ಗಾತ್ರದಲ್ಲಿ ತನ್ನ ಮೈ ಬಿಚ್ಚಿಕೊಂಡಿದ್ದು: ಗಾತ್ರದಲ್ಲಿ ಮಾತ್ರವಲ್ಲದೆ. ಸತ್ವದಲ್ಲಿಯೂ ಹಾಗೂ ಅದು ಬೀರುವ ಪ್ರಭಾವ-ಪರಿಣಾಮದಲ್ಲಿಯೂ ಬಹುಮುಖ್ಯವಾದ ಪ್ರಾದೇಶಿಕ ಕೃತಿ. ಬೆಳಗಲಿಯವರು ದೇವದಾಸಿಯರ ಬದುಕನ್ನು ತೀರ ಹತ್ತಿರದಿಂದ ಬಲ್ಲವರು. ಅವರ ಜೀವನ ವಿಧಾನವನ್ನು ಆಳವಾಗಿ ಅಭ್ಯಸಿಸಿದವರು. ಪರಂಪರಾಗತ ಸನಾತನ ಧರ್ಮದಲ್ಲಿದ್ದುಕೊಂಡೇ ಬದುಕುವ ಹರಿಜನರಿಗೆ 'ಹೊಲಗೇರಿಯೇ' ಒಂದು ಅದ್ಭುತ ಜಗತ್ತು. ಬುಡಬುಡಿಕೆಯ 'ಕಡಬುಡ' ಶಬ್ದದೊಂದಿಗೆ ತನ್ನ ಮೈಬಿಚ್ಚಿಕೊಳ್ಳುವ ಪ್ರಸ್ತುತ ಕಾದಂಬರಿ ಜಾನವಾಡ ಕೇರಿಯ ಅನೈತಿಕ ಸಂಬಂಧಗಳನ್ನು ಎಳೆಎಳೆಯಾಗಿ ಬಿಚ್ಚಿತೋರಿಸುತ್ತದೆ. ಪ್ರಸ್ತುತ ಕಾದಂಬರಿಯಲ್ಲಿ ಕಥೆ ಕೇವಲ ಅಸ್ಥಿಪಂಜರ. ಎಲೆಯಿಲ್ಲದ ರೆಂಬೆ-ಕೊಂಬೆ. ಅದರ ಹೂರಣವೆಲ್ಲ ಸನ್ನಿವೇಶಗಳ ಸೃಷ್ಟಿ ಮತ್ತು ಅವುಗಳ ಸಂಯೋಜನೆಗಳಲ್ಲಿದೆ. ಅದಕ್ಕಾಗಿ 'ದೇವದಾಸಿ' ಕಥಾನಕ ದೃಷ್ಟಿಯಿಂದ ವಾಸ್ತವ. ಕುತೂಹಲಕಾರಿಯೆನಿಸಿದರೂ. ವೈಚಾರಿಕತೆಗಿಂತ ವಿವರಣಾತ್ಮಕವಾಗಿ ಬೆಳೆಯುತ್ತದೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ. ವಸ್ತು-ಪಾತ್ರಗಳಲ್ಲದೆ. ಇದನ್ನು ಯಾರಿಗಾಗಿ ಬರೆಯುತ್ತಿದ್ದೇನೆ ಎಂಬ ಪ್ರಜ್ಞೆ ಕಾದಂಬರಿಕಾರರಲ್ಲಿದ್ದುದು. ಈ ಹಿಂದೆ ಕನ್ನಡದಲ್ಲಿದ್ದ. ವೇಶ್ಯಾವೃತ್ತಿ ಚಿತ್ರಿಸುವ ಕಾದಂಬರಿಗಳೆಲ್ಲ ಹೆಚ್ಚಿನವು ಆ ವೃತ್ತಿಯನ್ನೇ ವೈಭವೀಕರಿಸಿ. ತರುಣವರ್ಗಕ್ಕೆ ಕಾಮಪ್ರಚೋದನೆ ನೀಡುವ ಕೃತಿಗಳಾಗಿದ್ದರಿಂದ. "ನನ್ನದೊಂದು ದಾರಿಯಂತೆ ಗುರಿಯೂ ಬೇರೆಯಿತ್ತು"[೧೨೫] ಎಂದು ಸ್ವತಃ ಲೇಖಕರೇ ಹೇಳುವಂತೆ. ತಾನು ಒಂದು ಸಮಸ್ಯೆಯೊಂದರ ನಿವಾರಣೆಯ ಉದ್ದೇಶಕ್ಕಾಗಿ ಕಾದಂಬರಿ ಬರೆಯುತ್ತಿದ್ದೇನೆ ಎಂಬ ಪ್ರಜ್ಞೆಯಿಂದಲೇ ಕಾದಂಬರಿ ಬರೆದುದರಿಂದ. ಎಲ್ಲೂ ವೇಶ್ಯಾವಾಟಿಕೆಯನ್ನು ರಂಜನೀಯವಾಗಿ ಚಿತ್ರಿಸಿಲ್ಲ.

---

೧೨೩. ದು. ನಿಂ. ಬೆಳಗಲಿ : ದೇವದಾಸಿ. ಪುಟ ೪೪೦

೧೨೪. ದು. ನಿಂ. ಬೆಳಗಲಿ : ದೇವದಾಸಿ. ಪುಟ ೪೪೦

೧೨೫. ದು. ನಿಂ. ಬೆಳಗಲಿ : ದೇವದಾಸಿ : ಹಿನ್ನೆಲೆಯಲ್ಲಿ ಲೇಖಕರು ಹೇಳಿದ ಮಾತು

"ಇದು ಕೇವಲ ಜಾನವಾಡದ ಕಥೆಯಲ್ಲ. 'ದೇವದಾಸಿ' ಪ್ರಸಂಗಗಳನ್ನಿಷ್ಟು ಬದಿಗಿರಿಸಿದರೆ ಬಾಕೀ ಭಾನಗಡಿಗಳು ನಮ್ಮ ದೇಶದ ಪ್ರತಿ ಗ್ರಾಮದಲ್ಲಿ ಪ್ರಚಲಿತವಾಗಿಯೇ ಇವೆ. ಈ ಕಥೆ ಇಲ್ಲಿಗೆ ಮುಗಿದಿಲ್ಲ. ಸಾಮಾಜಿಕ ಹೋರಾಟಕ್ಕೆ ಎಂದಾದರೂ ಕೊನೆ ಇದೆಯೇ?" ಎಂದು ಲೇಖಕರು ಕೇಳಿದ ಪ್ರಶ್ನೆಗೆ ಉತ್ತರ ಹೇಳುವುದು ಸುಲಭಸಾಧ್ಯವಾಗದ ಮಾತು. "ನಮ್ಮ ನೈತಿಕ ಪ್ರಜ್ಞೆಗೆ ಸವಾಲಾಗಿ ನಿಂತ ಸಮಸ್ಯೆಗೆ ಈ ಕಾದಂಬರಿಯಲ್ಲಿ ಸಮಾಜವಾದಿ ಸಿದ್ಧಾಂತಗಳೂ. ಗಾಂಧೀವಾದದ ಆದರ್ಶಗಳೂ. ಪ್ರಗತಿಶೀಲ ವಿಚಾರಧಾರೆಯೂ ಒಟ್ಟಾಗಿ ಪರಿಹಾರೋಪಾಯವನ್ನು ಸೂಚಿಸುವಲ್ಲಿ ಯಶಸ್ವಿಯಾಗಿದೆ"[೧೨೬] ಕನ್ನಡದಲ್ಲಿ ಕಾನೂರುಸುಬ್ಬಮ್ಮ ಹೆಗ್ಗಡತಿ. ಗ್ರಾಮಾಯಣಗಳ ಪ್ರಾದೇಶಿಕ ಚಿತ್ರಗಳು ಇದರಲ್ಲಿ ಮೈದಾಳಿ ನಿಂತರೂ. ಅವುಗಳಿಗಿಂತ ಭಿನ್ನ ನೆಲೆಯ 'ದೇವದಾಸಿ' ತನ್ನ ಹರವನ್ನು ಬೇರೆಯಾಗಿಯೇ ಕಂಡುಕೊಂಡಿದೆ. ಹಾಗಾಗಿ "ಕನ್ನಡ ಕಾದಂಬರಿ ಪ್ರಪಂಚದಲ್ಲಿ 'ದೇವದಾಸಿ' ಪದ್ಧತಿಯ ಕುರಿತಾದ ಇಷ್ಟೊಂದು ಸುದೀರ್ಘವಾದ ಜೀವಂತ ಅನುಭವದ ಕಲಾಕೃತಿ ಇನ್ನೊಂದಿಲ್ಲವೆನ್ನಬಹುದು"[೧೨೭] ಯಾಕೆಂದರೆ. ಲೇಖಕರ ಸಾಮಾಜಿಕ ಕಳಕಳಿ. ಗ್ರಾಮೀಣ ಬದುಕಿನ ಬಗೆಗಿನ ಆಳವಾದ ಸಂವೇದನೆ ಇಲ್ಲಿ ಕೆನೆಗಟ್ಟಿ ನಿಂತಿದೆ. ಗ್ರಾಮೀಣ ಬದುಕನ್ನು ಬಹಳಷ್ಟು ಕಾದಂಬರಿಕಾರರು ನಿರ್ಲಕ್ಷಿಸುತ್ತಿರುವುದು ಸಾಹಿತ್ಯದಲ್ಲಿ ತೀರ ಸೋಜಿಗದ ಸಂಗತಿ: ಅಷ್ಟೇ ಕಳವಳಕಾರಿಯೂ ಹೌದು. ಭಾರತೀಯ ಬದುಕೆಂದರೆ. ನಗರದಲ್ಲಿ ಸತ್ತು ಬಿದ್ದ ಸಂಸ್ಕೃತಿಯ ಪ್ರದರ್ಶನ ಮಾತ್ರವೆನಿಸುತ್ತಿರುವುದು ವಿಷಾದದ ಸಂಗತಿ. "ಬರಿಯ ಸಾಮಾಜಿಕ ಸಮಸ್ಯೆಗಳ ಅರಿವು ಅಥವಾ ಸಾಮಾಜಿಕ ಕಳಕಳಿ ಶ್ರೇಷ್ಠ ಕಾದಂಬರಿಕಾರರನ್ನು ನಿರ್ಮಿಸಲಾರವು"[೧೨೮] ದು. ನಿಂ. ಬೆಳಗಲಿಯವರು ಹಳ್ಳಿಗಾಡಿನ ದಟ್ಟ ಅನುಭವದ. ಅದೂ ಕೆಳವರ್ಗದವರ ಬದುಕಿನ ಪದರುಗಳನ್ನು ಅರಿತವರು. ಹೀಗಾಗಿ ಸಹೃದಯರಿಗೆ ಗ್ರಾಮೀಣ ಬದುಕಿನ ಅನುಭವ ನೀಡುತ್ತ ಕನ್ನಡ ಕಾದಂಬರಿ ಲೋಕಕ್ಕೆ ಉತ್ತರ ಕರ್ನಾಟಕದ ಮಣ್ಣಿನ ಗುಣವನ್ನು ಸಮರ್ಥವಾಗಿ ತುಂಬುತ್ತ. ಬಸವರಾಜ ಕಟ್ಟೀಮನಿ. ಮಿರ್ಜಿ ಅಣ್ಣಾರಾಯ. ರಾವಬಹಾದ್ದೂರರ ಉತ್ತರಾಧಿಕಾರಿಯಾಗಿ ಆ ಪರಂಪರೆಯನ್ನು ಅವರಷ್ಟೇ ಸಮರ್ಥವಾಗಿ ಮುಂದುವರಿಸಿದವರು.

ಪ್ರಸ್ತುತ ಕಾದಂಬರಿಗೆ ಗೆರೆಕೊರೆದು ಹೇಳಬಹುದಾದ ನಾಯಕ ಅಥವಾ ನಾಯಕಿಯ ಪಾತ್ರವಿಲ್ಲ. ಪ್ರಕಾಶ. ವೀರೇಶಿ. ಚೆನ್ನಪ್ಪ. ಮಹೇಶ ಪಾಟೀಲ. ವಿಮಲಾ. ಗುಲಾಬಿ. ಪಾರ್ವತಿ. ಲಕ್ಕಿ. ಮುಂತಾದವು ದೀರ್ಘಕಾಲದವರೆಗೆ ಕಾದಂಬರಿಯಲ್ಲಿ ಉಳಿಯುವ ಪಾತ್ರಗಳಾಗಿದ್ದು. ಇದೊಂದು ಉದ್ದೇಶಪ್ರಧಾನ ಕಾದಂಬರಿಯೇ ಹೊರತು ಕಥಾಪ್ರಧಾನ ಕೃತಿಯಲ್ಲ. ಹೀಗಾಗಿ ಪಾತ್ರಗಳೆಲ್ಲ ವಾಸ್ತವ ಪಾತಳಿಯಲ್ಲಿಯೇ ಮೈಬಿಚ್ಚಿಕೊಳ್ಳುತ್ತವೆ. ಇಲ್ಲಿ ಬರುವ ಕೆಲವು ತೀರ ಸಾಮಾನ್ಯ ಪಾತ್ರಗಳೂ ಕೂಡ ಅತ್ಯಂತ ತರ್ಕಬದ್ಧವಾಗಿ ಮಾತನಾಡುತ್ತವೆ. 'ದೇವದಾಸಿ'ಯಂಥ ಸಮಸ್ಯಾತ್ಮಕ ಕೃತಿಗೆ. ಲೇಖಕರ ಭಾವುಕತೆ ರಂಜಕತೆ ಸಾಲದು. ಅವರು ವೈಚಾರಿಕ - ತಾರ್ಕಿಕ ತಳಹದಿಯ ಮೇಲೆ

---

೧೨೬. ಜಿ. ಎಂ. ಹೆಗಡೆ : ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೪೭

೧೨೭. ಜಿ. ಎಂ. ಹೆಗಡೆ : ಸಾಹಿತ್ಯ ಮತ್ತು ಸಹೃದಯತೆ. ಪುಟ ೨೯೭

೧೨೮. ಜಿ. ಎಸ್. ಆಮೂರ : ಕನ್ನಡ ಕಥನ ಸಾಹಿತ್ಯ ಕಾದಂಬರಿ. ಪುಟ ೧೯೯

ತಮ್ಮ ಪ್ರತಿಪಾದನೆಯಿರಿಸಬೇಕಾಗುತ್ತದೆ. ಒಂದಿಷ್ಟು ಅವಶ್ಯಕತೆಗಿಂತ ಹೆಚ್ಚಿಗೆ ಕಥೆಯನ್ನು ಹರಿಬಿಟ್ಟರೂ. ಲೇಖಕರು ತಮ್ಮ ಗುರಿಯನ್ನು (ಉದ್ದೇಶ) ಕೇಂದ್ರೀಕರಿಸುವಲ್ಲಿ ಸಫಲರಾಗಿದ್ದಾರೆ. ಬಂಡಾಯ-ದಲಿತ ಧ್ವಜ ಹಚ್ಚಿಕೊಳ್ಳದೆ. ಹೋರಾಟದ ಹೆಮ್ಮೆ ಕೊಚ್ಚಿಕೊಳ್ಳದೆ. ಸದ್ದಿಲ್ಲದೆ. ಪ್ರಾಮಾಣಿಕ ಪ್ರಗತಿಶೀಲ ಮನೋಭೂಮಿಕೆಯಲ್ಲಿ ನಿಂತೇ . ಓದುಗರಿಗೆ. ಸೂಳೆಗಾರಿಕೆಯಂಥ ಭೀಕರ-ಭಯಂಕರ ಸಮಸ್ಯೆಯ ಹಿನ್ನೆಲೆ-ಮುನ್ನೆಲೆಯಲ್ಲಿ ಸಮಗ್ರ ಹಳ್ಳಿಯ ದರ್ಶನ ಮಾಡಿಸಿದ್ದಷ್ಟೇ ಅಲ್ಲದೆ. ದೇವದಾಸಿ ನಿರ್ಮೂಲನಕ್ಕೆ - ಗ್ರಾಮಸಮಸ್ಯೆಗೆ. ಹತ್ತು-ಹಲವು ಪರಿಹಾರಗಳನ್ನೂ ಸೂಚಿಸಿದ್ದಾರೆ. ಸಮಸ್ಯೆಗಳ ಪರಿಹಾರದಲ್ಲಿ ಸರಕಾರದ ವೈಫಲ್ಯ. ' ಪರಿವರ್ತನ ' ಸಂಸ್ಥೆಯಂಥ ಸೇವಾ ಸಂಸ್ಥೆಗಳ ಮುಖಾಂತರ ಸಹಾನುಭೂತಿಪರ ಸೇವೆಯ ಅಗತ್ಯವನ್ನು ಕಾದಂಬರಿ ಪ್ರತಿಪಾದಿಸಿದೆ. ಸೂಳೆಗಾರಿಕೆಯನ್ನು ಹುಟ್ಟುಹಾಕುವ ಸಮಾಜಘಾತಕ ವ್ಯಕ್ತಿಗಳ ಮನಪರಿವರ್ತನೆಯ ಜೊತೆಗೆ ಅಂತರ್ಜಾತೀ ವಿವಾಹದ ಅವಶ್ಯಕತೆಯನ್ನು ಕುರಿತು ಲೇಖಕರು ವಕಾಲತ್ತು ವಹಿಸಿದ್ದಾರೆ.

ಶೈಕ್ಷಣಿಕ ಪ್ರಗತಿಯೇ ಸಾಮಾಜಿಕ ಸುದಾರಣೆಗೆ ನಾಂದಿಯೆಂಬುದು ಮನಗಂಡ ಮಾತು. ಶಿಕ್ಷಣದ ಸಂಸ್ಕಾರದಿಂದ ಕೆಳವರ್ಗದವರಲ್ಲಿ ಸಾಮಾಜಿಕ ಪ್ರಜ್ಞೆ ಸಹಜವಾಗಿನೇ ಬೆಳೆದು. ಅಂಧಶ್ರದ್ಧೆ. ಮೂಢನಂಬಿಕೆ. ಅನಾಚಾರ. ಗೊಡ್ಡು ಸಂಪ್ರದಾಯಗಳ ಬಗ್ಗೆ ನಿಜವಾದ ಅರಿವು ಮೂಡುತ್ತದೆ. " ಚಿಗವ್ವಾ ಈ ದೇವ್ರಿಗಿ ಬಿಡೂ ಪದ್ಧತಿ. ನಮ್ಮಂದ್ಯಾಗ ಅಂದ್ರ ಹರಿಜನರಾಗ ಹಿಂದುಳಿದ ಮಂದ್ಯಾಗs ಯಾಕ ಐತಿ....? ಮ್ಯಾಲಿನ ಜಾತೀ ಮಂದಿ ತಮ್ಮ ಹೆಣ್ಣಮಕ್ಕಳಿಗೆ ಎಲ್ಲಿ ಮುತ್ತ ಕಟಸ್ತಾರು ? ಅವರೆಲ್ಲಿ ದೇವದಾಸಿ ಬಿಡ್ತಾರು ? ಅವರೆಲ್ಲಿ ಸೂಳಿತನಕ ನಿಲ್ಲಸ್ತಾರು ? ಈ ಪದ್ಧತಿ ಯಾರ ಮಾಡ್ಯಾರೋ ? ಮ್ಯಾಲಿನ ಜಾತ್ಯಾವ್ರು ಈ ಪದ್ಧತಿ ಮಾಡಿ ಅಸ್ಪೃಶ್ಯರನ್ನು ಉಪಯೋಗ ಮಾಡ್ಕೋತಾರು ಅಷ್ಟ. ನಮ್ಮಂದ್ಗಿ ಎಂದ ಬುದ್ಧಿ ಬರತೈತ್ಯೋ ಏನೋ ! ಇವ್ರು ಎಂದ ಸುಧಾರಣೆ ಆಗ್ತಾರು.... "[೧೨೯] ವಿದ್ಯೆಯಿಂದ ಜಾಗೃತಗೊಂಡ ವಿಮಲಳ ಈ ಮಾತುಗಳು. ಸಾವಕಾಶವಾಗಿ ಹರಿಜನರಲ್ಲಿಯೂ ಮೂಡುತ್ತಿರುವ ಜಾಗೃತ ಗಂಟೆಯನ್ನು ಬಾರಿಸಿದಂತಿದೆ: ವಿಮಲಾ ' ಭೂಮಿಕರಿಕೆ ' ಯಾಗಿ ಕಾದಂಬರಿಯುದ್ದಕ್ಕೂ ಹಸಿರಾಗಿ. ರೋಷ-ಆವೇಶ. ನೋವು. ದುಗುಡು-ದುಮ್ಮಾನಗಳೊಂದಿಗೆ ಸಹನೆ-ಪ್ರೀತಿ-ಶಾಂತಿ. ವೈಚಾರಿಕ ಪ್ರತಿಭಟನೆಯ ರೂಪದಲ್ಲಿ ಮೂಡಿನಿಂತು ಗೆಲ್ಲುತ್ತಾಳೆ. ಇವಳ ಈ ಗೆಲುವಿಗೆ ಪ್ರಕಾಶ-ವೀರೇಶಿ ಪ್ರಮುಖ ಚಾಲನೆಗಳಾಗಿದ್ದಾರೆ. ಈ ದೃಷ್ಟಿಯಲ್ಲಿ ಕಾದಂಬರಿಗೆ ನೈಜತೆ ಪ್ರಾಪ್ತವಾಗಿದೆ.

ಸಮಸ್ಯೆಯ ಆಳದ ಅರಿವು. ಸಮಸ್ಯೆಗಿರುವ ಮೂಲ ಕಾರಣಗಳು. ಅದಕ್ಕೆ ತಕ್ಕ ಪರಿಹಾರಗಳು. ಹೀಗೆ ಸಮಸ್ಯೆಯ ಎರಡೂ ಮಗ್ಗುಲಗಳನ್ನು ಸಮರ್ಥವಾಗಿ ಚಿತ್ರಿಸುತ್ತ ಹೋದ ಪ್ರಸ್ತುತ ಕಾದಂಬರಿ. ಒಂದು ' ಸಮಾಜಶಾಸ್ತ್ರ 'ದಂತೆ ಗೋಚರಿಸುತ್ತದೆ. ಸಾಮಾಜಿಕ ಸಮಸ್ಯೆಯ ನಿಷ್ಠುರತೆ. ಲೇಖಕರ ಕಳಕಳಿಯಲ್ಲಿ ಕಲಾತ್ಮಕವಾಗಿ ಅರಳಿ ನಿಂತಿರುವುದರಿಂದ. " ಗ್ರಾಮಾಯಣ. ವೈಶಾಖಿಗಳಷ್ಟೇ ಮಹತ್ವದ. ಅವುಗಳಿಗಿಂತ ಹೆಚ್ಚು

೧೨೯. ದು. ನಿಂ. ಬೆಳಗಲಿ : ದೇವದಾಸಿ. ಪುಟ ೫೩

ಪರಿವರ್ತನ ಕಾದಂಬರಿ " [೧೩೦] ಯಾಗಿದೆ: ಬೆಳಗಲಿಯವರು ತಾವೊಬ್ಬ ಸಮರ್ಥ ಕಾದಂಬರಿಕಾರರೆಂಬುದನ್ನು ಸಾಬಿತುಪಡಿಸಿದ್ದಾರೆ. ಅವರ ಹಿಂದಿನ ಕಾದಂಬರಿಗಳಿಗಿಂತ ವಸ್ತು-ಭಾಷೆ-ಕ್ರಿಯೆ. ವಾತಾವರಣ ಸೃಷ್ಟಿ. ನಿರೂಪಣಾ ಶೈಲಿಗಳ ದೃಷ್ಟಿಯಿಂದ ಇನ್ನಷ್ಟು ಮುಂದೆ ಹೋಗಿದ್ದಾರೆ. ಆದ್ದರಿಂದ " ಕನ್ನಡ ಕಾದಂಬರಿ ಲೋಕದಲ್ಲಿ ಇದೊಂದು ಒಡೆದು ಕಾಣುವ ಕೃತಿಯೆನ್ನುವುದರಲ್ಲಿ ಸಂದೇಹವಿಲ್ಲ" [೧೩೧] ವೆಂಬ ಮಾತು ಒಪ್ಪತಕ್ಕ ಹೇಳಿಕೆ. ಈ ಎಲ್ಲ ದೃಷ್ಟಿಯಿಂದ. " ಪ್ರಸ್ತುತ ಭಾರತೀಯ ಸನ್ನಿವೇಶದಲ್ಲಿ ಗ್ರಾಮೀಣ ಅನುಭವವನ್ನು ಜೀವಾಳವಾಗಿಸುವ ಹೊಸ ಆಯಾಮವನ್ನು ಕಾದಂಬರಿಲೋಕದಲ್ಲಿ ತರುತ್ತಿರುವ ದು. ನಿಂ. ಬೆಳಗಲಿ ಕನ್ನಡದ ಸಂದರ್ಭದಲ್ಲಿ ಮಾತ್ರವಲ್ಲ. ಭಾರತೀಯ ಸನ್ನಿವೇಶದಲ್ಲಿ ಹೊಸ ಹೆಜ್ಜೆ ಇಟ್ಟಿದ್ದಾರೆ " [೧೩೨] ಭಾರತೀಯ ಹೆಣ್ಣಿನ ನೋವಿನ ಧ್ವನಿಯಾಗಿ ಹುಟ್ಟಿದ ' ದೇವದಾಸಿ ' ಕಾದಂಬರಿ ಸ್ತ್ರೀಸಂವೇದನೆಗಳಿಗೆ ಸ್ಪಂದಿಸಿದ ಉತ್ತಮ ಪ್ರಾದೇಶಿಕ ಕೃತಿಯೆಂಬುದಕ್ಕೆ ಎರಡು ಮಾತಿಲ್ಲ. ಇದು ಲೇಖಕರ ಮಹತ್ವಾಕಾಂಕ್ಷೆಯ ಕೃತಿ. ಕನ್ನಡ ಕಾದಂಬರಿ ಲೋಕದಲ್ಲಿಯೇ ಮಹತ್ವದ ಕೃತಿಯಾಗಿ ನಿಂತಿರುವುದು ಹೆಮ್ಮೆಯ ಸಂಗತಿ. " ಈ ಕಾದಂಬರಿಯ ಸಾರ್ಥಕತೆಯೆಂದರೆ. ಯಾವ ದೇವದಾಸಿಯೇ ಇರಲಿ. ಅವಳೊಂದು ಬಾರಿ ಇದನ್ನು ಓದಿದರೆ ಸಾಕು. ತಾನು ಮೈಮಾರಿ ಬದುಕುವುದನ್ನು ಬಿಟ್ಟು ಮೈಮುರಿದು (ದುಡಿದು) ಬದುಕುವುದನ್ನು ಕಲಿಯುತ್ತಾಳೆ " [೧೩೩] ಹೀಗಾಗಿ ಬೆಳಗಲಿಯವರ ಶ್ರಮ ಸಾರ್ಥಕವಾಗಿದೆ: ಬಿ. ಎಚ್. ಶ್ರೀಧರ ಪ್ರಶಸ್ತಿ ಹಾಗೂ ಸರ್. ಎಂ. ವಿಶ್ವೇಶ್ವರಯ್ಯ ಪ್ರಶಸ್ತಿಗಳನ್ನು ತಂದುಕೊಟ್ಟ ಈ ಕಾದಂಬರಿ ಬೆಳಗಲಿಯವರನ್ನು ಸಂತುಷ್ಟಗೊಳಿಸಿದೆ. ಒಂದು ' ಸಂಶೋಧನಾ ಮಹಾಪ್ರಬಂಧ 'ದ ವೈಶಾಲ್ಯವನ್ನು ಹೊಂದಿದ ' ದೇವದಾಸಿ ' ಕನ್ನಡ ಕಾದಂಬರಿ ಲೋಕದ ವಿನೂತನ ಧಾಟಿಯ ಹೆಮ್ಮೆಯ ಪ್ರಾದೇಶಿಕ ಕೃತಿ.

**ಪ್ರಾದೇಶಿಕತೆ :**

ಬೆಳವಲ ನಾಡಿನ ಗಡಸು ಭೂಮಿಯ ಬಿರುಸು ಬಿಸಿಲಲ್ಲಿ ಹುಟ್ಟಿ ಬೆಳೆದ ದು. ನಿಂ. ಬೆಳಗಲಿಯವರು ಸತ್ವಪೂರ್ಣ ಕಾದಂಬರಿಗಳನ್ನೇ ನೀಡಿ. ಉತ್ತರ ಕರ್ನಾಟಕದ ಅಷ್ಟೇ ಯಾಕೆ ಅಖಂಡ ಕರ್ನಾಟಕದ ಶ್ರೇಷ್ಠ ಕಾದಂಬರಿಕಾರರಲ್ಲೊಬ್ಬರಾಗಿದ್ದಾರೆ. ಪ್ರಸ್ತುತ ' ದೇವದಾಸಿ 'ಯನ್ನು ಪ್ರಾದೇಶಿಕ ಭಾಷೆಯಲ್ಲಿ ರಚಿಸಿ. ಸಾಹಿತ್ಯಾಸಕ್ತರ-ವಿಮರ್ಶಕರ ಗಮನ ಸೆಳೆದಿದ್ದಾರೆ. ಈ ಕಾದಂಬರಿ ' ಕಾನೂರು ಸುಬ್ಬಮ್ಮ ಹೆಗ್ಗಡತಿ '. ' ಮಲೆಗಳಲ್ಲಿ ಮದುಮಗಳು '. ' ಗ್ರಾಮಾಯಣ '. ' ನಿಸರ್ಗ '. ' ವೈಶಾಖ ' ಗಳಷ್ಟೇ ಸತ್ವಯುತವಾದುದು. " ನವೋದಯ ಕಾಲದಲ್ಲಿ ಮೂಡಿಬಂದ ಉತ್ತರ ಕರ್ನಾಟಕದ ಉತ್ತರಗಡಿಯ ಪ್ರಾದೇಶಿಕ ಮಣ್ಣಿನ ಸತ್ವವನ್ನು ಮೈಗೂಡಿಸಿಕೊಂಡ ಅತ್ಯುತ್ತಮ ಕಾದಂಬರಿಗಳಾದ ಮಿರ್ಜಿ ಅಣ್ಣಾರಾಯರ ' ನಿಸರ್ಗ ' ಹಾಗೂ ರಾವಬಹಾದ್ದೂರರ ' ಗ್ರಾಮಾಯಣ ' ಇವುಗಳ ನಂತರ ಇದೀಗ ದು. ನಿಂ. ಬೆಳಗಲಿಯವರ ಈ ಕೃತಿ ' ದೇವದಾಸಿ ' ಕೂಡ ಅದೇ ಸಾಲಿನಲ್ಲಿ

೧೩೦. ಶಾಂತಿನಾಥ ದೇಸಾಯಿ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ. ಬೆನ್ನುಡಿ

೧೩೧. ಚೆನ್ನವೀರ ಕಣವಿ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ. ಬೆನ್ನುಡಿ

೧೩೨. ಜಿ. ಎಂ. ಹೆಗಡೆ : ಸಾಹಿತ್ಯ ಮತ್ತು ಸಹೃದಯ. ಪುಟ ೨೯೬

೧೩೩. ವೈ. ಎಂ. ಭಜಂತ್ರಿ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ. ಪುಟ ೧೧೪

ಸಿಲ್ಲಬಲ್ಲುದೆಂಬುದಕ್ಕೆ ಎರಡು ಮಾತಿಲ್ಲ"[೧೩೪] ವೆಂಬ ಪ್ರಿ. ಎಸ್. ಮುನವಾಡೆಯವರ ಮಾತು ತುಂಬ ಸಮಂಜಸವಾಗಿದೆ. ಇಲ್ಲಿಯ ಕಥಾ ಹಂದರ ಬಿಜಾಪುರ. ಬೆಳಗಾವಿ. ಅಥಣಿ. ಬನಹಟ್ಟಿ. ರಬಕವಿ. ಧಾರವಾಡಗಳ ಮಧ್ಯವೇ ಹರಡಿರುವಂತೆ. ಭಾಷಾಶೈಲಿಯೂ ಇಲ್ಲಿಯದೇ ಆಗಿದ್ದು. ಸಮರ್ಥವಾಗಿಯೇ ಇಲ್ಲಿನ ಬಾಯ್ಮಾತುಗಳನ್ನು ಬೆಳಗಲಿಯವರು ಬಳಸಿದ್ದಾರೆ. ವಿಶ್ವಸಮಸ್ಯೆಗೆ ಪ್ರಾದೇಶಿಕ ಭೂಮಿಕೆಯೊದಗಿಸಿದ್ದು. ಪ್ರಾದೇಶಿಕ ಪರಿಕರಗಳನ್ನು ಚೆನ್ನಾಗಿ ದುಡಿಸಿಕೊಂಡಿರುವ ಬೆಳಗಲಿಯವರು ಎಲ್ಲಿಯೂ ಕೃತಕತೆಯನ್ನು ಕಾಣಿಸಿಲ್ಲ: ಇಂಥ ಪ್ರಾದೇಶಿಕ ಕಾದಂಬರಿಯನ್ನು ಹತ್ತರಜತೆ - ಹನ್ನೊಂದನ್ನಾಗಿಸುವುದು ಸಾಧುವಾದುದಲ್ಲ. ಭಾರತದ ಗ್ರಾಮಾಭಿವೃದ್ಧಿಯ ವ್ಯಾಪಕ ವಸ್ತುವನ್ನಾಯ್ದುಕೊಂಡು. ಮಾನವ ಸಹಜ ಸ್ವಭಾವದ ವಿವಿಧ ಸ್ತರದ ಪಾತ್ರಗಳ ಸಮೂಹವನ್ನೇ ಸೃಷ್ಟಿಸಿದ ಈ ಕಾದಂಬರಿ ನಿಜವಾಗಿಯೂ ಪಕ್ವಮನಸ್ಸಿನ ಪರಿಣಾಮಕಾರಿ ಕಲಾತ್ಮಕ ಅಭಿವ್ಯಕ್ತಿ. ಯಾವುದೇ ಕಾದಂಬರಿ ತನ್ನ ಪ್ರಾದೇಶಿಕ ಭಾಷಾ ಸೊಗಡು. ಸಂಸ್ಕೃತಿ. ಆಚರಣೆ. ಆಟಪಾಠಗಳು. ನಂಬಿಕೆಗಳು. ಇತ್ಯಾದಿ ಬಳಸಿಕೊಳ್ಳುವುದು ಅನಿವಾರ್ಯ. ಹೀಗೆ ಅನಿವಾರ್ಯ ಅಂಶವನ್ನು ಅರ್ಥವತ್ತಾಗಿ ಸತ್ವಯುತವಾಗಿ ನಿರೂಪಿಸಿದಾಗ ಮಾತ್ರ ಅದೊಂದು ಪರಿಪೂರ್ಣ ಪ್ರಾದೇಶಿಕ ಕಾದಂಬರಿಯಾಗಲು ಸಾಧ್ಯ. 'ಮಾನವೀಯತೆ'ಗೆ ವಿಶ್ವವ್ಯಾಪಕ ಬೆಲೆಯಿದೆ. ಈ ಮಾನವೀಯ ತಳಹದಿಯ ವೈಚಾರಿಕ ನೆಲೆಗಟ್ಟಿನ ಗಟ್ಟಿ ಕಾದಂಬರಿ 'ದೇವದಾಸಿ'. ಕನ್ನಡ ಕಾದಂಬರಿ ಚರಿತ್ರೆಯಲ್ಲಿ ತನ್ನ ಅಸ್ತಿತ್ವವನ್ನು ಅಚ್ಚೊತ್ತಿದಂತೆ ನಿಲ್ಲಿಸಬಲ್ಲ ಶ್ರೇಷ್ಠ ಕಾದಂಬರಿ ಪ್ರಾದೇಶಿಕತೆ ಎಂಬುದಕ್ಕೆ ನಿರ್ದಿಷ್ಟ ಅಳತೆಗೋಲುಗಳಿಲ್ಲವಾದರೂ. ಭಾಷೆ-ಸಂಸ್ಕೃತಿ. ಪ್ರದೇಶ-ಜನಾಂಗ-ಆಚಾರ-ವಿಚಾರ. ನಂಬಿಕೆ-ಸಂಪ್ರಾದಯ. ಆಟ-ಪಾಠ. ಹವ್ಯಾಸಗಳು. ಆ ನಿಟ್ಟಿನಲ್ಲಿ ನಿರ್ಣಾಯಕ ಅಂಶಗಳಾಗಿರುತ್ತವೆ.

**ಸ್ಥಳ-ಪಾತ್ರ :**

'ದೇವದಾಸಿ'ಯ ಪಾತ್ರಗಳೆಲ್ಲ ಕೇವಲ ಸನ್ನಿವೇಶ ಸೃಷ್ಟಿಗೆ ಹುಟ್ಟಿದ ಸೂತ್ರದ ಗೊಂಬೆಗಳಾಗಿರದೆ. ಸನ್ನಿವೇಶಗಳಿಗೆ ಜೀವ ತುಂಬುವ. ಅವುಗಳನ್ನು ಭಾವಸಂಗಮವಾಗಿಸುವ ಕ್ರಿಯಾಶೀಲ ಶಕ್ತಿಗಳಾಗಿವೆ. ಕಾದಂಬರಿಯ ಪ್ರತಿಯೊಂದು ಪಾತ್ರ. ವ್ಯಕ್ತಿತ್ವ ನಿರ್ಮಾಣದ ದಿಸೆಯಲ್ಲಿ ಹೊಸ ಹೆಜ್ಜೆಗಳನ್ನು ಹಾಕಿದೆ. ಬೆರಿಕಿ ತಾತೋಬಾ. ಕರಬಸಪ್ಪ. ನಿಜಗುಣೆಯಂಥವರಲ್ಲಿಯೂ ತಮ್ಮ ಬದುಕಿನ ಅಸಹ್ಯ ಸ್ವರೂಪ ಬದಲು ಮಾಡಿಕೊಳ್ಳುವ ಬಲವಾದ ಹಂಬಲವಿದೆ. ಸ್ವತಃ ಲಕ್ಕಿಯೇ ಕೊನೆಗಳಿಗೆಯಲ್ಲಿ ಪರಿವರ್ತನೆಯ ಮಾತುಗಳನ್ನಾಡುತ್ತಾಳೆ. ಮನಃಪರಿವರ್ತನೆಗಿಂತ ಪ್ರೇಮಾಂತಃಕರಣದ ಪರಿವರ್ತನೆ ಹೆಚ್ಚು ಸಾತ್ವಿಕ-ತಾತ್ವಿಕವೆಂಬುದನ್ನು ಇಲ್ಲಿನ ಪ್ರತಿ ಪಾತ್ರಗಳೂ ಸಾರಿಹೇಳುತ್ತವೆ. ಬೆಳಗಲಿಯವರು ಗ್ರಾಮೀಣ ಅದರಲ್ಲಿಯೂ 'ಹೊಲಗೇರಿ'ಯ ಬದುಕನ್ನು ಕಣ್ಣಿಕ್ಕಿ ಕಂಡಿದ್ದಾರೆ. ಕಂಡಂತೆ ಕಂಡರಿಸಿದ್ದಾರೆ. ಮಾನವೀಯ ಸಂಬಂಧಗಳೇ ಅನ್ಯವ್ಯಕ್ತಿತ್ವ ನಿರ್ಮಿತಿಯ ದಿವ್ಯ ಔಷಧಿಯೆಂಬುದನ್ನು ಮನಗಂಡಿದ್ದಾರೆ. ಭರಮೂನಂಥ ಕಾಡುಗಲ್ಲಿಗಿಂತ ತಾತೋಬಾ. ಕರಬಸಪ್ಪ ಮತ್ತು ನಿಜಗುಣೆಯಂಥ ಕಲ್ಲುಮೂರ್ತಿಗಳೇ ಹೆಚ್ಚು ಭಯಾನಕ ! ಹಳ್ಳಿಗಳನ್ನು ಹಾಳುಗೆಡುವುವ ಈ ಹುಳಮುರುಕರನ್ನು ಮನುಷ್ಯರನ್ನಾಗಿ ಮಾಡುವುದಕ್ಕೆ ಪ್ರಕಾಶ.

೧೩೪. ದೇವದಾಸಿ : ನೆಲೆ. ಪುಟ IX

ವೀರೇಶಿಯಂಥವರ ಪ್ರೀತಿ-ವಿಶ್ವಾಸಕ್ಕಿಂತ ಮಹೇಶ ಪಾಟೀಲರಂಥವರ ಬೆತ್ತ-ಬಂದೂಕುಗಳ ಬೆದರಿಕೆಯೇ ಹೆಚ್ಚು ಯೋಗ್ಯ-ಪರಿಣಾಮಕಾರಿ. ಒಳ್ಳೆಯತನಕ್ಕೆ ಜಾತಿನಿರ್ಬಂಧವಿಲ್ಲ: ಪಾವಾಡಿ. ಪಾರ್ವತಿ. ಬಸಣ್ಣಿ. ವೀರೇಶಿಯಂಥವರು ಇದ್ದಾಗ ಮಾತ್ರ ಊರುಕೇರಿ ನಡುವೆ ಪ್ರೀತಿಯ ಸೆಲೆಯೊಡೆಯಲು ಸಾಧ್ಯ. ಕಾದಂಬರಿಯ ಎಲ್ಲ ಪಾತ್ರಗಳೂ ಬದುಕಿಗೆ ಬಹಳಷ್ಟು ಹತ್ತಿರವಾಗಿದ್ದು ವಾಸ್ತವದ ನೆಲೆಯಲ್ಲಿಯೇ ಮೂಡಿ ಬಂದಿವೆ. ಬೆಳಗಲಿಯವರು ಎಂಥ ಸಣ್ಣ ಪಾತ್ರಕ್ಕೂ ಸಾಹಿತ್ಯಿಕ ನ್ಯಾಯ ಒದಗಿಸಿಕೊಟ್ಟಿದ್ದಾರೆ. ನಿರುಪಯೋಗಿ ಅನಾವಶ್ಯಕ ಅನ್ನುವ ಪಾತ್ರಗಳೇ ಇಲ್ಲಿಲ್ಲ.

ಚೆನ್ನಪ್ಪ ದೇಸಾಯಿ. ಶಿವಪ್ರಕಾಶ. ಗಂಗಪ್ಪ. ವೀರೇಶ. ಮಹೇಶ ಪಾಟೀಲ. ಪರಸು. ಕಾಡು. ಮಲ್ಲೇಶಿ. ತಾತೋಬಾ. ನಿಜಗುಣಿ. ಪಾವಾಡಿ. ಪರಪ್ಪ. ನಾಗೇಶಿ. ಶಾಂತವೀರ. ರಾಚಪ್ಪ. ದುರ್ಗಪ್ಪ. ಮಾರುತಿ ಗಾಯಕವಾಡ. ಅವಿನಾಶ. ಭರಮು. ನಬಿ. ಬಸಣ್ಣಿ. ಪ್ರಭುದೇವ. ಭೀಮು. ರಾಯಪ್ಪ. ಮಹಾಂತ. ದಾನಯ್ಯ. ಸಿದ್ಲಿಂಗಶೆಟ್ಟಿ. ಅರವಿಂದ ಪರಮಾರ. ಮಾದೇವ. ಇವೇ ಮೊದಲಾದುವು ಕಾದಂಬರಿಯ ಪುರುಷ ಪಾತ್ರಗಳಾದರೆ. ಲಕ್ಕಿ. ನಾಗಿ. ರೇಣಿಕಿ. ಚಂದ್ರಿ. ಚಂದಾ. ಗುಲಾಬಿ. ವಿಮಲಾ. ಪಾರ್ವತಿ. ಬಾಗಿ. ಮಾಲಿನಿ. ಶಾಲಿನಿ. ಶೋಭಾ. ಸಂಧ್ಯಾ. ಬೌರವ್ವ. ನಿಂಬಿ. ಸಾಂವವ್ವ. ಯಮುನಿ. ಹನಮಿ. ಚೆನ್ನವ್ವ. ದೇವೀರಿ. ಶಾರೀ. ಮಹೇಶನ ಹೆಂಡತಿ. ಇವು ಪ್ರಮುಖ ಸ್ತ್ರೀ ಪಾತ್ರಗಳಾಗಿವೆ. 'ಸಾಬ್ಯಾ' ಗಂಡೂ ಅಲ್ಲದ-ಹೆಣ್ಣೂ ಅಲ್ಲದ 'ಪುಂಸ್ತ್ರೀನಪ್' ಪಾತ್ರವೆಂದರೆ ತಪ್ಪಾಗಲಿಕ್ಕಿಲ್ಲ. ಈ ಪಾತ್ರಗಳೆಲ್ಲ ಗ್ರಾಮನಾಮಗಳೇ ಆಗಿವೆ. ಕಾದಂಬರಿಯ ಕಥಾಹಂದರಕ್ಕೆ ಸರಿಯಾದ ಕಂಬಗಳಿದ್ದಂತೆ. ಅದನ್ನು ಇನ್ನಷ್ಟು ಭದ್ರಗೊಳಿಸುವಲ್ಲಿ ಸಫಲವಾದ ಪಾತ್ರಗಳು. ಪಾತ್ರಗಳಂತೆ ಪ್ರದೇಶವೂ ಕೂಡ ಗ್ರಾಮೀಣವೇ ಆಗಿದೆ. ಜಾನವಾಡ. ಕಲ್ಲಳ್ಳಿ. ತೇರದಾಳ. ಬೆನಕಟ್ಟಿ. ಚಿಮ್ಮಡ. ಹಾರೂಗೇರಿ. ಮುರಗೂರು. ಕಾಗವಾಡ. ಸಾರವಾಡ. ಮಾಸೊಡಗಿ. ಸೇಗುಣಿಶಿ. ನರವಾಡ. ಮಂಗಸುಳಿ. ಕುರ್ಲಟ್ಟಿ. ಮದಬಾವಿ. ಕುಡಚಿ. ಆಲಕನೂರ. ದಾನೋಳಿ. ಚಡಚಣ. ನೀವರ್ಗಿ. ಉಮದಿ. ಐನಾಪುರ. ಮದನಮಟ್ಟಿ. ಶೇಡಬಾಳ. ಹಾಗರಗಿ. ಬಬಲೇಶ್ವರ. ಕರ್ಲಟ್ಟಿ- ಈ ಪ್ರದೇಶಗಳೆಲ್ಲ ಗ್ರಾಮೀಣ ನಾಮಗಳೇ ಆಗಿದ್ದು. ಕಾದಂಬರಿಗೊಂದು ಭದ್ರ ಪ್ರಾದೇಶಿಕ ಗೆರೆಕೊರೆದುಕೊಟ್ಟಿವೆ: ಕಥೆ ಈ ಗೆರೆಯಲ್ಲಿಯೇ ತಿರುಗಾಡಿದರೂ ವಸ್ತು ಮಾತ್ರ ಎಲ್ಲಿಯಾದರೂ ಕಾಣುವಂಥದ್ದು.

**ಆಡುಭಾಷೆಯ ಸತ್ವಯುತ ಬಳಕೆ :**

'ಭಾಷೆ ಭಾವನೆಯ ಬಾಯಿ: ಅದೂ ನೆಲಕ್ಕನುಗುಣವಾದ ಭಾಷೆ ಮಾತ್ರ ತನ್ನ ತಾಜಾತನದಿಂದ ಮೂಗಿಗಡರಿ ವಾಸನೆ ಕೊಡಬಲ್ಲುದು. ಪ್ರಸ್ತುತ ಕಾದಂಬರಿಯಲ್ಲಿ ಬೆಳಗಲಿಯವರು ಪ್ರಾದೇಶಿಕ ಪ್ರೌಢಿಮೆಯನ್ನೇ ಮೆರೆದಿದ್ದಾರೆ. ವಾಸ್ತವದ ನೆಲೆಯ ಇವರ ಭಾಷಿಕ ಸೌಧ ತುಂಬ ಗಟ್ಟಿಯಾದುದು. ಅದು ಎಂಥ ಪ್ರಸಂಗದಲ್ಲಿಯೂ ಸೋರಿಲ್ಲ: ಸೊರಗಿಲ್ಲ. ಬೆಳಗಲಿಯವರ ಆಶಯದ ಸಫಲತೆ. ಅವರ ಭಾಷಾಸಾಫಲ್ಯವನ್ನೇ ಅವಲಂಬಿಸಿದ್ದು. ಎರಡೂ ಇವರಲ್ಲಿ ಯಶಸ್ವಿಯಾಗಿವೆ. ದೈನಂದಿನ ಬದುಕಿನ ಆಡುಭಾಷೆಯನ್ನೇ ಹೆಚ್ಚಾಗಿ ಬಳಸಿದ ಬೆಳಗಲಿಯವರು ಭಾಷೆಯ ಜೀವನಾಡಿಯನ್ನೇ ಕಾದಂಬರಿಯಲ್ಲಿ ಮಿಡಿದಿದ್ದಾರೆ. ಗ್ರಾಮಪರಿಸರದ 'ದೇವದಾಸಿ' ಗ್ರಾಮೀಣರ ಬದುಕನ್ನು ಗ್ರಾಮ್ಯಭಾಷೆಯಲ್ಲಿಯೇ ಚಿತ್ರಿಸಿದ್ದು ಪ್ರಾದೇಶಿಕ ಪಕ್ವ ಭಾಷೆಯ ಸೊಗಸು ಸಂಭಾಷಣೆಯಲ್ಲಿ ಸಹಜವಾಗಿ ಹದವಾಗಿ

ಬಿಚ್ಚಿಕೊಳ್ಳುವ. ಲೌಕಿಕ ಪರಿಜ್ಞಾನದಿಂದೊಡಗೂಡಿದ ಬೆಳಗಲಿಯವರ ' ಭಾಷೆ ' ಸಹೃದಯರನ್ನು ಗ್ರಾಮೀಣ ಬದುಕಿನ ಸಮಸ್ಯೆಗಳ ಆಳಕ್ಕೆ ಕೊಂಡೊಯ್ಯುವಲ್ಲಿ ಸಫಲವಾಗಿದೆ. ಸರಳ-ಸಹಜ-ಸಂದರ್ಭೋಚಿತ ಅಕೃತಕ ರೀತಿಯಲ್ಲಿ ಗ್ರಾಮ್ಯಭಾಷೆಯನ್ನು ಬಳಸಿಕೊಳ್ಳುವ ಬೆಳಗಲಿಯವರು ಉಳಿದ ಕಾದಂಬರಿಕಾರರಿಗಿಂತ ಸ್ವಲ್ಪ ಭಿನ್ನರೆನಿಸಿಕೊಳ್ಳುತ್ತಾರೆ. ಊದಿ ಹೊತ್ತಿಸಿದ ಅಗ್ನಿಯಂತೆ ಬೆಳಗಲಿಯವರ ಭಾಷಾ ಬರವಣಿಗೆಗೆ ಸಹೃದಯರನ್ನು. ವಿಮರ್ಶಕರನ್ನು ತಡೆದು ನಿಲ್ಲಿಸುವ ಸ್ಪಂದನಶಕ್ತಿಯಿದೆ. ಆಡುಭಾಷೆಯ ಸಹಜ-ಸರಳ-ಸಮರ್ಥ ಬಳಕೆಯಿಂದಾಗಿ ' ದೇವದಾಸಿ 'ಗೆ ಹೆಚ್ಚಿನ ಕಸುವು ಬಂದಿದೆ :

" ಚಿಗವ್ವಾ ತ್ವಾಟಕ್ಕ ನಡದೀಯೇನ ತಡಾ ಆತಲ್ಲ !" (ಪುಟ ೬)

" ತಂಗೀ. ಹರ್‍ಯಾಗೆದ್ದ ನೀ ಸಾಲಿಗಿ ಹೋಗಿರಬೇಕು. ಈಗ ಒಂಚೂರ ಮೊದಲ ಒಬ್ಬ ಬುಡಬುಡಕ್ಯಾ ನಿಮ್ಮನಿಗೆ ಬಂದಿದ್ದ...." (ಪುಟ ೭)

" ಇರ್‍ಲೆಳ ತಮಾ. ಅದೇನೋ ಅಂದ ಬಿಟ್ನೆ. ಏ ಪಾರವ್ವಾ ಹಾಂಗೇನ ತಿಳಕೋಬ್ಯಾಡಾ.... ಅಂ ಕೇಳಿಸ್ತೇನ....!" (ಪುಟ ೧೨)

" ಹಾದ್ಯಾಗ ಇಮಲಾ ಗಂಟ ಬಿದ್ದಿದ್ಲು...." (ಪುಟ ೧೩)

" ಯಪಾ ಅಟ್ಟ ಮಾಡಿದ್ರು ನಿಮಗ ಪುಣ್ಯಾ ಬರತೈತಿ ! ಇಮಲವ್ವನ ಆ ಬೆಂಕ್ಯಾಂದ ಪಾರ ಮಾಡಾವ್ರು ನೀವs...." (ಪುಟ ೨೩)

" ಯವ್ವಾ. ಇಮಲೀ ಮೈಯಾಗ ದೇವಿ ಬಂದಾಳ್ರಿ.... ಯಲ್ಲವ್ವ ತುಂಬ್ಯಾಳ್ರಿ...." (ಪುಟ ೩೭)

" ಇದೇನ ಹೊಲಸ ನಾಗಿ....?" (ಪುಟ ೪೦)

" ದೇವ್ರು ಇಚಾರ ಬಿಡ ತಂಗೀ ! ದೇವರ ಅದಾರೋ ಇಲ್ಲೋ ಆ ಮಾತ ಬ್ಯಾರೆ ! ಪಾಪ. ಈಗ ಈ ಕೂಸಿನ ಜೀಂವಾ ಹಾಳ ಮಾಡಾಕ ನಿಂತಾರಲ್ಲ ! ಈ ಚಂದ್ರಿ. ಪರಿವ್ಯಾ ಯಾಕ ಸೆಟದ ಹೋಗುದುಲ್ಲಾ ಅಂತೀನಿ...." (ಪುಟ ೫೩)

" ಯಾಂವನ ಜೋಡಿಯಾದ್ರೂ ಓಡಿ ಹೋಗಿರಬೇಕು. ಅಂತಾ ಹುರಬೆರಕೀ ಜಾತ್ಯಾಕೀ. ಅದೇನ ಕಳ್ಕೋತಾಳು....?" (ಪುಟ ೭೩)

" ಆಗಲ್ಯಾಗಲಿ. ಆ ನನ ಹಾಂಟ ಕುಡದಾವ್ನs ನನ ಮಗಳ್ನ ಮುಚ್ಚಿಟ್ಟಾನು. ಅಂವ್ನ ನಂಬಿದ್ನೆ ಯವ್ವಾ. ನಂಬಿ ಕೆಟ್ನೆ ! ಹರಾಂಖೋರ್ ಹೀಂಗ ಮಾಡ್ತಾನಂತ ಅನಿಸಿರಲಿಲ್ಲ...." (ಪುಟ ೬೭)

" ಎಕ್ಕಾ ಇಮಲಾಳ ಕಾರೇ ಆದ್ರುಪ್ಲೇ. ನಾನs ಪೈಲೇ ಗಿರಾಕಿ ಹುಡಿಕ್ಯಾಡಿಕೊಂಡ ಬರಾಕಿ.... ಸಾಯೂತನಕಾ ನಿನಗ ಸುಕಾ ಆಗೂ ಹಾಂಗ ದೊಡ್ಡ ಮಿಕಾ ಹಿಡೀತನು...." (ಪುಟ ೯೮)

" ಇದೇನ ಎಣ್ಣಾ, ನೀನೂ ಸಂತ್ಗಿ ಬಂದಿದ್ದೇನ ?" (ಪುಟ ೯೮)

" ನಾ ಸಣ್ಣಾಕಿ ಇದ್ದಾಗ ನಮವ್ವ ಅಂತಿದ್ದಿಳ್ರಿ.... ಮನೀಗಿ ಹೆಣಮಕ್ಕ ಇಲ್ಲಾ.... ನಮ ಇಬ್ರ ಅಕ್ಕಗೋಳ ಲಗ್ನ ಆದ ಮ್ಯಾಲ. ಈ ಮನಿ ನೋಡಲಾಕ.... ಯಾರೂ ಇಲ್ಲಾಗ್ತಾರು. ಮುಪ್ಪಿನ ಕಾಲಾಗ ಅವ್ವಾನ ನೋಡಾಕ ಬೇಕಲ್ರಿ...." (ಪುಟ ೧೧೫)

" ಪಾರೀ ಕೇರ್‍ಯಾಗ ಇಬ್ರು ಯಾರೋ ಲಗ್ನಾ ಆಗಾಕ ತಯಾರ ಆಗ್ಯಾರಂತ್ಲಾ...." (ಪುಟ ೧೨೩)

" .... ಒಬ್ನ ನಂಬಿ ಎಂದೂ ಇರಬಾರ್‍ದು. ಲಗ್ನ ಆದ ಗಂಡ ಏಳಂದ್ರ ಏಳೂದು ! ಕುಂದ್ರಂದ್ರ ಕುಂಡ್ರೂದು ಇದನ್ಯಾರ ಹೇಳ್ಯಾರು ? ಅವ್ರ ಆಳಾಗಿ ಇರಬೇಕೇನು....?" (ಪುಟ ೧೩೪)

" ಗಂಡ-ಹೇಣತಿ ಈ ಸಂಬಂಧsನ ಬ್ಯಾರೆ.... ಸಿಕ್ಕಸಿಕ್ಕ ಗಂಡ್ಸರ ಸೆರಗ ನನಗ ಬ್ಯಾಡಾಗೇತಿ...." (ಪುಟ ೧೩೪)

" ಮಗಳ್ನ ಮಾರ್‍ಕೋತೀರಿ.... ನೀವೇನ ಮನುಷ್ಯರs ? ನಿಮ್ಮಗಳಂದ್ರ ಎಮ್ಮಿಕರಾ. ಆಕಳಕರಾ. ಅಂತಾ ತಿಳಿದಿರೇನ....?" (ಪುಟ ೧೪೯)

" ಯಲ್ಲಮ್ಮಾ ದೇವಿ ನೀನs ಪಾರ ಮಾಡವಾ ಲಕ್ಕೀ ಕಾಲ ಚಲೂ ಮಾಡವಾ.... ಕಾಪಾಡವಾ.... ನೀನs ಸತ್ತ್ಯುಳ್ಳಾಕಿ.... ನೀನ ಸತ್ತ್ಯುಳ್ಳಾಕಿ.... ಲಗೂ ಆ ಹರ್‍ಕಿ ತೀರಸ್ತೇವು " (ಪುಟ ೧೫೭)

" .... ಈಗಿನ ಪೋರಿಗೋಳ್ಗಿ ಯಾನ ಹೇಳೂದೈತಿ....!" (ಪುಟ ೧೫೮)

" ಮನಕೊಳ್ಳಾಕ ಸೂಳ್ಯಾರಬೇಕು.... ಸುಕಾದುಕ್ಕಾ ನೋಡಾಕ ಬ್ಯಾಡಾ.... ಇದ ಸೂಳೀತನಾ ಮಾಡಾವ್ರ ಹಣೆಬರಾನs ಐತಿ....!" (ಪುಟ ೧೬೬)

" ಯಾನ ಅಪರೂಪ ಬಂದ್ಯಲ್ಲ ನಿಜಣ್ಣ.... !" (ಪುಟ ೧೭೩)

" ಅಂವನ್ಯಾನ ಕೇಳೂದು ಯಾದೀನೂ ಮುಗಿಸಿ ಬಿಡ್ತಿರ್‍ಯಾನ ನೋಡ್ರಿ" (ಪುಟ ೧೭೭)

" ಇವರ್‍ಗೇನ ಮನ್ಯಾಗ ಕೆಲಸಿಲ್ಲ ಕಾಣತೈತಿ ! ಯಲ್ಲಮ್ಮಗ ಭಂಡಾರ ಹಾಕಿ ಬಿಟ್ಟಾವ್ರಂಗ ಇಬ್ರೂ ನಮ್ಮ ಕೇರ್‍ಯಾನ ಮಂದೀನ ಸುರಸಾಕ ಬಂದಾರಂತ !" (ಪುಟ ೨೦೨)

" ಅದ್ಯಾಂವೋ ಭೋಸಡಿಮಗಾ. ನನ್ನ ಸರಳ ಮಾಡಾಂವಾ....! ಉಚಗೊಡ್ಡಾ ಹೊಡದ ಸರಳ ಮಾಡೂದು ನನಗ ಬರ್‍ತೈತಿ....! ಬಾಚೀಲೆ ಕೊಡ್ಡಾ ಕೆತ್ತಿಧಾಂಗ ಕೆತ್ತೂದೂ ಗೊತ್ತೈತಿ...." (ಪುಟ ೨೨೨)

" ನಡೀ ಮಗಳs ನಿಂದs ಏನೋ ಭಾನಗಡಿ ಕಾಣತೈತಿ.... ನಡೀ ನೀನs ಮುಂದಾಗು...." (ಪುಟ ೨೪೦)

" ಈಕೀ ನಮ್ಮೂರ ಹೊಲಗೇರ್‍ಯಾಗ ಲಕ್ಕಿ ಅಂತ ಅದಾಳ್ರೀ ಆಕೀ ಮಗಳು " (ಪುಟ ೨೭೭)

" ನೀವ ಪಥಾನ ಪೈಲೇ ಇಮಲಿ ಜೋಡಿ ನಡ್ಕೋರಿ...." (ಪುಟ ೨೯೮)

" ಹೊಲ್ಯಾರು ಉತ್ತಮ ಹುಡುಗರ್‍ಗಿ ಸಾಲಿಬರ್‍ಯಾಣ ಕಲಸ್ತಾರಂತ...." (ಪುಟ ೩೦೨)

" ಯವ್ವಾ ನನ ಮಗಾ....! ಅಂತ ಹಾಕೊಳ್ಳಾಕ ಹತ್ತೇದಿ.... ಏ ಮುದೋಡಿ ಮಂದಿ ಹೆಣಮಕ್ಕಳ್ಗಿ ಕಣ್ಣ ಹಾಕಬ್ಯಾಡಂತ ನಿನ ಮಗ್ಗ ಹೇಳಿ ತಾಕೀತ ಮಾಡ...." (ಪುಟ ೩೨೪)

" ಏಯ್ ಬಾಲವಾಡಿ ಅಕ್ಕವ್ರಂದ್ರ ನೀನs ಏನ್...." (ಪುಟ ೩೪೬)

" ಸುಮ್ನ ನಗಚಾಟ್ಗಿ ಹೇಳ್ನಿ. ನೀ ಖರೇಯಂತ ತಿಳ್ಕೊಂಡೇನ...." (ಪುಟ ೪೯)

" ಸಾಹೇಬ್ರ ಊರಾನ ಎಲ್ಲ ಜನಾ ಪ್ರೀತಿಯಿಂದ ಯವಸ್ಥಾ ಮಾಡ್ಯಾರಿ.... ನಮ ಮನಸ್ಸ ಮುರೀಬಾರ್ದು...." (ಪುಟ ೪೨೩)

" ನೋಡೂಣಲ್ಲ. ಕಾಲ ಹೆಂಗ ಕೂಡಿ ಬರ್ತತಿ ಬರ್ಲಿ.... ಈಗ ಮೊದಲ ಆಕೀ ಎಜ್ಯುಕೇಶನ್ ಪೂರ್ತಿ ಆಗಲಿ " (ಪುಟ ೪೩೭)

" ಹಾಂಗಾದ್ರ ಸ್ವಲ್ಪ ನೀವದಿ ಸಲ್ಲಿಸಿ ರಾಣೇಸಾಹೇಬ್ರು ಮಲಗಿರ ಒಳ್ಳೇದು...." (ಪುಟ ೪೪೦) – ಇತ್ಯಾದಿಗಳು.

**ದೇಸೀ ಮಾತುಗಳು :**

' ದೇವದಾಸಿ ' ಗ್ರಾಮೀಣ ಬದುಕಿನಲ್ಲಿ ಅರಳಿದ ಕಲಾಕುಸುಮ. ಹೀಗಾಗಿ ದೇಸಿಯೇ ಅದರ ಉಸಿರಾಗಿದೆ. ನಾಡುನುಡಿಗಳು ಅಥವಾ ದೇಸೀ ಮಾತುಗಳು ಭಾಷಾಚಲನೆಗೆ ಶಕ್ತಿ ತುಂಬಿ ಅದನ್ನು ಹೆಚ್ಚು ಸಶಕ್ತಗೊಳಿಸುತ್ತವೆಯಲ್ಲದೆ. ಸಂಭಾಷಣೆಗೆ ಮತ್ತಷ್ಟು ಸಹಜತೆಯನ್ನು ತಂದುಕೊಡುತ್ತವೆ. ಉತ್ತರ ಕರ್ನಾಟಕದ ಹಳ್ಳಿಗಾಡಿನ ಕಥೆಯಾದುದರಿಂದ ಅದೂ ' ಹೊಲಗೇರಿ'ಯ ಒಳಬದುಕನ್ನು ಬಿಚ್ಚಿಡುವ ಪ್ರಸ್ತುತ ಕಾದಂಬರಿ ದೇಸೀಯತೆಯಲ್ಲಿ ಎರಕಹೊಯ್ದಂತೆ ಮೂಡಿಬಂದಿದೆ. ಅಲ್ಲಲ್ಲಿ ಶಿಷ್ಟತೆ ಹಣಿಕಿಹಾಕಿದರೂ. ದೇಸೀಯದೇ ಹೆಚ್ಚಿನ ಪ್ರಾಬಲ್ಯ. ವರ್ಗ-ವರ್ಣ. ವೃತ್ತಿ-ಲಿಂಗ ಭೇದಗಳಂತೆ ದೇಸೀಮಾತುಗಳಲ್ಲಿಯೂ ವೈವಿಧ್ಯತೆಯಿದ್ದು. ಬೆಳಗಲಿಯವರು ಹದಬೆದವರಿತು ದೇಸೀಯಮಾತುಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ಹೇರಳವಾಗಿಯೇ ಬಳಸಿದ್ದಾರೆ-ಬೆಳೆಸಿದ್ದಾರೆ : ಕಾಟ. ಪಕನಾಕ. ಪಥಾನಪೈಲೇ. ಬ್ರಾಂಬ್ರು. ಒಲ್ಲಿ. ಕ್ವಾಪಾ. ಯಕ್ಕಾ. ಯಪಾ. ಯವ್ವಾ. ಯಣ್ಣಾ. ಚಿಗವ್ವ. ಸಿಮವ್ವ. ಸಿಮಪ್ಪ. ಯಾಳೆ. ಸಿರಂಬ್ಳ. ಗುಂಪಿ. ಆತು. ಐತಿ. ಬಾಗಾಯತ. ಪಡಸಾಲಿ. ಬೆದರಿ. ತಮಾ. ನ್ಯಾರಿ. ಈಬತ್ತಿ. ಸಪಟ್ಟ. ಠುಮಕ್ಕ. ರಣಾಲಗಿ. ವಾಂಡ. ಸರಕ್ಕನ. ಶಾಸಕ್ಕಿ. ಪರಡಿ. ಉಪ್ಪೈಕ. ಗೊಂಗಡಿ. ಧರ್ತಿ. ದಂಡಿ. ಗಪ್ಪ, ಅಟ್ಟರಾಗ. ಇನಾ. ಬ್ಯಾರೇಕಡಿ. ರಗಡ. ದೀಡ. ಲಿಂಗೋತ್ರ. ಅಪನಾರ. ಅವನಾರ. ತಾಬಾಣ. ಗಗ್ಗವಾಸಸಿ. ತಲಬು. ಉಣಾಕ. ಕೇಳ್ಳಿ. ಹೇಳ್ಳಿ. ಕೇಳಿದ್ರುಪ್ಲೇ. ಹೇಳಿದ್ರುಪ್ಲೇ. ಆದ್ರುಪ್ಲೇ. ಇಣಕಿ. ಸಂಸೇ. ವಾಸ. ಯಾನ. ಯಾಂಸೀದೀಡಿ. ಬೋಕ. ಅಕಲ. ಇನಂತಿ. ಚಿಲಮಿ. ಮಕವೀಸಿ. ಚಮಾ. ಎಟ್ಟ. ಕಿತಬಿ. ತಗದೀರಿ. ಕೆತ್ತೆಬಜೆ. ಅಯ್ಯಯ್ಯವ್ವ. ನನಗ್ಯರೆ. ಹ್ಯಾಣತಿ. ಯಾನಾತ. ತಮುಗೋಳ್ಯಾ. ನುಗಸ. ಅಜಮಾಸ. ಮಗಳ್ಗತೆ. ಡಬ್ಬ. ಹಲ್ಲುಕಿಸಿ. ಬ್ಯಾಡವಾ. ಹೇಳಿಳು. ಕೇಳಿಳು. ಕಾಗಾಳಿ. ಸಿಚ್ಚೀ. ನೆಟ್ಟ. ದಗದಾ. ಯಾಂಬಲ. ಕುಂತ್ರ. ಐತೆಂತ. ಹತೇಕ. ಸಿವದಿ. ರಾತ್ರಿಥಾಗುದ್ದೀ. ಹಾದರ. ತಿನ್ನಂವ. ಮುಣಗತಾನು. ಇಲ್ಲಲಾ. ಮತೇನಪಾ. ತಗೀತಮಾ. ಬರೂ. ಹೋಗೂ. ಇನಾ. ವಯಾ. ಕುಡಸಾಲ್ಯಾ. ಗಣಸರ. ಹಾಂಗ. ಹೀಂಗ. ಹೆಂಗ. ಈ ಮುಂತಾದವುಗಳು ಅಥಣಿ. ಬನಹಟ್ಟಿ. ರಬಕವಿ. ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಪದಗಳು. ಇಂಥ ಬಾಯ್ಮಾತುಗಳನ್ನು ಎಗ್ಗಿಲ್ಲದೆ ಸುಗ್ಗಿಯಂತೆ ಬಳಸುವ ಬೆಳಗಲಿಯವರು ಅನೇಕ ವಿಶಿಷ್ಟಾರ್ಥದ ಪದಗಳನ್ನೂ ಕಾದಂಬರಿಯಲ್ಲಿ ಬಳಸಿದ್ದಾರೆ. ಅವುಗಳಿಗೆ ಕಾದಂಬರಿಯ ಕೊನೆಯಲ್ಲಿ ಅರ್ಥವಿವರಣೆಯನ್ನೂ ಕೊಟ್ಟಿದ್ದು ತುಂಬ ಸಮಂಜಸವಾಗಿದೆ.

**ವಿಶಿಷ್ಟಾರ್ಥದ ಪದ - ಪದಪುಂಜಗಳು :**

ಅಡನಾಡಿ (ಹುಂಬ). ಇಸಾರ (ಮುಂಗಡ). ಉಗುಳುದಾಟು (ಮಾತುಮೀರು). ಏಕನಂಬರ (ಶ್ರೇಷ್ಠ). ಗಂಟುಬೀಳು (ಭೇಟಿಮಾಡು). ಕೊರಳಲ್ಲಿ ಗುದ್ವೀಕಟ್ಟು (ಲಗ್ನಮಾಡು). ಖಲಾಸ್‌ಮಾಡು (ಕೊಲೆಮಾಡು). ಗಳಹು (ಜಂಬಕೊಚ್ಚು). ಗುಳಿದಾಳಿ (ಮಂಗಳಸೂತ್ರ). ಜಗ (ಎಲ್ಲಮ್ಮನ ಮೂರ್ತಿಯಿಡುವ ಹಡಿಗೆ). ಪಂಚೇತಿ (ತೊಂದರೆ). ಬಾಡ (ವೇಶ್ಯಾವೃತ್ತಿಯಿಂದ ಬಂದ ಹಣ). ಪಸಂತ (ಒಪ್ಪಿಗೆ). ಪಡ (ಬೆಳೆಯಸಾಲ). ಬೇಧಡಕ (ನಿರ್ಭಯವಾಗಿ). ಮುಡಚೆಟ್ಟು (ಮೈಲಿಗೆ). ವಾಂಡ (ಪುಂಡ-ಉಡಾಳ). ವಾಟಾಗಾಟಿ (ಮಾತುಕತೆ). ಶಾಣ್ಯಾ (ಜಾಣ). ಸೆಟದಹೋಗು (ಸಾಯು). ಸೆರಗಿನಲ್ಲಿ ಗಂಟುಹಾಕಿಕೊಳ್ಳು (ಖಚಿತ ಪಡಿಸಿಕೊಳ್ಳು). ಹೋಳಿಗಿ ಹೊಡೆಸು (ಲಗ್ನಾ ಮಾಡು). ಸಾಫ್ ಎಳಿ (ಸಮಾಧಾನ ಮಾಡು). ಕೈಬೆಚ್ಚಗೆ ಮಾಡು (ಲಂಚಕೊಡು). ಸೊಪ್ಪುಹಾಕದ (ಹೆದರದ). ಹೂಉದುರಿಸು (ಬೈಗುಳಗಳು). ಐಸಿರಿ (ಸೊಬಗು-ವ್ಯಂಗ್ಯಾರ್ಥದಲ್ಲಿ). ಕಾಲಿಗೆ ಬುದ್ಧಿಹೇಳು (ಹೊರಟುಹೋಗು). ಹೂಟ (ಯೋಜನೆ). ಕುಂಡೀಬುಡಕ್ಕಹಾಕು (ಅಲಕ್ಷಿಸು. ಮರೆತುಬಿಡು). ಹರಿಹಾಯಿ (ಸಿಟ್ಟಿಗೇಳು) ಕಾಕಂಬಿ (ಕುದಿಯುವ ಕಬ್ಬಿನರಸ). ಎಡಗೈ ಹೆಬ್ಬಟ್ಟಿನ ಗೆಣೆಯ (ಅನಕ್ಷರಸ್ಥ). ಕಾಯಾಸ (ಕಲ್ಪಿಸು). ಹಕನಾಕ (ಅಕಾರಣ). ಬುರುಡೆಬಿಡು (ಸುಳ್ಳು ಹೇಳು). ಹೋಳಿಹುಣ್ಣಿಮೆ ಆಚರಿಸು (ಹೊಯ್ಕೊಳ್ಳು). ತಲಿಗಿ ಬಡದೈತಿ (ಸಾಕಾಗಿದೆ). ದಗದಾ (ಕೆಲಸ). ಹೆಟ್ಟಿಸಿಕೊಳ್ಳು (ಬೈಸಿಕೊಳ್ಳು). ವಾಜಮಿ (ಯೋಗ್ಯ). ಭಾನಗಡಿ (ಸಲ್ಲದ ಕಾರ್ಯ). ಮದತ (ಸಹಾಯ). ಬಟ್ಟಾ (ಅಪಕೀರ್ತಿ). ಬಕರಾ (ಬಲಿಪಶು). ಪುತ್ಯಾ (ಓಡಿಹೋಗು). ಪರಲು ಹರಿ (ಬಿಡುಗಡೆ ಹೊಂದು). ಪಥಾನ ಪೈಲೇ (ಪ್ರಥಮ ಸಲ). ಪಡಕಿ (ಹಳೆಯ ಸೀರೆ). ಬುಚಡ (ತಲೆಗೂದಲು ಗಂಟು). ಬೇಗಳ (ಬೈಗುಳ). ಬೋಕ (ರಂಧ್ರ). ಭರ್ಷಣ (ಅಪಥ್ಯ). ಹಾಂಟ (ವೇಶ್ಯಾವೃತ್ತಿಯ ದಲ್ಲಾಳಿಯ ಗಳಿಕೆ). ಹುದಲು (ಕೆಸರು). ಸಿಂವಿ (ಸಿಹಿ). ಸಾಜೋಗ (ಸಾಂಭಾವಿತ). ಇಪ್ಪೀಜಿಡ್ಡ (ಬಟ್ಟೆಗೆ ಅಂಟಿಕೊಳ್ಳುವ ಒಂದು ರೀತಿಯ ಮುಳ್ಳುಕಂಟಿ). ಉಡಿಕೆ (ಮರುಮದುವೆ). ಕಿವಿಗಿ ಹರಳು ಹಚ್ಚು (ಕಟ್ಟಿಗೆ ಹಚ್ಚು-ಶಿಕ್ಷೆವಿಧಿಸು). ಆಯಾರ (ಕಾಣಿಕೆ). ಇಕ್ಕರಿಸು (ಹೊಡೆ). ಕಾಲಲ್ಲಿ ಹಾವು ಬಿಡು (ಅಂಜಿಸು. ಭಯಪಡಿಸು). ಕಿತಬಿ (ಸಲ್ಲದಕಾರ್ಯ). ಕಿಸಾಮತಿ (ಸಾಧನೆ-ವ್ಯಂಗ್ಯಾರ್ಥದಲ್ಲಿ). ಕೂಲ (ಸಂಬಂಧ. ರಹಸ್ಯ). ಚೈನೀ (ಸುಖೋಪಭೋಗ). ತಾಬಂಡಿ (ತಾಬಾಣ. ತಟ್ಟೆ). ನಖರಾ (ವೈಯಾರ). ಮುದೋಡ್ಯಾ (ಮುದಕ). ಮುದೋಡಿ (ಮುದಕಿ). ಇತ್ಯಾದಿಗಳು. ಇಂಥ ವಿಶಿಷ್ಟಾರ್ಥದ ಪದಪ್ರಯೋಗಗಳಿಂದ ಕೃತಿಗೆ ಹೆಚ್ಚಿನ ಕಸುವು ಬಂದಿದ್ದು. ಕಾದಂಬರಿಯನ್ನು ಇನ್ನಷ್ಟು ಸಶಕ್ತಗೊಳಿಸಿವೆ.

**ಗ್ರಾಮೀಣ ಬೈಗುಳಗಳು :**

ಗ್ರಾಮೀಣರ ದೈನಂದಿನ ಬದುಕಿನಲ್ಲಿ ಬೆಸೆದುಕೊಂಡಿರುವ. ಅವರ ಬದುಕಿನ ಅವಿಭಾಜ್ಯ ಅಂಗವಾದ ಬೈಗುಳಗಳು ಪ್ರಸ್ತುತ ಕಾದಂಬರಿಯಲ್ಲಿ ಹಾಸುಹೊಕ್ಕಾಗಿ ಬಳಕೆಗೊಂಡಿವೆ. 'ಹೊಲಗೇರಿ' ಯೇ ಕಾದಂಬರಿಯ ಕೇಂದ್ರಬಿಂದುವಾದುದರಿಂದ ಈ ರೀತಿಯ ಬೈಗುಳಗಳು ಹೇರಳವಾಗಿಯೇ ಬಳಕೆಗೊಂಡಿವೆ. ಸನ್ನಿವೇಶ-ಪಾತ್ರಗಳ ಗುಣ ಸ್ವಭಾವದ ಒನ್ನೆಲೆಯಲ್ಲಿ ಬೈಗುಳದ ಪದಗಳನ್ನು ಲೇಖಕರು ಬಳಸಿಕೊಂಡಿದ್ದಾರೆ : ಹಾಂಟS.

ಹಾಂಟಕುಡದವ್ನs. ಚೋದು. ನಾಚಿಗ್ಗೇಡಿ. ಹರಕಚಪ್ಲೀ ತಗೊಳ್ಳೋ. ಇಟಗೋ. ಹುಚ್ಚನನ ಹಾಂಟ್ಯಾ. ಲಬಾಡ. ಎಪರೇಶಿ. ಸೆಟದ ಹೋಗು. ಕತ್ತೀಮಗಾ. ಮಕ್ಳು. ಹರಾಂಖೋರ. ಲಡಮೂ. ಲುಚ್ಛಾ. ಹೆಣಗುಂಡ್ಯಾ. ಹೊಲಸ್ಹೂಳೀಮಗಾ. ಹಾದರದವ್ನ. ಹಾದರ್‍ಗಿತ್ತಿ. ಉಢಾಳ. ಲಫಂಗ. ಭಾನಗಡಿಖೋರ. ಹಲ್ಕಟ್. ಮುದೋಡ್ಯಾ. ಊರಮುದೋಡ್ಯಾ. ಹೇಲತಿನ್ನವ್ನ. ಇನಮ್ಮಿ ನನ್ನ ಹಸೆರ್‍ಗ ಬಂದೆಂದ್ರ ಹರಕ ಚಪ್ಲೀಲೆ ಹಾಕಲೇನು. ಘೋಸಡಿಮಕ್ಕಳು. ನಡೀ ಮಗಳ. ನಾಡಹಲ್ಕಟ್ಟ. ಹೊಟ್ಟಿಗೇನ ಹೇಲ ತಿಂತಿಯೇನ. ಮುದೋಡಿ. ಅವ್ರಪ್ಪಗ ಹುಟ್ಟಿದರ ಮುಂದ ಬರ್‍ಲಿ. ಮುಕಳಿಮ್ಯಾಲ ಒದ್ದೀನ. ಸೂಳಿ. ಹೊಲ್ಯಾರಸೂಳಿ ಮಕ್ಕ. ಹೊಲ್ಯಾರಸೂಳಿ. ಮಳ್ಳ. ನಾಡಮಳ್ಳ. ಹೊಲ್ಯಾ. ಮುಕಳಿಮ್ಯಾಲ ಒದ್ದ ಹೇಳ್ರಿ. ಬೇವಾರ್ಸಿ. ಮುಕಳ್ಯಾಗೇನ ಹಲ್ಲ ಬಂದಾವೇನ. ಕಿಮ್ಮತಗೇಡಿಗೋಳ. ಮಂಗ್ಯಾ. ಮಿಂಡ. ರಂಡಿ. ಹರಾಮಿ. ಕುಂಟಲಗಿತ್ತಿ. ಇಟಗೊಂಡ ಸೂಳಿ. ಬಾನ್‌ಚೋದ್. ಭಿಕಾರಚೋದ್. ಚಂಡಾಳ ಚೌಕಡಿ. ಬಿಡಾಡಿ. ಹೊಲಸ ತಿನ್ನವ್ನ. ತಲೆಹಿಡಿಕ. ಠಕ್ಕ. ಕೇಡಿ. ಬಣವಿಹಿರ್‍ಯಾ. ಹೊಲಗೇರಿ. ಹೇಲ ತಿನ್ನವ್ನ. ಸತ್ರುಸಾಯ್ಲಿ. ಹೇಲೂ ಕೇರ್‍ಯಾಗ ಬೀಳೂ ಹಂದಿಗೋಳ. ಹುಳಾಬಿದ್ದ ಸಾಯು. ನಾಯಿಹಾಂಗ ಗಪ್ಪ ಕುಂಡ್ರು. ಇತ್ಯಾದಿ ಗ್ರಾಮೀಣರ ಬೈಗುಳಗಳನ್ನು ಬೆಳಗಲಿಯವರು ಹದಸಿರಿಯಾಗಿ ಬಳಸಿದ್ದಾರೆ. ಇವುಗಳನ್ನು ಕಾದಂಬರಿಯಿಂದ ಹೊರತಗೆದರೆ ಅಶ್ಲೀಲವೆನಿಸಿದರೂ. ಕಾದಂಬರಿಯ ಸಂದರ್ಭದಲ್ಲಿ ಅಶ್ಲೀಲವೆನಿಸಲಾರವು.

## ದ್ವಿರುಕ್ತಿ - ಜೋಡುನುಡಿಗಳು :

ಭಾಷಾತೀವ್ರತೆಗೆ ದ್ವಿರುಕ್ತಿಗಳು ತೀರ ಅವಶ್ಯವೆನಿಸುತ್ತವೆ. ವಸ್ತುವಿನ ಭಾವಕ್ಕೆ ಮೊನಚು ಬರುವುದು ಇಂಥ ದ್ವಿರುಕ್ತಿಗಳಿಂದಲೇ ಭಾಷೆಯ ಸತ್ವಯುತ ಬಳಕೆಯಲ್ಲಿ ಇಂಥ ದ್ವಿರುಕ್ತಿಗಳ ಪಾತ್ರ ಹಿರಿದು. ಹೀಗಾಗಿ ಬೆಳಗಲಿಯವರು ಪ್ರಸ್ತುತ ಕಾದಂಬರಿಯಲ್ಲಿ ದ್ವಿರುಕ್ತಿಗಳನ್ನು ಹೇರಳವಾಗಿಯೇ ಬಳಸಿದ್ದಾರೆ : ಲಟಲಟ. ತಮ್ಮತಮ್ಮ. ಹೀಹೀ ಬರ್‍ರಿಬರ್‍ರಿ. ಫಟ್‌ಫಟ್. ಹೊಸಹೊಸ. ಹಿಗ್ಗಿಹಿಗ್ಗಿ. ಹಿಯೇಹಿಯೇ. ಬಗೆಬಗೆ. ಮೂಡಿಮೂಡಿ. ಬಡಿದುಬಡಿದು. ನಡೀರಿನಡೀರಿ. ಹೇಳೀ ಹೇಳ್ತಾರು ಹೇಳೀ ಹೇಳ್ತಾರು. ಚಮೂಮಾಡು ಚಮೂಮಾಡು. ಮತ್ತೆ ಮತ್ತೆ. ಉಧೋ ಉಧೋ. ಥಕಥಕ. ಬಾಗಿಬಾಗಿ. ಕಂಡು ಕಂಡು. ಕೇಳಿ ಕೇಳಿ. ಕಣ್ಣುಕಣ್ಣು. ಮಿರಿಮಿರಿ. ಸುಮ್ಮಿರಿಸುಮ್ಮಿರಿ. ಪಿಳಿಪಿಳಿ. ಹೌದುಹೌದು. ಕೈಕೈ. ಸಣಸಣ. ನಮೋನಮೋ. ಗಲ್ಲಾಗಲ್ಲಾ. ಚಾಲಚಾಲ. ಹಾಡಿಹಾಡಿ. ಜೊಂಡಜೊಂಡ. ಗದಗದ. ಗುಬುಗುಬು. ಸಿನಿಮಾ ಸಿನಿಮಾ. ಬುರುಬುರು. ಮೇಲೆ ಮೇಲೆ. ಚಿಕ್ಕ ಚಿಕ್ಕ. ಛೇ ಛೇ. ಚಳಪಳ್ ಚಳಪಳ್. ತೆರೆತೆರೆ. ಡವಡವ. ಬರ್‍ತಬರ್‍ತ. ಸಣ್ಣಸಣ್ಣ. ಖರೆಖರೆ. ಕೆಟ್ಟಕೆಟ್ಟ. ಬೇರೆಬೇರೆ. ಗುಸುಗುಸು. ಸಿಕ್ಕಸಿಕ್ಕ. ಟಕ್‌ಟಕ್. ಲಗೂಲಗೂ. ಎಟ್ಟಿಕ್ಕ ಬರ್‍ತೀ ಎಟ್ಟಿಕ್ಕ ಬರ್‍ತೀ. ಗಡಗಡ. ಕೂಗಿಕೂಗಿ. ಏಲಿಏಲಿ. ಸೀನs ಸತ್ತ್ಯಳ್ಳಾಕಿ ಸೀನs ಸತ್ತ್ಯಳ್ಳಾಕಿ. ಕೇರಿಕೇರಿ. ಬಂದ್ರ ಬಂದ್ರ. ಹುಂ ಹುಂ. ಬೇಗ ಬೇಗ. ಬ್ಯಾಡಬ್ಯಾಡ. ಹಾಂಗೇಸಿಲ್ರಿ ಹಾಂಗೇಸಿಲ್ರಿ. ಅದರೀ ಅದರೀ. ಹೊರಳಿಹೊರಳಿ. ಮರಾಮರಾ. ಮದವೀ ಮದವೀ. ಮಳಮಳ. ಹುಳುಹುಳು. ಮಗಳ ಮಗಳ. ದಳದಳ. ಇದೇನ ನಡಸೀರಿ ಇದೇನ ನಡಸೀರಿ. ಪಟಪಟ. ಮೂತಿಮೂತಿ. ಜೀಜೀ. ಕಾಣಾಕಾಣಾ. ಸುಳ್ಳ ಸುಳ್ಳ. ಧರಧರ. ಏಏ. ಲಬೋ ಲಬೋ. ಹುರುಹುರು. ನಕ್ಕನಕ್ಕ. ಮುಸುಮುಸು. ತುಂಡತುಂಡ. ಬರಬೇಕು ಬರಬೇಕು. ಯಾರಹೇಳ್ತಾರು ಯಾರಹೇಳ್ತಾರು.

ತಿಂಗಳ ತಿಂಗಳ. ಇದೇನ ಹೇಳ್ತೀರಿ ಇದೇನ ಹೇಳ್ತೀರಿ. ಬಾಕಿಬಾಕಿ. ಕಂಡೂ ಕಂಡೂ. ಛೀಛೀ. ಹಾಂಹಾಂ. ದಬದಬ. ತಾಜಾತಾಜಾ. ಹಣಿಹಣಿ. ಎಲ್ಲಾ ಎಲ್ಲಾ. ಎದಿಎದಿ. ಲಕಲಕ. ಹೌದ್ರಿಹೌದ್ರಿ. ಹುಯ್‌ಹುಯ್. ಮತ್ತ ಹೇಳಿದ್ರು ಮತ್ತ ಹೇಳಿದ್ರು. ಪರಪರ. ಸಿಗಿಸಿಗಿ. ಏಯ್‌ಏಯ್. ಪಿರಿಪಿರಿ. ಇತ್ಯಾದಿ ದ್ವಿರುಕ್ತಿಗಳನ್ನು ಬಳಸಿ ಭಾವ-ಭಾಷೆಗಳೆರಡಕ್ಕೂ ಹೊಸಚಾಲನೆ ನೀಡಿದ್ದಾರೆ. ಅರ್ಥಸಾಮಿಪ್ಯದ ಜೋಡುನುಡಿಗಳನ್ನು ಹದವರಿತು ಲೇಖಕರು ಬಳಸಿಕೊಂಡಿದ್ದಾರೆ : ಅಕ್ಕಪಕ್ಕ. ಸುಳ್ಳುಹೊಟ್ಟ. ಕಾಡಿಬೇಡಿ. ಕೆರಿಬಾವಿ. ದೇವರು ದಿಂಡರು. ಭೇದಭಾವ. ಜಾತಿಪಾತಿ. ಹೊಲಮನೆ. ದೇಖರೇಖಿ. ವೇಷಭೂಷಣ. ಶಕ್ತಿಸಾಹಸ. ಹಣ್ಣುಹಂಪಲ. ಗಲಿಬಿಲಿ. ಸಿಡಿಮಿಡಿ. ಖಂಡತುಂಡ. ಸುತ್ತಮುತ್ತ. ಗದ್ದಲಗೊಂದಲ. ಕಕ್ಕಾವಿಕ್ಕಿ. ತಳಿರು ತೋರಣ. ಬೀಗರು ಬಿಜ್ಜರು. ತಳಮಳ. ಸುಳ್ಳ ಪಳ್ಳ. ಮಡಿಮೈಲಿಗೆ. ಖರೇಖಚಿತ. ಸಿಂದಿಸೆರೆ. ಅಲ್ಲೋಲಕಲ್ಲೋಲ. ಒಳಹೊರಗ. ಹಿಂದೆಮುಂದೆ. ಅತ್ತಇತ್ತ. ರೀತಿನೀತಿ. ಹಾಲು-ಹೈನು. ಸಿನಿಮಾ-ಗಿನಿಮಾ. ಚಲ-ಅಚಲ. ಸತ್ಯ-ಮಿಥ್ಯ. ಅರ್ಥ-ಮರ್ಥ. ಕಳವಳ. ಅಡ್ಡ-ತಿಡ್ಡ. ಪಾತ್ರೆಪಗಡ. ಕೆಲಸಾಬಗಸಿ. ಕಸ-ಕಡ್ಡಿ. ಸುಣ್ಣ-ಬಣ್ಣ. ಚಳ್-ಪಳ್. ಹರಿಜನ-ಗಿರಿಜನ. ಬಟ್ಟೆ-ಬರೆ. ಹಾಲ್-ಹವಾಲ್. ಪರ್ಸಿ-ಗೀರ್ಸಿ. ಅಪ್ಪಿ-ತಪ್ಪಿ. ತಿಂಡಿ-ತಿನಿಸು. ಹಿನ್ನೆಲೆ-ಮುನ್ನೆಲೆ. ಗುಸು-ಮುಸು. ಗಪ್‌ಚಿಪ್. ಚೆಲ್ಲಾಪಿಲ್ಲಿ. ಉರಿಗಿರಿ. ಹರ್ಕಿಗಿರ್ಕಿ. ಅರೆಬರೆ. ಚಡೀಪಡೀ. ಸಾಲಾಗೀಲಾ. ಸುಖದುಃಖ. ಬಂಧುಬಳಗ. ಕಹೀ-ವಿಷ. ವಸ್ತ್ರವಡವಿ. ಏಚುಪೇಚು. ಸಾಲೀಪಾಲೀ. ಲಗ್ನಾಪಗ್ನಾ. ಛೀಥೂ. ಶಿಕ್ಷಾಪಕ್ಷಾ. ನುಚ್ಚುನುರಿ. ಗುಡಿಗುಂಡಾರ. ಜಡ್ಡಾ ಜಾಪತ್ರಿ. ಕಸಾಕಳೆ. ಕಾಡೂಕಾಟ. ಗಿಡಮರ. ಅಕ್ಕಿಬೇಳೆ. ಕೂಲಿಕುಂಬ್ಳಿ. ಕನಸುಮನಸು. ತಮ್ಮ ತಂಗಿ. ಕೈಕಾಲು. ಅಕ್ಕಿಕಾಳು. ಊರಾಗ - ಕೇರ್‍ಯಾಗ. ಸಂತೀಪ್ಯಾಟಿ. ಕಷ್ಟನಷ್ಟ ಸಂದುಗೊಂದು. ತಂಟೆತಕರಾರು. ಮಾನಮರ್ಯಾದೆ. ಕಾಯ್ದೆ ಕಾನೂನು. ಇತ್ಯಾದಿಗಳು.

**ಗಾದೆಮಾತು - ಪಡೆನುಡಿಗಳು :**

ಬದುಕಿನ ಸ್ಪಷ್ಟ ಅನುಭವವೇ ಪಡೆನುಡಿಗಳು. ಈ ಅನುಭವವೇದ್ಯವಾದ ಮಾತುಗಳನ್ನೇ ಗಾದೆಮಾತುಗಳೆಂದೂ ಕರೆಯುತ್ತಾರೆ. ಪರಸ್ಪರ ಇವೆರಡೂ ಒಂದೇ ಎನಿಸಿದರೂ. ಸೂಕ್ಷ್ಮವಾದ ತಾತ್ವಿಕನೆಲೆಗಟ್ಟಿರುವುದು ಗಾದೆಮಾತುಗಳ ವಿಶೇಷವೆನ್ನಬಹುದು. ಬೆಳಗಲಿಯವರು. ಉತ್ತರ ಕರ್ನಾಟಕದ. ಅದೂ ಬೆಳಗಾವಿ. ಬಿಜಾಪುರ. ಧಾರವಾಡ ಪ್ರದೇಶಗಳಲ್ಲಿ ಹೆಚ್ಚಾಗಿ ಚಾಲ್ತಿಯಲ್ಲಿರುವ ಗಾದೆಮಾತು - ಪಡೆನುಡಿಗಳನ್ನು ತುಂಬ ಔಚಿತ್ಯಪೂರ್ಣವಾಗಿ ಬಳಸುವುದರ ಮುಖಾಂತರ ಕಾದಂಬರಿಗೆ ' ಭಾಷಿಕಬಲ ' ತುಂಬಿದ್ದಾರೆ.

" ಕಾಗೆ ಕೂಡ್ರುವದಕ್ಕೂ ಟೊಂಗೆ ಮುರಿಯುವುದಕ್ಕೂ ಸರಿ...." (ಪುಟ ೪)

" ಹೊಟ್ಟ್ಯಾಗಿನ ಸಿಟ್ಟು ರಟ್ಟೆಯಲ್ಲಿರಲಿಲ್ಲ...." (ಪುಟ ೫)

" .... ಸಲಗಿ ಕೊಟ್ರ ತಲೀಗಿ ಏರ್‍ತಾರ...." (ಪುಟ ೧೦)

" ಹೊಸಲು ನೋಡಿ ಬಸಿರಾದಂತೆ...." (ಪುಟ ೧೧)

" .... ಬೋರ್ಗಲ್ ಮ್ಯಾಲ ನೀರ ಸುರುವುದೂ ಒಂದs " (ಪುಟ ೧೨)

" .... ಇಪ್ಪಿಜಿಡ್ಡಿನಂತೆ ಅಂಟಿಕೊಂಡ...." (ಪುಟ ೧೫)

" .... ಜೋಲಿ ಹೋಗಿ ಬೀಳುತ್ತಿರುವಲ್ಲಿ ಆಧಾರವಾಗಿ ಕಂಬ ಕೈಗೆ ಸಿಕ್ಕಂತೆ " (ಪುಟ ೨೨)

" .... ಹಿಗ್ಗಿಹಿಗ್ಗಿ ಹಿರೇಕಾಯಿ ಆಗು...." (ಪುಟ ೨೩)

" ವಯಸ್ಸಾದ ಬಳಿಕ ಸೂಳೆ ಜೋಗತಿಯಾದಳು...." (ಪುಟ ೩೦)

" .... ಬುತ್ತಿಕಟ್ಟಿಕೊಂಡ ಹುಡುಕಾಡಿದ್ರೂ ಸಿಗೂದುಲ್ಲ...." (ಪುಟ ೩೦)

" ಹರಕೆಯ ಕುರಿ ಹೆಜ್ಜೆಯಿಡುತ್ತ ನಡೆದಂತೆ...." (ಪುಟ ೩೯)

" ಮುಳುಗುವವನಿಗೆ ಹುಲ್ಲುಕಡ್ಡಿ ಎಂಬಂತೆ...." (ಪುಟ ೪೫)

" .... ಬೇಲೀನS ಎದ್ದು ಹೊಲಾ ಮೇಯ್ವಾಂಗ ಆತಲ್ಲಾ...." (ಪುಟ ೬೨)

" ಸೂಳೆಯ ನಾಯಿಸತ್ತರೆ ಊರೆಲ್ಲ, ಸೂಳೆ ಸತ್ತರೆ ಯಾರಿಲ್ಲ...." (ಪುಟ ೯೩)

" ಹೊಳಿ ದಾಟಿದ ಮ್ಯಾಲ ಅಂಬಿಗ್ಯಾನ ಮಿಂಡ " (ಪುಟ ೯೭)

" ಕತ್ತೆ ಸತ್ತರೆ ಹಾಳುವಾರಿ ಎಂಬಂತೆ " (ಪುಟ ೧೦೫)

" .... ಕಾಗೆಯ ಕಂಠವನ್ನು ಕೋಗಿಲೆಯ ಕಂಠಕ್ಕೆ ಪರಿವರ್ತಿಸುವ...." (ಪುಟ ೧೦೬)

" .... ಕಪ್ಪು ಕಾಗೆಯನ್ನು ಬಿಳಿ ಮಾಡುವುದು...." (ಪುಟ ೧೧೨)

" .... ಆಕೀಗಿ ಬುದ್ಧಿ ಹೇಳೂದು ಒಂದS ಬಡ್ಡೆಮ್ಮಿ ಹಿಂಡೂದೂ ಒಂದೇ...." (ಪುಟ ೧೧೯)

" ಸೂಳೆ ಮುಪ್ಪಾಗಿ ಜೋಗತಿಯಾದಳು " (ಪುಟ ೧೨೧)

" .... ಊರ ಸುಟ್ಟರೂ ಹನಮಪ್ಪ ಹೊರಗ...." (ಪುಟ ೧೫೧)

" ತನ್ನ ಎಡ್ಯಾಗ ಕತ್ತಿ ಸತ್ತ ಬಿದ್ದೈತಿ.... ಮಂದಿ ಎಡ್ಯಾಗ ನೊಣಾ ತಗೀತಾರು...." (ಪುಟ ೧೭೦ ಮತ್ತು ೨೫೧)

" ತ್ವಗಲಾಗೇನ ಬಲ್ಲ ತಿಮ್ಮಪ್ಪ ಅಂಥಾಂಗ...." (ಪುಟ ೧೮೨)

" ಹಸನು ಕಂಡು ಹೇಲುವ ನಾಯೀಜಾತಿಯ...." (ಪುಟ ೧೮೬)

" .... ಊರ ಉಪಕಾರ ಅರೀದಂತ.... ಹೆಣಾ ಸಿಂಗಾರ ಅರೀದಂತ...." (ಪುಟ ೨೦೨)

" .... ಸಿಟ್ಟಿನ ಕೈಯಾಗ ಬುದ್ಧಿಕೊಡಾಕ ಬರೂದುಲ್ಲ...." (ಪುಟ ೨೫೯ ಮತ್ತು ೩೩೩)

" ಅಳಿಯನಲ್ಲ ಮಗಳಗಂಡ " (ಪುಟ ೨೭೦)

" ಹುಟ್ಟಗುಣಾ ಸತ್ರೂ ಹೋಗುದುಲ್ಲಾ...." (ಪುಟ ೩೫೪)

" ಕೋಣನ ಮುಂದ ಕಿನ್ನರಿ ಬಾರಿಸಿದಂತೆ " (ಪುಟ ೩೮೮)

" .... ಉಗರ್ಲೇ ಹೋಗೂದು ಕೊಡ್ಲೀಲೆ ಹ್ವಾದಾಂಗ ಹ್ವಾದ್ರು...." (೪೦೧)

" .... ಕೈಯಾಂದ ಕಳ್ಕೊಂಡ ಬಾಯಾಂದ ಕಳ್ಕೊಂಡ.... ಮಂಗ್ಯಾನಂಗ ಕುಂತತ್ತಿ...." (ಪುಟ ೪೧೮)

" ಕುಂಟನ ಮ್ಯಾಲ ಕುಡ್ಡ ಸವಾರಿ ಮಾಡಿಧಾಂಗ " (ಪುಟ ೪೩೩). — ಇತ್ಯಾದಿಗಳು.

**ಪ್ರಾದೇಶಿಕ ಸಂಸ್ಕೃತಿ :**

ಉತ್ತರ ಕರ್ನಾಟಕದ ಜನಪದ ಸಂಸ್ಕೃತಿ ಬೆಳಗಲಿಯವರ ಕಾದಂಬರಿಗಳಲ್ಲಿ ಕೆನೆಗಟ್ಟಿ ನಿಂತಿದೆ. ಬನಹಟ್ಟಿಯಂಥ ಪರಿಸರದಲ್ಲಿ ಹುಟ್ಟಿಬೆಳೆದು. ಅಲ್ಲಿಯೇ ಶಿಕ್ಷಕರಾಗಿ ಸೇವೆಸಲ್ಲಿಸಿರುವ ಬೆಳಗಲಿಯವರಿಗೆ ದೇಸೀ ಬದುಕನ್ನು ಕುರಿತು ಸೂಕ್ಷ್ಮಾವಲೋಕನ ಸಾಧಿಸಿದೆ. ಈ ಸೂಕ್ಷ್ಮಾವಲೋಕನಕ್ಕೆ ಕೈಗೂಡಬಹುದಾದ ಸ್ವಾನುಭವ ಬರವಣಿಗೆಗೆ ಒಂದು ಬಗೆಯ ಹದವನ್ನು ಒದಗಿಸಿದೆ. ಇಲ್ಲಿ ಪ್ರಯತ್ನಪೂರಕವಾಗಿ ಪಡೆದುಕೊಂಡಿರುವ ಬೆಳಗಲಿಯವರ ಲೋಕಾನುಭವವು ಸ್ವಾನುಭವದಷ್ಟೇ ಗಟ್ಟಿಮುಟ್ಟಾಗಿದೆ. ಒಂದು ಜನಾಂಗದ ಆಡುನುಡಿಗಳ ಭಾಷೆ ಅವರ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ' ಪ್ರಾದೇಶಿಕತೆ 'ಗೆ ಪರಿಪೂರ್ಣತೆ ಒದಗಬೇಕಾದರೆ. ' ಸಾಂಸ್ಕೃತಿಕ ಪಾತಳಿ 'ಯೂ. ವಸ್ತು-ಭಾಷೆಯಷ್ಟೇ ಪ್ರಮುಖವಾದುದು. ಜಾನವಾಡದ ಹಾಗೂ ಅಲ್ಲಿನ ಹೊಲಗೇರಿಯ ಗ್ರಾಮೀಣರ ಬದುಕು-ಆಚಾರ-ವಿಚಾರ-ಹವ್ಯಾಸ. ನಡೆ-ನುಡಿ. ಸಂಪ್ರದಾಯ-ಆಚರಣೆಗಳು. ಹಬ್ಬಹರಿದಿನಗಳು. ಹರಕೆ. ಒಟ್ಟಿನಲ್ಲಿ ' ಜಾನವಾಡದ ಜನಜೀವನ 'ವನ್ನು ಕಾದಂಬರಿಯಲ್ಲಿ ಚೆನ್ನಾಗಿ ಚಿತ್ರಿಸಿದ ಬೆಳಗಲಿಯವರು ಉತ್ತರ ಕರ್ನಾಟಕದ ಸಂಸ್ಕೃತಿಯನ್ನೇ ಕೃತಿಯಲ್ಲಿ ಎರಕಹೊಯ್ದಿದ್ದಾರೆ. ಗ್ರಾಮೀಣ ಬದುಕಿನ ದಟ್ಟಪರಿಸರವನ್ನೇ ಕಣ್ಣೆದುರು ನಿಲ್ಲಿಸುವ ಪ್ರಸ್ತುತ ಕಾದಂಬರಿ ಸದ್ದಿಲ್ಲದೆ ತನ್ನ ಉದ್ದೇಶವನ್ನು ಈಡೇರಿಸಿಕೊಂಡ ಒಂದು ಸಾರ್ಥಕ ಕೃತಿ.

ಭವಿಷ್ಯ-ಜೊತಿಷ್ಯ ಹೇಳುವುದು-ಕೇಳುವುದು ಎಲ್ಲೆಡೆಯಲ್ಲಿಯೂ ಸಹಜವಾಗಿರುವ ಸಂಗತಿ. ಹಕ್ಕಿಶಕುನ ಮಾತ್ರ ಉತ್ತರ ಕರ್ನಾಟಕದ ವಿಶೇಷತೆ. ಕಾದಂಬರಿಯು ಮೈಬಿಚ್ಚಿಕೊಳ್ಳುವುದೇ ಬುಡಬುಡಿಕೆಯ ಸದ್ದಿನಿಂದಲೇ. ' ಶುಭನುಡಿಯೇ ಶಕುನದ ಹಕ್ಕಿ ' ಎಂಬ ಬೇಂದ್ರೆಯವರ ಮಾತುಗಳನ್ನು ನೆನಪಿಸಿಕೊಡುವ ರೀತಿಯಲ್ಲಿಯೇ " ಶುಭವಾಗತೈತಿ.... ಶುಭವಾಗತೈತಿ.... ಹಾಲಕ್ಕಿ ನುಡದೈತಿ.... ನಿಮಗ ಶುಭವಾಗತೈತಿ " ಎಂದು ಬುಡಬುಡಿಕೆಯವ ತನ್ನ ಕೈಯಲ್ಲಿಯ ಬುಡಬುಡಿಕೆಯನ್ನು ಬೆರಳುತುದಿಯಿಂದ " ಕಿರ್‌ರ್‌ರ್‌ರ್ ಕಿಡಕ್.... ಕಿರ್‌ರ್‌ರ್‌ರ್ ಕಿಡಕ್.... ಕಿಡಕ್ ಕಿಡಕ್ " ಎಂದು ಬಾರಿಸುತ್ತ ಹೊಲಗೇರಿಯಲ್ಲಿ ಬಂದಾಗ. ಸಹಜವಾಗಿಯೇ ಜನ ಅವನನ್ನು ಸುತ್ತುವರಿಯುತ್ತಾರೆ. ಕೇರಿಗೆ ಬಂದಾಗ ಸಹಜವಾಗಿಯೇ ಎಲ್ಲಮ್ಮನ ಹೆಸರು ತೆಗೆದದ್ದು ಅವನ ಚಿಕಿತ್ಸಕ ಬುದ್ಧಿಗೆ ಸಾಕ್ಷಿ. ಈ ಭಾಗದಲ್ಲಿ ರಾತ್ರಿಹೊತ್ತು ' ಹಕ್ಕಿಪಣ ' ಕಟ್ಟುವ ಪದ್ಧತಿಯಿದ್ದು. ರಾತ್ರಿಹೊತ್ತಿನಲ್ಲಿ ಹಕ್ಕಿಯೊಂದಿಗೆ ' ದೋಷಿಗರು ' ಮಾತನಾಡುತ್ತಾರೆಂಬ ಪ್ರತೀತಿಯಿದೆ. ರಾತ್ರಿ ಹಕ್ಕಿಯಿಂದ ಕೇಳಿದ ಶಕುನವನ್ನೇ ಬೆಳಗಿನಲ್ಲಿ ಊರೆಲ್ಲ ಸುತ್ತಾಡಿ ತಿಳಿಸುತ್ತ. ಜನರಿಂದ ಕಾಳು-ಕಡಿ. ಹಣಬಟ್ಟೆಬರೆಗಳನ್ನು ಸಂಗ್ರಹಿಸುವ ಪದ್ಧತಿ ಜಾರಿಯಲ್ಲಿದೆ. ಜನರು ಇವರಲ್ಲಿ ನಂಬಿಗೆ ಇರಿಸಿದ್ದು ಇಂದಿಗೂ ಕಂಡುಬರುತ್ತದೆ. ಅನೇಕಸಲ ' ದೋಷಿಗ ' ಹೇಳಿದ ಶಕುನ ಸರಿಯಾಗಿದ್ದು ' ಕಾಕತಾಳೀಯ 'ವಾದರೂ ಜನರ ಮನಸ್ಸಿನಲ್ಲಿ ' ಹಕ್ಕಿಶಕುನ ' ಬೇರುಬಿಟ್ಟಂತೆ. ಅದರಲ್ಲಿಯೂ ಕೆಳವರ್ಗದವರಲ್ಲಿ ಅದು ಇನ್ನೂ ಆಳವಾಗಿ ಬೇರುಬಿಟ್ಟಿದೆ. ಲಕ್ಕಿಯ ನಾಡಿಮಿಡಿತ ಹಿಡಿದೇ ಶಕುನ ಹೇಳುವ ಬುಡಬುಡಿಕೆಯವನ ಜಾಣ್ಮೆ ಮೆಚ್ಚುವಂಥದ್ದು. ' ದೇವದಾಸಿ ' ಮೂಢಸಂಪ್ರದಾಯದ ಕೂಸಾದುದರಿಂದ ' ಶಕುನ ' ಅದಕ್ಕೆ ಮತ್ತಷ್ಟು ನೀರೆರೆದು ಪೋಷಿಸಿದೆ.

ಉತ್ತರ ಕರ್ನಾಟಕದ. ಅದೂ ಕೆಳವರ್ಗದವರ ಅಧಿದೇವತೆ ಎಲ್ಲಮ್ಮ. ಬೆಳಗಲಿಯವರು. ತಮ್ಮೆಲ್ಲ ಕಾದಂಬರಿಗಳಲ್ಲಿ 'ಎಲ್ಲಮ್ಮ ದೇವಿ' ಬಗ್ಗೆ ಪ್ರಸ್ತಾಪಿಸುತ್ತ ಬಂದಿದ್ದರೂ. 'ದೇವದಾಸಿ'ಯಲ್ಲಂತೂ ಹೆಚ್ಚಿನ ಎಡೆಕೊಟ್ಟಿದ್ದಾರೆ. ಉತ್ತರ ಕರ್ನಾಟಕದಲ್ಲಿ 'ದೇವದಾಸಿ' ಪದ್ಧತಿಗೆ ಎಲ್ಲಮ್ಮನೇ ಕಾರಣವಾಗಿದ್ದೊಂದು ಕಾದಂಬರಿಯಲ್ಲಿ ಹೆಚ್ಚಿನ ವಿವರಣೆ ಪಡೆದಿದೆ. ಬೆಳಗಾವಿ. ಬಿಜಾಪುರಗಳಲ್ಲಂತೂ ಎಲ್ಲಮ್ಮನನ್ನು 'ಬೆಂಕಿ' ಯಂಥಾ ದೇವರೆಂದು ಪೂಜಿಸುತ್ತಾರೆ. ಎಲ್ಲಮ್ಮನ 'ಭಕ್ತಿ'ಯಲ್ಲಿ ನೂರಾರು ರೀತಿಯ ಪೂಜಾ ವಿಧಾನಗಳುಂಟು. ಅದರಲ್ಲಿ ಹೆಣ್ಣುಮಕ್ಕಳಿಗೆ. ಅದೂ ಹೆಚ್ಚಾಗಿ ಹರಿಜನ ಹೆಣ್ಣುಮಕ್ಕಳಿಗೆ ಮುತ್ತುಕಟ್ಟುವ ಸಂಪ್ರದಾಯ ಈ ಭಾಗದ ಕೇರಿಗಳಲ್ಲಿ ಹೆಚ್ಚು ಪ್ರಚಲಿತ ಸಂಗತಿ. ಕಾದಂಬರಿಯಲ್ಲಿ ಈ ಕುರಿತು ಪ್ರಮುಖ ನಿರೂಪಣೆಯಿದೆ. ಜಗದಾಳ ಪರಪ್ಪ-ಚಂದ್ರಿಯರ ಕಿರಿಯಮಗಳು. ಇನ್ನೂ ಹದಿನೆಂಟರೊಳಗಿನ ಮುಗ್ಧ ಬಾಲೆಗೆ ಮುತ್ತುಕಟ್ಟಿಸುವ ಪ್ರಸಂಗ ಕಾದಂಬರಿಯಲ್ಲಿ ಚೆನ್ನಾಗಿ ನಿರೂಪಣೆಗೊಂಡಿದೆ. ಬಾಗಿಯ ಕೊರಳಲ್ಲಿ ಹೂಮಾಲೆ. ಹಣೆಯ ಮೇಲೆ ಬಂಡಾರ. ವಾದ್ಯವೃಂದದೊಂದಿಗೆ ಮೆರವಣಿಗೆ ಮಾಡಿಸುತ್ತ ಮನೆಗೆ ಕರೆದೊಯ್ಯುತ್ತಿದ್ದ ಪ್ರಸಂಗ. ಆ ನೋಟ ಹರಕೆಯ ಕುರಿಯನ್ನು ಬಲಿಗಾಗಿ ಒಯ್ಯುತ್ತಿರುವ ಸಂದರ್ಭವನ್ನು ನೆನಪಿಗೆ ತರುತ್ತದೆ. ತಳಿರು-ತೋರಣ. ಸುಣ್ಣ-ಬಣ್ಣಗಳಿಂದ ಅಲಂಕೃತವಾದ ಮದುವೆ ಮಂಟಪದಲ್ಲಿ ಬಾಗಿಯನ್ನು ಕಂಬಳಿ ಮೇಲೆ ಕೂಡ್ರಿಸಿ. 'ಸಾಂಕೇತಿಕ ವರ'ನ ಎದುರು ಕುಂಕುಮ-ಬಂಡಾರ. ಇದ್ದಿಲಪುಡಿ. ರಂಗೋಲಿ. ಅಲ್ಲದೆ ಬೇರೆ ಹಸಿರು-ಹಳದಿ. ನೀಲಿ. ಕೆಂಪು. ಬಿಳಿ ಹೀಗೆ ಎಲ್ಲ ಸೇರಿ ಒಂಬತ್ತು ತರದ ಬಣ್ಣದ ಪುಡಿಗಳಿಂದ. ಆಕಳ ಸೆಗಣಿಯಿಂದ ಸಾರಿಸಿದ ನೆಲದ ಮೇಲೆ ರಂಗೋಲಿ ಹಾಕಿದಂತೆ ಚಚೌಕ 'ಜೋಗತಿ ಮನೆ'ಯನ್ನು ಕೊರೆದಿದ್ದರು. ಪೂಜಾರಿಯ ಮಂತ್ರಪಠಣೆಯಾದ ಬಳಿಕ ಐದು ಜನ ಹಿರಿಯ ಜೋಗತಿಯರು. 'ಕಪ್ಪು-ಕೆಂಪು-ಬಿಳಿ' ಮಣಿಗಳ ಸರವನ್ನು 'ವರ'ನಾದ ಎಲ್ಲಮ್ಮದೇವಿಯ ಕೊಡಕ್ಕೆ ಸ್ಪರ್ಶಿಸಿ ಬಾಗಿಯ ಕೊರಳಿಗೆ ಕಟ್ಟಿದರು. ಈ ಮಧ್ಯೆ "ಉಧೋ.... ಉಧೋ.... ಎಲ್ಲಮ್ಮ ನಿನ ಪಾಲ್ಕಉಧೋ" ಎಂಬ ಉದ್ಘೋಷಣೆ ನಡೆದೇ ಇತ್ತು. ಅನಂತರ ಬಾಗಿ ಮಲ್ಲಿಗೆ ಮಾಲೆಯನ್ನು ಕೊಡಕ್ಕೆ ಹಾಕಿದಳು. ಇದೆಲ್ಲ ಮುಗಿದ ಬಳಿಕ. ಒಂದು ಚೆರಗಿ. ಜೋಗಾಡುವ ಒಂದು ಪರಡೀ ಕೊಟ್ಟು ಹಿರಿಯಳಾದ ಚೌರವ್ವ. ಮುತ್ತುಕಟ್ಟಿಸಿಕೊಂಡವರು ಪಾಲಿಸಬೇಕಾದ ನಿಯಮಗಳನ್ನು ಹೇಳುತ್ತಿದ್ದಂತೆಯೇ ನೆರೆದ ಜನರೆಲ್ಲ ಸ್ತಬ್ದರಾಗಿ ಕೇಳುತ್ತಿದ್ದರು. 'ಕುಂತಾಗ-ನಿಂತಾಗ ಯಲ್ಲಮ್ಮ.... ಯಲ್ಲಮ್ಮ ಅನ್ನಬೇಕು' ಎಂದು ಕೊನೆಯ ನಿಯಮವನ್ನು ಹೇಳಿದಾಗ ನೆರೆದವರಲ್ಲಿ ಇನ್ನಷ್ಟು ಭಕ್ತಿ ಹೆಚ್ಚಾಗಿತ್ತು. ಧರ್ಮ ಮತ್ತು ನೀತಿಯ ತಳಹದಿಯ ಮೇಲಿದ್ದ ಆ ನಿಯಮಗಳು ಕೇವಲ ಸಾಂಪ್ರದಾಯಿಕವಾಗಿದ್ದವೇ ಹೊರತು. ಯಾರೂ ಅದನ್ನು ಪಾಲಿಸದಿರುವುದೊಂದು ವಿಪರ್ಯಾಸದ ಸಂಗತಿ. ವಿಧಿಕ್ರಿಯೆಗಳೆಲ್ಲ ಮುಗಿದ ಬಳಿಕ 'ಎರಡೂ ತರದ' ಅಡಿಗೆಯ ಭೋಜನದ ಏರ್ಪಾಟೂ ಆಗಿದ್ದರಿಂದ ಜನರು ಹೆಚ್ಚು ಆಕರ್ಷಿತರಾಗಿ ಅಲ್ಲಿಗೆ ಬಂದಿದ್ದರು. ಧರ್ಮದ ಸೆರಗಿನಲ್ಲಿ ಹುಟ್ಟಿಕೊಂಡ ಈ ಆಚರಣೆ. ಮುತ್ತು ಕಟ್ಟಿಸಿಕೊಂಡ ಯಾವುದೇ ಹರಿಜನ ಹೆಣ್ಣನ್ನು ಮೊದಲು ಯವುದಾದರೂ ಸಾವುಕಾರರು ಭಾರೀ ಮೊತ್ತ ತೆತ್ತು ಮೀಸಲು ಮುರಿದಾದ ಮೇಲೆ ಅವಳು ಸಾಮಾನ್ಯ ವೇಶ್ಯೆಯಾಗಿ ಮುಂಬೈಗೋ. ಅದರಂಥ ದೊಡ್ಡ ಪಟ್ಟಣದ 'ಕೆಂಪುದೀಪ ಪ್ರದೇಶ'ಕ್ಕೋ ರವಾನೆಯಾಗುವುದು ಈ ಸಂಪ್ರದಾಯದ ವಿಕಾರೂಪವೆಂದೇ ಹೇಳಬಹುದು.

ಬಾಗಿಯನ್ನು ಈ ಪ್ರಸಂಗದಿಂದ ಸಂರಕ್ಷಿಸುವ ಪೋಲಿಸ ಅಧಿಕಾರಿಯ. ವೀರೇಶಿ-ಪ್ರಕಾಶ. ಪಾರ್ವತಿಯ ಪ್ರಯತ್ನ ವ್ಯರ್ಥವಾಗಿದ್ದು. ಕಾನೂನಿಗೆ ಜನರ ಸಹಕಾರವೇ ಮುಖ್ಯವೆಂಬುದನ್ನು ಸಾರಿಹೇಳಿದಂತಿದೆ. ಬಾಗಿಯ ಸಂಭ್ರಮವನ್ನೆಲ್ಲ ಕಣ್ಣಾರೆ ಕಂಡ ಲಕ್ಕಿಗೆ ' ವಿಮಲಳ ಕಾರೆ 'ಯನ್ನು ಶೀಘ್ರ ಮುಗಿಸಬೇಕೆಂಬ ತವಕ. ಆದರೆ ಕೊನೆಗಳಿಗೆಯಲ್ಲಿ ಇಂಥವ್ವರಿಂದ ಹೇಸಿಕೊಂಡ ಲಕ್ಕಿ ಕಾದಂಬರಿಯ ಉದ್ದೇಶಕ್ಕೆ ಮಣಿದಂತೆ ಕಾಣುವುದರೊಂದಿಗೆ ಸೂಳೆಗಾರಿಕೆಗೆ ಹೇಸಿಕೊಂಡದ್ದೂ ಕೂಡ ಒಪ್ಪುವ ಬದಲಾವಣೆ. ಮುತ್ತು ಕಟ್ಟುವ ಪ್ರಸಂಗದಂತೆ. ಕಾದಂಬರಿಯಲ್ಲಿ ' ಉಡಕಿ 'ಯ ಪ್ರಸ್ತಾಪವೂ ಬರುತ್ತದೆ. ವಿಧವೆಯಾದ ಪಾರ್ವತಿಯನ್ನು. ಚೆನ್ನಪ್ಪದೇಸಾಯಿಯವರ ಪ್ರೀತಿಯ ತೋಟದ ಆಳು ಬಸಣ್ಣ ' ಉಡಕಿ ' ಯಾಗುವ ರೀತಿ ಹೊಲಗೇರಿಯಲ್ಲಿ ಬೀಸಿದ ಹೊಸಬೆಳಕಿನಲ್ಲಿ ಇದೂ ಒಂದು.

ಕಾದಂಬರಿಯ ಕೊನೆಯ ಸನ್ನಿವೇಶ ತುಂಬ ಆಕರ್ಷಣೀಯವಾದುದು. ಒಬ್ಬ ಪೋಲಿಸ ಅಧಿಕಾರಿಯಾದ ಮಹೇಶ ಪಾಟೀಲರು ಜಾನವಾಡದ ಜನರಲ್ಲಿಟ್ಟ ಪ್ರೀತಿ-ಅಂತಃಕರಣಗಳಿಗೆ ಸಾಕ್ಷಿಯಾದ ಪ್ರಸಂಗವದು. ಪಾಟೀಲರು ಮುಂಬಡ್ತಿಯೊಂದಿಗೆ ಬೆನಕಟ್ಟಿಯಿಂದ ವರ್ಗಾವಣೆಯಾದಾಗ ಜಾನವಾಡದ ಜನರಲ್ಲಿ ವಿದ್ಯುತ್ ಸಂಚಾರವೇ ಆಗುತ್ತದೆ. ಅದಕ್ಕಾಗಿ ಒಂದು ಸತ್ಕಾರ ಸಮಾರಂಭವನ್ನು ಏರ್ಪಡಿಸಿ. ಸಭಾಮಂಟಪಕ್ಕೆ ಅತಿಥಿಗಳನ್ನು ಪಲ್ಲಕ್ಕಿಯಲ್ಲಿ ಮೆರವಣಿಗೆ ಮುಖಾಂತರ ಕರೆತರಬೇಕೆಂದರೆ. ಪ್ರೀತಿಯಿಂದಲೇ ತಿರಸ್ಕರಿಸಿದ ಪಾಟೀಲರು. ' ಬುದ್ಧ-ಬಸವ ಅಂಬೇಡ್ಕರ 'ರ ಭಾವಚಿತ್ರಗಳನ್ನು ಪಲ್ಲಕ್ಕಿಯಲ್ಲಿಟ್ಟು. ತಾವು ಮೆರವಣಿಗೆಯಲ್ಲಿ ಹಾಗೇ ನಡೆದುಕೊಂಡು ಬಂದುದು. ಅಂದು ಜಾನವಾಡದಲ್ಲಿ ಒಂದು ಜಾತ್ರೆಯಂತೆ. ಊರವರೆಲ್ಲ ಸೇರಿ ಆಚರಿಸಿದ ಪ್ರಸಂಗ ಮನಮೋಹಕವಾಗಿದೆ. ಪಾಟೀಲರು ಸತ್ಕಾರಕ್ಕೆ ಪ್ರತಿವಂದನೆ ಸಲ್ಲಿಸುತ್ತಾ. ಗುಲಾಬಿಯನ್ನು ಮಗಳಾಗಿ ದತ್ತು ಸ್ವೀಕರಿಸಿ ಉಡಿತುಂಬಿಸಿಕೊಂಡಿದ್ದರು. ಈ ಪ್ರಸಂಗ ಕಾದಂಬರಿಗೆ ಕಳಶವಿಟ್ಟಂತಿದೆ. ಗುಲಾಬಿಯನ್ನು ಬೀಳ್ಕೊಡುವ ಸಂದರ್ಭವಂತೂ. ಅವಳ ಪೂರ್ವ ಬದುಕಿನ ಅವಗಡಗಳನ್ನೂ ಮರೆಯಿಸುವಷ್ಟು ಕರುಣಾಕ್ರಂದನಪೂರ್ಣವಾಗಿದೆ. ಈ ಭಾಗದ ' ಸಾಂಸ್ಕೃತಿಕ ' ಸಮರ್ಥ ನಿರೂಪಣೆಯಲ್ಲಿ ಮೂಡಿ ಬಂದ ' ದೇವದಾಸಿ ' ಬೆಳಗಲಿಯವರ ' ಉದ್ದೇಶಿತ ಕಾದಂಬರಿ 'ಯಾಗಿದ್ದು. ತನ್ನ ಉದ್ದೇಶದಲ್ಲಿ ಯಶಸ್ವಿಯಾದ ಉತ್ತಮ ಕೃತಿ. ವಸ್ತು-ಭಾಷೆ-ಶೈಲಿಗಳಲ್ಲಿ ಉತ್ತಮದರ್ಜೆಯ ಪ್ರಾದೇಶಿಕ ಕಾದಂಬರಿಗಳ ಸಾಲಿನಲ್ಲಿ ನಿಲ್ಲಬಲ್ಲ ಗಟ್ಟಿ ಕೃತಿ.

## ಅನುವಾದಿತ ಕಾದಂಬರಿಗಳು

ಕನ್ನಡದಲ್ಲಿ ಕಾದಂಬರಿ ಸಾಹಿತ್ಯ ಮೈಬಿಚ್ಚಿಕೊಂಡದ್ದು ಅನುವಾದ ಪ್ರಕ್ರಿಯೆಯಿಂದಲೇ. ಕ್ರಿ. ಶ. ೧೮೭೫ ರಲ್ಲಿ ಗಂಗಾಧರ ಮಡಿವಾಳೇಶ್ವರ ತುರಮುರಿಯವರು ಬಾಣಭಟ್ಟನ ' ಕಾದಂಬರಿ 'ಯನ್ನು ಕನ್ನಡಕ್ಕೆ ಅನುವಾದಿಸಿದರು. ಇದು ಕನ್ನಡದ ಪ್ರಥಮ ಅನುವಾದಿತ ಕಾದಂಬರಿ. ' ಯಾತ್ರಿಕನ ಸಂಚಾರ ' (The pilgrims progress) ' ಯಮುನಾ ಪರ್ಯಟನ '. 'ದುರ್ಗೇಶ ನಂದಿನಿ '. ' ಸುಮತಿ ಮದನಕುಮಾರಿ '. – ಈ ಮೊದಲಾದವುಗಳ ಆರಂಭಿಕ ಹಂತದ ಪ್ರಮುಖ ಅನುವಾದ ಕಾದಂಬರಿಗಳು. ಈ ಅನುವಾದಿತ ಕಾದಂಬರಿಗಳನ್ನು ಕುರಿತು ಪ್ರಸ್ತುತ ಮಹಾಪ್ರಬಂಧದ ಎರಡನೇ ಅಧ್ಯಾಯದಲ್ಲಿ ಚರ್ಚಿಸಿರುವ ಕಾರಣ. ಮತ್ತೆ ಅದನ್ನು ಕೈಗೆತ್ತಿಕೊಳ್ಳದೆ ಬೆಳಗಲಿಯವರ ಅನುವಾದಿತ ಕಾದಂಬರಿ ' ಮಯ್ಯಾದಾಸನವಾಡೆ 'ಯನ್ನು ವಿಶ್ಲೇಷಣೆಗೊಳಪಡಿಸುವುದು ಸೂಕ್ತವೆನಿಸುತ್ತದೆ.

**ಮಯ್ಯಾದಾಸನ ವಾಡೆ (೨೦೦೨) :**

ಪ್ರಸ್ತುತ ಕೃತಿ ಖ್ಯಾತ ಲೇಖಕ ಭೀಷ್ಮ ಸಾಹನಿಯವರ ಹಿಂದಿ ಕಾದಂಬರಿಯ ಅನುವಾದ. ಇದು ಬೆಳಗಲಿಯವರ ಪ್ರಕಟಿತ ಕೊನೆಯ ಕಾದಂಬರಿ. ಅವರು ಇಂದು ನಮ್ಮ ಮಧ್ಯದಲ್ಲಿಲ್ಲ. ಆದರೆ ಅವರ ' ಮಯ್ಯಾದಾಸನ ವಾಡೆ ' ಈಗ ಪ್ರಕಟಗೊಂಡಿದೆ. ತಮ್ಮ ಮರಣ ಪೂರ್ವದಲ್ಲಿ. ಬಹುಪರಿಶ್ರಮದಿಂದ ಅನುವಾದಿಸಿ ಪ್ರಕಟಣೆಗಾಗಿ ಕಳಿಸಿದ್ದ ಈ ಕೃತಿ ಇದೀಗ ಪ್ರಕಟಗೊಂಡಿದೆ. ಬೆಳಗಲಿಯವರು ಸೃಜನಶೀಲ ಬರವಣಿಗಯ ಜೊತೆ ಜೊತೆಗೆ ಅನೇಕ ಉತ್ತಮ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮರಾಠಿ ಭಾಷೆಯ ಎರಡು ಉತ್ತಮ ಆತ್ಮಕಥೆಗಳಾದ ' ಅಕ್ರಮ ಸಂತಾನ ' (ಮೂಲ : ಶರಣಕುಮಾರ ಲಿಂಬಾಳೆ). ' ಗಬಾಳ ' (ಮೂಲ : ದಾದಾಸಾಹೇಬ ಮೋರೆ) ಹಾಗೂ ಹಿಂದಿ ಭಾಷೆಯ ' ಯುಗಚೇತನ ಪ್ರೇಮಚಂದ ' ಎಂಬ ಮೊದಲಾದ ಕೃತಿಗಳನ್ನು ಅನುವಾದಿಸಿದ ಬೆಳಗಲಿಯವರು. ಭೀಷ್ಮ ಸಾಹನಿಯವರ ಹಿಂದಿ ಕಾದಂಬರಿಯೊಂದನ್ನು ಕನ್ನಡಕ್ಕೆ ಉತ್ತಮವಾಗಿ ಅನುವಾದಿಸುವಲ್ಲಿ ಸಫಲರಾಗಿದ್ದಾರೆ. ಇದು ಅವರ ಏಕಮಾತ್ರ ಅನುವಾದ ಕಾದಂಬರಿ.

ಭೀಷ್ಮ ಸಾಹನಿಯವರು ಹಿಂದಿ ಸಾಹಿತ್ಯದ ಖ್ಯಾತ ಲೇಖಕರು. ಇವರ ' ತಮಸ್ '. ' ಬಸಂತಿ ' ಮತ್ತು ' ಗವಾಕ್ಷಿ ' ಗಳೆಂಬ ಕಾದಂಬರಿಗಳು ಈಗಾಗಲೇ ಕನ್ನಡಕ್ಕೆ ಅನುವಾದಗೊಂಡಿವೆಯಲ್ಲದೆ. ' ಮಾದವಿ '. ' ಹಾನುಶ್ ' ಹಾಗೂ ' ಪರಿಹಾರ '. ನಾಟಕಗಳೂ ಕೂಡ ಕನ್ನಡಕ್ಕೆ ಅನುವಾದಗೊಂಡಿವೆ. ಬೆಳಗಲಿಯವರು ಅನುವಾದಿಸಿದ ' ಮಯ್ಯಾದಾಸನ ವಾಡೆ ' ಸಾಹನಿಯವರ ಉತ್ತಮ ಕೃತಿಗಳಲ್ಲಿ ಒಂದಾಗಿದ್ದು. ಪ್ರಸ್ತುತ ಕಾದಂಬರಿಯನ್ನು ಅತ್ಯಂತ ಸೊಗಸಾಗಿಯೇ ಕನ್ನಡಕ್ಕೆ ಅನುವಾದಿಸಿದ್ದಾರೆ. ಸೃಜನಶೀಲ ಬರವಣಿಗೆಯೊಂದಿಗೆ ಅನುವಾದದಲ್ಲೂ ತಾವು ನಿಷ್ಣಾತರೆಂಬುದನ್ನು ಈ ಮೂಲಕ ಬೆಳಗಲಿಯವರು ಸಾಬೀತುಪಡಿಸಿದ್ದಾರೆ.

ದಿವಾಣ ಮಧುರಾಮದಾಸನೇ ವಾಡೆಯನ್ನು ಕಟ್ಟಿಸಿದವ. ಅವನ ಮರಣಾನಂತರ ಅವನ ಮಗ ಮಯ್ಯಾದಾಸನು ವಾಡೆಯ ಉತ್ತರಾಧಿಕಾರಿಯಾದ. ವಾಡೆ ಸುಮಾರು ಒಂದು ನೂರು ವರ್ಷ ಹಳೆಯದಾಗಿದೆ. ವಾಡೆಯ ಬಗೆಗೆ ಊರಲ್ಲಿ ತರತರದ ಕಥೆಗಳು ಹಬ್ಬಿನಿಂತಿವೆ. ರಾಜ್ಯಾಡಳಿತ ಬದಲಾದಂತೆ. ವಾಡೆಯಲ್ಲಿರುವವರ ದೈವ ಬದಲಾದಂತೆ ವಾಡೆಯ ಸ್ಥಿತಿ ಹಾಗೂ ಸ್ವರೂಪ - ಸೌಂದರ್ಯ ಕೂಡ ಬದಲಾಗುತ್ತ ಹೋಗಿವೆ. ಮೊದಲ್ಲಿದ್ದ ವಾಡೆ ಈಗ ಆಂಗ್ಲ ಪದ್ಧತಿಗೆ ಸಿಕ್ಕು ಅನೇಕ ಬದಲಾವಣೆಗಳನ್ನು ಕಂಡು ಅದು ಇತಿಹಾಸದ ಅನೇಕ ಭಗ್ನಾವಶೇಷಗಳು. ಸ್ಮೃತಿಗಳು. ಕಥೆ - ವದಂತಿಗಳನ್ನು ತನ್ನ ಒಡಲಾಳದಲ್ಲಿಟ್ಟುಕೊಂಡು ನೋಡುಗರಿಗೆಲ್ಲ ಅದೊಂದು ' ರಹಸ್ಯ ಕೇಂದ್ರ ' ವಾಗಿಯೇ ಗೋಚರಿಸುತ್ತದೆ.

ಮಯ್ಯದಾಸ ತಂದೆಯಂತೆಯೇ ಸುಸ್ವಭಾವಿ ಹಾಗೂ ಜನೋಪಕಾರಿ. ಅವನ ಪ್ರಾಮಾಣಿಕತೆ. ಕರ್ತವ್ಯನಿಷ್ಠೆ ಮತ್ತು ಸಭ್ಯವರ್ತನೆಗಳಿಂದ ಪ್ರಭಾವಿತವಾಗಿ ಲಾಹೋರ ದರಬಾರವು ಲಾಹೋರಕ್ಕೆ ಕರೆಸಿಕೊಂಡು ವಸ್ತ್ರಭಂಡಾರದ ಅಧಿಕಾರಿಯನ್ನಾಗಿ ನೇಮಿಸಿತ್ತು. ಅವನ ಪತ್ನಿ ದೇವಕಿ ಕೂಡ ನಿಯಮ - ನಿಷ್ಠೆಯ ಧಾರ್ಮಿಕ ಮಹಿಳೆಯಾಗಿದ್ದಳು.

ಈತನ ತಮ್ಮ ಗೋಕುಲದಾಸ ಅಣ್ಣನ ಜೊತೆಯಲ್ಲಿಯೇ 'ಸಾಹುಕಾರಿ' ನಿರ್ವಹಿಸುತ್ತಿದ್ದವ. ಊರ ಜನರು ಇಬ್ಬರೂ ಸಹೋದರರನ್ನು ರಾಮ - ಲಕ್ಷ್ಮಣರ ಜೋಡಿ ಎಂದು ಕರೆಯುತ್ತಿದ್ದರು. ಸತತ ಮೂರು ಹೆಣ್ಣುಮಕ್ಕಳನ್ನೇ ಪಡೆದ ಗೋಕುಲದಾಸನ ತಲೆ ತಿರುಗಿತು: ಇದೇ ಕಾರಣ ಒಡಿದು ಹೆಂಡತಿಯನ್ನು ತವರಿಗೆ ಅಟ್ಟಿದನಲ್ಲದೆ. ಒಬ್ಬಳು ಉಪಪತ್ನಿಯನ್ನೂ ಮನೆಗೆ ಕರೆತಂದ. ಅವಳ ಆಧುನಿಕ ಚಟುವಟಿಕೆಗಳಿಂದಾಗಿ ಅನೇಕರು ಆಶ್ಚರ್ಯ ಪಟ್ಟಿದ್ದೂ ಉಂಟು. ಚಂದ್ರಾ ಗೋಕುಲದಾಸನ ಉಪಪತ್ನಿಯಾಗಿ 'ವಾಡೆ'ಯನ್ನು ಸೇರಿದ ಕೆಲವೇ ದಿನಗಳಲ್ಲಿ ವಾಡೆಯನ್ನು ಬಿಟ್ಟು ಹೋಗಿದ್ದಳು.

ಇದ್ದಕ್ಕಿದ್ದಂತೆ ಚಂದ್ರಾಳ ಮಗ ಧನಪತನು ತಾನು ದಿವಾಣನೆಂದು ಹೇಳುತ್ತ ವಾಡೆಯಲ್ಲಿ ಪ್ರತ್ಯಕ್ಷನಾದ. ಮಯ್ಯಾದಾಸನನ್ನು ದೊಡ್ಡಪ್ಪನೆಂದು ಸಂಬೋಧಿಸುತ್ತ ವಾಡೆಯ ಒಂದು ಮೂಲೆಯಲ್ಲಿ ಇರಲು ಪ್ರಾರಂಭಿಸಿದ. ಕೆಲವೇ ದಿನಗಳಲ್ಲಿ. ಮಯ್ಯಾದಾಸ ಇವನ ಸಾಮಾನು. ಸರಂಜಾಮುಗಳನ್ನು ಬೀದಿಗೆಸೆದು ವಾಡೆಯಿಂದ ಹೊರಹಾಕಿದ. ಮುಂದೊಂದು ದಿನ ನಿನ್ನನ್ನೂ ಸಹ ಇದೇ ರೀತಿ ಹೊರಹಾಕುವೆನೆಂಬ ಶಪಥದೊಂದಿಗೆ ವಾಡೆಯಿಂದ ಅಧೋಮುಖವಾಗಿ ಹೊರಹೋದ ದನಪತ. ಅದನ್ನು ಕಾರ್ಯರೂಪಕ್ಕೂ ತಂದ. ತಟ್ಟು ಕುದುರೆಯ ಮೇಲೆ ದಿವಾಣಗಿರಿ ಪೋಷಾಕುಗಳನ್ನೆಲ್ಲ ಹಾಕಿಕೊಂಡು ಗಲ್ಲಿ ಗಲ್ಲಿ ಸುತ್ತುತ್ತ. ತಾನೇ ವಾಡೆಯ ನಿಜವಾದ ದಿವಾಣನೆಂದು ಹೇಳುತ್ತ ತಿರುಗುತ್ತಿದ್ದ ಧನಪತನಿಗೆ. ಫಿರಂಗಿಯವರು ಯುದ್ಧ ಸಾರಿದ್ದು ವರದಾನವಾಯಿತು. ಫಿರಂಗಿಯವರು ಲಾಹೋರ ದರಬಾರದ ಮೇಲೆ ನಡೆಸುತ್ತಿದ್ದ ಯುದ್ಧದಲ್ಲಿ ಧನಪತನು. ಅನೇಕ ಕುದುರೆ. ಒಂಟೆಗಳನ್ನು ಪೂರೈಸುವುದರೊಂದಿಗೆ ಅವರ ಅನುಕಂಪ ಸಂಪಾದಿಸಿದ. ಫಿರಂಗಿಯವರು ಯುದ್ಧದಲ್ಲಿ ಯಶಸ್ವಿಯಾದಾಗ ಇವನೂ ಅವರಿಂದ ಮೂರು ಗ್ರಾಮಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದ.

ಫಿರಂಗಿಯವರ ವಿರುದ್ಧ ನಡೆದ ಯುದ್ಧದಲ್ಲಿ ಲೇಖರಾಜನದು ಪ್ರಮುಖ ಪಾತ್ರ. ಅಜ್ಜಿ ಹೇಳಿದ ಕಥೆಗಳ ಸ್ಫೂರ್ತಿಯಿಂದಲೇ ಲಾಹೋರ ದರಬಾರದಲ್ಲಿ ಸೇನಾಭರ್ತಿಯಾಗಿ. ಬ್ರಿಟಿಷರ ವಿರುದ್ಧ ಶ್ರದ್ಧೆಯಿಂದಲೇ ಹೋರಾಡಿದ. ಕಾದಂಬರಿಯುದ್ದಕ್ಕೂ ಈ ಪಾತ್ರದ ನಿರೂಪಣೆ ಮನಮಿಡಿಯುವಂತಿದೆ. ಸ್ನೇಹಿತನ ಹೆಣವನ್ನು ಹೆಗಲ ಮೇಲೆ ಹೊತ್ತುಕೊಂಡು ಹೋರಾಡಿದ ಪ್ರಸಂಗ ಹಾಗೂ ಅದೇ ಹೆಣವನ್ನು ಕಂದಕದಲ್ಲಿ ಬಿಸಾಕಿ ಕಣ್ಣೀರುಗರೆದ ರೀತಿ ತುಂಬ ಸೊಗಸಾಗಿ ಮೂಡಿ ಬಂದಿದೆ. ವಾಡೆಯಿಂದ ದೂರವೇ ಇರುತ್ತಿದ್ದ ಲೇಖರಾಜ ಸ್ಥಳೀಯ ಸೇನಾಪತಿಗಳ ಕುತಂತ್ರದಿಂದ ಲಾಹೋರ ದರಬಾರವು ಸೋಲನ್ನಪ್ಪಿದ್ದಕ್ಕೆ ಮರುಗುತ್ತಾನೆ. ವಾಡೆಯ ನಿಜವಾದ ವಾರಸುದಾರನಾದರೂ ಗಲ್ಲಿಗಲ್ಲಿಗಳಲ್ಲಿ ತಿರುಗುತ್ತ ತನ್ನ ಬದುಕಿನ ಶೇಷಭಾಗವನ್ನು ಕಳೆಯುತ್ತಿದ್ದನಲ್ಲದೆ. ಶಾಲೆಯ ಸ್ಥಾಪನೆಗೆ ವಾನಪ್ರಸ್ಥಿಗೆ ಬಲಗೈಯಾಗಿ ನಿಂತಿದ್ದ. ಕೊನೆಗೆ ಧನಪತನ ಪಿತೂರಿಯಿಂದಲೇ ಬ್ರಿಟಿಷ ಪೋಲಿಸರ ಸೆರೆಯಾಳಾಗಿ ಹೋದವ ಮತ್ತೆ ವಾಡೆಯತ್ತ ಬರಲೇ ಇಲ್ಲ.

ಧನಪತನು ದಿವಾಣನಾದ ಬಳಿಕ 'ವಾಡೆ' ತನ್ನ ದರ್ಪವನ್ನು ಮತ್ತಷ್ಟು ಹೆಚ್ಚಿಸಿಕೊಂಡಿತು. ಊರಲ್ಲಿ 'ಸಾಹುಕಾರಿಕೆ' ನಡೆಸುವ ದಿವಾಣ ಧನಪತನು ತನ್ನ ಸ್ವಾರ್ಥದ ಬುಟ್ಟಿಯನ್ನೇ ತುಂಬಿಕೊಳ್ಳುತ್ತ ಹೋದ.

ಶೀಶಮಹಲದ ಸವಾಲಿನಲ್ಲಿ ಎದುರಾಳಿಯಾಗಿದ್ದ ಮಲಿಕ ಮಂಸಾರಾಮನ ಮಗಳು ಪುಷ್ಪಾಳನ್ನು ತನ್ನ ಎರಡನೇ ಮಗ ಘನಶಾಮನಿಗೆ ತಂದುಕೊಂಡಿದ್ದ. ಮದುವೆಯಲ್ಲಿ ನಡೆದ ಪುಟ್ಟ ಘಟನೆಯ ನೆಪವೊಡ್ಡಿ. ತನ್ನ ಹಿರಿಯ ಮಗ ಹುಚ್ಚು ಕಲ್ಲಾನಿಗೆ. ಹರನಾರಾಯಣನ ಹನ್ನೆರಡು ವರ್ಷದ ರುಕ್ಮಣಿಯನ್ನು ಕಟ್ಟಿದ್ದ. ಮತ್ತೊಬ್ಬವ. ಕಿರಿಯ ಹುಕೂಮತರಾಯನಂತೂ ಬ್ಯಾರಿಷ್ಟರ ಪದವಿಯ ಅಧ್ಯಯನಕ್ಕಾಗಿ ಲಂಡನ್‌ದಲ್ಲಿದ್ದ. ಹೀಗೆ ತನ್ನ ಮೂವರು ಮಕ್ಕಳನ್ನು ತುಂಬ ಹಿಕಮತ್ತಿನಿಂದಲೇ ದಾರಿಗೆ ಹಚ್ಚಿದ್ದ. ಆದರೂ ನಡುವಿನವ ಘನಶಾಮ ತಂದೆಯ ವಿರುದ್ಧ ಬಂಡೇಳುವುದಕ್ಕೆ ಹೆಚ್ಚು ಸಮಯ ಹಿಡಿಯಲಿಲ್ಲ. ಪತ್ನಿ ಪುಷ್ಪಾಳ ಮಾರ್ಗದರ್ಶನದಂತೆ ಘನಶಾಮ ತಂದೆಯೊಂದಿಗೆ ಜಗಳಕ್ಕಿಳಿದು. ತನ್ನ ಪಾಲು ಪಡೆಯುವ ಹುನ್ನಾರ ಮಾಡಿದರೆ. ರುಕ್ಮಿಣಿ ಕಲ್ಲನ ಸಂರಂಕ್ಷಣೆಯಲ್ಲಿಯೇ ತನ್ನ ದಾಂಪತ್ಯವನ್ನು ಕಂಡವಳು.

ಹರನಾರಾಯಣನ ಮಗಳು ವೀರಾಲಿ. ವಿಧವೆ. ರುಕ್ಮಿಣಿ ವೀರಾಲಿಯ ಮಗಳು. ಇನ್ನೂ ಹುಡುಗಾಟದ ವಯಸ್ಸಿನಲ್ಲಿಯೇ ಹಸೆಮಣೆಯೇರಿದ ರುಕ್ಮಣಿ ಸೊಸೆಯಾಗಿ ' ವಾಡೆ ' ಸೇರಿದಾಗ. ಪಕ್ಷಿಯೊಂದು ಪಂಜರದಲ್ಲಿ ಸಿಕ್ಕಿಹಾಕಿಕೊಂಡಂತಾಗಿತ್ತು. ಉಬ್ಬುಸ ರೋಗದಿಂದ ಗಂಡ ಕಲ್ಲಾ ಹೆಸರಿಗೆ ಮಾತ್ರ. ಗಂಡನ ಸೇವೆ. ವಾಡೆಯ ಅಂತಸ್ತು ಹಾಗೂ ದಾಂಪತ್ಯ ಧರ್ಮ ಈ ತ್ರಿವೇಣಿ ಸಂಗಮದ ತಿರುಗಣಿಯಲ್ಲಿ ಬಿದ್ದ ರುಕ್ಮಣಿ ಒಳಗೊಳಗೇ ನೊಂದುಬೆಂದವಳು. ಮುಗ್ಧ ರುಕ್ಮಣಿ ಕೈಲಾಗದ ಗಂಡನ ಕೈಹಿಡಿದು. ಅನೇಕರ ಹಸಿದ ಕಂಗಳಿಗೆ ಆಹಾರವಾದಳೇನೋ ಸರಿ. ತಾನು ಮಾತ್ರ ಗಂಡನೇ ದೈವವೆಂದು ಬದುಕಿದವಳು. ಪಟ್ಟಣದಲ್ಲಿ ವಾನಪ್ರಸ್ಥಿ ಶಾಲೆಯೊಂದನ್ನು ತೆರೆದಾಗ ತಾನೂ ಹೆಸರು ನೊಂದಾಯಿಸಿ ನಾಲ್ಕನೇ ವರ್ಗದವರೆಗೆ ಓದಿ. ಆ ಶಾಲೆಗೆ ತಾನೇ ಮುಖ್ಯಾಧ್ಯಾಪಕಿಯಾದುದು ಅವಳ ಬೌದ್ಧಿಕ ವಿಕಾಸಕ್ಕೆ ಸಾಕ್ಷಿಯಷ್ಟೇ. ಆದರೆ ದಾಂಪತ್ಯದಲ್ಲಿ ಅವನೇ ಹುಚ್ಚು ಗಂಡನಿದ್ದ. ಆ ಹುಚ್ಚನ ಕಣ್ಣೋಟವೇ ತನ್ನ ಬಾಳಿನ ದಾರಿದೀಪವೆಂದು ಬಾಳಿದವಳು. ಕೊನೆಗೆ ವಾಡೆಯಿಂದ ಹೊರಬಂದು ಉಪಜೀವನ ನಡೆಸಿದವಳು. ಲಾಹೋರದ ಸರಕಾರಿ ಹುಚ್ಚಾಸ್ಪತ್ರೆಗೆ ಗಂಡನನ್ನು ದಾಖಲಿಸಿ. ತಾನು ಅಮರನಾಥ ಯಾತ್ರೆ ಕೈಗೊಂಡು. ಗಂಡನ ಸ್ಮರಣೆಯಲ್ಲಿಯೇ ಪ್ರಾಣತ್ಯಾಗ ಮಾಡಿ ಅಮರಳಾದವಳು.

ಭಾಗಸುದ್ದಿಯನ್ನು ಎಲ್ಲರೂ ಚಿಕ್ಕಮ್ಮನೆಂದೇ ಕರೆಯುತ್ತಾರೆ. ಆದರೆ ಅವಳು ಯಾರಿಗೆ ಚಿಕ್ಕಮ್ಮನೆಂಬುದು ಯಾರಿಗೂ ಗೊತ್ತಿಲ್ಲ. ಭಾಗಸುದ್ದಿ ಪೈಲ್ವಾನ ಗಂಡನನ್ನು ಕಳೆದುಕೊಂಡು. ಜೀವನವಿಡೀ ಪರೋಪಕಾರದಲ್ಲಿಯೇ ಜೀವವನ್ನು ತೇದವಳು. ನಿಷ್ಠೆ ಹಾಗೂ ನಿರ್ದಾಕ್ಷಿಣ್ಯತೆಗಳೆರಡು ಅವಳ ಕಣ್ಣುಗಳಿದ್ದಂತೆ. ಯಾರ ಮುಲಾಜನ್ನೂ ಕಾಯದ ಭಾಗಸುದ್ದಿ ಅನ್ಯಾಯ ಕಂಡಲ್ಲಿ ಸಹಜವಾಗಿಯೇ ಪ್ರತಿಭಟಿಸುತ್ತಿದ್ದಳು. ಪಟ್ಟಣದ ಆಗುಹೋಗುಗಳಿಗೆಲ್ಲ ಸಾಕ್ಷಿಯಾಗಿ ನಿಲ್ಲಬಲ್ಲ ಈ ಮುದುಕಿಯ ಪಾತ್ರ ಚಿತ್ರಣ ಕಾದಂಬರಿಯುದ್ದಕ್ಕೂ ಚೆನ್ನಾಗಿ ಮೂಡಿ ಬಂದಿದೆ. ರುಕ್ಮಣಿ. ಲೇಖರಾಜ. ಹರನಾರಾಯಣ. ವೀರಾಲಿ ಮೊದಲಾದವರನ್ನು ಕುರಿತು ಭಾಗಸುದ್ದಿಯ ಅನುಕಂಪ - ಕರುಣೆಗಳು ಅವಿಸ್ಮರಣೀಯವೆನಿಸುತ್ತವೆ. ಚಂದ್ರಾ. ಧನಪತ. ಘನಶಾಮ. ಮೊದಲಾದ ಸಮಾಜಕಂಟಕರನ್ನು ಭಾಗಸುದ್ದಿ ಎಂದಿಗೂ ಸೇರುತ್ತಿರಲಿಲ್ಲ. ಪಟ್ಟಣದ ವಿನಾಶಕ್ಕೆ ಇವರೇ ಕಾರಣರೆಂದು ಹಳಹಳಿಸುತ್ತಿದ್ದ ಪಟ್ಟಣದ ಜನರಲ್ಲಿ

ಇವಳೂ ಒಬ್ಬಳು. ಶಾಲೆಯ ಒಳಿತಿಗಾಗಿ ಪಟ್ಟಣವನ್ನೆಲ್ಲ ಸುತ್ತಾಡಿ ಮಕ್ಕಳನ್ನು ಕರೆತರುವ ಈ ಮುದುಕಿ ಕಾದಂಬರಿಯಲ್ಲಿ ಚಿತ್ರಣಗೊಂಡ ಉತ್ತಮ ಪಾತ್ರಗಳಲ್ಲೊಂದು.

ಪುರೋಹಿತ ರಾಮದಾಸ ವಾಡೆಯ ಪ್ರಭಾವಿ ವ್ಯಕ್ತಿಯಾಗಿದ್ದು. ಪಟ್ಟಣದಲ್ಲಿ ಎಲ್ಲರಿಗೂ ಪರಿಚಿತನಾದವ. ಮೂರು ಪತ್ನಿಯರನ್ನು ತನ್ನ ದಾಂಪತ್ಯದಲ್ಲಿ ಕಂಡಿದ್ದ ಪುರೋಹಿತ ರಾಮದಾಸ ನಾಲ್ಕನೇ ಪತ್ನಿ ಚಿಕ್ಕವಯದ ಪರಮೇಶರಾ. ಊರಲ್ಲಿ ಬುಟ್ಟಿ ಹಿಡಿದು ಅನ್ನ ತರುವವಳು. ಮಣೀರಾಮನ ಹಾವ - ಭಾವದಿಂದಲೇ ಅವನ ಮರಣವನ್ನು ಖಚಿತವಾಗಿ ಹೇಳಿದ ಪುರೋಹಿತನನ್ನು ದಿವಾಣ ಧನಪತನು ಹೆದರಿಕೆಯಿಂದಲೇ ಕಾಣುತ್ತಿದ್ದ. “ ಪುರೋಹಿತ - ಬ್ರಾಹ್ಮಣರ ಮುಖನ್ನು ಗಮನವಿಟ್ಟು ನೋಡಬಾರದೆಂದು ದಿವಾಣ ಧನಪತನು ಎಲ್ಲಿಯೋ ಕೇಳಿದ ಸಂಗತಿ ” [೧೩೫] ಯೂ ಅವನ ಹೆದರಿಕೆಗೆ ಕಾರಣವಾಗಿತ್ತು. ಧನಪತನ ಹಟಮಾರಿತನಕ್ಕೆ ರೋಸಿಹೋದ ಪುರೋಹಿತ ರಾಮದಾಸನು ಹರನಾರಾಯಣನ ಮೊಮ್ಮಗಳು ರುಕ್ಮಿಣಿಯನ್ನು ಹುಚ್ಚು ಕಲ್ಲಾಸಿಗೆ ಕಟ್ಟಿ. ‘ ವಾಡೆ ’ಯ ಸೊಸೆಯನ್ನಾಗಿ ಮಾಡುವುದರ ಮುಖಾಂತರ ಕಾದಂಬರಿಗೆ ಹೊಸ ತಿರುವನ್ನೇ ತಂದುಕೊಡುತ್ತಾನೆ.

ಲಾಹೋರ ದರಬಾರದ ಅಂತ್ಯ. ದಿವಾಣರಾಗಿ ಹುಕುಮತರಾಯರು ಫಿರಂಗಿಯವರಿಗೆ ಸಹಾಯ ಮಾಡಿದ್ದು. ಪಟ್ಟಣಕ್ಕೆ ಹೊಸದಾಗಿ ರೈಲಿನ ಆಗಮನ. ಅದರೊಂದಿಗೆ ಫಿರಂಗಿಯವರ ಅನೇಕ ಅಲಂಕಾರಿಕ ವಸ್ತುಗಳು ಪಟ್ಟಣಕ್ಕೆ ಬಂದಿದ್ದು. ಶಾಲೆಯ ಪ್ರಾರಂಭಕ್ಕೆ ಅನೇಕರ ವಿರೋಧ. ವಿರೋಧದ ಮಧ್ಯದಲ್ಲಿಯೇ ಅದರ ಪ್ರಾರಂಭ. ದೇಶಿ ವಸ್ತುಗಳ ನಿರ್ಯಾತ. ರೈತರ ಹತ್ತಿ. ಸಾಂಬಾರ ಪದಾರ್ಥಗಳು ಸಲೀಸಾಗಿ ಲಂಡನ್ ಸೇರಿದರೆ. ಅಷ್ಟೇ ಸಲೀಸಾಗಿ ಅವರ ವಸ್ತುಗಳು ಸಿಖ್ ರಾಜ್ಯದತ್ತ ಬರುತ್ತಿದ್ದವು. ಹೀಗೆ ಬ್ರಿಟಿಷ ಆಡಳಿತ ಸಾವಕಾಶವಾಗಿ ಸಿಖ್ ಆಡಳಿತವನ್ನು ತನ್ನ ತೋಳ್ತೆಕ್ಕೆಯಲ್ಲಿ ತೆಗೆದುಕೊಂಡು. ಅನೇಕ ಸಾಮಾಜಿಕ. ಆರ್ಥಿಕ. ಸಾಂಸ್ಕೃತಿಕ ಹಾಗೂ ಆಡಳಿತಾತ್ಮಕ ಬದಲಾವಣೆಗಳನ್ನು ತಂದರು. ಈ ಬದಲಾವಣೆಗಳಿಗೆ ಬೇಗ ಒಗ್ಗಿಕೊಳ್ಳದ ಪಟ್ಟಣದ ಜನರು ಸಾಮಾಜಿಕ - ಸಾಂಸ್ಕೃತಿಕ ಸಂಘರ್ಷಕ್ಕೆ ಒಳಗಾದರೂ. ಕಾಲಕ್ಕೆ ತಕ್ಕಂತೆ ಬದಲಾವಣೆ ಅನಿವಾರ್ಯ. ಹೀಗಾಗಿ ಜನ ಸಾವಕಾಶವಾಗಿ ಬ್ರಿಟಿಷ ಆಡಳಿತಕ್ಕೆ ಒಗ್ಗಿಕೊಳ್ಳಲು ಪ್ರಾರಂಭಿಸಿದರು.

ಬ್ರಿಟಿಷ ಆಡಳಿತಕ್ಕೆ ಸಿಕ್ಕು ನಲುಗಿದ ದೇಶೀ ಜನ ಹಾಗೂ ಮಾರುಕಟ್ಟೆಯಲ್ಲಿ ಸಾವಕಾಶವಾಗಿ ಸ್ವದೇಶಾಭಿಮಾನದ ಅರಿವು ಮೂಡಲಾರಂಭಿಸಿತು. ಈ ಅರಿವು ಸಾಮೂಹಿಕ ಪ್ರತಿಭಟನೆಯ ಸ್ವರೂಪವನ್ನು ಪಡೆದುದಲ್ಲದೆ. ಅಲ್ಲಲ್ಲಿ ಚಳುವಳಿಗಳಿಗೂ ಹುಟ್ಟಲಾರಂಭಿಸಿದವು. ಮಾದಕ -ಮೋದಕ ಪ್ರಿಯನಾಗಿದ್ದ ಹುಕೂಮತರಾಯ. ರಾವಬಹಾದ್ದೂರ ಪದವಿಯ ಆಸೆಗಾಗಿ ದೇಶೀ ಚಳುವಳಿಗಳನ್ನು ಹತ್ತಿಕ್ಕಲು ಪ್ರಾರಂಭಿಸಿದ. ಚಳುವಳಿ ತೀವ್ರಗೊಂಡಾಗ ಲಾಠಿಚಾರ್ಜ ಕೂಡ ಮಾಡಿಸುತ್ತಾನೆ. ‘ ಆಜಾದ ’ ಕಕ್ಕನ ಮುಖಂಡತ್ವದಲ್ಲಿ ಮತ್ತೆ ಪ್ರಬಲವಾದ ಚಳುವಳಿಯೊಂದು ಹುಟ್ಟುವ ಸಾಂಕೇತಿಕತೆಯೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

---

೧೩೫. ದು. ನಿಂ. ಬೆಳಗಲಿ : ಮಯ್ಯಾದಾಸನ ವಾಡೆ (ಅನುವಾದ). ಪುಟ ೯

ಮೂರು ಖಂಡಗಳಲ್ಲಿ ತನ್ನ ಮೈಬಿಚ್ಚಿಕೊಳ್ಳುವ ಪ್ರಸ್ತುತ ಕಾದಂಬರಿ. ಎರಡು ನೂರದಾ ತೊಂಬತ್ತೆರಡು ಪುಟಗಳ ಬೃಹತ್ ಗಾತ್ರದ ಕೃತಿ. ಬ್ರಿಟಿಷ ಸಾಮ್ರಾಜ್ಯಶಾಹಿಯು ಭಾರತದ ಇನ್ನಿತರ ಪ್ರದೇಶಗಳನ್ನು ಒಂದೊಂದಾಗಿ ಕಬಳಿಸುತ್ತಿದ್ದ ಸಂದರ್ಭದಲ್ಲಿಯೇ ಪಂಜಾಬಿನಲ್ಲಿ ಸಿಖ್ ಆಡಳಿತವನ್ನು ಕ್ರಮೇಣ ಶಿಥಿಲಗೊಳಿಸುತ್ತ ತಾನು ಬೇರೂರಲು ಪ್ರಯತ್ನಿಸುತ್ತಿದ್ದ ಕಾಲವನ್ನು ಚಿತ್ರಿಸುವ ಪ್ರಸ್ತುತ ಕಾದಂಬರಿ. ಐತಿಹಾಸಿಕ. ಸಾಮಾಜಿಕ. ಸಾಂಸ್ಕೃತಿಕ ಸಂಘರ್ಷವನ್ನು ಚೆನ್ನಾಗಿ ಎಳೆ - ಎಳೆಯಾಗಿ ಬಿಚ್ಚಿತೋರಿಸಿದೆ. ಪಟ್ಟಣದ ರಾಜ ಅಮೀರಚಂದ ಶೋಕೇಸಿನಲ್ಲಿರುವ ಗೊಂಬೆಯಂತೆ ಹೆಸರಿಗೆ ಮಾತ್ರ ರಾಜ. ದರ್ಬಾರವೆಲ್ಲ ದಿವಾಣರದ್ದೇ. ವಾಡೆಯ ದಿವಾಣರು ದರ್ಪದಿಂದ ' ಸಾಹುಕಾರಿ ' ನಡೆಸುತ್ತಿದ್ದುದನ್ನು ಕಾದಂಬರಿ ಚೆನ್ನಾಗಿ ಚಿತ್ರಿಸಿದೆ.

' ಮಯ್ಯಾದಾಸನ ವಾಡೆ ' ಇದೊಂದು ಪಾತ್ರಪ್ರಧಾನವಾದ ಕಾದಂಬರಿ. ಪುರುಷ ಪಾತ್ರಗಳೇ ಕಾದಂಬರಿಯ ಆಧಾರ ಸ್ತಂಬಗಳು. ಮಥುರಾಮದಾಸ. ಮಯ್ಯಾದಾಸ. ಗೋಕುಲದಾಸ. ಮಣೀರಾಮ. ಹರನಾರಾಯಣ. ಮಲಿಕ. ಮುಂಸಾರಾಮ. ಹಲವಾಯಿ. ಕಲ್ಲಾ. ಘನಶಾಮ. ಹುಕೂಮತರಾಯ. ರಾಮಲಭಾಯಾ. ರಾಮಜವಾಯ. ವಾನಪ್ರಸ್ಥಿ. ಲಕಮೀದಾಸ. ಲಚಮೀದಾಸ. ಬಾಂಶಿ. ಮುಕುಂದ. ಮೊದಲಾದ ಪುರುಷ ಪಾತ್ರಗಳಲ್ಲದೆ. ಭಾಗಸುದ್ದಿ ಚಂದ್ರಾ. ಈಸರಾದೇಯಿ. ಪುಷ್ಪಾ ಸುಮಿತ್ರಾ. ರುಕ್ಮಿಣಿ. ದೇವಕಿ. ವೀರಾಲಿ ಮೊದಲಾದ ಸ್ತ್ರೀ ಪಾತ್ರಗಳೂ ಕಾದಂಬರಿಯಲ್ಲಿ ಔಚಿತ್ಯವಾಗಿ ಎಡೆಪಡೆದಿದ್ದು. ಕಾದಂಬರಿ ಪಾತ್ರಗಳ ಪಡೆಯನ್ನೇ ತನ್ನ ಒಡಲಲ್ಲಿ ತುಂಬಿಕೊಂಡು ನಿಂತಿದೆ. ದಿವಾಣ ರಾಮದಾಸ. ಧನಪತರಾಯ. ಅವನ ಮಕ್ಕಳು. ಭಾಗಸುದ್ದಿ. ಹರನಾರಾಯಣ. ವೀರಾಲಿ. ಪುರೋಹಿತ. ರಾಮದಾಸ. ಲೇಖರಾಜ. ರುಕ್ಮಿಣಿ. ಸುಂದರದಾಸ. ದಯಾರಾಮ. ರಾಮಜವಾಯ. ಮೊದಲಾದ ಪಾತ್ರಗಳು ಸದಾ ನೆನಪಿನಲ್ಲಿ ಉಳಿಯಬಲ್ಲ ಪಾತ್ರಗಳು.

ಬದಲಾವಣೆಗಳನ್ನು ಜನರು ಥಟ್ಟನೆ ಸ್ವೀಕರಿಸದಿದ್ದರೂ. ಒಂದು ಬಗೆಯ ಆಂತರಿಕ ತಮ್ಮ ಪರಂಪರೆಯ ನಂಬಿಕೆಗಳಿಗೆ ಧಕ್ಕೆಯುಂಟಾಗಬಹುದೆಂಬ ಗಾಬರಿಯಿಂದ ಆ ಬಗ್ಗೆ ಚರ್ಚೆ. ವಾದ - ವಿವಾದ ಮಾಡುತ್ತಲೇ ಅನಿವಾರ್ಯವಾಗಿ ಬದಲಾವಣೆಗೆ ಒಳಗಾಗುತ್ತಾರೆ. " ಹೋಗು. ಹೋಗು. ನಿನ್ನ ಕೆಲಸ ನೋಡು. ನೀನು ಹೇಗೆ ಸ್ಕೂಲು ಪ್ರಾರಂಭಿಸುವಿಯೋ ನೋಡುತ್ತೇನೆ. ಕುಲೀನ ಮನೆತನದ ಹುಡುಗಿಯರ ಪರದಾನ ತೆಗೆಯಲು ಬಂದಿದ್ದಾನೆ ".[೧೨೬] ಎಂದು ಚೀರಾಡುತ್ತಿದ್ದ ಸಂದರ್ಭದಲ್ಲಿ ಸಂಪ್ರದಾಯ - ಆಧುನಿಕತೆಯ ಮಧ್ಯದ ಸಂಘರ್ಷವನ್ನೇ ಕಾಣಬಹುದು. ಶಾಲೆ ಹೊಸದಾಗಿ ಪ್ರಾರಂಭವಾದಾಗ ಹೀಗಾದರೆ. ವಿಲಾಯಿತಿ ಅಲಂಕಾರಿಕ ವಸ್ತುಗಳು ಪಟ್ಟಣವನ್ನು ಮುತ್ತಿದಾಗ. ಹೇರ ಪಿನ್ನುಗಳನ್ನು ಹಾಕಿಕೊಳ್ಳಲೂ ಹೆಣ್ಣುಮಕ್ಕಳು ಹಿಂದೆ ಮುಂದೆ ನೋಡುವಂಥ ಸ್ಥಿತಿಯಿತ್ತು.

ಕಾಲನ ಕಟ್ಟಳೆ ಯಾರನ್ನೂ ಬಿಟ್ಟದ್ದಲ್ಲ. ಪರಂಪರೆಯ ನಂಬಿಕೆಗಳನ್ನು ಕಳಚಿಕೊಂಡು ಹೊಸಯುಗದ ಹೆಜ್ಜೆ ಸದ್ದಿಗೆ ಜನ ಅನಿವಾರ್ಯವಾಗಿ ಕಿವಿಗೊಡಲೇಬೇಕಾಗುತ್ತದೆ; ಕಿವಿಗೊಡುತ್ತಾರೆ. ' ಮಯ್ಯಾದಾಸನ ವಾಡೆ '

೧೨೬. ದು. ನಿಂ. ಬೆಳಗಲಿ : ಮಯ್ಯಾದಾಸನ ವಾಡೆ (ಅನುವಾದ). ಪುಟ ೨೩೨

ಶತಮಾನದ ಹಿಂದಿನ ಊಳಿಗಮಾನ್ಯ ಆಡಳಿತದ. ಅದರ ಹಳಸಲು ಜೀವನ ಶೈಲಿಯ. ಮೌಲ್ಯಗಳ. ಹಾಸ್ಯಾಸ್ಪದವಾದ ಆಡಂಬರಗಳ. ತಣ್ಣನೆಯ ಕ್ರೌರ್ಯದ. ಕುಯುಕ್ತಿಯ. ಅವಿಸ್ಮರಣೀಯ ಐತಿಹಾಸಿಕ ಸಂಕೇತವಾಗಿ ಮೂಡಿಬಂದಿದೆ ಎಂದರೆ ತಪ್ಪಾಗಲಿಕ್ಕಿಲ್ಲ. " ಹತ್ತಿ ಹೇರಿಕೊಂಡು. ಭಾರತದಿಂದ ಬ್ರಿಟನ್ ಮುಟ್ಟುವ ಒಂದೊಂದು ಹಡಗು. ಬಂಗಾರದಿಂದ ತುಂಬಿದ್ದು ಎಂದು ತಿಳಿಯಿರಿ. ಅದು ಹತ್ತಿಯಲ್ಲ ಬಿಳಿ ಬಂಗಾರ...."[೧೩೭] ವೆಂದು ಹೇಳುವ ಬ್ರಿಟಿಷ ಅಧಿಕಾರಿಯ ಮಾತುಗಳು. ಭಾರತವನ್ನು ಅವರೆಷ್ಟು ಕೊಳ್ಳೆ ಹೊಡೆದರೆಂಬುದನ್ನು ಎತ್ತಿತೋರಿಸುತ್ತದೆ. ಕಾದಂಬರಿ ದಿವಾಣರ ದಬ್ಬಾಳಿಕೆ - ದರ್ಪ. ಬ್ರಿಟಿಷರ ಒಡೆದು ಆಳುವ ನೀತಿಯಿಂದ ದೇಸೀ ಅವರಸೊತ್ತಿಗೆಗಳನ್ನು ಕಬಳಿಸಿದ್ದು. ಜನರು ಬದಲಾವಣೆಗೆ ಒಗ್ಗಲಾರದೆ ಚಡಪಡಿಸಿದ ರೀತಿಯನ್ನು ವಿವರಿಸುವದರೊಂದಿಗೆ ಅನೇಕ ಮನಮಿಡಿಯುವ ಸನ್ನಿವೇಶಗಳನ್ನೂ ಸೃಷ್ಟಿಸಿದೆ.

ಸುಮಿತ್ರಾ ವಾನಪ್ರಸ್ಥಿಯ ಪ್ರೀತಿಯ ಮಗಳು. ಅಳಿಯ ವಜೀರಾಬಾದಕ್ಕೆ ರೈಲು ಹಳಿ ಕೆಲಸಕ್ಕೆ ಹೋದವ ಕೆಲದಿಗಳ ನಂತರ ಅನಾರೋಗ್ಯಕ್ಕೆ ತುತ್ತಾಗಿ. ತನ್ನನ್ನು ಕರೆದುಕೊಂಡು ಹೋಗುವಂತೆ ಪಟ್ಟಣಕ್ಕೆ ಪತ್ರ ಬರೆದ. ಆದರೆ ಸುಮಿತ್ರಾ ತನಗೆ ಓದು ಬಾರದೆಂದೂ. ಅವು ತಂದೆಯ ಪತ್ರಗಳೆಂದೂ. ಅವುಗಳನ್ನು ನೋಡಲೇ ಇಲ್ಲ. ಊರಲ್ಲಿಲ್ಲದ ವಾಸಪ್ರಸ್ಥಿ ಬಂದು ಪತ್ರಗಳನ್ನು ನೊಡಿದ. ಆಗಲೇ ಅಳಿಯ ತೀರಿಕೊಂಡು ಸುಮಿತ್ರಳು ವಿಧವೆಯಾಗಿದ್ದಳು. ಮಗಳು ಓದಿದ್ದರೆ ಅಳಿಯ ಉಳಿಯಬಹುದಿತ್ತೆನಿಸಿದ್ದಲ್ಲದೆ. "ನಾನು ಎರಡುಕ್ಷಣ ಕಲಿತಿದ್ದರೆ. ಅವರು ಬದುಕಿರುತ್ತಿದ್ದರೇನೋ "[೧೩೮] ಎನ್ನುತ್ತ ಪ್ರಾಣ ಬಿಟ್ಟ ಪ್ರಸಂಗ ಚಿಕ್ಕದಾದರೂ ಚೊಕ್ಕದಾಗಿ ಮೂಡಿ ನಿಂತು ಓದುಗರ ಹೃದಯವನ್ನು ಆರ್ದ್ರಗೊಳಿಸುತ್ತದೆ. ಇದರೊಂದಿಗೆ ಭಾಗಸುದ್ಧಿಯ ಗಂಡನ ಮರಣ. ರುಕ್ಮಿಣಿ ತನ್ನ ಬದುಕನ್ನೆಲ್ಲ ವಾಡೆಯ ಪಂಜರದ ಪಕ್ಷಿಯಾಗಿ. ಹುಚ್ಚಗಂಡನನ್ನೇ ಜಪಿಸುತ್ತ ಪ್ರಾಣಾರ್ಪಣೆಗೈದ ಪ್ರಸಂಗ. ಲೇಖರಾಜನು ಹೋರಾಡಿದ ಪ್ರಸಂಗಗಳು. ಹೀಗೆ ಅನೇಕ ಮನಮಿಡಿಯುವ ಪ್ರಾಸಂಗಿಕ ಸನ್ನಿವೇಶಗಳು 'ವಾಡೆ'ಯ ಐತಿಹಾಸಿಕ ಕಥೆಗೆ ಮಾನಸಿಕ ಸಂವೇದನೆಯನ್ನು ತಂದುಕೊಟ್ಟು ಕಾದಂಬರಿಗೆ ಜೀವಂತಿಕೆಯನ್ನು ತುಂಬಿದೆ.

ಕಳೆದ ಶತಮಾನದಲ್ಲಿ ಪಂಜಾಬಿನಲ್ಲಿ ಸಿಖ್ಖರ ಆಡಳಿತ ಶಿಥಿಲಗೊಳ್ಳುತ್ತ. ಬ್ರಿಟಿಷರು ಭಾರತದ ಒಂದೊಂದೇ ಭಾಗವನ್ನು ಕಬಳಿಸುತ್ತಿದ್ದ ಸಂದರ್ಭದಲ್ಲಿ. ಜಡ್ಡು ಹಿಡಿದ ಊಳಿಗಮಾನ್ಯ ಪದ್ಧತಿಯ ಸಂಕೇತದಂತಿದ್ದ 'ಮಯ್ಯಾದಾಸನ ವಾಡೆ' ಕ್ರಮೇಣ ತನ್ನ ತನವನ್ನು ಕಳೆದುಕೊಳ್ಳುವದನ್ನು ಸಮಗ್ರವಾಗಿ ಚಿತ್ರಿಸುವ ಪ್ರಸ್ತುತ ಕೃತಿ ಬೆಳಗಲಿಯವರ ಬಹುಪರಿಶ್ರಮದ ಕೂಸು. " ವಸ್ತುತಃ ಭೀಷ್ಮ ಸಾಹನಿಯರ ಈ ಕಾದಂಬರಿ ವಸ್ತು ವಾಡೆ ಇಲ್ಲವೆ ಇಂದು ಪಟ್ಟಣದ ಕಥೆಯಾಗಿಯೂ ಪ್ರವಹಿಸುತ್ತಿರುವ ಕಾಲ ಪ್ರವಾಹದಲ್ಲಿ ಮತ್ತು ಪರಿವರ್ತಿಸುವ ಪರಿಸ್ಥಿತಿಯ

೧೩೭. ಮ. ಸಿಂ. ಬೆಳಗಲಿ : ಮಯ್ಯಾದಾಸನ ವಾಡೆ (ಅನುವಾದ). ಪುಟ ೧೭೬

೧೩೮. ಮ. ಸಿಂ. ಬೆಳಗಲಿ : ಮಯ್ಯಾದಾಸನ ವಾಡೆ (ಅನುವಾದ). ಪುಟ ೨೫೧

ದೃಷ್ಟಿಯಲ್ಲಿ ಒಂದು ಇಡೀಯುಗವನ್ನು ಪ್ರತಿನಿಧಿಸುತ್ತದೆ. ಅವರ ಸೃಜನಶೀಲತೆಗೆ ಒಂದು ಉನ್ನತ ಸ್ಥಾನವನ್ನು ನೀಡುತ್ತದೆ" [೧೩೯] ಎಂದೆನ್ನುತ್ತ ಬೆಳಗಲಿಯವರು ಉತ್ತಮವಾದ ಅನುವಾದ ಕೃತಿಯನ್ನೇ ನೀಡಿದ್ದಾರೆ.

ಕಾದಂಬರಿಯನ್ನು ಓದುತ್ತ ಹೊದಂತೆ. ಐತಿಹಾಸಿಕ ಕಾಲಗರ್ಭದಲ್ಲಿ ನಡೆದ ಸಂಘರ್ಷಮಯ ಬದುಕಿನ ಚಿತ್ರಣಗಳು ತಮ್ಮಷ್ಟಕ್ಕೆ ತಾವು ಬಿಚ್ಚುತ್ತ ಹೋಗುತ್ತವೆ. ಭಾರತೀಯ ಇತಿಹಾಸದ ಅನೇಕ ಬದಲಾವಣೆಯ ಪದರುಗಳನ್ನು ಬಿಚ್ಚಿಡುವ ಪ್ರಸ್ತುತ ಕಾದಂಬರಿ. ನೂರಾರು ಪದರುಗಳ ಸಮಸ್ಯೆಗಳನ್ನು ನೂರಾರು ಪುಟಗಳಲ್ಲಿ ಚೆನ್ನಾಗಿ ಚಿತ್ರಿಸಿದ ಉತ್ತಮ ಕೃತಿಯಾದರೂ, ಅಲ್ಲಲ್ಲಿ ಒಂದಿಷ್ಟು ಕೊರತೆಯ ಸೆಳಕುಗಳೂ ಕಾಣುತ್ತವೆ. ಕಾದಂಬರಿಯನ್ನು ಓದುತ್ತ ಹೋದಂತೆ ಇದೊಂದು ಅನುವಾದ ಕೃತಿ ಎಂಬುದು ತಟ್ಟನೆ ಸ್ಮೃತಿಗೆ ಬರುವಂತೆ ಕೆಲವು ಕಡೆ ಕಂಡುಬರುತ್ತದೆ. ಹಲವೆಡೆ ಮೂಲವನ್ನು ಭಾಷಾಂತರಿಸಿದಂತೆ ಭಾಸವಾಗುತ್ತದೆ. ಇದಿಷ್ಟನ್ನು ಬಿಟ್ಟರೆ ಕಾದಂಬರಿ ತುಂಬ ಚೆನ್ನಾಗಿ ಮೂಡಿಬಂದಿದ್ದು. ಬೆಳಗಲಿ ತಾವೊಬ್ಬ ಉತ್ತಮ ಅನುವಾದಕರೆಂಬುದಕ್ಕೆ ಸಾಕ್ಷಿಯಾಗಬಲ್ಲ ಕೃತಿ.

---

೧೩೯. ಮ. ನಿಂ. ಬೆಳಗಲಿ : ಮರ್ಯ್ಯಾದಾಸನ ವಾಡೆ (ಅನುವಾದ). ಅನುವಾದಕರ ನುಡಿಯಿಂದ

## ಅಧ್ಯಾಯ : ಐದು

# ಬೆಳಗಲಿಯವರ ಕಾದಂಬರಿಗಳ ಶೈಲಿ ಮತ್ತು ತಂತ್ರ

ಬೆಳಗಲಿಯವರ ಕಾದಂಬರಿಗಳ ವರ್ಗೀಕರಣ ಮಾಡಿ. ಅವುಗಳ ಒಳ ಹೊರಗನ್ನು ಅಧ್ಯಯನಕ್ಕೊಳಪಡಿಸಿದ ನಂತರ. ಅವುಗಳ ಶೈಲಿ ಮತ್ತುತಂತ್ರಗಳನ್ನು ಅವಲೋಕನ ಮಾಡಲೇಬೇಕಾಗುತ್ತದೆ. ಹಾಗೆ ಮಾಡಿದಾಗ ಮಾತ್ರ ಅವುಗಳ ಅಧ್ಯಯನಕ್ಕೆ ಪೂರ್ಣತೆ ಪ್ರಾಪ್ತವಾಗಲು ಸಾಧ್ಯ. ಯಾವುದೇ ಒಂದು ಕಾದಂಬರಿಗೆ ಭಾಷೆ-ಶೈಲಿ-ತಂತ್ರಗಳು ವಸ್ತುವಿನಷ್ಟೇ ಪ್ರಮುಖ ಸಂಗತಿಗಳು. ಭಾಷೆಯ ಬಗೆಗೆ ಆಯಾ ಕಾದಂಬರಿಯನ್ನು ಅಧ್ಯಯನಕ್ಕೆತ್ತಿಕೊಂಡ ಸಂದರ್ಭದಲ್ಲಿಯೇ ಚರ್ಚೆ ಮಾಡಿದ ಕಾರಣ. ಮತ್ತೆ ಆ ವಿಚಾರವನ್ನು ಪ್ರಸ್ತಾಪಿಸದೆ ಇಲ್ಲಿ ಕೇವಲ ಅವುಗಳ ಶೈಲಿ ಮತ್ತು ತಂತ್ರಗಳ ಕೆಲವು ಪ್ರಮುಖ ಹಾಗೂ ಸಾಮಾನ್ಯ ಅಂಶಗಳನ್ನು ಕುರಿತು ಸೋದಾಹರಣವಾಗಿ ವಿಶ್ಲೇಷಣೆ ಮಾಡಲಾಗಿದೆ :

**ಶೈಲಿ :**

'ಶೈಲಿ' ಎಂಬುದು ಇಂಗ್ಲೀಷಿನ 'Style' ಎಂಬುದರ ಸಂವಾದಿರೂಪ. 'ಶೈಲಿ' ಯೆಂಬುದು ಸಿದ್ಧರೂಪವಲ್ಲ. ಅದು ಸಾಹಿತಿಯನ್ನು ಅವಲಂಬಿಸಿರುವ ಕಾರಣ. ಅದರ ಸ್ಪಷ್ಟನಿಷ್ಟ ವ್ಯಾಖ್ಯೆ ಕಷ್ಟಸಾಧ್ಯವಾದ ಕೆಲಸ. " Style means writer's system of expressive means including a specific choice of words, phraseology, syntax and all other literary components " [೧] ಎಂದು ವಿಮರ್ಶಕರೊಬ್ಬರು ಶೈಲಿಯನ್ನು ವ್ಯಾಖ್ಯಾನಿಸಿದ್ದಾರೆ. ಸಾಹಿತ್ಯ ಸಂದರ್ಭದಲ್ಲಿ ಶೈಲಿ ಎಂದರೆ. ಅಭಿವ್ಯಕ್ತಿ ಮಾಧ್ಯಮದ ವಿವಿಧ ಪರಿಕರಗಳನ್ನೊಳಗೊಂಡ ರೀತಿ ಎಂದರ್ಥ. ಸಾಹಿತಿ ತನ್ನ ಅನುಭವದ ಸಮಷ್ಟಿ ಪ್ರಜ್ಞೆಯನ್ನು ತನ್ನದೇ ಆದ ರೀತಿಯಲ್ಲಿ ಶಾಬ್ದಿಕ ರೂಪದಲ್ಲಿ ಹೊರಹಾಕುವಾಗ 'ಶೈಲಿ' ತನ್ನಿಂದ ತಾನೇ ಅಪ್ರಯತ್ನಪೂರಕವಾಗಿ ರೂಪ ಪಡೆದುಕೊಳ್ಳುತ್ತದೆ. ಹಾಗಾಗಿಯೇ ಅನುಭವ ಸಮಷ್ಟಿಯ ವ್ಯಷ್ಟಿ ಅಭಿವ್ಯಕ್ತಿಯೇ ರೀತಿ ಅಥವಾ ಶೈಲಿ ಎಂದು ಹೇಳಬಹುದು. "ಶೈಲಿ ಪ್ರಧಾನವಾಗಿ ವ್ಯಕ್ತಿನಿಷ್ಠ ನಿಜ. ಆದರೆ ಅದು ಸಮಷ್ಟಿಯ ಮೇಲೆ ಪ್ರಭಾವ ಬೀರುವುದಲ್ಲದೆ. ಅದರಿಂದ ಪ್ರಭಾವಿತವಾಗುವುದೂ ಉಂಟು. ಆದ್ದರಿಂದ ಅದು ಸಾಹಿತಿಯ ವ್ಯಕ್ತಿತ್ವವನ್ನು

---

೧. Vladimir and Sheherbina : Lanin and the Problems of literature, Page 176

ಪ್ರತಿಬಿಂಬಿಸುವ ದರ್ಶನವೂ (ಸಾಧನವೂ) ಅಹುದು. ಒಂದು ಸಮಾಜದ ಸಂಸ್ಕೃತಿಯನ್ನು ಬಿಂಬಿಸುವ ದರ್ಶನವೂ ಅಹುದು".[೨] ಅಂದರೆ, ಒಬ್ಬ ಸಾಹಿತಿಯ ಶೈಲಿಯು ಆತನ ವ್ಯಕ್ತಿತ್ವವನ್ನಷ್ಟೇ ಅಲ್ಲ; ಆತ ಬದುಕಿದ ಸಮಾಜ ಸಂಸ್ಕೃತಿಯನ್ನೂ ದರ್ಶನ ಮಾಡಿಸುತ್ತದೆ.

ಪ್ರತಿಯೊಬ್ಬ ಬರಹಗಾರನೂ ತನಗರಿವಿಲ್ಲದಂತೆ ತನ್ನ ಬರವಣಿಗೆಯಲ್ಲಿ ತನ್ನ ಶೈಲಿಯ ವಿಶಿಷ್ಟ 'ಛಾಪು' ಒತ್ತಿರುತ್ತಾನೆ. ಅದಕ್ಕಾಗಿಯೇ ಹೆಸರನ್ನು ಮರೆಮಾಡಿ ಓದಿದರೂ, ಆ ಬರವಣಿಗೆಯ ರೀತಿಯ ಮೇಲೆ 'ಇದು ಇಂಥ ಲೇಖಕನದೇ ಬರವಣಿಗೆ' ಎಂದು ಸ್ಪಷ್ಟವಾಗಿ ಗುರುತಿಸಬಹುದು. ಇದು ಶೈಲಿಯ ಬಹುಮುಖ್ಯ ವೈಶಿಷ್ಟ್ಯ. ಒಟ್ಟಿನಲ್ಲಿ ಅಭಿವ್ಯಕ್ತಿ ಮಾಧ್ಯಮವೇ ಶೈಲಿ ಎಂಬುದು ಸರ್ವಸಮ್ಮತ ಅಭಿಪ್ರಾಯ. ಈ ಅಭಿವ್ಯಕ್ತಿಯಲ್ಲಿ ಅನೇಕ ಪರಿಕರಗಳು ಸೇರಿಕೊಳ್ಳುತ್ತವೆ. ಈ ಪರಿಕರಗಳು ಲೇಖಕರಿಂದ ಲೇಖಕರಿಗೆ ಭಿನ್ನವಾಗಿರುತ್ತವೆ; ಭಿನ್ನವಾಗಬೇಕು ಕೂಡ. ಹಾಗಾದರೆ ಮಾತ್ರ ಅದು ಜೀವಂತಿಕೆ-ಶ್ರೀಮಂತಿಕೆಯ ಸಂಕೇತ.

"ಕಾದಂಬರಿಯ ಶೈಲಿ ಕಥಾವಸ್ತುವಿನಲ್ಲಿಯ ಪಾತ್ರಗಳ ಹೃದ್ಗತವಾದ ನೈಜ ಧ್ವನಿಯಾಗಬೇಕಾದುದು ಅಗತ್ಯವಾಗಿದೆ. ನಮ್ಮಲ್ಲಿ ಕೆಲವು ಲೇಖಕರನ್ನು ಬಿಟ್ಟರೆ ಹೆಚ್ಚು ಜನರು ಶೈಲಿಯ ವಿಷಯವಾಗಿ ಪರಿಶ್ರಮ ಪಡುವುದಿಲ್ಲ. ಹೀಗಾಗಿ ಭಾಷೆ ತುಂಬಿಕೊಂಡು ಬೆಳೆಯದೆ, ಕ್ಷಯಹೊಂದುತ್ತ ನಡೆದಿದೆ. ಇದ್ದ ಭಾಷಾಸರಣಿಯನ್ನೇ ಮತ್ತೆ ಮತ್ತೆ ಉಪಯೋಗಿಸಿ ಅದರ ವಾಚ್ಯಾರ್ಥ ಕೂಡ ದುರ್ಬಲವಾಗುತ್ತ ನಡೆದಿದೆ. ಸರಳತೆ, ನೀರಸತೆಯಲ್ಲವೆಂಬುದನ್ನು ಲೇಖಕರು ಲಕ್ಷ್ಯದಲ್ಲಿ ಇಡಬೇಕಾಗಿದೆ"[೩] ಎಂಬ ಮಾತು ಕಾದಂಬರಿಕಾರನ 'ಬರವಣಿಗೆಯಬಂಧ'ಕ್ಕೆ ನೀಡಿದ ಉತ್ತಮ ನಿದರ್ಶನವಾಗಿದೆ. ಯಾವುದೇ ಬರಹಗಾರನ, ಅದರಲ್ಲಿಯೂ ಮುಖ್ಯವಾಗಿ ಗದ್ಯಬರಹಗಾರನ ಶೈಲಿಯ ಅಧ್ಯಯನಕ್ಕೆ ಪ್ರಸ್ತುತ ಮಾತು ಮಾರ್ಗದರ್ಶಿಯಾದಂತಿದೆ. ಕಲೆ ಹಾಗೂ ಬದುಕಿಗೆ ಬದ್ಧತೆಯಿರುವುದೇ ಮಾನವತೆಗೆ ಬದ್ದತೆಯಿದ್ದಂತೆ. ಕಲಾತ್ಮಕ ಅಭಿವ್ಯಕ್ತಿಗಾಗಿಯೇ ಕಾದಂಬರಿಯು ನಿರ್ಮಾಣವಾಗಬಾರದು. ಹಾಗೆ ಮಾಡಿದರೆ ಪ್ರಯೋಗದ ರಭಸದಲ್ಲಿ ಕಾದಂಬರಿ ತನ್ನ ಸಾಹಿತ್ಯಿಕ ಸ್ವರೂಪವನ್ನು ಕಳೆದುಕೊಳ್ಳುತ್ತದೆ.' ಸಾಹಿತ್ಯಿಕ ಪ್ರಯೋಗಕ್ಕಾಗಿ ಕಾದಂಬರಿಗಳನ್ನು ಬರೆಯದ ಬೆಳಗಲಿಯವರು 'ಸಾಮಾಜಿಕ ನಿಲುವು' ಗಳಿಗಾಗಿ ಕೃತಿಗಳನ್ನು ಬರೆದವರು.

ಈ ಹಿಂದೆಯೇ ಪ್ರಸ್ತಾಪಿಸಿದಂತೆ ಬೆಳಗಲಿಯವರು, ಮೂಲತಃ 'ಜನಪರ' ಕಾದಂಬರಿಕಾರರು. ಸಾಮಾಜಿಕ ಅನಿಷ್ಟ-ವಿಕೃತಿ-ವಿಸಂಗತಿಗಳನ್ನು, ಅರೆಕೊರೆಗಳನ್ನು ಎತ್ತಿ ತೋರಿಸುವಲ್ಲಿ ಬೆಳಗಲಿಯವರು ಸಮಾಜದಲ್ಲಿರುವ ವ್ಯವಹಾರಿಕ ಭಾಷೆಯನ್ನೇ ಬಳಸಿದರು. ಸಾಹಿತ್ಯವನ್ನು ಸಾಮಾನ್ಯನಿಗೂ ತಲುಪಿಸುವ ಹಂಬಲ ಅವರದು. ಇದೇ ಹಂಬಲ ಅವರು ವಸ್ತುವಿನಲ್ಲಿಯೂ ಇರಿಸಿದ್ದರು. ವಸ್ತುವಿನಲ್ಲಿರುವ ಹಂಬಲವನ್ನೇ ಅಭಿವ್ಯಕ್ತಿಯಲ್ಲಿ ತಂದವರು. ಅವರದು ಅಕೃತಕ ಶೈಲಿ; ಅದು ವಸ್ತುವಿನಲ್ಲಿಯೂ ಹೌದು, ಭಾಷೆಯಲ್ಲಿಯೂ

---

೨. ದೇ. ಜವರೇಗೌಡ : ಪದ್ಯಶೈಲಿ, ಪುಟ ೧೭೦

೩. ಕೆ. ಡಿ. ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಪುಟ ೩೪೯

ಹೌದು. ಹೇಳುವ ರೀತಿಯಲ್ಲಿಯೂ ಹೌದು. ಭಾಷೆಯನ್ನು ತಿದ್ದಿ-ತೀಡಿ ಹದಗೊಳಿಸಿ ಬಳಸದೆ. ನೇರ-ಸಹಜ-ಸರಳ ರೀತಿಯಲ್ಲಿ ಬಳಸುವುದೇ ಅವರ ಶೈಲಿ. ಅವರ ಯಾವುದೇ ಕೃತಿಯನ್ನು. ಕಾದಂಬರಿಯನ್ನು ತೆಗೆದುಕೊಂಡರೂ ಇದು ಸ್ಫಟಿಕಸ್ಪಷ್ಟವಾಗಿ ಗೋಚರಿಸುತ್ತದೆ.

**ನೇರನುಡಿ :**

'ಕಾತ್ರಾಳ ರತ್ನಿಯ ಚಾದಂಗಡಿ'ಯ ತ್ರಿಪುರಾಂತಕ ಸ್ವಾಮಿ. "ಯಪಾ. ನನ ಕಡೀಂದ ತಪ್ಪಾಗೇತಿ! ಒಮ್ಮೆ ಹೇಳಿರೂ ಅಷ್ಟs ನೂರಸಾರೆ ಹೇಳಿರೂ ಅಷ್ಟs ಇನ್ನೊಮ್ಮೆ ಇಂಥಾ ಕೆಲ್ಸಕ್ಕೆ ಕೈ ಹಾಕೂದುಲ್ಲಾ ಖರೇ ದಾನಮ್ಮನ ಆಣೀ ಮಾಡಿ ಹೇಳ್ತನs...." (ಪುಟ ೧೨೫). ಎಂದು ಗೋಗರೆದು. ತನ್ನ ಪ್ರಾಣಭಿಕ್ಷೆ ಬೇಡುತ್ತಾನೆ. ಕಸ್ತೂರಿಯ ಮದುವೆ ಮಾತುಕತೆಯ ಪ್ರಸ್ತಾಪದ ಸಂದರ್ಭದಲ್ಲಿ. "ನಾ ಹೂನೂರಿನಿಂದ ಬಂದsನ್ರೀ.... ಸೋಮಣ್ಣ-ರಾಚಪ್ಪ ಕಳಿಸ್ಯಾರು...." (ಪುಟ ೧೩೧). ಕಾತ್ರಾಳದ ಭಾನಗಡಿಗಳಿಗೆ ಬೇಸತ್ತ ಬಿಸನಾಳದ ಹಾಲುಮಾರುವ ಗೌಳಿಗ ಮಾದೇವ ನೇರವಾಗಿಯೇ. "ನಿಮೂರೇನ ಸಮಾಧಾನದಿಂದ ಇರೂವಾಂಗ ಕಾಣುದುಲ್ಲಾ! ಹೆಂಗ್ಸರ್ನ ಜಗ್ಗೂದು ಉರ್ಲ ಹಾಕೊಂಡ ಸಾಯೂದು. ಜನಾವರ್ನ ಕೊಲ್ಲೂದು. ಬಣವೀ ಸುಡೂದು. ಖೂನಿ ಮಾಡೂದು. ಮಂದೀನ ಹಾಳಮಾಡಾಕ ಹೊಸ ಅಂಗಡಿ ಸುರುಮಾಡೂದು.... ಈಗ ಮೋಟರ ಸಾಯಕಲ್ಲ ಸುಡೂದು.... ಸಾಕಪಾ ಸಾಕು.... ಅದಕ್ಕs ಮಂದಿ ಊರ ಬಿಡಾಕ ಹತ್ಯಾರು.... ಇದೆಲ್ಲಾ ನಮೂರ ಬಿಸನಾಳದಾಗ ಆಗ್ತಿದ್ರು. ನಾನs ಮುಂದಾಗಿ ಅಂವ ಯಾಂವ ಭಾನಗಡಿ ಮಾಡಾಂವಿದ್ರು ಆಂವ್ನ ಕಾಲ ಮುರ್ದು ಕೈಯಾಗ ಕೊಡತಿದ್ನಿ. ಇಲ್ಲಿ ನಡಿಯೂ ಕಿತಾಪತಿ ಎಲ್ಲಾ ಗೊತ್ತೈತಿ. ಆದ್ರು ನಾ ಪರವೂರಾಂವ ಅಂತ ಗಪ್ಪ ಇರಬೇಕಾಗೇತಿ...." (ಪುಟ ೧೬೭-೮) ಎಂದು ತನ್ನ ರೋಷವನ್ನು ಹೊರಹಾಕಿದ್ದ. ಜಾಲಿಬೆಂಚಿ ರತ್ನಪ್ಪ ಕುಡುಕ ಗೂಂಡಾ ವ್ಯಕ್ತಿ. ಅವನಂತೆ ಅವನ ಅಳಿಯ ಗಂಗಾರಾಮನನ್ನೂ ಬೆಳೆಸಿದವ. ಒಂದು ದಿನ ಅಳಿಯನನ್ನು ಪೋಲಿಸರು ಅರೆಸ್ಟ ಮಾಡಿ ಒಯ್ದಾಗ. "ನನ ಕಿಸೇದಾಗ ಸರ್ಕಾರ ಐತಿ ನನ್ನ ಕೈಯಾಗ ಎಮ್ಮೇಲೇ ಅದಾನು.... ನನ ಮುಟಗ್ಯಾಗ ಪೋಲಿಸ್ರು ಅದಾರು...." (ಪುಟ ೧೮೪). ಎಂದು ರತ್ನಪ್ಪ ಸಂತಾಪದಿಂದ ಚೀರಾಡುತ್ತಿದ್ದ. "ಗೌಡ್ರ. ನಾ ಹರಿಜನರ ಪೈಕಿ.... ನಾಯೇನ ಸುಳ್ಳ ಹೇಳಿ ನಿಮೂರಾಗ ಮ್ಯಾಲೀನ ಜಾತೀ ಹುಡುಗೀ ಲಗ್ನ ಆಗಿಲ್ಲಾ.... ನಾ ಮ್ಯಾಲಿನ ಜಾತ್ಯಾಂವಂತ ಸುಳ್ಳು ಹೇಳಿ ಇಲ್ಲಿ ಮನೀ ಮಾಡಿಲ್ಲಾ.... ಊರಾಗ ಯಾರೂ ನನ್ನ ಜಾತೀ ಕೇಳಿಲ್ಲ.... ಈಗ ನೀವ ಜಾತಿ ಒಡಿದ ಮಾತಾಡ್ಲಾಕ ಹತ್ತೇರಿ.... ಮಂತ್ರಿ ಬ್ಯಾರೇ ಆಗಾವ್ರ ಇದ್ರೆಂತ.... ಇತ್ತ ಜಾತಿ ಎತ್ತಿರೇನ? (ಪುಟ ೨೨೫)

ಬದಲಾಗದ ಗ್ರಾಮೀಣ ಬದುಕಿನ ಬಗ್ಗೆ ಬೆಳಗಲಿಯವರು ನೇರ ವಿಷಾದವನ್ನೇ ಪಡುತ್ತಾರೆ. 'ಜೋಗಿಮರಡಿ'ಯಲ್ಲಿ "ಸ್ವಾತಂತ್ರ್ಯ ಸಿಕ್ಕು ಮೂವತ್ಮೂರು ವರ್ಷ ಕಳೆದರೂ. ಈ ಅಸ್ಪೃಶ್ಯತಾ ನಿವಾರಣೆಯ ಚಳುವಳಿಯಾಗಲಿ. ಸರಕಾರದ ಕಾನೂನುಗಳಾಗಲಿ. ಜೋಗಿಮರಡಿಯಂಥ ಕಾಡುಹಳ್ಳಿಗಳಿಗೆ ಯಾವ ಸಂಬಂಧವೂ ಇಲ್ಲದಂತೆ ಇನ್ನೂ ಹಳೆಯ ಸಂಪ್ರದಾಯಗಳೇ ನಡೆದುಕೊಂಡು ಬಂದಿವೆ. ಹರಿಜನರನ್ನು ಶರಣನಂಥ ದೀನರು

ಕೂಡ ಇನ್ನೂ ಮುಟ್ಟುವುದಿಲ್ಲ. ಅವರು ತಲೆ ಮಾಡಿಸಿಕೊಳ್ಳಬೇಕಾದರೆ ಬೇರೆಕಡೆಗೆ ಹೋಗಬೇಕು. ಇಲ್ಲವೇ ತಮ್ಮಲ್ಲಿ ತಾವೇ ಸಿಕ್ಕಸಿಕ್ಕಂತೆ ತಲೆಯಲ್ಲಿ ಅಡ್ಡತಿಡ್ಡ ತಗ್ಗುದಿನ್ನೆಗಳನ್ನು ತೋಡಿಕೊಳ್ಳಬೇಕು. ಇಲ್ಲವೆ ಬಹಳ ದಿನ ತಲೆ ಬೆಳೆಸಿಕೊಂಡು ಹೇನುಗಳನ್ನು ಸಂರಕ್ಷಿಸಬೇಕು" (ಪುಟ ೪೧) "ರೊಕ್ಕಗಳಸೂ ಮನಸಿದ್ರ ನೀನs ಬೇಕಾರ ಮುಂಬೈಗಿ ಹೋಗ...." (ಪುಟ ೪೬). ಮನಮುಟ್ಟಿ ದುಡಿಮೆ ಮಾಡಬೇಕೆಂಬುದೇ ಬೆಳಗಲಿಯವರ ಅಂತರಂಗದ ಅಳಲು-ಸಿದ್ಧಾಂತ. ಬೆರಳು ಮಡಚದೆ ಉಂಡರೆ. ಗ್ರಾಮಗಳು ಸುಧಾರಣೆಯಾಗವೆಂಬುದು. "ತಮಾ. ಬೆವ್ರು ಸುರ್ಸಿ ದುಡದ ಗಳಿಸಿದ್ದ ಖಾಯಂ ಉಳೀತೇತಿ. ಅಮಾತ್ಲೆ ಬಂದದ್ದ ಅಮಾತ್ಲೆ ಹೋಗತೈತಿ.... ಯಾರೋ ಗಳಿಸಿದ್ದ. ಇನ್ನಾರೋ ಉಳಿಸಿದ್ದ" (ಪುಟ ೭೦). ಉಳಿಯಲಾರದೆಂಬುದು ಈ ನೇರನುಡಿಗಳ ಅಭಿವ್ಯಕ್ತಿಯಾಗಿದೆ.

'ದೇವದಾಸಿ' ಬೆಳಗಲಿಯವರ ಬಹುಮ ಹತ್ವಾಕಾಂಕ್ಷೆಯ ಕೃತಿ. ಅದರಲ್ಲಿ. "ಹಾಂಗಾರ. ಕೇರ್‍ಯಾಗ ಬ್ಯಾರೆ ಹುಡುಗ್ಯಾರ್‍ನ ದೇವರ ಹೆಸರಿನಿಂದ ಬಿಡ್ತಾರಲ್ಲ. ಅದನ್ಯಾಕ ನಿಮ್ಮಂಥಾ ಹಿರ್‍ಯಾರ ಸೇರಿ ತಡೀಬಾರ್‍ದು....?" (ಪುಟ ೭೦). ಬೆಳಗಲಿಯವರ ಸಾತ್ವಿಕ ಸಿಟ್ಟು ಸಹಜವಾಗಿಯೇ ಪ್ರಕಟಗೊಂಡಿದೆ. ಇಂಥದೇ ನೇರ ತರಾಟೆ. "ಮಗಳ್ನ ಮಾರ್‍ಕೋತೀರಿ.... ನೀವೇನ ಮನುಷ್ಯರs ? ನಿಮ್ಮಗಳಂದ್ರ ಏಮ್ಮಿಕರಾ. ಆಕಳಕರಾ ಅಂತ ತಿಳಿದಿರೇನ....? ನಾ ಈಗ ಹೆಚ್ಚು ಹೇಳುದುಲ್ಲ...." (ಪುಟ ೧೪೯). ಎಂಬ ಮಾತುಗಳಲ್ಲಿಯೂ ಅಡಗಿದೆ. "ಹೊಲ್ಯಾರು ಉತ್ತಮ ಹುಡುಗರ್‍ಗಿ ಸಾಲೀಬರ್‍ಯಾಣ ಕಲಸ್ತಾರಂತ...." (ಪುಟ ೩೦೨). "ಇವರ್‍ಗೇನ ಮನ್ಯಾಗ ಕೆಲಸಿಲ್ಲ ಕಾಣತೈತಿ! ಯಲ್ಲಮ್ಮಗ ಭಂಡಾರ ಹಾಕಿ ಬಿಟ್ಟಾವರ್‍ಹಾಂಗ ಇವ್ರ ನಮ್ಮ ಕೇರ್‍ಯಾನ ಮಂದೀನ ಸುದಾರ್‍ಸಾಕ ಬಂದಾರಂತ! ಒಂದು ಒಳ್ಳೆಯ ಕೆಲಸಕ್ಕೆ ಅನೇಕ ತೊಂದರೆಗಳಂತೆ. ಅಂಥ ತೊಂದರೆಯ ವೈರುಧ್ಯವನ್ನೂ ಲೇಖಕರು ತಮ್ಮ ನೇರನುಡಿಗಳಿಂದಲೇ ಅಭಿವ್ಯಕ್ತಿ ಮಾಡಿರುವುದು ಬೆಳಗಲಿಯವರ ಶೈಲಿಯ ಬಹುಮುಖ್ಯ ಧೋರಣೆ.

'ಮೌನಕ್ರಾಂತಿ'ಯಲ್ಲಿ. "ನನ ಗಂಡ ಭಾಳ ಸಾಲಾ ಮಾಡಿಕೊಂಡಾನು. ಅಂವ್ನ ದೊಸ್ತ ಸಾಲಾ ಕೊಟ್ಟಾನಂತ. ರಾತ್ರಿ ನಾ ಅಂವ್ನ ಕರಕೊಂಡ್ರು ಅಂವ ಎಲ್ಲಾ ಸೂಟ ಬಿಡ್ತಾನಂತ.... ನಾ ಇದಕ್ಕ ಕಬೂಲಿ ಆಗಬೇಕಂತ. ಗಂಡ ಬಡದಾ. ಅಂತಾವ್ಗ ನಾ ಗಂಡಂತ ಹೆಂಗ ಅನ್ಲಿ ? ಗುಳದಾಳಿ ಕಟ್ಟಿದ ಗಂಡನ ಹೀಂಗ ಹೇಳಿದರ ನಾಯೇನ ಮಾಡಬೇಕು ? ಅಲ್ಲಿ ಹೆಂಗಿರಬೇಕು. ನೀವ ಹೇಳ್ರಿ...." (ಪುಟ ೨೭-೨೮). ಬೆಳಗಲಿಯವರ ನೇರ-ಸರಳ-ಸಹಜ ಅಭಿವ್ಯಕ್ತಿಗೆ ಇದೊಂದು ಒಳ್ಳೆಯ ನಿದರ್ಶನ. "ನಾ ಯಾವುದಕ್ಕೂ ಇಲ್ಲ ಅಂದಿಲ್ಲ. ಓಂದ ನೀಂವ ಕರೀತಿರಲಿಲ್ಲ. ನಾ ಬಂದಿಲ್ಲ. ಊರ ಒಳ್ಳೇ ಕೆಲಸಕ್ಕ ನನ್ನಿಂದ ಯಾವ ರೀತಿ ಸಹಾಯ ಬೇಕೋ ಕೇಳ್ರಿ ಇದs ಊರಾಗ ಹುಟ್ಟಿ ಬೆಳೆದಾಂವಾ. ಇಲ್ಲೀ ಅನ್ನ ತಿಂದ ದೊಡ್ಡಾಂವ ಆದಾಂವಾ. ಹುಟ್ಟಿದ ನೆಲ ಅಂತ ನನಗೂ ಅಭಿಮಾನ ಐತಿ.... ನಿನ್ನೆ ನಾ ಒಂದಿಷ್ಟು ಕಾವಾಗಿ ಮಾತಾಡಿದ್ದಕ ಕೆಲವರ ಮನಸ್ಸಿಗಿ ನೋವಾಯ್ತೇನೋ! ಅಂದ್ರು ಅನ್ಯಾಯ ನೋಡಿ ಸುಮ್ಮ ಕೂಡ್ರುದ ಒಳ್ಳೆಯದಲ್ಲ ಅಂತ ಹೇಳಿನಿ...."

(ಪುಟ ೬೮). ಎಂದು ನೇರ ಮಾತುಗಳಲ್ಲಿಯೇ. ಊರೊಂದಿಗೆ ತಾನೂ ಒಂದಾಗುವ ದೃಷ್ಟಿಯನ್ನು ಶಿವಶಂಕರ ಊರಹಿರಿಯರ ಮುಂದೆ ಹೇಳುತ್ತಿದ್ದ. "ಸಾಲಿ ನಡಿಯೂವೇಳೆ ನೀವು ಯಾರೂ ಇಲ್ಲಿ ಕೂಡಬಾರದು. ಅಕ್ಕವ್ರಿಗೆ ಅಡಚಣೆ ಆಗತೈತಿ. ನಿಮುಗ ಕೆಲಸ ಇಲ್ಲಿದ್ರ ಬೇರೆ ಕಡೆ ಹೋಗ್ರಿ...." (ಪುಟ ೧೯೫). ಸ್ವತಃ ಶಿಕ್ಷಕರಾದ ಬೆಳಗಲಿಯವರು. ಶೈಕ್ಷಣಿಕ ಅಡತಡೆಗಳನ್ನು ಸಹಿಸರು. ನೇರವಾಗಿಯೇ ಅಂಥ ತೊಂದರೆಗಳನ್ನು ಬಯಲಿಗೆಳೆದಿದ್ದಾರೆ. "ನೀಯೇನು ಮನುಷ್ಯಳೋ ಕಟುಕಳೋ! ಆ ಮೂಕ ಪ್ರಾಣಿಗಳು ಸತ್ತದ್ದಕ್ಕ ಒಂದ ಕಳಕಳಿ ಮಾತೂ ಇಲ್ಲ. ಅವ್ವ ತ್ರಾಸ ಮಾಡಿಕೊಂಡ ಅತ್ರ ಅದಕ್ಕೂ ಸಮಾಧಾನದ ಮಾತಿಲ್ಲ. ತಿರಗಿಮುರಿಗಿ ನಿನಗ ನಿನ್ನ ತವರ್ಮನಿ ವಸ್ತುಗಳೇ ಹೆಚ್ಚಾದವು. ಇತ್ತ ಗಂಡನದೇನೂ ಕಿಮ್ಮತ್ತಿಲ್ಲ...." (ಪುಟ ೯೧-೯೨). ಬೆಳಗಲಿಯವರಿಗೆ ಜನರ ಮೇಲಿದ್ದಂತೆ ಜಾನುವಾರುಗಳ ಮೇಲೂ ತುಂಬ ಪ್ರೀತಿ.

ಸಂಪ್ರದಾಯಕ್ಕೆ ಜೋತುಬಿದ್ದು ಅದರಲ್ಲಿ ತಮ್ಮ ಬದುಕನ್ನು ನಿರ್ನಾಮ ಮಾಡಿಕೊಳ್ಳುವ ಪರಿಯನ್ನು ತಮ್ಮ 'ಸೀಮೆಗಳು'ದಲ್ಲಿ. "ಈ ಸಂಪ್ರದಾಯದ ಕೊಳಚೆಯಲ್ಲಿ ಕುತ್ತಿಗೆಯವರೆಗೆ ಸಿಕ್ಕಿಹಾಕಿಕೊಂಡಿರುವ ನಾವು ಈ ರೊಜ್ಜಿನಿಂದ ಪಾರಾಗುವುದು ಹೇಗೆ ? ಸಾಧ್ಯವೇ ಇಲ್ಲ. ನಮ್ಮ ಸುಖ-ಸಂತೋಷ. ಬಯಕೆ. ಆಸೆ. ಬೇಡಿಕೆಗಳನ್ನೆಲ್ಲ ಬೆಂಕಿಗೆ ಒಡ್ಡಿ. ಅದರಲ್ಲಿ ಬೇಯುವಂತೆ ಹಿಂಸೆಗೆ ಒಳಗಾಗಿ ವಿಲಿವಿಲಿ ಒದ್ದಾಡುತ್ತೇವೆಯೇ ಹೊರತು. ಪಾರಾಗಿ ಬರದಂತೆ ನಿತ್ರಾಣಗೊಂಡಿದ್ದೇವೆ. ಸುಟ್ಟು ಹೋಗುತ್ತಲಿದ್ದೇವೆ. ಅಷ್ಟೇ" (ಪುಟ ೮). ಚೆನ್ನಾಗಿ ವಿವರಿಸಿದ್ದಾರೆ. ಹೀಗೆ ಬೆಳಗಲಿಯವರ ಯಾವುದೇ ಕಾದಂಬರಿಯನ್ನು ಅವಲೋಕಿಸಿದರೂ. ನೇರ. ಸರಳ. ಸಹಜ. ಅಕೃತಕವಾದ ಶೈಲಿ ನಮ್ಮೆದುರಿಗೆ ನಿಲ್ಲುತ್ತದೆ. ಅವರೊಬ್ಬ 'ಜನಪರ' ಕಾದಂಬರಿಕಾರರಾಗಿದ್ದು. ಜನರಿಗೆ ತೀರ ಆತ್ಮೀಯರೂ. ಆಪ್ತರೂ. ಪರಿಚಿತರೂ ಆದುದು ಅವರ ಈ ಬಿಚ್ಚುನುಡಿಗಳಿಂದಲೇ. ಅವರ ಈ ಬಿಚ್ಚುನುಡಿಗಳಲ್ಲಿ ರೊಚ್ಚಿಲ್ಲ-ರೊಜ್ಜಿಲ್ಲ; ಆದರೆ ಉದ್ದೇಶವನ್ನು ಈಡೇರಿಸುವ ಸಾತ್ವಿಕತೆಯಿದೆ. ರೊಚ್ಚು-ಆವೇಶಗಳಿಗಿಂತ ಸಂಯಮ-ಸರಳತೆಯಿಂದಲೇ ಕಾರ್ಯಸಾಧನೆಯಾಗಬಲ್ಲುದೆಂಬುದು ಅವರ ಬಲವಾದ ನಂಬಿಕೆ. ಮುಚ್ಚುಮರೆಯ ಮಾತಿಗಿಂತ ವಾಚ್ಯವೇ ಬೆಳಗಲಿಯವರಿಗೆ ಅಚ್ಚುಮೆಚ್ಚು. ವಾಚ್ಯದಲ್ಲಿಯೇ ಬಿಚ್ಚಿಡುವ ಅವರ ಶೈಲಿ ತುಂಬ ಆಸ್ವಾದನೀಯವೂ ಹೌದು. ಗದ್ಯಬರವಣಿಗೆಗಾರರಿಗೆ ಇದು ತೀರ ಅವಶ್ಯವಾದುದು ಎಂದರೆ ತಪ್ಪಾಗದು. ಯಾಕೆಂದರೆ. ಪ್ರಯೋಗದ 'ಭ್ರಮೆ'ಯಲ್ಲಿ ಸಹೃದಯರನ್ನು ಪರದಾಡಿಸುವ ರೀತಿ ಸರಿಯಾದುದಲ್ಲ. ಜನರಿಗೋಸ್ಕರ ಸಾಹಿತ್ಯವೇ ಹೊರತು. ಸಾಹಿತ್ಯಕ್ಕಾಗಿ ಜನರಲ್ಲ; ಜನ ಬದುಕಬೇಕು. ಚೆನ್ನಾಗಿ ಬದುಕಬೇಕೆಂಬುದೇ ಪ್ರಸ್ತುತ ಸಂದರ್ಭದ ಸಾಹಿತ್ಯಿಕ ಮೂಲಮಂತ್ರ.

### ಸಂದರ್ಭೋಚಿತ ಭಾಷೆ :

ಬೆಳಗಲಿಯವರು ತಮ್ಮ ನೇರ ಸರಳ ಹಾಗೂ ಅಕೃತಕ ಅಭಿವ್ಯಕ್ತಿಯ ಮೂಲಕವೇ ತಮ್ಮ ಉದ್ದೇಶವನ್ನು ಸಾಧಿಸಿಕೊಂಡು ಬಿಡುತ್ತಾರೆ. ಅವರ ಈ ಶೈಲಿ ಸಂದರ್ಭೋಚಿತವಾಗಿ ಕೆಲವು ಸಲ ತನ್ನ ಹರಿವಿನ ಸ್ವರೂಪವನ್ನು ಒಗ್ಗಿಸುತ್ತಾರೆ. ಆ ಹಿಗ್ಗುವಿಕೆಯಲ್ಲಿಯೂ ಸ್ಥಿತಿಸ್ಥಾಪಕ ಗುಣವನ್ನು ಮರೆಯುತ್ತಾರೆ. ಇಂಥ

ಸಂದರ್ಭಗಳಲ್ಲಿಯೂ ಭಾಷೆಯನ್ನು ಹದಗೊಳಿಸಿ ಸಹಜತೆಯನ್ನೇ ಪ್ರಯೋಗಿಸುತ್ತಾರೆ. 'ವಾತ್ಸಲ್ಯಮಯಿ'ಯಲ್ಲಿ "ಕಣ್ಣಿಗೆ ಪಟ್ಟಿಕಟ್ಟಿಗೊಂಡಿದ್ದರೂ ಟಾಂಗಾದ ಕುದುರೆ ದಾರಿಯ ಸುಳಿವಿನಿಂದ ಓಡುತ್ತಿತ್ತು. ಮಾರ್ಗ ತಪ್ಪುತ್ತಿರಲಿಲ್ಲ. ಕಣ್ಣಿಗೆ ಯಾವ ಪಟ್ಟಿಯಿಲ್ಲದ ಶಂಕರ. ತನ್ನ ಒಳಹೊರ ದೃಷ್ಟಿಯನ್ನೆಲ್ಲ ಬಹುದೂರದ ಆನಂದಪ್ರಭುವಿನಲ್ಲಿ ಕೇಂದ್ರೀಕರಿಸಿದ್ದು. ಇನ್ನೂ ಮನೆ ಮುಂದೆ ಆತನ ಒಂದು ದೃಷ್ಟಿಗಾಗಿ ಕಾಯುತ್ತ ನಿಂತ ಪತ್ನಿಯ ಕಡೆಗೆ ನೋಡಲು ಅಸಮರ್ಥವಾಗಿದ್ದ" (ಪುಟ ೨೮). ತುಂಬ ಔಚಿತ್ಯಪೂರ್ಣವಾಗಿ 'ದಾಂಪತ್ಯ ಧರ್ಮ'ದಲ್ಲಿ ಬಿಟ್ಟ ಬಿರುಕನ್ನು ಬೆಳಗಲಿಯವರು ಹೇಳಿದ್ದಾರೆ. "ಅದೇನ ಮೋಕ್ಷವೋ. ಅದೇನ ಆತ್ಮಸಂತೋಷವೋ. ಅವ್ರಿಗೆ ಗೊತ್ತು. ಒಂತಾಸ ನಿಮ್ಮ ಕೂಡ ಹೊರಗೆ ಅಡ್ಡಾಡಿ ಬಂದ್ರೆ ಅದಕ್ಕೂ ಹೆಚ್ಚಿನ ಆತ್ಮಸಂತೋಷ ಇನ್ನೇನಿದೆ? ಈ ಜನ ಮೋಕ್ಷಕ್ಕೆ ಯಾಕ ಬಡಕೊಳ್ಳುವರೋ ನನಗೂ ತಿಳೀಲಿ. ಸತ್ತದ್ದೇ ಮೋಕ್ಷ. ಅಕ್ಕ ಲೋಕಕಲ್ಯಾಣಾಂತ ಬಹಳ ಜನ ಮಾತಾಡ್ತಾರು. ಸಾಯೋತನಕಾ ಮಾತಾಡ್ತಾ ಇರ್ತಾರು" (ಪುಟ ೧೨೧). ಬದುಕಿನ ಗಾಂಭೀರ್ಯದಲ್ಲಿಯೂ ಬೆಳಗಲಿಯವರ ಅಭಿವ್ಯಕ್ತಿ ಸಹಜತೆಯನ್ನು ಬಿಡುವುದಿಲ್ಲ; ಸಂದರ್ಭೋಚಿತವಾಗಿಯೇ ಬದುಕು-ಬರಹಗಳನ್ನು. ನಡೆ-ನುಡಿಗಳನ್ನು ಆಚಾರ-ವಿಚಾರಗಳನ್ನು ಬೆರೆಸುವ ಬೆರಿಕಿತನ ಬೆಳಗಲಿಯವರದು.

ಹೆಣ್ಣಿಗೆ ಶಾಂತವು ಒಂದು ಮುಖವಾದರೆ. ಕ್ರೌರ್ಯ ಮತ್ತೊಂದು ಮುಖ. ಇವೆರಡೂ ಮುಖಗಳನ್ನು ಚಿತ್ರಿಸುವ ಬೆಳಗಲಿಯವರದು ಮಾತ್ರ ಪ್ರಶಾಂತಮುಖ. ತಮ್ಮ 'ಚೆಂಬಲ್ ಕಣಿವೆಯಲ್ಲಿ' ಚನೇಸರ ತನ್ನ ಇಬ್ಬರು ಪತ್ನಿಯರ ಬಗ್ಗೆ ಹೇಳುತ್ತ. "ಹೆಣ್ಣಿನಲ್ಲಿ ಎಂಥ ಅಂತರ? ಒಂದು ದುಲಾರಿ. ಇನ್ನೊಂದು ಸುಖಿಯಾ! ಸುಖಿಯಾಳಿಗಿಂತ ದುಲಾರಿ ಸುಂದರಿ. ಸುಖಿಯಾ ಮೋಸ ಮಾಡಿ ಬೆಂಕಿ ಹೊತ್ತಿಸಿದಳು. ದುಲಾರಿ ಪ್ರೀತಿಸಿ ಆ ಬೆಂಕಿಯ ಕಿಚ್ಚನ್ನು ಶಾಂತ ಮಾಡಿದಳು...." (ಪುಟ ೫೦). ದೇಶದಲ್ಲಿ ಕಾನೂನುಗಳು ಕಣ್ಣಿಗೆ ಪಟ್ಟಿಕಟ್ಟಿಕೊಂಡ ಗಾಂಧಾರಿಗಳಾಗಿವೆಯೆಂಬುದು ಲೇಖಕರ ಅಭಿಪ್ರಾಯ. "ನೋಡಿರಿ ಭಯ್ಯಾ. ನಮ್ಮ ದೇಶದಲ್ಲಿ ಕಾಯ್ದೆ-ಕಾನೂನುಗಳು ಎಲ್ಲಿವೆ? ಇದ್ದರೂ ಅವು ಹಣವಂತರವು ಹಾಗೂ ರಾಜಕೀಯ ಜನರಹಿಡಿತದಲ್ಲಿರುವ ಕಾಯ್ದೆಗಳು. ಕೇವಲ ವಕೀಲರ ಕೈಯಲ್ಲಿ ಹಾಗೂ ಪುಸ್ತಕದಲ್ಲಿರುವ ಕಾನೂನುಗಳು. ಕಾಯ್ದೆ-ಕಾನೂನುಗಳನ್ನು ವಕೀಲರು ಬೇಕಾದಂತೆ ತಿರುಚಬಲ್ಲರು. ಶ್ರೀಮಂತರು ಅವುಗಳನ್ನು ಜೇಬಿಗೆ ಇಳಿಸಬಲ್ಲರು. ರಾಜಕಾರಣಿಗಳು ಅವುಗಳನ್ನು ಕಾಲಲ್ಲಿ ಹಾಕಿ ತುಳಿಯಬಲ್ಲರು. ಅವು ನಮ್ಮ-ನಿಮ್ಮಂಥವರನ್ನು ಮಾತ್ರ ಭೂತದಂತೆ ಭಯಪಡಿಸುತ್ತಿರುತ್ತವೆ" (ಪುಟ ೫೧). "ಮನೆಯಲ್ಲಿ ಹೆಣ್ಣುಮಕ್ಕಳಿಗೆ ಬರುವ ಅಡಚಣೆ ನಿಮಗೇನು ಗೊತ್ತು? ಬರೀ ಗೋಣುಹಾಕಿದರೆ ಸಮಸ್ಯೆ ಪರಿಹಾರವಾಗುವುದಿಲ್ಲ" (ಪುಟ ೯೪). ಎಂಬ ಹೇಮಂತಿಯ ಮಾತು ಅಲ್ಲಿನ ಸಂದರ್ಭಕ್ಕೆ ಹಿಡಿದ ಕನ್ನಡಿಯೇ ಆಗಿದೆ.

ಬಂಗಾರಿಗೆ ಶಶಿಕಾಂತನ ಮೇಲೆ ಪ್ರೀತಿ. ತಮ್ಮ ಬಸಣ್ಣಗೆ ತೆಗೆದುಕೊಳ್ಳುವ ಇಚ್ಛೆ ಶಶಿಕಾಂತನಿಗೆ. ಮನಸ್ಸುಗಳ ಭಾವ ವಿಭಿನ್ನವಾದಾಗ ಮೌನವೇ ಅದಕ್ಕೆ ಉತ್ತರ. ಆ ಮೌನದಲ್ಲಿಯೇ ನಡೆಯುತ್ತಿದ್ದ ನಿಂಗಣ್ಣ-

ಶಶಿಕಾಂತರ ನಡೆಯನ್ನು. 'ಗಂಡಿನ ನೆರಳು'ದಲ್ಲಿ "ಕಾಲೇತ್ತರ ಬೆಳೆದ ಹುಲ್ಲಿನ ಮಧ್ಯದಿಂದ ದಾರಿಮಾಡಿಕೊಂಡು ನಡೆದಿದ್ದರು ಅವರಿಬ್ಬರು. ಬಂಗಾರಿ ಬಹುದೂರ ಹೋಗಿದ್ದಳು. ಬಂಗಾರಿಯನ್ನು ಶಶಿಕಾಂತನ ಸಹೋದರ ಬಸವನಿಗೆ ಕೊಡುವ ಆಲೋಚನೆ ಇದ್ದು. ಅದಕ್ಕೆ ಬಂಗಾರಿ ಒಪ್ಪದಿದ್ದಾಗ. ಆ ಮಾತುಗಳನ್ನು ಅಲ್ಲಿಗೇ ಮುಕ್ತಾಯಗೊಳಿಸಿದ್ದರು" (ಪುಟ ೧೩೦). ಎಂದು ವರ್ಣಿಸುವಲ್ಲಿ ಬೆಳಗಲಿಯವರ ಮಾತುಗಳು ಅಲ್ಲಿನ ಸಂದರ್ಭವನ್ನು ಕಟ್ಟಿ ಇಟ್ಟಂತಿವೆ.

"ಒಬ್ಬ ನಂಬಿ ಇರಬಾರ್ದು. ಲಗ್ನ ಆದ ಗಂಡ ಏಳಂದ್ರ ಏಳೂದು. ಕುಂಡ್ರಂದ್ರ ಕುಂಡ್ರೂದು. ಇದನ್ಯಾರ ಹೇಳ್ಯಾರು ? ಅವ್ರ ಆಳಾಗಿ ಇರಬೇಕೇನು ? ಎಂದು ಕೇಳುವ ಚಂದ್ರಿಯ ಪ್ರಶ್ನೆಗೆ. ಅದೇ ವೃತ್ತಿಯ ಶಾರಿಗೆ ವೇಶ್ಯಾವೃತ್ತಿ ಬೇಸರ ತಂದಿದ್ದು. ಆದಷ್ಟು ಬೇಗ ಅದರಿಂದ ಹೊರಬರುವ ಆಲೋಚನೆಯಲ್ಲಿರುವ ಅವಳು. "ಗಂಡ ಹೇಣತಿ ಈ ಸಂಬಂಧsನ ಬ್ಯಾರೆ.... ಸಿಕ್ಕಸಿಕ್ಕ ಗಂಡ್ಸರ ಸೆರಗ ನನಗ ಬ್ಯಾಡಾಗೇತಿ...." (ದೇವದಾಸಿ. ಪುಟ ೧೩೪). ಒಂದೇ ವೃತ್ತಿಯ ಸ್ತ್ರೀಯರಿಬ್ಬರು ಪರಸ್ಪರ ಚರ್ಚಿಸುತ್ತಿದ್ದುದು ಹೃದಯಸ್ಥ ಭಾಷೆಯಾಗಿದೆ. ಬೆಳಗಲಿಯವರಲ್ಲಿ ಭಾಷೆ. ಸಂದರ್ಭಕ್ಕೆ ತಕ್ಕಂತೆ ಅರಳುತ್ತದೆಯೇ ಹೊರತು ಕೆರಳುವುದಿಲ್ಲ; ಕೆರಳುವಿಕೆ ಬೆಳಗಲಿಯವರ ವ್ಯಕ್ತಿತ್ವಕ್ಕೆ ಒಗ್ಗದು. ಸೌಮ್ಯ ಧೋರಣೆಯಲ್ಲಿಯೇ ತಮ್ಮ ಉದ್ದೇಶದ ಈಡೇರಿಕೆಗೆ ಹೆಣಗುವ ಬೆಳಗಲಿಯವರು ಭಾಷೆಯನ್ನು ಸಂದರ್ಭೋಚಿತವಾಗಿ ದುಡಿಸಿಕೊಂಡಿದ್ದಾರೆ. ಅಸ್ಪೃಶ್ಯದಂತಹ ಸಾಮಾಜಿಕ ಪಿಡುಗನ್ನು ವಿಶ್ಲೇಸುವಾಗ ಬೆಳಗಲಿಯವರು. "ಊರ ಹೊರಗೆ ಮೂಡಣ ದಿಕ್ಕಿನ ಓರೇಹಳ್ಳದ ಎಡಬದಿಯ ತೀರದಲ್ಲಿ ಒಂದು ಸೇದುಬಾವಿ. ಅದು ಹರಿಜನರಿಗಾಗಿಯೇ ಮೀಸಲು. ಜಾನವಾಡದ ಕೇರಿಯ ಜನರೆಲ್ಲ ಅಲ್ಲಿಂದಲೇ ಗಡಗಡೆಯಿಂದ ನೀರು ಜಗ್ಗಿ ತರಬೇಕು. ಕೇರಿಯಲ್ಲಿ ಎರಡು ಕಡೆ ಬೋರ್ ಹಾಕಿದ್ದರೂ. ಒಂದು ಕಡೆ ನೀರು ಇರಲಿಲ್ಲ. ಇನ್ನೊಂದು ಬೋರ್ ದುರಸ್ಥಿಯಿಲ್ಲದೆ ಆರೇಳು ತಿಂಗಳುಗಳಿಂದ ಕೆಟ್ಟು ನಿಂತಿತ್ತು. ಊರಲ್ಲಿ ಐದು ಕಡೆಗಳಲ್ಲಿ ಬೋರ್ ಇದ್ದು. ಅಲ್ಲಿ ಚೆನ್ನಾಗಿ ನೀರು ಬರುತ್ತಿದ್ದರೂ. ಮೇಲ್ವರ್ಗದವರು ಅವುಗಳನ್ನು ಕೇರಿಯ ಜನರಿಗೆ ಮುಟ್ಟಗೊಡುತ್ತಿರಲಿಲ್ಲ" (ದೇವದಾಸಿ. ಪುಟ ೬೪). ಎಂದು ಸಹಜವಾಗಿಯೇ ಹೇಳುತ್ತಾರೆಯೇ ಹೊರತು ಹುಚ್ಚು-ರೊಚ್ಚಿನಿಂದ ಭಾವುಕರಾಗುವುದಿಲ್ಲ.

ತನ್ನ ವೃತ್ತಿಭಾಷೆಯಲ್ಲಿಯೇ ಬಡಿಗರ ಕೇದಾರಿ. "ಅದ್ಯಾಂವೋ ಭೋಸಡಿ ಮಗಾ. ನನ್ನ ಸರಳ ಮಾಡಾಂವಾ....! ಉಚಗೊಡ್ಡ ಹೊಡದ ಸರಳ ಮಾಡೂದು ನನಗ ಬರ್ತಿತಿ....! ಬಾಚೀಲೆ ಕೊಡ್ಡಾ ಕೆತ್ತಿದಾಂಗ. ಕೆತ್ತುದೂ ಗೊತ್ತೈತಿ....!" (ದೇವದಾಸಿ. ಪುಟ ೨೨೨). ಎಂದು ತನ್ನ ವಿರೋಧಿಗಳನ್ನು ತರಾಟೆಗೆ ತೆಗೆದುಕೊಂಡುದು ತುಂಬ ಸಮಂಜಸವಾಗಿದೆ. ಗೌಡರ ತೋಟದ ಆಳು ಬಸಣ್ಣ. ಹಾಗೂ ವಿಧವೆ ಪಾರ್ವತಿ. ಪರಸ್ಪರರಲ್ಲಿ ಅವರಿಗರಿವಾಗದಂತೆ ಪ್ರೀತಿಯ. ಬದುಕಿನ ಸೆಳೆತವಿದೆ. ಇಬ್ಬರೂ ಚೆನ್ನಪ್ಪ ದೇಸಾಯಿಯವರ ತೋಟದಲ್ಲಿ ದಿನ ನಿತ್ಯ ಕೆಲಸ ಮಾಡುವವರು. ಪರಸ್ಪರರು ಮಾನಸಿಕವಾಗಿ ಅರಿತವರು-ಬೆರೆತವರು. ಒಂದು ದಿನ ಗೋಡೆ ಕಟ್ಟುತ್ತಿದ್ದ ಸಂದರ್ಭ. ಬಸಣ್ಣ ಗೋಡೆ ಮೇಲೆ ಕುಳಿತು ಕಲ್ಲುಗಳನ್ನು ಗೋಡೆಗೆ ಸರಿಯಾಗಿ

ಹೊಂದಾಣಿಕೆಯಾಗುವಂತೆ ಜೋಡಿಸಿ ಕಟ್ಟುತ್ತಿದ್ದ ಪಾರ್ವತಿ ಬಸಣ್ಣಗೆ ಕೆಸರು, ಕಲ್ಲು, ಚೀಪುಗಳನ್ನು ಪೂರೈಸುತ್ತಿದ್ದಳು. ಎರಡು ಕಲ್ಲುಗಳ ಸಂಧಿಯಲ್ಲಿ ಕೆಸರು ಒಗೆದು ಪಾರ್ವತಿಕೊಟ್ಟ ಚೀಪುಕಲ್ಲೊಂದನ್ನು ಅದರಲ್ಲಿ ತುರುಕುತ್ತಾ, "ಪಾರೀ ಕೇರ್‍ಯಾಗ ಇಬ್ರು ಯಾರೋ, ಲಗ್ನಾ ಆಗಾಕ ತಯಾರ ಆಗ್ಯಾರಂತಲ್ಲ....!" (ದೇವದಾಸಿ, ಪುಟ ೧೨೩). ಎಂದು ಕೇಳುವುದು 'ಹಸಿ ನೆಲಕ ಬೀಸಿ ಗುದ್ದಲಿಯ ಒಗೆದಂತಹ ಗುಟ್ಟ ಮಾತು'. ಸಾಂದರ್ಭಿಕವಾಗಿ ತುಂಬ ಉಚಿತವೆನಿಸಿದೆ. ಬೆಳಗಲಿಯವರ ಭಾಷಾ ಔಚಿತ್ಯವನ್ನು ಸಾಕಷ್ಟು ಹೆಕ್ಕಬಹುದು. ಪ್ರಸ್ತುತ ಸನ್ನಿವೇಶಕ್ಕೆ ಇದಿಷ್ಟು ಸಾಕೆನಿಸುತ್ತದೆ. ಅವರ ಪ್ರತಿ ಕಾದಂಬರಿಗಳೂ ಔಚಿತ್ಯಪೂರ್ಣ ಭಾಷಾ ಬಳಕೆಗೆ ಪಕ್ಕಾದ ಪಕ್ವ ಕೃತಿಗಳೇ ಆಗಿವೆ. ಅವರ ಭಾಷಾಬಸಿ ಸಂದರ್ಭಕ್ಕೆ ತಕ್ಕಂತೆ ಅರಳಿ ನಿಂತಿದೆ. ಸಹಜತೆಯೇ ಅವರ ಭಾಷಾಪ್ರಾಮುಖ್ಯತೆ. ಸಹಜತೆಯಲ್ಲಿ ಕಲಾತ್ಮಕತೆಯನ್ನು ಮೆರೆದವರು ಬೆಳಗಲಿಯವರು.

## ಅಸದೃಶ ಸನ್ನಿವೇಶ ನಿರ್ಮಾಣ :

ಶಾಶ್ವತವಾಗಿ ಸ್ಮರಣೆಯಲ್ಲಿ ಉಳಿಯಬಲ್ಲ ಸನ್ನಿವೇಶಗಳನ್ನೇ ಅಸದೃಶ ಸನ್ನಿವೇಶಗಳೆಂದು ಕರೆಯಲಾಗುತ್ತದೆ. ಇಂಥ ಸನ್ನಿವೇಶ ನಿರ್ಮಾಣದ ಸಾಮರ್ಥ್ಯದಿಂದಾಗಿಯೇ ಲೇಖಕರು ಸಹೃದಯರ ಮನದಲ್ಲಿ ಸದಾ ಹಸಿರಾಗಿ ಉಳಿಯಬಲ್ಲರು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸ್ಥಿರವಾಗಿ ನಿಲ್ಲಬಲ್ಲ ಅನೇಕ ಅದ್ಭುತ ಸನ್ನಿವೇಶಗಳನ್ನು ಬೆಳಗಲಿಯವರು ತಮ್ಮ ಅನೇಕ ಕಾದಂಬರಿಗಳಲ್ಲಿ ನಿರ್ಮಿಸಿದ್ದಾರೆ. ಇಂಥ ನಿರ್ಮಾಣಗಳಿಂದಲೇ ಬೆಳಗಲಿಯವರು ನಮ್ಮನ್ನು ಗೆದ್ದು ಬಿಡುತ್ತಾರೆ. ಇಂಥ ಸನ್ನಿವೇಶಗಳಲ್ಲಿಯೂ ಅವರ ಭಾಷೆ ಹಿಗ್ಗದು-ಕುಗ್ಗದು; ಅದೇ ಸ್ಥಿತಿ. ಸಹಜತೆ-ಸರಳತೆ ಅವರ ಕಾದಂಬರಿಗಳ ಪರಂಪರಾಗತ ಅಧ್ಯಯನದಲ್ಲಿ ಇಂಥ ಅನೇಕ ಸನ್ನಿವೇಶಗಳನ್ನು ಪ್ರಸ್ತಾಪಿಸಲಾಗಿದೆ. ಆದರೂ ಕೆಲವನ್ನಿಲ್ಲಿ ನೋಡಲು ಪ್ರಯತ್ನಿಸಲಾಗಿದೆ.

'ಕಾತ್ರಾಳ ರತ್ನಿಯ ಚಾದಂಗಡಿ'ಯಲ್ಲಿ ಊರ ಹಿತಕ್ಕಾಗಿ ರತ್ನ ತನ್ನ ಶೀಲವನ್ನೇ ಕಳೆದುಕೊಳ್ಳಲು ತಯಾರಾಗಿ, ರಾತ್ರಿ ಸಮಯದಲ್ಲಿ ವಂಕಾರಿಯನ್ನು ಕರೆದು, ಅವನಿಗೆ ಹೇಳುವ ಉಪದೇಶದ ಸನ್ನಿವೇಶ ಅದ್ಭುತವಾದುದು. ಅಷ್ಟೇ ರೋಚಕವಾದುದು. ಅಷ್ಟೇ ಓದುಗರ ಮನದಲ್ಲಿ ಚಿರಕಾಲ ಉಳಿಯಬಲ್ಲ ರೋಮಾಂಚನಪರ ಸನ್ನಿವೇಶ. ಹೆಸರಿಗೆ ತಕ್ಕಂತೆ ರತ್ನಾ, ರತ್ನದಂಥವಳೇ ಎಂದು ಓದುಗರು ಆ ಸನ್ನಿವೇಶವನ್ನು ಎಂದಿಗೂ ಮರೆಯರು; ಕನ್ನಡದಲ್ಲಿ ಅದೊಂದು ಅವಿಸ್ಮರಣೀಯ ಅನುಭವ.

'ಹಡೆದವರು'ದಲ್ಲಿ ಹಾಲಿ ತಂದೆಯಿದ್ದೂ, ತಾಯಿ ಇದ್ದೂ, ಅದೂ ಒಬ್ಬೊಬ್ಬರಲ್ಲ, ಇಬ್ಬಿಬ್ಬರು ಇದ್ದೂ ಅನಾಥಳಾಗಿ! 'ಧೋ' ಎಂದು ಸುರಿಯುವ ಮಳೆಯಲ್ಲಿ ಜ್ವರದ ತಾಪದಿಂದ ನರಳುತ್ತ ಗುಡಿಸಲಲ್ಲಿ ಬಿದ್ದ ಪ್ರಸಂಗ ಓದುಗರ ಮನಸ್ಸಿನಲ್ಲಿ ಎಂದಿಗೂ ಮಾಸದು-ಮರೆಯದು. ಇದರಷ್ಟೇ ಹೃದಯವಿದ್ರಾವಕರ ಸನ್ನಿವೇಶವೊಂದನ್ನು ಬೆಳಗಲಿಯವರು ತಮ್ಮ 'ಸೀಮೆಗಳು' ಕಾದಂಬರಿಯಲ್ಲಿ ನಿರೂಪಿಸಿದ್ದಾರೆ; ನಿರ್ಮಿಸಿದ್ದಾರೆ. ಮುಂಬೈನ ಮಾಹೀಮ್ ಸೇತುವೆಯ ಪಕ್ಕದ ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಿದ್ದ ಕನ್ನಡಿಗಳಾದ, ಕೂಲಿಮಾಡಿ

ಬದುಕುತ್ತಿದ್ದ ಯಮುನವ್ವಳ ಪರಿಸ್ಥಿತಿಯನ್ನು ವರ್ಣಿಸುವ ಪ್ರಸಂಗ. ಸಹೃದಯಿ ನೀಲಕಂಠ ಅವಳ ರೋಗಿಷ್ಠ ಮಕ್ಕಳಿಗೆಂದು ಹೊಸಬಟ್ಟೆ ತಂದದ್ದು. ಅದನ್ನು ತೊಡದ ಆ ದುರ್ದೈವಿ ಮಕ್ಕಳನ್ನು ಅದೇ ಹೊಸ ಬಟ್ಟೆಯಲ್ಲಿ ಸುತ್ತಿ ಸ್ಮಶಾನಪಾಲು ಮಾಡಿದ ಪ್ರಸಂಗ. ಮಗುವನ್ನು ಸಮುದ್ರ ನೀರಲ್ಲಿ ಚೆಲ್ಲಿ ಬರುವಷ್ಟರಲ್ಲಿ ಇಡೀ ಗುಡಿಸಲೇ ಬೆಂಕಿಯಿಂದ ಸುಟ್ಟು. ಗಂಡ ಹಾಗೂ ಇನ್ನೊಂದು ಮಗು ಕರಕಾಗಿ ಹೋದ ಪ್ರಸಂಗ ತುಂಬ ಅದ್ಭುತವಾಗಿದ್ದು. ಅದನ್ನು ನೆನಪಿನಾಳದಿಂದ ಎಂದಿಗೂ ಮರೆಯಲಾಗದು.

'ಚಂಬಲ್ ಕಣಿವೆಯಲ್ಲಿ' ಬೆಳಗಲಿಯವರ ಕುತೂಹಲಕಾರಿ ಕಾದಂಬರಿ. ಈ ಕಾದಂಬರಿ ಹೆಜ್ಜೆ-ಹೆಜ್ಜೆಗೂ ಕುತೂಹಲ. ವಿಸ್ಮಯಗಳನ್ನು ಕೆಣಕುತ್ತ ಸಾಗುತ್ತದೆ. ಬಹುಕಾಲದವರೆಗೆ ಮನಸ್ಸನ್ನು ಕೆಣಕುವ ಇಲ್ಲಿನ ಸನ್ನಿವೇಶಗಳು. ಓದುಗರಲ್ಲಿ ಸದಾ ಹಸಿರಾಗಿರಬಲ್ಲ ಸಾಮರ್ಥ್ಯವನ್ನು ಹೊಂದಿವೆ. 'ಬೆಳಗಲಿ' ಎಂದರೆ ಸಾಕು 'ಚಂಬಲ್ ಕಣಿವೆಯಲ್ಲಿ' ಎನ್ನುವ ಎಷ್ಟೋ ಜನರಿದ್ದಾರೆ. ಇಂಥ ಇನ್ನೂ ಅನೇಕಾನೇಕ ಪ್ರಸಂಗ-ಸನ್ನಿವೇಶಗಳನ್ನು ನಿರ್ಮಾಣ ಮಾಡಿರುವುದು ಬೆಳಗಲಿಯವರ ಶೈಲಿಯ ಮತ್ತೊಂದು ಮಗ್ಗಲು: ಇಂಥ ರೋಚಕ-ರೋಮಾಂಚಕ-ಅವಿಸ್ಮರಣೀಯ ಸನ್ನಿವೇಶಗಳ ನಿರ್ಮಿತಿಯಲ್ಲಿಯೂ ಬೆಳಗಲಿಯವರು ಭಾಷೆಯನ್ನು ದುಂದುಗಾರಿಕೆಯಿಂದ ಬಳಸದೆ. ಸಹಜತೆಯನ್ನೇ ಮೆರೆದದ್ದು ಅವರ ಅಭಿವ್ಯಕ್ತಿಯ ವೈಶಿಷ್ಟ್ಯವೂ ಹೌದು. ಅದು ಅವರ ವ್ಯಕ್ತಿತ್ವದ ವೈಶಿಷ್ಟ್ಯವೂ ಹೌದು.

**ಸಂಭಾಷಣೆಯ ಸ್ವಾರಸ್ಯ :**

'ಕಾವ್ಯೇಷು ನಾಟಕಮಂ ರಮ್ಯಂ' ಸಾಹಿತ್ಯಪ್ರಕಾರಗಳಲ್ಲಿ ನಾಟಕವೇ ಸಹೃದಯರನ್ನು ಸುಲಭವಾಗಿ ತಟ್ಟಿ-ಮುಟ್ಟಿ ಎಚ್ಚರಿಸಬಲ್ಲ ಉತ್ತಮ ಸಾಧನ. ದೃಶ್ಯಮಾಧ್ಯಮವಾದ ನಾಟಕದ ಅವಿಭಾಜ್ಯ ಅಂಗವೇ ಸಂಭಾಷಣೆ. ಇಂಥ ಪ್ರಬಲ-ಪರಿಣಾಮಕಾರಿಯಾದ ಸಂಭಾಷಣೆ ಕಾದಂಬರಿಗೆ ಕಾಲಿಟ್ಟಾಗ ಅದಕ್ಕೆ ಸಹಜವಾಗಿಯೇ ಚಲನೆ ಪ್ರಾಪ್ತವಾಗಿ. ಜೀವಂತಿಕೆ ತುಂಬಿಕೊಳ್ಳುತ್ತದೆ. ಗದ್ಯದ ನೇರ ನಿರೂಪಣೆಯೇ ಪ್ರಧಾನವಾದ ಕಾದಂಬರಿಯಲ್ಲಿ ನಾಟಕೀಯ ಸಂಭಾಷಣೆಗಳು ಬಂದಾಗ ಅದರ ಹರಿವಿಗೆ ಹೊಸ ಆಯಾಮ ಪ್ರಾಪ್ತವಾಗಿ. ಅದು ಇನ್ನಷ್ಟು ಸ್ವಾರಸ್ಯಕರವೆನಿಸುತ್ತದೆ. ಪಾತ್ರಗಳು ಪರಸ್ಪರ ಸಂಧಿಸುವಾಗ ಏರ್ಪಡುವ ಸಂಭಾಷಣೆ ಆಯಾ ಕಾದಂಬರಿಕಾರನ ಸಾಮರ್ಥ್ಯಕ್ಕನುಸಾರವಾಗಿ ಆಕರ್ಷಣೆಯನ್ನೂ. ಅರ್ಥವಂತಿಕೆಯನ್ನೂ. ಜೀವಂತಿಕೆಯನ್ನೂ ಪಡೆಯುತ್ತದೆ: ಕಾದಂಬರಿಯ ಈ ನಾಟಕೀಯ ಗುಣ ಓದುಗರ ಮನವನ್ನು ಗೆದ್ದು ತಮ್ಮ ಉದ್ದೇಶದಲ್ಲಿ ಸಾಫಲ್ಯ ಪಡೆಯುತ್ತದೆ. ಶೈಲಿಯ ಬಹುಮುಖ್ಯ ಅಂಗವಾಗಿಯೇ ಬರುವ ಈ ಸಂಭಾಷಣೆ ಎಲ್ಲ ಕಾದಂಬರಿಕಾರರಿಗೂ ಸುಲಭವಾಗಿ ದಕ್ಕುವಂಥದ್ದಲ್ಲ. 'ಪಳಗಿದ ಕೈ'ಗೆ ಮಾತ್ರ ಇದು ಸಿಕ್ಕುವಂತಹದು. ಈ ಹಿನ್ನೆಲೆಯಲ್ಲಿ ಬೆಳಗಲಿಯವರ ಕಾದಂಬರಿಗಳನ್ನು ಪರಾಮರ್ಶಿಸಿದಾಗ. ಅವರ ಬಹುತೇಕ ಕಾದಂಬರಿಗಳಿಗೆ ಚಾಲನೆಯುಂಟಾಗಿದ್ದು ಸಂಭಾಷಣೆಯಿಂದಲೇ. ಬಹುಸ್ವಾರಸ್ಯಕರ ಹಾಗೂ ಅರ್ಥಪೂರ್ಣ ಸಂಭಾಷಣೆಯಿಂದಾಗಿ ಅವರ ಬಹುತೇಕ ಕಾದಂಬರಿಗಳು ಜೀವಂತಿಕೆಯನ್ನು ಮೆರೆದಿವೆ. ನಿರೂಪಣೆಯ ಏಕತಾನತೆಗೆ ಹೊಸಚಾಲನೆ

ನೀಡುವ ಬೆಳಗಲಿಯವರು. 'ಮಾತುಕತೆ'ಯ ಸ್ವಾರಸ್ಯಕರ ಸನ್ನಿವೇಶವನ್ನು ತಂದು ಕಾದಂಬರಿಯನ್ನು ಮತ್ತಷ್ಟು ಸಶಕ್ತಗೊಳಿಸುವ ಕಲೆ ಅವರಿಗೆ ಕರಗತವಾದಂತಿದೆ. ತಮ್ಮೆಲ್ಲಾ ಕಾದಂಬರಿಗಳಲ್ಲಿ ಈ ರೀತಿಯ ಶೈಲಿಯನ್ನು ಮೆರೆದಿದ್ದಾರೆ. ಒಂದರ್ಥದಲ್ಲಿ ಅವರ ಬಹುತೇಕ ಕಾದಂಬರಿಗಳಿಗೆ ನಾಟಕೀಯ ಗುಣ ಪ್ರಾಪ್ತವಾಗಿದೆ. ಅವರ ಸಂಭಾಷಣೆಯ ಸ್ವಾರಸ್ಯವನ್ನು ಒಂದಿಷ್ಟು ಉದಾಹರಣೆ ಸಮೇತ ವಿಶ್ಲೇಷಿಸಿದರೆ ಈ ಅಂಶ ಸಹಜಗೋಚರವಾಗಲು ಸಾಧ್ಯ, ಅದನ್ನಿಲ್ಲಿ ಅವಲೋಕಿಸಬಹುದು.

"ಕಲ್ಯಾss....!"

"ಉ್ಞ....!"

"ಕಲ್ಯಾ ನಮವ್ವ ಇನ ಸಂತಿಂದ ಬಂದಿಲ್ಲೋ !"

"ನಾಯೇನ ಮಾಡ್ಲಿ?"

"ಕಲ್ಯಾ ನನಗೂ ಹಸಿವು...."

"ನಿನಗ ಹಸಿವು ಆದ್ರ ನಾಯೇನ ಮಾಡ್ಲಿ ?"

"ಒಂದೀಟs ರೊಟ್ಟಿ ಕೊಡೋs"

"ಹೋಗ ಮಂಗ್ಯಾ. ನಾಡಮಂಗ್ಯಾ ! ನಮ್ಮಲ್ಲೀ ರೊಟ್ಟಿ ಇಲ್ಲಿಲ್ಲ. ನಮವ್ವ ಚಂದ್ರಿ ಮನ್ಯಾಂದ ಕಡ್ಡಾ ಇಸಕೊಂಬಂದಾಳ. ರೊಟ್ಟಿ ಬೇಡ್ತಾಳ. ರೊಟ್ಟಿ...." (ಹಡೆದವರು. ಪುಟ ೧೭). ಚಿಕ್ಕಮಕ್ಕಳ ಈ ಚಿಕ್ಕ ಸಂಭಾಷಣೆಯಲ್ಲಿಯೂ ಬೆಳಗಲಿಯವರು ಚೊಕ್ಕತನವನ್ನು ಮೆರೆದಿದ್ದಾರೆ.

"ಯಮುನ್ಯಾ? ಮಗನs ನನಗ ಸುಳ್ಳ ಹೇಳ್ದಿ ರುಕ್ಮಿ ಮ್ಯಾಲ ?"

"ಇಲ್ಲ ದೇವ್ರಾಣಿ ನೀಲಣ್ಣ !"

"ಯಾ ದೇವ್ರು ?"

"ಅಂದs ಎಲ್ಲವ್ನ ಆಣೀ ಕೊಟ್ಟೀನಲ್ಲ !"

"ಗುಡ್ಡದ ಸಿಪಾಯಿ. ರುಕ್ಮಿ ಮನಿಗಿ ಬ್ಯಾರೆ ಬರ್ತಿದ್ದಂತಲ್ಲ ! ನೋಡೆದೇನ ?"

"ಇಲ್ಲ. ಮಂದಿ ಹೇಳ್ತಾರು...."

"ಮಂದಿ ಏನ ಹೇಳ್ತಾರು ?" (ಕೈ ತಿರುವುತ್ತ ಕೇಳಿದ್ದ)

"ಕೊಲ್ತಿಪೋ ನೀಲಣ್ಣ ! ಕೈಬಿಡು. ಮಂದಿ ಹಾಂಗ ಮಾತಾಡ್ತಾರು...."

"ನಾ ಎಟ್ಟ ರೊಕ್ಕಾ ಕೊಡಬೇಕಾಗೇತಿ ?"

"ನೆಂಪಿಲ್ಲ ನೀಲಣ್ಣ ! ನೀ ಕೊಡೂದ ಬಿಟ್ರೂ ನಡೀತೈತಿ...."

"ಮತ್ತ ಕುಡ್ಯಾಕ ಬೇಕ ನೀಲಣ್ಣ ?"

"ಮಗನs ಅದ್ಕs ಬಂದೀನಿ !" (ಒಂದಿಷ್ಟು ಶಾಂತವಾದಂತೆ ಮತ್ತೆ ಮಾತುಕತೆ ಮುಂದುವರಿಯುತ್ತದೆ).

" ಅದೇನೋ ಯಮುನ್ಯಾ?"

" ನಿನ ಹೇಣತಿ ?"

" ಹ್ಞಾ ಯಾರು ?"

" ನಿನ ಹೇಣತಿ...."

" ಯಾರೋ ಮಗನ ನನ ಹೇಣತಿ ?"

" ಚಿನ್ನಿ"

" ಹ್ಞಾ ಏನಾತು ಆಕಿಗಿ ?"

" ನಿನ ಬಿಟ್ಟ ಕಲ್ಲಟ್ಟಿ ಕರ್ಯಾನ ಹತ್ಲೆ ಹೋಗ್ಯಾಳಂತಲ್ಲ...."

" ಹೋಗಿರ್ಬೇಕು !"

" ಅದೆಂತಾ ಗಂಡ್ಸೋ ! ಹತ್ತಹಳ್ಳಿ ಮಾತಾಡ್ತಾವು...."

" ಏನಂತ ? ಯಾ ಮಗಾ ಮಾತಾಡ್ತಾನ ?"

" ನೀಲ್ಯಾ ಎಂತ ಗಂಡ್ಸಂತ ! ಹೇಣತಿ ಮತ್ತೊಬ್ನ ಮನೀ ಸೇರ್ಯಾಳು. ಅಂತ ಎಲ್ಲಾ ಜನಾ ಮಾತಾಡ್ತಾರು...."

" ಹೌಂದೇನ್ ? ಮತ್ತೇನ ಅಂತಾರ ?"

" ಪರಸ್ಯಾನ ಖೂನಿ ನೀಲ್ಯಾ ಮಾಡೇ ಇಲ್ಲಾ ಅಂತಾರು. ಹೇಣತೀನ ಹದ್ದಿನಾಗ ಇಡದಾಂವಾ. ಖೂನಿ ಹೆಂಗ ಮಾಡ್ತಾನು, ಅಂತಾರು. ಛೆ. ಎಲ್ಲಾರೂ ಅಂತಾರು. ಹೆಂಗ್ಸೂರು ಅಂತಾರು !"

" ಹೀಂಗ ಅಂತಾರ್ರು ! ನೋಡೇ ಬಿಡ್ತನ್ ಅವರ್ನ, ಆ ಮಕ್ಕಳ್ನ ! ಆ ಹೆಂಗ್ಸರ್ನ !"

" ಅವರ್ನೇನ ನೋಡ್ತಿಯೋ ! ಹೇಣತೀನ್. ಆಕಿ ಮಿಂಡನ್ ಮದ್ಲ ನೋಡ ಅಂತಾರು. ಮಂದೀನ ಅಂತಾರು "

" ಹೀಂಗs ! ಅವರ್ನs ನೋಡ್ತನು. ಹೇಣತೀನ. ಆಕೀ ಮಿಂಡನ್ ನೋಡ್ತನು...." (ಹಡೆದವರು. ಪುಟ ೯೦-೯೧)

– ಇಂಥ ಸಂಭಾಷಣೆ. ಕೇವಲ ಮಾತಿನ ಮಟ್ಟದಲ್ಲಿ ಮಾತ್ರ ವಿಹರಿಸದೆ. ಹಳ್ಳಿಯಲ್ಲಿ ಸ್ವಾರ್ಥ ಕೈಗೂಡದಾದಾಗ ನೀಲ್ಯಾನಂಥ ಕುಡುಕ-ಕೊಲೆಗಡುಕನಂಥವನಿಂದ ಮತ್ತಷ್ಟು ಅಂಥ ಕೆಲಸಗಳನ್ನೇ ಮಾಡಿಸುವ ಹಿಕ್ಮತ್ತು ಕಾಣುತ್ತದೆ. ಇದು ಫ್ಯೂಡಲ್ ವ್ಯವಸ್ಥೆಯ ಒಂದು ಮುಖವಾಗಿ ಬಂದ ಸಂಭಾಷಣೆಯೆಂದರೆ ಅತಿಶಯವಾಗದು.

" ನಿಮ್ಮ ಪೂರಾ ಹೆಸರು....?"

" ನಿಂಬಿ ಅಂತಾರ್ರಿ...."

" ಹಾಂಗಲ್ಲ. ಪೂರಾ ಹೆಸರಂದ್ರು ನಿಮ್ಮ ಹೆಸರು. ತಂದೀ ಹೆಸರು. ಅಡ್ಡ ಹೆಸರು...."

" ತಂದಿ ಗೊತ್ತಿಲ್ಲ. ನನ್ನ ಹೆಸರು ನಿಂಬಿ.... ಅಡ್ಡಹೆಸರು ಬಂಡಿಗಣಿ...."

" ನಿಮ್ಮ ತಾಯಿ ಸಾಂಯವ್ವ. ಇದೇ ವೃತ್ತಿ ಮಾಡ್ತಿದ್ಳೇನು ?"

" ಹೌದ್ರಿ....!"

" ನಿಮ್ಮ ತಾಯಿಗೆ ನೀವೆಷ್ಟು ಜನಾ ಮಕ್ಕಳು....?"

" ಗಣಮಕ್ಳು ಇಲ್ರಿ.... ನಾವ ಮೂರುಮಂದಿ ಹೆಣಮಕ್ಳು.... ನಾನs ಸಣ್ಣಾಕಿ, ನನಗಿಂತ ಇಬ್ರು ದೊಡ್ಡಾವ್ರು. ಅವ್ರು ಲಗ್ನ ಆಗೇತ್ರಿ. ಅವ್ರು ತಮ ತಮ ಗಂಡನ ಮನ್ಯಾಗ ಅದಾರ್ರಿ...."

" ನಿಮ್ಮ ಲಗ್ನಾ ಯಾಕ ಮಾಡಿಕೊಡಲಿಲ್ಲ....?"

" ನಾ ಸಣ್ಣಾಕಿ ಇದ್ದಾಗ ನಮವ್ವ ಅಂತಿದ್ದಿಳ್ರಿ.... ಮನೀಗಿ ಗಣಮಕ್ಳು ಇಲ್ಲಾ.... ನಮ ಇಬ್ರ ಅಕ್ಕಗೋಳ ಲಗ್ನ ಆದಮ್ಯಾಲ. ಈ ಮನಿ ನೋಡಾಕ ಯಾರೂ ಇಲ್ಲಾಗ್ತಾರು. ಮುಪ್ಪಿನ ಕಾಲಾಗ ಅವ್ವಾನ ನೋಡಾಕ ಬೇಕಲ್ರಿ...."

" ನಿಂದೂ ಲಗ್ನಾ ಮಾಡಿ. ಈ ಮನ್ಯಾಗ ನಿನ್ನ ಗಂಡನ ಕರಿಸಿ. ಅಂವ ಇಲ್ಲೇ ಇರಬಹುದಿತ್ತಲ್ಲ...."

" ಅದ್ಯಾಂಗ ಆಗ್ತಿತ್ರಿ....? ಮತ್ತ ನಮಕ್ಕನ ಗಂಡ್ರೂ ಪಾಲಾ ಬೇಡ್ತಿದ್ರು.... ನಮ್ಮ ಮನೀ ಹೆಸರೂ ಬ್ಯಾರೆ ಆಗ್ತಿತ್ತು.... ಅಲ್ದ.... ನಮ್ಮನೀ ರಿವಾಜ ಕಾಯಕೊಂಡ ಹೋಗಬೇಕಲ್ರಿ...."

" ನಿಮ್ಮನ್ನು ಯಾವ ವಯಸ್ಸಿನ್ಯಾಗ ದೇವರಿಗೆ ಬಿಟ್ರು....?"

" ನನಗೇನ ಅಟ್ಟ ಪಕ್ಕಾ ಗೊತ್ತಿಲ್ರಿ.... ಆದ್ರೂ ಒಂದೀಟ ತಿಳೀತಿತ್ತು. ಅಜಮಾಸ ನನ ಹತ್ತು-ಹನ್ಯಾಡ ವಯಸ್ಸಿನ್ಯಾಗ ಇರಬೇಕ್ರಿ...."

" ನಿಂಬೆವ್ವಾ. ಈಗ ಈ ವೃತ್ತಿ ಬಗ್ಗೆ ನಿನಗೇನ ಅನಸತೈತಿ....?"

" ಅಂದ್ರ ತಿಳೀಲಿಲ್ರಿ...."

" ಅಂದ್ರ ಈ ದಂಧಾ ಚೆಲೂನ ಕೆಟ್ಟಾ ?"

" ಇದೆಲ್ಲಾ ಚಲೂ ಅಲ್ಲ ಖರೇರಿ...." (ದೇವದಾಸಿ. ಪುಟ ೧೧೪, ೧೧೫, ೧೧೬)

– ಹೀಗೆ ಸಂಭಾಷಣೆ ಮುಂದುವರೆಯುತ್ತದೆ. ಇದು ಕೇವಲ ಮಾತಿಗಾಗಿ ಮಾತಲ್ಲ. ಆ ಮಾತುಗಳಲ್ಲಿ ಸಮಾಜದ ಸಮಸ್ಯೆಯೊಂದರ. ಅದೂ ಸಮಾಜಕ್ಕೆ. ಮನುಕುಲಕ್ಕೆ ಕಂಟಕವಾದ ದೇವದಾಸಿ ಪದ್ಧತಿಯ ಮೂಲಬೇರುಗಳನ್ನು ಹೆಕ್ಕಿ ತೆಗೆಯುವ ಸಾಹಸವಿದೆ.

" ಹಾದರಗಿತ್ತಿ ಮಕ್ಳು.... ಬಣವಿಗಿ ಬೆಂಕೀ ಹಚ್ಚೂದ ಹೋಗಲಿ.... ಹೋರಿಗೋಳ ಸತ್ತಹ್ವಾದು...."

" ಮನ್ನೆ ಬಿಜಾಪುರ ಜಾತ್ರ್ಯಾಗ ಪರಪ್ಪ ಭಾಳ ಹೌಶಿಯಿಂದ ತಂದಿದ್ದ...."

" ಜಾತ್ರ್ಯಾಗ ಇವs ಪಾಸ್ ಆಗಿದ್ದೂವಂತ.... ಯಾರೋ ದೀಡಲಾಖಕ್ಕ ಬೇಡಿದ್ರಂತ...."

" ಮಾರಾಯ. ಪೈಲೇನs ಹೊಳಿಸಾಲ ಹೋರಿಗಳು ! ಜನವಾಡ ಗೌಡ್ರುವ ಅಂತ...."

"ದೇಖಿನಾ ಏನ. ಬಿಳೀ ಬಣ್ಣ ಏನ್. ಮೋತಿಮ್ಯಾಲನ ಕಳೀ ಏನ್. ಕಣ್ಣೀಲೆ ತೀಡಿಧಾಂಗ.... ಅಟ್ಟಕ್ಕ ಬೇಡಿರಬೇಕ. ನೋಡಿರ ನದರ ಆಗೂವಾಂಗ ಇದ್ದು....?"

"ಕಡೀಕ ವಾಟಾಗಾಟಿ ಮಾಡಿ ಸಾವ್ಕಾರು. ಸವಾಲಾಖ ಮಾಡಿ ತಗೊಂಡಿದ್ರು...."

"ರುಪಾಯೇನ ? ಬರ್ತಾವು.... ಹೋಗ್ತಾವು.... ಆದರ ಬಸವಣ್ಣ ದೇವ್ರು ! ದೇವರ್ನ ಬೆಂಕಿ ಹಾಕಿ ಕೊಂದಾಂಗ ಆತ್ಲಾ....!"

"ಬೆಂಕಿ ಹಚ್ಚಾವ್ರಿಗೇನು ? ದೇವ್ರೇನು, ಮನಸ್ಯಾರೇನ, ಎಲ್ಲಾ ಒಂದs...."

"ಆದ್ರೂ ದೇವ್ರು ಅವರ್ನ ನೋಡ್ಕೋತಾನು...."

"ಏನ ದೇವ್ರು ನೋಡ್ಕೋತಾನೋ ! ದೇವ್ರು ನೋಡ್ತಾನಂತ ನಾವ ಹೀಂಗs ಅನಕೋತ ಕುಂಡ್ರೂದು. ಬೆಂಕಿ ಹಚ್ಚಾವ್ರು ಹಚ್ಕೋತ ಇರ್ತಾರು...."

"ಬಣಿವೆರೇ ಸಣ್ಣ ಏನಪಾ ! ಎಡ್ಡು ಕೂಡಿ ಮೂವತ್ತು ಗಾಡಿ ಕಣಿಕಿ ಇರಬೇಕು !"

"ಅದs ಈಗ ತುಟ್ಟೀ ಕಣಿಕಿ. ಅದೂ ಬಿಳಿ ಜ್ವಾಳದ್ದು: ದನಗೋಳಿಗಂದ್ರ ಚುನಮುರಿ ತಿಂದಾಂಗಪಾ...."

"ಏನ ಮಾಡೂದು ! ಈಗ ಉಳದ ದನಗಳೋಳ ಬಾಯಾಗ ಗೆಡ್ಡೀ ಕೊಟ್ಟಾಂಗ...."

"ಅದೇನ ಬಿಡೋ. ಹಸೀ ಮೇವಾ ಕಬ್ಬಿನ ಬಾಟಿ ಇರ್ತತಿ ಬಿಡ.... ಅವ್ರಿಗೇನ ಸಾವ್ಕಾರು....!"

"ಎಲಾ ಮಂಜ್ಯಾಳ ಹೋಗಲಿ. ಅವ್ರಿಗೇನ ಅಂದ್ರ ಹ್ಯಾಂಗೋ ! ಅವ್ರು ದನಕ್ಕ ಅಲ್ಲಿದ್ರು ಬ್ಯಾರೆ ದನಕ್ಕಾದ್ರೂ ಅದು ಅನ್ನ ಅಲ್ಲೇನ ?"

"ಪಾಪ ಪರಪ್ಪ ಸಾವ್ಕಾರ್ಗ ರಗಡ ನೂ ಆಗೇತಿ.... ಅಂವ ಬಾಯಿಬಿಟ್ಟ ಹೇಳದಿದ್ರೂ ಮೋತಿಮ್ಯಾಲ ಕಳೀನs ಇರ್ಲಿಲ್ಲ...."

"ಆಗದs ಏನೋ ಮಾರಾಯಾ ! ಪದರಾನ ಐದ ರುಪಾಯ ಕಳದ್ರು ರಗಡ ಹಳಾಳಿ ಆಗತೈತಿ.... ಈಗ ಲಾಖಗಟ್ಟಲೇ ಲುಸ್ಕಾನ....!" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೯೯-೧೦೦)

—ಹೀಗೆ ಇನ್ನೂ ಮುಂದುವರಿಯುವ ಸಂಭಾಷಣೆಯಲ್ಲಿ ಊರಹಿತವನ್ನೇ ಬಯಸುವ ಪರಪ್ಪ ಸಾವ್ಕಾರರ ಗುಡಿಸಲು-ಬಣವಿಗೆ ಬೆಂಕಿಬಿದ್ದು. ಕಣಿಕಿ-ಹೋರಿಗಳೆರಡು ಸುಟ್ಟು ಕರಕಾಗಿ ಹೋದ ದೃಶ್ಯವನ್ನು ಕಂಡು ಬಂದ ಅನೇಕರು. ರತ್ನಾಳ ಚಾದಂಗಡಿಯಲ್ಲಿ ಕೂತು ತಲೆಗೊಂದು ಮಾತು. ತಲೆಗೊಂದು ಕತೆ. ತಲೆಗೊಂದು ತರ್ಕ. ತಲೆಗೊಂದು ಊಹೆ. ತಲೆಗೊಂದು ನಿರ್ಧಾರ. ತಲೆಗೊಂದು ವ್ಯಾಖ್ಯಾನದಲ್ಲಿ ತುಂಬ ಸ್ವಾರಸ್ಯಕರ ಹಂತವನ್ನು ತಲುಪುವ ಈ ಸಂಭಾಷಣೆಯಲ್ಲಿ ಅನೇಕ ವ್ಯಕ್ತಿಗಳಿರುವುದು ಒಂದು ವೈಶಿಷ್ಟ್ಯ. ಪ್ರಸ್ತುತ ಸಂಭಾಷಣೆಯಲ್ಲಿ ಗ್ರಾಮೀಣರ ಮಾತುಗಳನ್ನು ಅವರ ಬಾಯಿಯಿಂದ ಹಾಗೇ ಎತ್ತಿ ಇಟ್ಟಂತಿದೆ. ಬೆಳಗಲಿಯವರು ಸಂಭಾಷಣೆಯನ್ನು ನಾಟಕಕ್ಕಿಂತ ಚೆನ್ನಾಗಿ ತರಬಲ್ಲರೆಂಬುದಕ್ಕೆ ಇದೇ ನಿದರ್ಶನವಾಗಬಲ್ಲುದು. ಇನ್ನೂ ಅನೇಕ ಉದಾಹರಣೆಗಳನ್ನು ಅವರ ಕಾದಂಬರಿಗಳಿಂದ ಎತ್ತಿಕೊಳ್ಳಬಹುದು. ಇಂಥ ಸ್ವಾರಸ್ಯಕರ ಸಂಭಾಷಣೆಗಳಿಂದಲೇ

ಬೆಳಗಲಿಯವರು ತಮ್ಮ ಕಾದಂಬರಿಗಳಿಗೆ ಜೀವಂತಿಕೆ-ಶ್ರೀಮಂತಿಕೆಗಳನ್ನು ತುಂಬಿದ್ದಾರೆ. ಜನಜೀವನದ ವಾಸ್ತವ ತುಡಿತ-ಮಿಡಿತಗಳನ್ನು ಮಾತುಗಳಲ್ಲಿಯೇ ಹಿಡಿದಿಡುವ ಬೆಳಗಲಿಯವರು ಸಹಜವಾಗಿಯೇ ಕಾದಂಬರಿಗಳಿಗೆ ನೈಸರ್ಗಿಕ ಕಸುವನ್ನು ತುಂಬಿದ್ದು. ಅವರಿಗೆ ಮಾತಿನಲ್ಲಿ ಮೋಡಿ ಮಾಡುವ ಕಲೆ ಪ್ರಾಪ್ತವಾಗಿದೆ.

**ವಿನೋದ ಪ್ರಸಂಗಗಳು (ಹಾಸ್ಯ) :**

ಹಾಸ್ಯ-ವಿನೋದ ಮಾನವನ ಸಹಜ ಗುಣ. ವಿದ್ಯಾರ್ಥಿದೆಸೆಯಿಂದಲೂ ಶಾಲಾನಾಟಕಗಳಲ್ಲಿ ಭಾಗವಹಿಸಿ. ವಿನೋದ ಪಾತ್ರಗಳನ್ನೇ ಆಯ್ಕೆಮಾಡಿಕೊಂಡು ಅಭಿನಯಿಸುತ್ತಿದ್ದ. ಬೆಳಗಲಿಯವರೇ ಹೇಳುವಂತೆ. "ಮೊದಲಿನಿಂದಲೂ ವಿನೋದ. ಹಾಸ್ಯ. ನಗೆಚಾಟಿಕೆ ಮಾಡುವುದು ನನ್ನ ಸ್ವಭಾವ. ವಿದ್ಯಾರ್ಥಿಯಾಗಿದ್ದಾಗಲೂ ಅಷ್ಟೇ ಶಿಕ್ಷಕನಾದ ಮೇಲೂ ಅಷ್ಟೇ."[೪] ಪಾಠಗಳು ಸ್ವಾರಸ್ಯಕರವಾಗಲೆಂದು ಹಾಸ್ಯವನ್ನು ಬೋಧನೆಯಲ್ಲಿ ಸರಿಬೆರಿಸಿ ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸುತ್ತಿದ್ದ ಬೆಳಗಲಿಯವರು. ಅಲ್ಲಲ್ಲಿ ಜನಪದದ ವಿನೋದ ಕಥೆಗಳನ್ನೂ ಹೇಳಿ ವಿದ್ಯಾರ್ಥಿಗಳನ್ನು ರಂಜಿಸುತ್ತಿದ್ದರು. ವೃತ್ತಿಯಲ್ಲಿ ಹೀಗಿದ್ದರೆ. ಪ್ರವೃತ್ತಿಯಲ್ಲಿ ಸುಮಾರು ಮೂರು ವಿನೋದ ಸಂಕಲನಗಳನ್ನೇ ಪ್ರಕಟಿಸಿದ್ದಾರೆ.

ಬೆಳಗಲಿಯವರಿನ್ನೂ ವಿದ್ಯಾರ್ಥಿಯಾಗಿದ್ದಾಗ ಐನಾಪುರದಲ್ಲಿ ಒಂದು ದಿನ ರಾತ್ರಿ ವೇಳೆಯಲ್ಲಿ ದಾರಿಯೊಂದರಲ್ಲಿ ಬರುವಾಗ. ಅವರ ಗುರುಗಳಾದ ಜಿ. ಎಂ. ದೇಶಪಾಂಡೆಯವರು ಎದುರಿಗೆ ಬರುತ್ತಿದ್ದರು. ಅವರಿಂದ ತಪ್ಪಿಸಿಕೊಳ್ಳುವ ಭರದಲ್ಲಿ ಓಡಿಹೋಗುವಾಗ ಹೆಣ್ಣುಮಗಳೊಬ್ಬಳಿಗೆ ಹಾಯ್ದು ಅವಳ ಹಿಟ್ಟಿನ ಡಬ್ಬಿಯನ್ನು ಕೆಡವಿ. ಅವಳಿಂದ ಬೈಸಿಕೊಂಡಿದ್ದರಂತೆ. ಅದೇ ಸನ್ನಿವೇಶ 'ಜೋಗಿಮರಡಿ'ಯಲ್ಲಿ ರೂಪ ಪಡೆದಿದೆ. ಇನ್ನೊಂದು ಸಲ ಐನಾಪುರದ ಗೆಳೆಯನ ರೂಮಿನಲ್ಲಿ ಓದುತ್ತ ಕುಳಿತಾಗ. ಹಳೆಯ ಮಣ್ಣಿನ ಮಾಳಿಗೆಯಲ್ಲಿ ದೊಡ್ಡ ಹಾವೊಂದನ್ನು ಕಂಡು 'ಅಲ್ಲಿ ಆ ಖೋಲ್ಯಾಗ ಒಂದ ಭಾರೀ ಹಾಂವ ಸುರಳೀ ಸುತ್ಕೊಂಡ ಬಿದ್ದೈತಿ....' ಎಂದು ಏದುಸಿರು ಬಿಡುತ್ತ ಸ್ನೇಹಿತರಿಗೆ ಹೇಳಿದರೆ. ನೀ ಹೇಳೂದ ಸುಳ್ಳು. ಮಜಾ ಮಾಡೂದ ನಿನ್ನ ಸ್ವಭಾವ ಐತಿ ಹೋಗ ಹೋಗ.... ಎಂದು ಗೆಳೆಯರು ಅವರ ಮಾತನ್ನು ಗಂಭೀರವಾಗಿ ಪರಿಗಣಿಸಲೇ ಇಲ್ಲವಂತೆ. ವಿನೋದ ಶೀಲರಾದ ಬೆಳಗಲಿಯವರು ಹಾಸ್ಯಮಾಡುತ್ತಿದ್ದಾರೆಂದೇ ಅವರ ನಂಬಿಕೆ. ಕೊನೆಗೆ. 'ದೇವ್ರಾಣಿ. ಖರೇನ ಐತಿ ದೇವರಾಣಿ ಕೊಡ್ತನು....' ಎಂದರೂ ಸ್ನೇಹಿತರೂ ನಂಬಲೇ ಇಲ್ಲ. ಕೊನೆಗೆ ಒಂದಿಬ್ರು 'ನೋಡೇ ಬಿಡೋಣ' ವೆಂದು ತಯಾರಾಗಿ ಆ ಕೋಣೆಯಲ್ಲಿ ಇಣಿಕಿದರೆ ದೊಡ್ಡ ಹಾವೊಂದು ಸುರಳೀ ಸುತ್ತಿ ಬಿದ್ದುದನ್ನು ಕಂಡು ದಂಗಾಗಿ ಹೋದರಂತೆ. ಹೀಗೆ ಬೆಳಗಲಿಯವರು ತಮ್ಮ ಅನುಭವವೇದ್ಯವಾದ ಅನೇಕ ಘಟನೆಗಳನ್ನೂ ಕೂಡ ಅವರು ತಮ್ಮ ಕಥೆ ಕಾದಂಬರಿಗಳಲ್ಲಿ ನಿರೂಪಿಸಿದ್ದಾರೆ. ಅನೇಕ ವಿನೋದ ಪ್ರಸಂಗಗಳು ಸಾಂದರ್ಭಿಕವಾಗಿ. ಹಾಸುಹೊಕ್ಕಾಗಿ ಅವರ ಕಾದಂಬರಿಗಳಲ್ಲಿ ಮೂಡಿನಿಂತಿವೆ. ಅನೇಕ ನಗೆಬರಹದ ಲೇಖನಗಳನ್ನೂ. ಪುಸ್ತಕಗಳನ್ನೂ. ಆಕಾಶವಾಣಿಯಲ್ಲಿಯೂ ಹಾಸ್ಯ ಕುರಿತಾಗಿ ಮಾತನಾಡಿದ ಬೆಳಗಲಿಯವರು.

---

೪. ದು. ನಿಂ. ಬೆಳಗಲಿ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೩೫೭

ಇಂದಿನ ಆಧುನಿಕ ಯುಗದ ಬದುಕಿನಲ್ಲಿ 'ನಗೆ' ನಶಿಸಿ ಹೋಗುತ್ತಿರುವುದಕ್ಕೆ ತುಂಬ ವಿಷಾದ ಪಟ್ಟುಕೊಳ್ಳುತ್ತಾರೆ. ಅವರ ಕಾದಂಬರಿಗಳುದ್ದಕ್ಕೂ ತಿಳಿಹಾಸ್ಯ, ಹಾಸ್ಯ, ವಿನೋದ, ನಗೆಚಾಟಿಕೆ ಪ್ರಸಂಗಗಳು ಹೊನಲಾಗಿ ಹರಿದಿವೆ. ಇಂಥ ಹಾಸ್ಯ ಪ್ರಸಂಗಗಳು ಕಾದಂಬರಿಗಳ ವೇಗ-ಓಘಗಳಿಗೆ ಸಹಜತೆಯನ್ನು ಸೊಗಸನ್ನು ತುಂಬಿಕೊಟ್ಟಿವೆ.

'ಜೋಗಿಮರಡಿ'ಯಲ್ಲಿ ಅರೆಹುಚ್ಚಿ ದ್ಯಾವೀರಿ, ತಮ್ಮ ಹಿಂಡೂ ಎಮ್ಮೆಯನ್ನು ಬಿಟ್ಟು, ಸಾಂವಕ್ಕಳ ಗೊಡ್ಡು ಎಮ್ಮೆಯನ್ನು ಮನೆಗೆ ಹೊಡೆತಂದು, ಅದನ್ನು ಚೆನ್ನಾಗಿ ಮೇಯಿಸಿದ ಪ್ರಸಂಗ, ಕತ್ತಲಲ್ಲಿ ಚಿಮಣಿ ಬೆಳಕಿನಲ್ಲಿ ತಾಯಿ ಅದನ್ನು ಹಿಂಡಲು ಹೋಗಿ, ಮರುಗುತ್ತ ದ್ಯಾವಿಯನ್ನು ಬೈಯ್ಯುವ ಪ್ರಸಂಗ ತುಂಬ ಮೋಹಕವಾಗಿದೆ. ಅದೇ ದ್ಯಾವೀರಿ, "ಶರಣಪ್ಪ ಮಾವಾ, ನಂಗೂ ಮದ್ವಿ ಮಾಡಸ್ರೀ.... ಹೀ.... ಹೀ...." ಎಂದು ಕುಣಿದಾಡಿ ನಗುವ ಪ್ರಸಂಗದಲ್ಲಿಯೂ ತಿಳಿಹಾಸ್ಯ ತುಂಬಿಕೊಂಡು ನಿಂತಿದೆ. ಅದೇ ಕಾದಂಬರಿಯಲ್ಲಿ ಶರಣ ಹೆಂಡತಿಯಿಂದ ರಾತ್ರಿಯವರೆಗೆ ಕಣ್ಣುತಪ್ಪಿಸಿ ಅಡ್ಡಾಡುತ್ತಿದ್ದವ, ಅವಸರವಸರವಾಗಿ ಗೂಳಪ್ಪನ ಕಿರಾಣಿ ಅಂಗಡಿ ಕಡೆಗೆ ನಡೆದಾಗ, ಕತ್ತಲಲ್ಲಿ ಕಾಣದೆ ಎದುರಿಗಿದ್ದ ಹೆಂಗಸಿಗೆ ಬಲವಾಗಿ ಹಾಯ್ದಿದ್ದ. ಆ ರಭಸಕ್ಕೆ ಅವಳ ಕೈಯಲ್ಲಿದ್ದ ಹಿಟ್ಟಿನ ಡಬ್ಬಿ ಕೆಳಗೆ ಚೆಲ್ಲಿ, ಹಿಟ್ಟೆಲ್ಲಾ ಮಣ್ಣುಪಾಲಾದಾಗ, "ಐ ನಿನ ಹೆಣಾ ಎತ್ಲಿ, ಕತ್ಲಾಗ ಇದಿರ್‍ಗಿ ಮಂದಿ ಬರ್‍ತಾರನ್ನು ಖಬರಿಲ್ದ ಹಾಂಗs ಹಾಯ್ದಿಲ್ಲೋ ಮೂಳಾ! ಹೆಂಗ್ಸರನ್ನೂ ಖಬರೈತಿಲ್ಲೋ!! ನಾಕಸೇರ ಗೋಂಜ್ಯಾಳ ಹಿಟ್ಟ ಕೆಡವಿಬಿಟ್ಟಿ, ನಾಡಮೂಳಾ!!! ಈ ಹಿಟ್ಟಿನ ರೊಕ್ಕಾ ಕೊಟ್ಟs ಹೋಗು...." ಎಂದು ಬೈಯುತ್ತಿದ್ದುದು ತನ್ನ ಹೆಂಡತಿಯೇ ಎಂದರಿತ ಶರಣ ಅಲ್ಲಿಂದ ಹಾರ್‍ಗಾಲ ಬಿದ್ದು ಓಡಿ ಹೋದ ಪ್ರಸಂಗ ತುಂಬ ಮೋಜಿನದಾಗಿದೆ. ಅನಂತರ ಮನೆಗೆ ಹೋದ ಶರಣ, ಮಣ್ಣುಮಿಶ್ರಿತ ರೊಟ್ಟಿ ಬಾಯಲ್ಲಿ ಕರ್‌ಕರ್ ಅನ್ನುವಾಗ, "ಅಂವ್ಯಾಂವ ಕುಡ್ದ ಕತ್ತೀಮಗಾ ಈಕಿಗಿ ಹಾದ ಹಿಟ್ಟ ಕೆಡವಿದ್ನೋ ಮಣ್ಣ ಕೂಡಿ ರೊಟ್ಟಿ ಕರಕರ ಮಾಡ್ಲಾಕ ಹತ್ಯಾವು" ಎಂದು ತನನ್ನೇ ತಾನು ಬೈಯ್ದುಕೊಳ್ಳುತ್ತಿದ್ದುದು ಅಷ್ಟೇ ಸ್ವಾರಸ್ಯಕರ ಪ್ರಸಂಗ. ಅದೇ ಕಾದಂಬರಿಯ ಇನ್ನೊಂದೆಡೆ, ಹೇಣತಿ-ಕೈಯಾಗಿನ ಗೊಂಬಿಯಂತಿದ್ದ ಕೆಂಚಪ್ಪ ಹೆಂಡತಿ ಸಂಗಯ್ಯನಿಂದ ಬೂದಿ ಮಂತ್ರಿಸಿಕೊಳ್ಳಲು ಗಂಡನಿಗೆ ಬೂದಿ ತರುವಂತೆ ಹೇಳಿದ್ದು, ತರುವುದು ಒಂದಿಷ್ಟು ತಡವಾದಾಗ, "ಐ ನಿನ್ನ, ಇನ್ನ ಒಳಗs ಅದಿಯೇನ? ಒಲಿ ಮುಂದ ಕೂತ ತಂಬಾಕ ಬಿಗ್ಯಾಕ ಹತ್ತಿದೇನ? ಲಗೂ ಬೂದಿ ತಗೊಂಡ ಬಾ, ಆಗs ಹೇಳೇನಿ...." ಎಂದು ಜಕ್ಕವ್ವ ಜಬರಿಸಿದಾಗ ಗಡಬಡಿಸಿ ಕೆಂಚಪ್ಪ ಬೂದಿ ಬದಲಾಗಿ ಕೆಂಡ ಹಿಡಿದು ಕೈಸುಟ್ಟುಕೊಂಡ ಪ್ರಸಂಗದಲ್ಲಿಯೂ ಹಾಸ್ಯವಿದೆ.

ಅದೇ 'ಜೋಗಿಮರಡಿ'ಯಲ್ಲಿ ಶರಣ ತನ್ನ ಹೆಂಡತಿಯೊಂದಿಗೆ ಜಗಳಕ್ಕೆ ಇಳಿದಿದ್ದು, ಸಿಟ್ಟಿನಿಂದ ತನ್ನ ಹೆಂಡತಿಗೆ ಹೇಳುತ್ತಿದ್ದ, "ಬೇಕಾರ ನೀ ಮನ್ಯಾಗ ಇರ್‍, ನಾ ಮನೀ ಬಿಟ್ಟ ಹೋಗ್ತನು, ಇಲ್ಲಾದ್ರ ನಾನs ಹೋಗ್ತನು.... ನೀನs ಮನ್ಯಾಗ ಇರ್‍.... ಎಡ್ಡರೊಳಗ ಒಂದ ಮಾಡs ಹಂ...." ಮನೆ ಪಕ್ಕದಲ್ಲಿಯೇ ಹಾಯ್ದು ಹೋಗುತ್ತಿದ್ದ ಕಾಡಪ್ಪಕಾಕಾನಿಗೆ ಶರಣನ ಈ ಮಾತುಗಳು ಕೇಳಿ ನಗೆ ತಡೆಯದೆ ಒಳಗೆ ಬಂದವ

ವಿಚಾರಿಸಿದಾಗ. ಮತ್ತೆ ಅದೇ ರಾಗವೆಳೆಯುತ್ತ ಶರಣ. "ಬೇಕಾರ ನೀ ಮನ್ಯಾಗ ಇರ್ರ. ನಾಮನೀ ಬಿಟ್ಟ ಹೋಗ್ತನು. ಇಲ್ಲಾದ್ರ ನಾನs ಹೋಗ್ತನು.... ನೀನs ಮನ್ಯಾಗ ಇರ್ರ.... ಹ." ಪಲ್ಲವಿ ಹಾಡಿದ್ದ. ಸಿಟ್ಟಿನ ಭರದಲ್ಲಿ ಒಂದೇ ಅರ್ಥದ ಎರಡು ಮಾತುಗಳನ್ನು ಹೇಳುತ್ತಿದ್ದೇನೆಂಬ ಅರಿವೂ ಕೂಡ ಶರಣನಿಗಿರಲಿಲ್ಲ. ಅದಕ್ಕೆಯೇ ಕಾಕಾ. "ಹಾಂಗs ಮಾಡ ಶರಣಾ. ಈಗ ನೀ ಅರೇ ಮನಿಬಿಟ್ಟು ಹೋಗು. ಕಾಶವ್ವ ಮನ್ಯಾಗ ಇರ್ಲಿ. ಇಲ್ಲಾಂದ್ರ ಆಕೀನs ಇಲ್ಲಿರ್ಲಿ. ನೀನs ಹೋಗಿಬಿಡು...." ಎಂದು ನಗುತ್ತ ಹೇಳಿದಾಗ. "ಅಧ್ಯಾಂಗ್ರಿ ಕಾಕಾ! ಎಡ್ಡೂ ಅರ್ತ ನಾನs ಮನಿ ಬಿಟ್ಟ ಹೋಗೂದಂತ್ಲಾ! ಇದ್ರಾಗ ಬೇಕಾದ ಒಂದs ಆಗ್ಲಿ!" ಎಂದು ತನ್ನತಪ್ಪನ್ನು ತಿದ್ದಿಕೊಂಡಿದ್ದ. ಕೊರವರ ಮಾಯವ್ವನ ಪ್ರಸಂಗದಲ್ಲಿಯೂ ಹಾಸ್ಯತುಂಬಿಕೊಂಡಿದೆ. ಕುಡಿದು ಪೂಜಾರಿ ಗುರ್ಪಾದಪ್ಪ. "ಮಲ್ಲಯ್ಯ.... ಮಲ್ಲಯ್ಯ.... ಸಿದಗಿರಿ.... ಮಲ್ಲಯ್ಯ...." ಎಂದು ಜೋಲಿ ಹೊಡೆಯುತ್ತ ಕುಣಿದು ನಟನೆ ಮಾಡುತ್ತಿರುವ ಸಂದರ್ಭದಲ್ಲಿಯೂ ನಗೆ ತಡೆಯದು. ಅಲ್ಲಿಯೂ ತಿಳಿಹಾಸ್ಯ ತುಂಬಿಕೊಂಡು ನಿಂತಿದೆ.

'ಕಾತ್ರಾಳ ರತ್ನಿಯ ಚಾದಂಗಡಿ'ಯಲ್ಲಿ ಗಂಗಾರಾಮನ ಬೀಡಿಯಂಗಡಿ ಡಬ್ಬಿಯನ್ನು ಕೂಡಿದ ಜನರೆಲ್ಲ "ಹರಹರ ಮಾದೇವ" ಎಂದು ಎತ್ತಿ ದೂರಕ್ಕೆ ಒಯ್ಯುವ ಪ್ರಸಂಗ ತುಂಬ ವಿನೋದಮಯವಾಗಿದೆ. ಧರೆಪ್ಪಗೌಡನು ಪೋಲಿಸ ಅಧಿಕಾರಿಯೆದುರು 'ಇಲ್ರಿಯಪಾ. ಇನ್ನೊಮ್ಮೆ ಹೀಂಗ ಮಾಡಾಕ ಹಚ್ಚೊದಿಲ್ರಿಯಪಾ' ಎಂದು ದೀನನಾಗಿ ಮಗನ ಪರವಾಗಿ ಬೇಡಿಕೊಳ್ಳುವಲ್ಲಿ. ಊರಲ್ಲಿ ಹುಲಿಯಂತಿದ್ದ ಗೌಡ ಖಾಕಿಯೆದುರು ಇಲಿಯಾದ ರೀತಿ ತುಂಬ ನಗೆ ಬರಿಸುತ್ತದೆ.

ಗುರುಶಿದ್ದಪ್ಪ ಶಿವಶಂಕರನನ್ನು ಮಾತನಾಡಿಸುವ ಸಲುವಾಗಿ ಅವನ ಮನೆಗೆ ಬಂದಿದ್ದ: ನೆಪಕ್ಕೆ ಹಲ್ಲುಗಿಂಜಿ ನಾಟಕೀಯವಾಗಿ ಶಿವಶಂಕರನಿಗೆ ಒಂದೆರಡು ಸಾಂತ್ವನಪರ ಮಾತುಗಳನ್ನು ಹೇಳಿ ಹೊರಡುವುದರಲ್ಲಿಯೇ. ಹೊಲೆಯರ ಹಾಶಿ ಅಲ್ಲಿಯೇ ಇದ್ದಳು. ಅವಳನ್ನು ದಾಟಿ ಅವಸರದಲ್ಲಿ ಅವಳನ್ನೇ ನೋಡುತ್ತ-ನೋಡುತ್ತ ನಡೆದಾಗ. ಧೋತರ ಕಚ್ಚೆ ಬಿಚ್ಚಿ ಕಾಲಲ್ಲಿ ಅದರ ಪದರು ಸಿಕ್ಕು ಜೋಲಿಹೋಗಿ ಬೀಳುತ್ತಿದ್ದವ ಸಾವರಿಸಿಕೊಂಡಿದ್ದನ್ನು ಕಂಬಾರ ಬಾಳೇಶಿ. "ಸಾವಕಾಸ್ರಿ ಸಾವ್ಕಾರ್! ಬಿದ್ದೀರಿ ಜ್ವಾಕಿ!! ನಿಮ ಹೊಟ್ಟಿಯೊಂದ ಟನ್ ಭಾರ. ನೀವು ನೆಲಕ್ಕೆ ಬಿದ್ದು ಇಲ್ಲಿ ತಗ್ಗಾದ್ರ. ಜನಾ ಇಲ್ಲಿ ಬಿದ್ದ ಕೈಕಾಲು ಮುರ್ಕೊಬಹುದು. ನೀಂವ ಪಂಚಾಯ್ತಿಯವ್ರು ರಸ್ತಾ ದುರಸ್ತಿ ಮಾಡೂದುಲ್ಲ. ಸಾವ್ಕಾಸ್....!" ಎಂದು ವ್ಯಂಗ್ಯವಾಗಿ ಹೇಳುತ್ತಿದ್ದುದನ್ನು ಕಂಡರೆ. ಆ ವ್ಯಂಗ್ಯದಲ್ಲಿಯೂ ವಿನೋದ ಅವಿತು ಕುಳಿತಿದೆ. (ಮೌನಕ್ರಾಂತಿ. ಪುಟ ೮೯)

ಹೀಗೆ ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಹಾಸ್ಯದ ಹೊನಲನ್ನೇ ಹರಿಸಿದ್ದಾರೆ. 'ಸಾಹಿತಿಗಳ ಸಂಗ ಮೋಜಿನ ಪ್ರಸಂಗ' ವೆಂದು ತಮ್ಮ ನಗೆಬರಹ ಸಂಕಲನದಲ್ಲಿ ಈಶ್ವರ ಸಣಕಲ್ಲ. ರಾವಬಹಾದ್ದೂರ. ಸಿಂಪಿಲಿಂಗಣ್ಣ. ಬೀಚಿ. ಹಾಮಾನಾ. ಹಾಗೂ ಇತರ ಅನೇಕ ಪರಿಚಿತ ಸಾಹಿತಿಗಳ ಒಡನಾಟದಲ್ಲಿ ಅವರು ಅನುಭವಿಸಿದ ಮೋಜಿನ ಪ್ರಸಂಗಗಳನ್ನೆಲ್ಲ ಅದರಲ್ಲಿ ಸೇರಿಸಿದ್ದಾರೆ. ಇದೇ ನಿಟ್ಟಿನಲ್ಲಿ ಮೂಡಿಬಂದ ಅವರ

'ಹೆಂಡತಿ ಮತ್ತು ಟ್ರಾನ್ಸಿಸ್ಟರ್'. 'ಗಂಡ-ಹೆಂಡತಿ ಮತ್ತು ಲಗ್ಗೇಜ'ಗಳೂ ಕೂಡ ಹಾಸ್ಯ ಸಂಕಲನಗಳಾಗಿದ್ದು. ಅವುಗಳಲ್ಲಿಯೂ ಕೂಡ ಬೆಳಗಲಿಯವರು ಹಾಸ್ಯದ ಹೊನಲನ್ನು ಹರಿಸಿದ್ದಾರೆ. ಹಾಸ್ಯವೆಂಬುದು ಅನುಭವೇದ್ಯವೇ ಹೊರತು. ಹೇಳಿ-ಕೇಳಿ ತಿಳಿದುಕೊಳ್ಳುವುದಲ್ಲ. ಹಾಗಾಗಿ ಬೆಳಗಲಿಯವರ ವಿನೋದಮಯ ಗುಣವನ್ನು ಅವರ ಕೃತಿಗಳನ್ನು ಓದಿಯೇ ಆಸ್ವಾದಿಸಬೇಕು. ಸದಾ ಹಸನ್ಮುಖರಾಗಿಯೇ ಇರುತ್ತಿದ್ದ ಬೆಳಗಲಿಯವರದು ನಕ್ಕು-ನಗಿಸುವ ಜಾಯಮಾನ. 'ಜಗವೆಲ್ಲ ನಗುತಿರಲಿ. ಜಗದಳಲು....' ಎಂಬ ಧೋರಣೆಯವರದು. ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಈ ರೀತಿ ಸಾಂದರ್ಭಿಕವಾಗಿ ಅನೇಕ ಮೋಜನ್ನು-ವಿನೋದಗಳನ್ನು-ಹಾಸ್ಯವನ್ನು ತುಂಬಿ. ಓದುಗರನ್ನು ತಮ್ಮತ್ತ ಆಕರ್ಷಿಸುತ್ತ ಬರೆದದ್ದು ಅವರ ಬರವಣಿಗೆಯ ವಿಶೇಷ ಶೈಲಿ.

**ಅಲಂಕಾರ (ಉಪಮೆ-ರೂಪಕಗಳು) :**

ಅಲಂಕಾರವೆಂಬುದು ಭಾಷೆಗೆ ಸೌಂದರ್ಯವನ್ನು ತಂದುಕೊಡುವ ಸಾಧನ. ಭಾಷೆಯನ್ನು ಎಷ್ಟೇ ನೇರ-ಸರಳ-ಸಹಜವಾಗಿ ಬಳಸಿಕೊಂಡರೂ. ಲೇಖಕ ಅದರೊಂದಿಗೆ ಬೆರೆಸುವ ಅಲಂಕಾರಯುಕ್ತ ಭಾಷೆಯಿಂದ ಮಾತ್ರ ಗದ್ಯಕ್ಕೊಂದು ಹೃದ್ಯತೆ. ಬೆಳಗಲಿಯವರ ಭಾಷೆ ಕಲಾತ್ಮಕವಾಗಿ ಅರಳಿದ್ದು. ಅವರು ಬಹಳಷ್ಟು ಕಡೆಗೆ ಉಪಮೆ-ರೂಪಕಗಳಲ್ಲಿಯೇ ಮಾತನಾಡುತ್ತಾರೆ. ಜನಮನದಲ್ಲಿ ನೆಲೆಸಿದ ವಸ್ತುಗಳನ್ನು ಎತ್ತಿಕೊಂಡು ಹೊಸಹೋಲಿಕೆ ಕೊಡುವುದು ಅವರ ಪ್ರತಿಭೆಯ ಹೆಗ್ಗುರುತಾಗಿದೆ. ಅದೇ ಅವರ ಬರವಣಿಗೆಯ ವೈಶಿಷ್ಟ್ಯಪೂರ್ಣ ಶೈಲಿ. ತಮ್ಮ ಕಾದಂಬರಿಗಳಲ್ಲೆಲ್ಲ ಕೃತಕ ಉಪಮೆ-ರೂಪಕಗಳನ್ನು ಬಳಸದೆ. ಜನಸಾಮಾನ್ಯರ ವ್ಯಾವಹಾರಿಕ ಭಾಷೆಯಿಂದಲೇ ಎತ್ತಿಕೊಂಡು ಬಳಸುತ್ತಾರೆ. ಹೀಗಾಗಿ ಅವರ ಕಾದಂಬರಿಗಳಿಗೆ ನೈಸರ್ಗಿಕ ಸೌಂದರ್ಯ ಪ್ರಾಪ್ತವಾಗಿದೆ. ಇಂಥ ನೂರಾರು ಉಪಮೆ-ರೂಪಕಗಳನ್ನು ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಬಳಸಿದ್ದಾರೆ. ಕೆಲವನ್ನಿಲ್ಲಿ ಉದಾಹರಿಸಬಹುದು :

**ಉಪಮೆ :**

ಎರಡು ವಸ್ತುಗಳ ಪರಸ್ಪರ ಸಾದೃಶ್ಯ ಸಂಪತ್ತನ್ನು ಹೇಳುವುದೇ ಉಪಮೆ ಎನಿಸುತ್ತದೆ. 'ಸಾದೃಶ್ಯ' ವೆಂದರೆ ಅರ್ಥಪೂರ್ಣವಾದ ಹೋಲಿಕೆಯೆಂದರ್ಥ. ಹೋಲಿಕೆಯಿಂದ ವಿರೋಧಾಭಾಸವುಂಟಾಗದೆ, ಸರಿಯಾದ ಕ್ರಮ-ಪರಿಕ್ರಮ ಅದರಲ್ಲಿರಬೇಕು. ಹೋಲಿಸಿಕೊಂಡ ವಸ್ತುವಿನ ಘನತೆ ಹೆಚ್ಚಾಗುವಂತಿರಬೇಕು.

"ನಿನ ತಾಯಿ ಹಾಂಗ ನೀನೂ ಸುಂದರಿ" (ಹಡೆದವರು. ಪುಟ ೧೪)

"ಜಾಲಿ ಗಿಡಕ್ಕ ಹಾಕಿದ ಕೊಡಲಿಯೇಟು ತಪ್ಪಿ ತನ್ನೆದೆಗೆ ಬಿದ್ದಂತೆ...." (ಹಡೆದವರು. ಪುಟ ೪೪)

"ಅದೆಲ್ಲ ಬೋರ್ಗಲ್ಲ ಮೇಲೆ ಮಳೆ ಸುರಿದಂತೆ" (ಹಡೆದವರು. ಪುಟ ೭೯)

"ಆಫೀಸಿಗೆ ಹೋಗಿ ನನ್ನನ್ನು ಕಾಣದೆ. ಜಾತ್ರೆಯಲ್ಲಿ ತಪ್ಪಿಸಿಕೊಂಡ ಹುಡುಗರಂತೆ ಅಂಜಿಸಿದ್ದು" (ವಾತ್ಸಲ್ಯಮಯಿ. ಪುಟ ೭)

" ಸೂಳೆ ಸೀತೆಯ ಪಾತ್ರ ವಹಿಸಿದಂತೆ ಕಾಣುತ್ತದೆ " (ಮೌನಕ್ರಾಂತಿ ಪುಟ ೨೦)

" ಅಂತಃಕರಣದ ಜೇನುಗೂಡಿಗೆ ಕಲ್ಲು ಬಿದ್ದಂತಾಗಿತ್ತು" (ಮೌನಕ್ರಾಂತಿ ಪುಟ ೫೬)

" ವೈರೀನ ಉಡ್ಯಾಗ ಹಾಕೋಬಾರ್ದು. ಹಾಂವಿಗೆ ಹಾಲ ಕುಡಿಸಿಧಾಂಗ ಆಗತೈತಿ " (ಮೌನಕ್ರಾಂತಿ. ಪುಟ ೯೯)

" ಬೆಲ್ಲಾ ಮಾಡೂದು ಅಂದ್ರ ಹಗರಲ್ಲ. ಸುಖದ ಜೀಂವಕ ಎಮ್ಮೀ ಹೈನ ಇದ್ದಾಂಗ " (ಜೋಗಿಮರಡಿ. ಪುಟ ೨೭)

" ಶಿವನ ಕೊರಳಿಗೆ ಸುತ್ತಿಕೊಂಡ ನಾಗರಹಾವಿನಂತೆ. ಅದು ಸದಾಕಾಲ ಡಾಕ್ಟರರ ಕುತ್ತಿಗೆಗೆ ಸಿಕ್ಕಿಕೊಂಡೇ ಇರುತ್ತಿತ್ತು" (ಜೋಗಿಮರಡಿ. ಪುಟ ೮೮)

" ಬೆಕ್ಕು ಕಣ್ಣು ಮುಚ್ಚಿ ಹಾಲುಕುಡಿದಂತೆ. ತಮ್ಮ ಅನೈತಿಕ ಸಂಬಂಧ ಅರಿಯದು...." (ಜೋಗಿಮರಡಿ. ಪುಟ ೧೩೦)

" ಗೃಹಣ ಬಿಟ್ಟ ಚಂದ್ರನಂತಿದ್ದಳು ನಿರ್ಮಲಾ " (ಜೋಗಿಮರಡಿ. ಪುಟ ೧೭೯)

" ಮಾಯಪ್ಪ ಊದೂ ಸನಾದೀನ ಮಾಯವ್ವ ಪೂದ್ಲಾಕ ಹತ್ತಿಧಾಂಗ ಕಾಣತೈತಿ " (ಜೋಗಿಮರಡಿ. ಪುಟ ೨೦೯)

" ಒಂದ ಹಸಿರ ನೋಟ ತೋರಿಸಿದ್ರ ಹಸದ ನಾಯಿಹಾಂಗ ಬರೂ ಮಾರುದ್ರ ಅದಾನ" (ಜೋಗಿಮರಡಿ. ಪುಟ ೨೧೬)

" ಪುಟಮುಚ್ಚಿಕೊಂಡು ಸತ್ತ ನಾಯಿಯಂತೆ ನೆಲಕ್ಕೆ ಬಿದ್ದ ಆ ಪುಸ್ತಕ " (ದೇವದಾಸಿ. ಪುಟ ೨೯)

" ಇವರ್ಗೇನ ಮನ್ಯಾಗ ಕೆಲಸಿಲ್ಲ ಕಾಣತೈತಿ ! ಯಲ್ಲಮ್ಮಗ ಭಂಡಾರ ಹಾಕಿ ಬಿಟ್ರಾವ್ರಹಂಗ ಇವ್ರು ನಮ್ಮ ಕೇರ್ಯಾನ ಮಂದೀನ ಸುರಾಸಾಕ ಬಂದಾರಂತ !" (ದೇವದಾಸಿ. ಪುಟ ೨೦೨)

" ವಿಮಲ. ಈಗ ನಿನ್ನ ಉಗಳ ದಾಟ್ಲಾಕ ಆಗವಲ್ತು. ನಿನ್ನ ಮಾತಂದ್ರ ಲಕ್ಷ್ಮಣರೇಖಾ ಇದ್ದಾಂಗ...." (ದೇವದಾಸಿ. ಪುಟ ೨೨೮)

" ಥೂ ಹೊಲಸ ಜಲ್ಮಾ ತಂದ....! ಬಚ್ಚಲ ಮೋರ್ಯಾನ ಕೊಳಚಿ ಇದ್ದಾಂಗs ತಂಗೀ " (ದೇವದಾಸಿ. ಪುಟ ೨೯೯)

" ಅವಸರದಲ್ಲಿ ಎಡವಿ. ಕಾಲ ಬೆರಳಿಗೆ ನೋವು ಮಾಡಿಕೊಂಡ ಅನುಭವದಂತೆ ಮನಸ್ಸಿಲ್ಲದ ಮನಸ್ಸಿನಿಂದ ಅವರನ್ನು ಸ್ವಾಗತಿಸಿದ್ದ" (ದೇವದಾಸಿ. ಪುಟ ೩೧೯)

" .... ವೀರೇಶಿ. ಕರಬಸಪ್ಪನನ್ನು ಬಾಲತಿರುವಿ ದನಗಳನ್ನು ಎಬ್ಬಿಸಿದಂತೆ ಕೇಳಿದ್ದ" (ದೇವದಾಸಿ. ಪುಟ ೩೧೯)

" .... ಹತ್ಯಾಕ ಬಂದಗಿಂದಿ....? ಗಿಣಿಗೋಣ ಮುರಧಾಂಗ ನಿನ್ನ ಚಂಡತಿರೂತನ" (ದೇವದಾಸಿ. ಪುಟ ೩೩೯)

" ಜೇಂಪಾ ಇಲ್ಲಾಂಗ.... ಸತ್ತ ಹೆಣಧಾಂಗ ಯಾಕ ಸುಮ್ಮದೀರೋ...." (ದೇವದಾಸಿ. ಪುಟ ೩೩೯)

" ಅವರನ್ನೆಲ್ಲ ಕಂಡು ತಾತೋಬಾಸಿಗೆ ತುತ್ತಿನಲ್ಲಿ ನೊಣ ಸಿಕ್ಕಂತಾಗಿತ್ತು" (ದೇವದಾಸಿ. ಪುಟ ೩೫೧)

" ಭಾಳ ಚಲೂ ಆತ ತಮಾ. ರತ್ನದಂತಾ ಹುಡುಗಿ. ಬಂಗಾರದಂತಾ ಹುಡುಗ" (ದೇವದಾಸಿ. ಪುಟ ೪೦೦)

" ಟವಲನ್ನ ಬಿಸಿನೀರಿನಲ್ಲಿ ಅದ್ದಿ ಅದನ್ನು ಹಿಂಡಿ ಸ್ಪಂಜದ ಸ್ನಾನ ಮಾಡಿಸಿದಂತೆ" ಆಕೆಯ ಮೈಯನ್ನು ಮೆದುವಾಗಿ ಒರೆಸಿ ತಿಕ್ಕಿ ತಿಕ್ಕಿ ಬೇರೆ ಸೀರೆ ತೊಡಿಸಿದ್ದರು" (ದೇವದಾಸಿ, ಪುಟ ೪೦೩)

" ಮಧುಚಂದ್ರದ ಮಂಚಕ್ಕೆ ಇಳಿಬಿಟ್ಟ ಹೂವುಗಳ ಮಾಲೆಯಂತೆ ಇಳಿಬಿಟ್ಟ ವಿವಿಧ ಕಂಪನಿಗಳ ಗುಟಕಾ ಸರಗಳು" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೩೯)

" ಗಂಡ ಸತ್ತ ಬಳಿಕ ಕತ್ತಲು ಕಣ್ಣಿಗೆ ಕಟ್ಟಿದಂತೆ ಕೆಲವು ದಿನ ರತ್ನಾಳಿಗೆ ದಿಕ್ಕೇ ತೋಚಲಿಲ್ಲ" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೩೯)

" ನಾಯಿಗಳಿಗೆ ಮಾಂಸದ ತುಣುಕ ಚೆಲ್ಲಿದಂತೆ ಅವನಿಗೆ ಹಣ ಚೆಲ್ಲಿ" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೯೮)

" ಬಂಗಾರವಿಲ್ಲದಿದ್ದರೂ ಬಂಗಾರದಂಥ ಮನಸ್ಸಿರಬೇಕು" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೧೪)

" ಆ ಕಪ್ಪು ಬಟ್ಟೆಗಳಿಂದ ಕುಲಾವಿ ಕಟ್ಟಿದಂತೆ ಮುಖ ಬಿಗಿದುಕೊಂಡರು" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೬೫)

" ಚಹದಂಗಡಿಯ ಮುಂದೆ ದೇವರಿಗೆ ಬಿಟ್ಟ ಗೂಳಿಯಂತೆ ಅತ್ತಿತ್ತ ಅಡ್ಡಾಡಿದ್ದ" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೮೯)

" ಇರಿಸು ಕೋಣ ಮುರಿಸು ಹೋರಿಯಂತೆ ಬಿಗಿದುಕೊಂಡು ಕೂಡುತ್ತೇವೆ" (ಸೀಮೆಗಳು. ಪುಟ ೧೭)

" ಆಡು ನುಂಗಿದ ಹೆಬ್ಬಾವಿನಂತೆ ಸಂಚರಿಸುತ್ತಿರುವ ಲೋಕಲ್‌ಗಳು" (ಸೀಮೆಗಳು. ಪುಟ ೨೫)

" ಆಕೆಯ ಆಡಿನಂಥ ಗಂಡ ಟಗರಾಗುವುದಿಲ್ಲ" (ಸೀಮೆಗಳು. ಪುಟ ೨೬)

" ಸುಂದರಿಯಾದವಳು ಕಣ್ಣಿಗೆ ಬಿದ್ದರೆ. ಹರಿಶ್ಚಂದ್ರನಂತೆ. ರಾಮನಂತೆ. ಅಣ್ಣ ಬಸವಣ್ಣನಂತೆ ಸೋಗು ಹಾಕಿದ ಸಭ್ಯರು. ಮನಸ್ಸಿನಲ್ಲಿಯೇ ಕಾಮಿಸಿದವರೆಷ್ಟು ಜನರಿಲ್ಲ ?" (ಸೀಮೆಗಳು. ಪುಟ ೬೭)

" ಹುಲಿಯ ಬಾಯಿಂದ ಪಾರಾಗಿ ಸಿಂಹದ ಕೈಗೆ ಸಿಕ್ಕಂತೆ" (ಸೀಮೆಗಳು. ಪುಟ ೮೨)

" ಯಾಕೆ ಹೀಗೆ ದಾರಿ ತಪ್ಪಿದವರಂತೆ ಅತ್ತಿತ್ತ ವಸತಿ ಮಾಡುತ್ತ ತಿರುಗುವಿರಿ" (ಸೀಮೆಗಳು. ಪುಟ ೧೧೮)

"ಹುಚ್ಚು ಮನ ಗಿಡದಿಂದ ಗಿಡಕ್ಕೆ ಹಾರಾಡುವ ಮಂಗನಂತೆ" (ಸೀಮೆಗಳು. ಪುಟ ೧೨೫)

"ಬೇರೆ ಬಟ್ಟೆಯಿಲ್ಲದೆ ಜಾಳಿಗೆಯಂಥ ಸೀರೆಗೆ ಆಕೆ ನೂರೆಂಟು ಗಂಟು ಹಾಕಿ. ಶರೀರದ ಬಹುಭಾಗ ದರ್ಶಿಸುತ್ತ ಹೊಟ್ಟೆಯ ಹೋರಾಟಕ್ಕಾಗಿ ಬದುಕುತ್ತಿದ್ದಾಳೆ" (ಸೀಮೆಗಳು. ಪುಟ ೧೩೫)

"ಹೇಡಿ ಬಾಲಕ ಮನೆಯೊಳಗೆ ಹೊಕ್ಕು ಬಾಗಿಲು ಮುಚ್ಚಿ. ಕಿಟಕಿಯಲ್ಲಿ ನಿಂತು ಅಣಕಿಸಿದಂತೆ ಕೇಳುತ್ತೇನೆ" (ಸೀಮೆಗಳು. ಪುಟ ೧೮೭)

"ಕಟ್ಟೆಯ ಕೆಳಗಿನ ನಲ್ಲಿ ಕಣ್ಣೀರು ಸುರಿಸಿದಂತೆ ಹನಿಯುತ್ತಿತ್ತು" (ಗಂಡಿನ ನೆರಳು. ಪುಟ ೧)

"ನೆಲದ ಮೇಲೆ ನಡೆಯುತ್ತಿರುವ ಭಂಗಿ. ಮತ್ತೂಚೆಂದ !! ಸರೋವರದಲ್ಲಿ ಹಾಯಾಗಿ ತೇಲುತ್ತಿರುವ ಹಂಸದಂತೆ ಗಾಳಿಯಲ್ಲಿ ತೇಲುತ್ತ ನಡೆಯುತ್ತಿದ್ದಳು" (ಗಂಡಿನ ನೆರಳು. ಪುಟ ೬)

"ಬಿಳೀ ಸಂಗಮರಿ ಶಿಲೆಯಲ್ಲಿ ಕೆತ್ತಿದ ಸುಂದರ ಮೂರ್ತಿಯಂತೆ ಕಂಗೊಳಿಸಿದಳು" (ಬಿಸಿಲು-ಗಂಡಿನ ನೆರಳು. ಪುಟ ೬)

"ಪೋಲಿಸ ಕೈಗೆ ಸಿಕ್ಕಿ ಬಿದ್ದ ಕಳ್ಳನಂತೆ" (ಗಂಡಿನ ನೆರಳು. ಪುಟ ೨೬)

"ಸಾಹೇಬರ ಹದ್ದಿನ ಕಣ್ಣಿಗೆ ಬೇಟೆ ಬಿದ್ದಂತೆ ಕಾಣುತ್ತದೆ" (ಗಂಡಿನ ನೆರಳು. ಪುಟ ೨೬)

"ಕಾಲ ಕೆಳಗೆ ಸಿಕ್ಕ ಮಲ್ಲಿಗೆಯಂತೆ ಮುದ್ದೆಯಾಗಿ ಹೋಗಿದ್ದಳು ಆಕೆ (ಗಂಡಿನ ನೆರಳು. ಪುಟ ೫೪)

"ಬಸವನ ಹಿಂದಿನ ಬಾಲದಂತೆ ಹಿಂಬಾಲಿಸಿದ" (ಗಂಡಿನ ನೆರಳು. ಪುಟ ೭೧)

"ಕುಳಿತಂತೆಯೇ ನಾಯಿಗೆ ಕನಸು ಬಿದ್ದವರಂತೆ ಎದ್ದು ಬಿಡುವುದು" (ಗಂಡಿನ ನೆರಳು. ಪುಟ ೮೧)

"ಅಂತೂ ಕಂಕುಳದಲ್ಲಿ ಕೂಸ ಇಟ್ಟುಕೊಂಡು ಊರೆಲ್ಲ ಹುಡುಕಾಡಿದಂತಾಯ್ತಲ್ಲ" (ಗಂಡಿನ ನೆರಳು. ಪುಟ ೧೩೩)

"ಹಾವಾಡಿಗನ ಕೈ ಚಲನೆಯ ನಿರ್ದೇಶನದಂತೆ ಹೆಡೆಯೆತ್ತಿ ಮಂತ್ರ ಮುಗ್ಧನಾಗಿ ನಿಂತ ಹಾವಿನಂತೆ ನಿಂತುಬಿಟ್ಟ" (ಗಂಡಿನ ನೆರಳು. ಪುಟ ೧೫೬)

"ಕೈಚೀಲದಿಂದ ಬುತ್ತಿ ತೆಗೆದು ಚೀಲ ಸುರುವಿದ ಪೇರಲ. ಬಾರೇಹಣ್ಣು. ಉರುಳಿ. ನೆಲದ ತುಂಬೆಲ್ಲ ಓಡಿ ಹೋದವು. ಹುಚ್ಚ ಬೆದರಿಸಿದ ಹುಡುಗರಂತೆ" (ಗಂಡಿನ ನೆರಳು. ಪುಟ ೧೭೭)

"ಮಲೆನಾಡಿನ ಹಸಿರು ಸೀರೆಯ ಸೆರಗಿಗೂ. ಬೆಳುವಲದ ಬಿಳೀ ಧೋತರದಂಚಿಗೂ ಹೊಸ ಹೆಣ್ಣು-ಗಂಡಿನ ಜೋಡಿ ಕೂಡಿಸಿ ಕಟ್ಟಿದ ಗಂಟಿನಂತೆ ಎರಡೂ ಪ್ರದೇಶಗಳ ಸೆರಗಿನಲ್ಲಿ ನಿಂತ ಹಳ್ಳಿ ಕಂಪಳ್ಳಿ" (ಪ್ರೀತಿಯ ಆ ಮುಖ . ಪುಟ ೧೪೩)

"ನಮ್ಮ ಹೃದಯ ಗಂಡಭೇರುಂಡ ಪಕ್ಷಿಗಳಂತೆ ಬೆಸೆದುಕೊಂಡಿವೆ" (ಪ್ರೀತಿಯ ಆ ಮುಖ. ಪುಟ ೧೯೫)

"ತನಗೆ ನೆಟ್ಟ ಬಾಣ ಕಿತ್ತಿಕೊಂಡು. ತಿರುಗಿಸುವಂತೆ ಕೂಗಿದ್ದ ಚಂದ್ರಣ್ಣ" (ಪ್ರೀತಿಯ ಆ ಮುಖ. ಪುಟ ೨೦೦)

"ಒಂದು ಕಲ್ಲು ಎರಡು ಹಕ್ಕಿ ಅಂದಂತೆ ದಾಳಿ ಮಾಡಿದೆವು" (ಚಂಬಲ್ ಕಣಿವೆಯಲ್ಲಿ. ಪುಟ ೧೬)

" ನಾವು ಬೆಕ್ಕನ್ನು ಕೊಂದವರಂತೆ ಕುಳಿತಿದ್ದೆವು " (ಚಂಬಲ್ ಕಣಿವೆಯಲ್ಲಿ. ಪುಟ ೧೦೭)

ಇಂಥ ಅನೇಕ ಉಪಮೆಗಳನ್ನು ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ.

**ರೂಪಕಗಳು :**

ಉಪಮಾನ. ಉಪಮೇಯ ವಸ್ತುಗಳನ್ನು ' ಒಂದರಂತೆ ಮತ್ತೊಂದು ಇದೆ ' ಎಂದು ಅವುಗಳ ಹೋಲಿಕೆ ಎದ್ದು ಕಾಣುವಂತೆ ವರ್ಣಿಸದೆ. ' ಒಂದು ಮತ್ತೊಂದೇ ' ಎಂದು ವರ್ಣಿಸಿದರೆ ಅದು ರೂಪಕಾಲಂಕಾರೆನಿಸುತ್ತದೆ. ಅಂದರೆ. ' ಹೋಲಿಕೆ 'ಯಲ್ಲಿ ಅಭೇದ ಕಾಣುವುದೇ ರೂಪಕವೆನಿಸುತ್ತದೆ. ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಜನಸಾಮಾನ್ಯರು ಬಳಸುವ ವ್ಯಾವಹಾರಿಕ ಭಾಷೆಯಿಂದಲೇ ಇಂಥ ಅನೇಕ ರೂಪಕಗಳನ್ನು ಎತ್ತಿಕೊಂಡು ಬಳಸಿದ್ದು ಅವರ ಬರವಣಿಗೆಯ ವೈಶಿಷ್ಟ್ಯ. ಕೆಲವು ಉದಾಹರಣೆಗಳನ್ನಿಲ್ಲಿ ನೋಡಬಹುದು :

" ಬೆಳೆಯ ಸಂರಕ್ಷಣೆಗಾಗಿ ನಿಲ್ಲಿಸಿದ ಬೆದರಿಗೆ ಕೂಡ ಬೆಲೆಯಿದ್ದು. ಈಗ ದಾಕ್ಷಾಯಣಿ ಅದಕ್ಕೂ ಕಡೆಯಾಗಿದ್ದಳು " (ವಾತ್ಸಲ್ಯಮಯಿ. ಪುಟ ೭೩)

" ಮನುಷ್ಯ ಧರ್ಮ ಕ್ಷಮಾಗುಣದಲ್ಲಿದೆ " (ವಾತ್ಸಲ್ಯಮಯಿ, ಪುಟ ೮೧)

" ಪಾಪಿಗಳ ದರ್ಶನವೂ ಪಾಪಕ್ಕೆ ಮೂಲ " (ವಾತ್ಸಲ್ಯಮಯಿ, ಪುಟ ೧೪೯)

" ಮಾನವತೆ ಮನುಷ್ಯರಲ್ಲೇ ಇರಬೇಕಲ್ಲ " (ವಾತ್ಸಲ್ಯಮಯಿ. ಪುಟ ೧೫೩)

" ಕುಲಕ್ಕೆ ಕೊಡಲಿಯಾಗಿ ಮನೆಗೆ ಅಪಕೀರ್ತಿ " (ಹಡೆದವರು. ಪುಟ ३೯)

" ನೀಲ್ಯಾ ಹುಲಿ ಆಗಿ ತ್ವಾಳಾ ತಿಂದ " (ಹಡೆದವರು, ಪುಟ ४೧)

" ಮೀಸಿ ಬಿಟ್ಟ ಪುಂಡ ಗಂಡಸ್ಕಿಂತ. ಮೀಸೆ ಇಲ್ದ ಹೆಂಡ್ತಿಯೇ ದೊಡ್ಡ ಪಟಾಯ್ತು" (ಹಡೆದವರು. ಪುಟ ೬೧)

" ಹಡೆದ ಹೃದಯಕ್ಕಿಂತ ಪಡೆದ ಹೃದಯವೇ ಹೆಚ್ಚಿಗೆ ಸುಖವನ್ನು ಅನುಭವಿಸಿತು " (ಹಡೆದವರು. ಪುಟ ೧೦೪)

" ದೀಪಾಳ ರೇಷ್ಮೆಯ ದೀರ್ಘ ಕೇಶರಾಶಿಯ ಹೆರಳು " (ಅಂತಸ್ತಿನ ಮನೆ, ಪುಟ ೨೫)

" ನಿಶೆದಾಗ ನೀವ ದನಾ ಆಗಿರ್ತಿರಿ " (ಅಂತಸ್ತಿನ ಮನೆ. ಪುಟ ೬೫)

" ದೀಪಾಳ ಆ ಹೂವಿನ ಅಂಗಾಂಗಳಲ್ಲಿ ಒಂದು ಬಗೆಯ ಚೈತನ್ಯ ತುಂಬಿಕೊಂಡಿದ್ದು. ಆಗದು ಬಿಸಿಯಾಗಿತ್ತು" (ಜೋಗಿಮರಡಿ. ಪುಟ ೨೧೫)

" ತಾಯಿಯ ಹೊಟ್ಟೆ ತಣ್ಣಗೆ " (ಜೋಗಿಮರಡ. ಪುಟ ೨೩೮)

" ಹೆಣ್ಣು ! ಹೌದು. ಆಕೆ ರಾಕ್ಷಸಿಯೂ ಹೌದು. ದೇವತೆಯೂ ಹೌದು " (ಜೋಗಿಮರಡಿ. ಪುಟ ೧೭೨)

" ತಮಾ. ಚಲೂ ಮಕ್ಳು ಹುಟ್ಟಬೇಕಾದ್ರ ಒಂದಿನ ಜನ್ಮದ ಪುಣ್ಯಾಬೇಕು " (ಜೋಗಿಮರಡಿ. ಪುಟ ೧೪೦)

" ಅಳಿಯನಲ್ಲ ಮಗಳ ಗಂಡ " (ದೇವದಾಸಿ. ಪುಟ ೨೨೦)

" ಥೂ ಹೊಲಸ ಜಲ್ಮಾ ತಂದ....! ಬಚ್ಚಲ ಮೋರ್‍ಯಾಗ ಕೊಳಚಿ " (ದೇವದಾಸಿ. ಪುಟ ೨೯)

" ಚಿಮಣಿ ಬುಡ್ಡಿ ಕಾರುವ ಇಂಗಾಲಕ್ಕೂ. ನಾಗಿಯ ಉಬ್ಬಸಕ್ಕೂ ತುಂಬಾ ಸ್ನೇಹ " (ದೇವದಾಸಿ. ಪುಟ ೪೦೪)

" ಯಣಾ ಊರಾಗ ಮೀಸಿ ಹೊತ್ತಾವ್ರೆಲ್ಲಾ ಕೈಯಾಗ ಬಳೀ ಹಾಕೂಂಡಾರ ಕಾಣತೈತಿ " (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೪೭)

" ಬಿರುಸಾದ ಗಾಳಿಯು ತೆರೆಯೊಂದು ಆಕೆಯ ಸೆರಗನ್ನು ನನ್ನ ಮುಖಕ್ಕೆ ಸುತ್ತಿಸಿದಾಗ. ಪಾರದರ್ಶಕ ಬಟ್ಟೆಯೊಳಗಿಂದ ಮೀತಾಳ ಮುಖ ಕೆಂಪಾದುದು ಕಾಣುತ್ತದೆ " (ಸೀಮೆಗಳು. ಪುಟ ೧)

" ಭಾಷೆ ಸರಿಯಾಗಿ ತಿಳಿಯದಿದ್ದರೂ ಭಾವನೆಗಳು ಅರ್ಥಮಾಡಿಕೊಳ್ಳುತ್ತವೆ " (ಸೀಮೆಗಳು. ಪುಟ ೧೨)

" ' ಅಕ್ಕ ' ಎನ್ನುವ ಸಂಬೋಧನೆಗೆ ಮಣ್ಣು ಬಿದ್ದು ಅದರಲ್ಲಿ ಹುತ್ತ ನಿರ್ಮಾಣವಾಗಿ. ಒಳಗಿನ ಹಾವು ತಲೆಯೆತ್ತಿ ನಿಲ್ಲುತ್ತದೆ " (ಸೀಮೆಗಳು. ಪುಟ ೨೦)

" ಮೀತಾ ಭದ್ರವಾದ ಕೋಟೆಯ ಮೇಲಿನ ಫಲ. ನಾನು ಕಂದಕದ ಕೆಳಗೆ ನಿಂತ ಅಂಗವಿಕಲ " (ಸೀಮೆಗಳು. ಪುಟ ೫೩)

" ಕಪಟ ಸಂನ್ಯಾಸಿ ತನ್ನ ಭಕ್ತರಿಗೆ ನೀತಿ ಉಪದೇಶಿಸುವಾಗಿನ ಅಳುಕೇ ನನ್ನಲ್ಲಿರುತ್ತದೆ " (ಸೀಮೆಗಳು. ಪುಟ ೯೫)

" ಅರುಣಾ ಈಗ ನೀನು ಥೇಟ್ ಮದ್ರಾಸಿ ಅಪ್ಸರಾ ಆಗಿರುವಿ " (ಸೀಮೆಗಳು. ಪುಟ ೧೧೬)

" ಹೆಣ್ಣು ಒಮ್ಮೆ ಶೀಲ ಕಳೆದುಕೊಂಡರೆ ಸಮಾಜದಲ್ಲಿ ಆಕೆಗೆ ' ನಾಯಿ ಮುಟ್ಟಿದ ಗಡಿಗೆ '. ' ಒಡೆದ ಮಡಿಕೆ ' ಎಂದೇನೋ ಹೇಳಿ. ತಪ್ಪಿದ ಆಕೆಯ ಹೆಜ್ಜೆಯನ್ನು ತಿದ್ದಲು ಪ್ರಯತ್ನಿಸದೆ ಚುಚ್ಚಿ ಚ್ಚುಚಿ ಮತ್ತೆ ಮತ್ತೆ ಆಕೆಯನ್ನು ನರಕಕ್ಕೆ ನೂಕಲು ಪ್ರಯತ್ನಿಸುತ್ತಾರೆ " (ಸೀಮೆಗಳು. ಪುಟ ೧೪೧)

" ಹೆಣ್ಣು ಹೆಣ್ಣಿನ ಭಾವನೆಗಳ ಮಧ್ಯ ಅಂತಸ್ತು. ಅಧಿಕಾರ. ಶಿಕ್ಷಣ. ಸಂಸ್ಕಾರ. ಯಾವುದೂ ಸೀಮೆಯಿಂದ ತಡೆ ಹಾಕುವುದಿಲ್ಲ " (ಸೀಮೆಗಳು. ಪುಟ ೧೬೧)

" ಯಾರಾದರೂ ಆದರ್ಶ ವಿಚಾರದ ಮಹಾನುಭಾವರು ಸಿಗಬಹುದು " (ಸೀಮೆಗಳು. ಪುಟ ೧೪೭)

" ಅಣ್ಣ ಹೇಳಿದ ಸುದ್ದಿ ಕೇಳಿ ಆಕೆಯ ಹೃದಯದಲ್ಲಿ ಮಧುರ ನಾದ ತರಂಗಗಳು ಅಲೆಅಲೆಯಾಗಿ ಏಳುತ್ತಿದ್ದವು " (ಗಂಡಿನ ನೆರಳು. ಪುಟ ೧೪)

" ತಂದೆ ಆ ದಾರದಿಂದಲೇ ತನ್ನ ಕುತ್ತಿಗೆ ಕೊಯ್ಯುವ ವೇದನೆ " (ಗಂಡಿನ ನೆರಳು. ಪುಟ ೨೪)

" ವಿಶಾಲವಾದ ವಾಡೆಯಲ್ಲಿ ಬೆಳೆದ ಬಾಳ್ ಚಿಕ್ಕವನಿದ್ದಾಗ ಹಾಲನ್ನು ಬೆಳ್ಳಿಯ ಗಿಂಡಿಯಲ್ಲಿ ಕುಡಿದಿದ್ದ " (ಗಂಡಿನ ನೆರಳು. ಪುಟ ೩೦)

" ಹತ್ತು ಜನ ಮುದಕರ ಜತೆ ಒಬ್ಬ ತರುಣನದು ನಡೆಯದು. ಹತ್ತು ಜನ ತರುಣರ ಸಂಗದಲ್ಲಿ ಒಬ್ಬ ಮುದುಕನ ಆಟ ನಡೆಯದು " (ಗಂಡಿನ ನೆರಳು. ಪುಟ ೩೩)

" ಥೂ ನಾಯೀ. ಅಲ್ಲಾ ಹಸಿದ ನಾಯಿ ! ಹಳಸಿದ ನುಚ್ಚಿಗೆ ಹಸಿದು ಕುಳಿತ ನೀ ಹಾಲಿಗೆ ಹೆಸರಿಸಬೇಡ " (ಗಂಡಿನ ನೆರಳು. ಪುಟ ೯೫)

" ಕತ್ತಲಲ್ಲಿ ನೋಡದೆ ಮುಳ್ಳುಕಂಟಿಯೊಳಗೆ ಬಿದ್ದರು " (ಗಂಡಿನ ನೆರಳು. ಪುಟ ೧೨೧)

" ಆಕೆಯ ನಡಿಗೆಯಲ್ಲಿ ಬೇಡವಾದವರನ್ನು ತುಳಿದು ನಡೆಯುವ ಗರ್ವ ಇತ್ತು" (ಗಂಡಿನ ನೆರಳು. ಪುಟ ೧೦೯)

" ನನ್ನಂಥವಳು ನಿನ್ನ ಕಣ್ಣು ಹೇಗೆ ತುಂಬಬೇಕು " (ಗಂಡಿನ ನೆರಳು, ಪುಟ ೧೩೦)

" ಹೆಣ್ಣುಮಕ್ಕಳ್ನ ಹದ್ದಿನಾಗ ಇಡೂದು ಹಿರೇರ ಕರ್ತವ್ಯ" (ಗಂಡಿನ ನೆರಳು, ಪುಟ ೧೫೫)

" ಬಾವಿಯಲ್ಲಿದ್ದ ಪಾರಿವಾಳ ಗೂಡಿಗೂ. ಬಾವಿಯ ದಂಡೆಯ ಮೇಲಿರುವ ಮಾವಿನ ಮರದಲ್ಲಿರುವ ಗಿಳಿಗಳಿಗೂ. ಗುಲೇಲಿನಿಂದ ಕಲ್ಲು ತೂರಿ. ಅವುಗಳನ್ನು ಹಿಂಸಿಸಿ ಹಾರಿಸಿ ಮೋಜು ಮಾಡುವುದು ಸಂತಸದ ವಿಷಯ " (ಗಂಡಿನ ನೆರಳು. ಪುಟ ೧೫೬)

" ಪಡುವಣ ದಿಕ್ಕಿನಲ್ಲಿ ಕುಂಕುಮವರ್ಣದ ಆ ನೇಸರು ಆತನಿಗೆ ತೋರಣ ಕಟ್ಟಿದ ಆ ಸುವರ್ಣ ಮೇಘಮಾಲೆ " (ಪ್ರೀತಿಯ ಆ ಮುಖ. ಪುಟ ೪೭)

" ದೂರದಲ್ಲಿ ಹಾಡುತ್ತಿರುವ ದನಗಾಹಿಯ ಪ್ರಣಯದುಂಬಿದ ಹಾಡು ದುಃಖಗೀತವಾಗಿ ಕೇಳಿತ್ತು " (ಪ್ರೀತಿಯ ಆ ಮುಖ. ಪುಟ ೧೦೮)

" ಅನಾರೋಗ್ಯಕರ ದುಶ್ಚಟಗಳಿಂದ ಗುಣ ಒಮ್ಮೆಲೆ ತಿಳಿಯೂದಿಲ್ಲ ಕಾಕಾ " (ಪ್ರೀತಿಯ ಆ ಮುಖ. ಪುಟ ೨೧೦)

" ಕಾಯ್ದೆ-ಕಾನೂನುಗಳನ್ನು ವಕೀಲರು ಬೇಕಾದಂತೆ ತಿರುಚಬಲ್ಲರು. ಶ್ರೀಮಂತರು ಜೇಬಿಗೆ ಇಳಿಸಬಲ್ಲರು " (ಚಂಬಲ್ ಕಣಿವೆಯಲ್ಲಿ. ಪುಟ ೫೧)

" ಭಾಗಿಗಳಿಗೆ ಉಪಪತ್ನಿಯರೇ ಹೆಚ್ಚು " (ಚಂಬಲ್ ಕಣಿವೆಯಲ್ಲಿ. ಪುಟ ೫೯)

" ಪ್ರೇಮ ಅಂದರೆ ಪ್ರೇಮ. ಅದಕ್ಕೆ ಜಾತಿ-ಪಾತಿ. ಅಮೀರಿ-ಗರೀಬಿ ಯಾವುದೂ ಕಾಣದು " (ಚಂಬಲ್ ಕಣಿವೆಯಲ್ಲಿ. ಪುಟ ೬೭)

" ಹಿರಿಯರಿಗೆ ಬಿರುಸು ಮಾತನಾಡುವುದು ಧರ್ಮವಲ್ಲ " (ಚಂಬಲ್ ಕಣಿವೆಯಲ್ಲಿ. ಪುಟ ೧೩೯) – ಇತ್ಯಾದಿಗಳು.

ಹೀಗೆ ಅನೇಕ ರೂಪಕಗಳನ್ನು ಬಳಸಿದ ಬೆಳಗಲಿಯವರು ಕೆಲವು ಸಲ ಅಲ್ಪ ಬದಲಾವಣೆಯ ರೀತಿಯಲ್ಲಿಯೂ ಪ್ರಯೋಗಿಸುತ್ತಾರೆ. ಕಾದಂಬರಿ ಗದ್ಯದ ನಡೆಯಲ್ಲಿ ನಡೆಯುವುದರಿಂದ ಕಾವ್ಯದ ಕಟ್ಟು-ನಿಟ್ಟು. ಅಲ್ಪ ಸಡಿಲಗೊಂಡಂತಹ ರೂಪಕಗಳನ್ನು ಬಳಸಿರುವುದು ನಮ್ಮ ಗಮನಕ್ಕೆ ಬಾರದಿರದು. ಅದೇನೇ ಇದ್ದರೂ ಅಲಂಕಾರಿಕ ಭಾಷೆಯೊಂದಿಗೆ ಅವರ ಪ್ರತಿಭೆ ಚೆನ್ನಾಗಿ ಕೆಲಸ ಮಾಡಿದೆ. ಅವರ ಅಲಂಕಾರಿಕ ಭಾಷಾ ಪ್ರಯೋಗ ಕಲಾತ್ಮಕವಾಗಿ ಅರಳಿನಿಂತಿದ್ದು. ಮನಸ್ಸಿಗೆ ಮುದವನ್ನು ನೀಡುತ್ತದೆ. ಇಂಥ ಅಲಂಕಾರಿಕ ಭಾಷೆಯೊಂದಿಗೆ ಕೆಲವು ಕಡೆ ಬೆಳಗಲಿಯವರು ನಿರಾಭರಣ ಸುಂದರವಾದ. ಸಹಜವಾದ ಭಾಷೆಯನ್ನು ಬಳಸಿಯೂ ಕಾದಂಬರಿಗಳಿಗೆ ಆಕರ್ಷಣೆಯನ್ನೂ. ಜೀವಂತಿಕೆಯನ್ನೂ ತುಂಬಿರುವುದು ಕಂಡುಬರುತ್ತದೆ. ಈ ನಿರಾಭರಣ-ಸುಂದರ-ಸಹಜ-ಸರಳ

ವಾಕ್ಯಗಳನ್ನು ಬಳಸುವಾಗ ಅದರಲ್ಲಿನ ಸೂಕ್ಷ್ಮವಾದ ಅರ್ಥವಂತಿಕೆಯನ್ನು. ಸಮಾಜಕ್ಕೆ ಹಿತಕಾರಿಯಾಗಬಲ್ಲ ಸೂಚನೆಗಳನ್ನೂ ಕೊಟ್ಟಿದ್ದಾರೆ. ಆದ್ದರಿಂದಲೇ ಭಾಷೆ ಓದುಗನ ಹೃದಯವನ್ನು ತಟ್ಟಿ-ಮುಟ್ಟಿ ಎಚ್ಚರಿಸುವಂತಹ ಗುಣ ಅದಕ್ಕೆ ಪ್ರಾಪ್ತವಾಗಿ. ಕೃತಿ ತನ್ನ ಉದ್ದೇಶವನ್ನು ಸಫಲಗೊಳಿಸಿಕೊಳ್ಳುತ್ತದೆ. ಅದರೊಂದಿಗೆ ಸಾಹಿತ್ಯಿಕ ಉದ್ದೇಶವೂ ಸಾಕಾರಗೊಳ್ಳುತ್ತದೆ

**ಕಾದಂಬರಿಗಳಲ್ಲಿ ಕವನದ ತುಣುಕುಗಳು :**

ಬೆಳಗಲಿಯವರು ' ಕಾದಂಬರಿ 'ಗೆ ಕಸುವು ತುಂಬಬಲ್ಲ ಏನೆಲ್ಲ ಶೈಲಿಯನ್ನು ಅಳವಡಿಸಿಕೊಂಡಿದ್ದಾರೆ. ಅವರ ಶೈಲಿಯನ್ನು ಕುರಿತು ವಿಶ್ಲೇಷಿಸುವ ನಿಟ್ಟಿನಲ್ಲಿ ಬಹುಮುಖ್ಯವಾಗಿ ಅವಲೋಕಿಸಲೇಕಾದುದು. ಅವರು ತಮ್ಮ ಕಾದಂಬರಿಗಳಲ್ಲಿ ಕನ್ನಡ ಕವಿಗಳ ಕವನಗಳನ್ನು. ತಾವೇ ರಚಿಸಿಕೊಂಡವುಗಳನ್ನು ಜಾನಪದ ಲಾವಣಿಗಳನ್ನು. ಬಯಲಾಟದ ಪದಗಳನ್ನು ಅಲ್ಲದೆ ಶರಣರ ವಚನಗಳನ್ನು. ವಚನದ ತುಣುಕುಗಳನ್ನು ಬಳಸಿಕೊಂಡಿದ್ದಾರೆ: ಕೃತಿಗಳಲ್ಲಿ ವೈವಿಧ್ಯತೆಯನ್ನು ಮೆರೆದಿದ್ದಾರೆ. ಇಂಥ ವೈವಿಧ್ಯತೆ ಕಾದಂಬರಿಯ ನಡೆಗೆ ಹೊಸ ಚಾಲನೆಯನ್ನು ನೀಡಿ. ಸಹೃದಯರಿಗೆ ಆಸ್ವಾದನೀಯವಾಗಿಸಿದ್ದಾರೆ. ಕವನದ ತುಣುಕುಗಳನ್ನು ಬೆಳಗಲಿಯವರು ತುಂಬ ಔಚಿತ್ಯವಾಗಿಯೇ ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ :

" ಕಂಪು ಹೂ ಸಾಲ್ಮರನ ದಾರಿಯಲಿ
ನಡೆ ನಡೆದು
ಕೆಂಪು ತೋಟಕೆ ಬನ್ನಿ ವಿಶ್ರಾಂತಿಗೆ...."

(ಗಂಡಿನ ನೆರಳು. ಪುಟ ೨೦೭)

– ಎಂಬ ಕವಿವಾಣಿಯನ್ನು ಬೆಳಗಲಿಯವರು ಸಂದರ್ಭೋಚಿತವಾಗಿ ಬಳಸಿದ್ದಾರೆ. ಕವನದ ಬಳಕೆಯಿಂದಾಗಿ ಸಂದರ್ಭಕ್ಕೆ ಮತ್ತಷ್ಟು ಗಾಢತೆ ಪ್ರಾಪ್ತವಾಗಿದೆ.

" ಶುಭವಾಗತೈತಿ.... ಶುಭವಾಗತೈತಿ
ಹಾಲಕ್ಕಿ ನುಡದೈತಿ.... ನಿಮಗ ಶುಭವಾಗತೈತಿ
ನಿಮ್ಮ ಮನಯಲ್ಲೊಂದು ಕಾಟ ಐತಿ
ಕಾಡಾಕ ಹತ್ತೈತಿ....
ಪಾರಾಗತೈತಿ.... ದೇವಿಯಲ್ಲಮ್ಮನ ಕಾಟಐತಿ
ಶುಭವಾಗತೈತಿ ನಿಮಗ ಶುಭವಾಗತೈತಿ...."

(ದೇವದಾಸಿ. ಪುಟ ೧)

–ಬುಡಬುಡಿಕೆಯವನ ಶಕುನದ ನುಡಿಗೀತೆಗಳೊಂದಿಗೇ ಪ್ರಾರಂಭವಾದ ' ದೇವದಾಸಿ 'ಯಲ್ಲಿ ಈ ರೀತಿಯ ಸಹಜ ಕವನ ಸ್ವರೂಪದ ಧಾಟಿಯನ್ನು ಪ್ರಯೋಗಿಸುವುದರೊಂದಿಗೆ. ಜಾನವಾಡದ ಜನರು ಮೂಢನಂಬಿಕೆಗಳ ದಾಸರೆಂಬುದನ್ನು ತೆರೆದಿಟ್ಟಿದ್ದಾರೆ. ಇದೇ ಪರಂಪರೆಯ ಜಾಡುಹಿಡಿದು ಬದುಕನ್ನು ನಡೆಸುವ ಜಾನವಾಡದ ಜನರ ಆಚರಣೆಯನ್ನು ಹೇಳುತ್ತ ಎಲ್ಲಮ್ಮನನ್ನು ಸ್ತುತಿಸುವ ' ಉಧೋ.... ಉಧೋ.... ಎಲ್ಲಮ್ಮ ನಿನ್ನ ಪಾಲ್ಕ ಉಧೋ.... ಉಧೋ....'' ಎಂಬಂತಹ ನಾಮಸ್ಮರಣಾ ಗೀತೆಯನ್ನು ಹದವಾಗಿ ಬಳಸಿದ್ದಾರೆ. (ದೇವದಾಸಿ. ಪುಟ ೩೯)

ಹಸಿಬಿಸಿ ಮನಸ್ಸಿನ ಶಂಕರನ ಮನಸ್ಸಿನ ತೊಳಲಾಟವನ್ನು ಚಿತ್ರಿಸುತ್ತ ಹೊರಟ ಲೇಖಕರಿಗೆ. ಸಹಜವಾಗಿಯೇ ಒಂದು ಕವನ ಅವರ ಲೇಖನಿಯಿಂದ ಹೊರಬರುತ್ತದೆ.

'' ಕಿಸೆ ಕಾಸು ಕಾಣದು
ಹೊಟ್ಟೆಗೆ ಹಿಟ್ಟು ಬೀಳದು
ಕಣ್ಣಿಗೆ ಕಣ್ಣು ಕೂಡವು
ಮನಸ್ಸಿಗೆ ಚಿಂತೆ ಬಿಡದು
ನಡೆಯಲು ಕಾಲು ಕೀಳವು
ದೇಹ ಸಮತೋಲನ ಕಾಯದು ''

(ಮುಳ್ಳು ಮತ್ತು ಮಲ್ಲಿಗೆ. ಪುಟ ೧೪೫)

ಮಾತುಗಳಿಗೆ ಕವನದ ಲೇಪನವನ್ನು ಚೆನ್ನಾಗಿ ಬಳಿದು. ಸಹಜ ಸುಂದರ ಗದ್ಯವನ್ನು ಪದ್ಯದಲ್ಲಿ ಮೇಳವಿಸಿ ನಡೆಸಬಲ್ಲರೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ. ' ಹತ್ತು ಹೆಡೆಯ ಹಾವು 'ದಲ್ಲಿ –

'' ಮುಂಬಯಿ ಶಹರ ದೇಖೋ....
ರಾಜಾರಾಣಿ ದೇಖೋ....
ತಾಜಮಹಲ್ ದೇಖೋ....
ರಾಜಾರಾಣಿ ದೇಖೋ....
ಗೋಲಗುಂಬಜ ದೇಖೋ....''

(ಹತ್ತು ಹೆಡೆಯ ಹಾವು. ಪುಟ ೪೩)

–ಇಂಥ ಸಿನಿಮಾ ಧಾಟಿಯ ಹಾಡುಗಳನ್ನು ಶಿಳ್ಳಿನಲ್ಲಿ ಹಾಡುತ್ತ ಹುಡುಗಿಯರ ಹಿಂದೆಯೇ ಸುತ್ತಾಡುವ ಪಡ್ಡೆಹುಡುಗರನ್ನು ಚೆನ್ನಾಗಿ ಚಿತ್ರಿಸಿರುವ ಬೆಳಗಲಿಯವರು. ತಮ್ಮ ಕಾದಂಬರಿಗಳನ್ನು ಇಂಥ ಕಾವ್ಯಾತ್ಮಕ ಪದ್ಯಗಳ ಮುಖಾಂತರ ಹೆಚ್ಚಿನ ಆಕರ್ಷಣೆಯನ್ನು ತುಂಬಿದ್ದಾರೆ. ' ಜಗವೆಲ್ಲ ನಗುತಿರಲಿ ಜಗದಳುವು ನನಗಿರಲಿ ' ಎಂಬಂತಹ ಅನೇಕ ಕವನದ ತುಣುಕಗಳನ್ನು ಕಾವ್ಯಾತ್ಮಕ ಮಾತುಗಳನ್ನು ಪ್ರಯೋಗಿಸಿದ್ದಾರೆ. ಗದ್ಯಕ್ಕೂ ಪದ್ಯದ ಸ್ಪರ್ಶ ನೀಡಬಲ್ಲ ರಮಣೀಯತೆ ಅವರ ಅಭಿವ್ಯಕ್ತಿಯಲ್ಲಿದೆ.

**ಜಾನಪದ ಹಾಡುಗಳ ಬಳಕೆ :**

ಬೆಳಗಲಿಯವರ ಕಾದಂಬರಿಗಳಿಗೆಲ್ಲ ಗ್ರಾಮೀಣ ಪರಿಸರವೇ ಮನೋಭೂಮಿಕೆ. ಗ್ರಾಮೀಣರ ನಡೆ-ನುಡಿ. ಸಂಪ್ರದಾಯ-ಆಚರಣೆ. ಸುಖ-ಸಂತೋಷದ ಕ್ಷಣಗಳನ್ನು –ಹೀಗೆ ಗ್ರಾಮೀಣರ ಬದುಕನ್ನು ಚಿತ್ರಿಸುವಾಗ ತಮ್ಮ ಕಾದಂಬರಿಗಳಲ್ಲಿ ಪ್ರಾಸಂಗಿಕವಾಗಿ. ಅಷ್ಟೇ ಸಂದರ್ಭೋಚಿತವಾಗಿ ಅನೇಕ ಜಾನಪದ ಹಾಡುಗಳನ್ನು. ಗೀತೆಗಳನ್ನು ತುಂಬ ಸೊಗಸಾಗಿ ಬಳಸಿಕೊಂಡಿದ್ದಾರೆ. ಇಂಥ ಸೊಗಸುಗಾರಿಕೆಯಿಂದ ಗ್ರಾಮೀಣ ಚಿತ್ರಣದ ಅವರ ಉದ್ದೇಶಕ್ಕೆ ಮತ್ತಷ್ಟು ಮೆರುಗು ಬಂದಿದ್ದು. ಕೃತಿ ತುಂಬ ಆಕರ್ಷಣೀಯವೂ. ಅಷ್ಟೇ ಸಹಜಸುಂದರವಾಗಿಯೂ ಕಾಣುತ್ತದೆ.

ಬೆಳವಲದ ರೈತನ ಸಿರಿ ಭಾಗ್ಯ ಕಂಡು. ದೇವ-ದೇವ ರೈತನ ಬಾಯಲ್ಲಿ ಅಮೃತ ಸುರಿದರೂ. ಸೀತೆನೆ. ಸುಲಿಗಾಯಿ. ಉಮ್ಮುಗೆಯ ಸವಿ ಆ ಪಶುಪತಿಯ ಸೊದೆಯಲ್ಲಿಯೂ ಇರಲಿಕ್ಕಿಲ್ಲ. ತಾವೇ ಬಿತ್ತಿ ಬೆಳೆದ ಸಂಪದ್ಭರಿತ ಹೊಲದ ಬೆಳೆಯ ಮಧ್ಯ ಮಾರ್ಗದಲ್ಲಿ ನಡೆಯುತ್ತಿದ್ದ ಎತ್ತುಗಳಿಗೂ ಸಂತೋಷ. ಅವುಗಳನ್ನು ಹೊಡೆಯುತ್ತಿದ್ದ ಸಿಂಗನಿಗೂ ಸಂತೋಷ. ಗಾಡಿ ಹೊಡೆಯುವ ಸಿಂಗ ಪ್ರಕೃತಿ ರಮ್ಯತೆ ಕಂಡು ಉಲ್ಲಾಸಗೊಂಡು. ಹಾಡುತ್ತಲೇ ಗಾಡಿ ಹೊಡೆಯುತ್ತಿದ್ದ. ಅವನು ಹಾಡುತ್ತಿದ್ದ ಹಳ್ಳಿಗರ ಹಾಡುಗಳಲ್ಲಿ ಮುಗ್ಧ ದಂಪತಿಗಳ ಹೃದಯವನ್ನು ಬಿಚ್ಚಿ ತೋರಿಸುವಂಥ ಸಾಹಸವಿತ್ತು. ಲಾವಣಿಯ ಲಾಸ್ಯವನ್ನು ಸಿಂಗ ಹೃದಯತುಂಬಿ ಹಾಡುತ್ತಿರುವ ಸನ್ನಿವೇಶವನ್ನು ಬೆಳಗಲಿಯವರು ' ಮುಳ್ಳು ಮತ್ತು ಮಲ್ಲಿಗೆ 'ಯಲ್ಲಿ ಚೆನ್ನಾಗಿ ಹಿಡಿದಿಟ್ಟಿದ್ದಾರೆ :

ಸರದಾರ ನಿಮ್ಮಿಂದ ಸರುವೆಲ್ಲ ಮರತೇನ
ಸರದಾಗ ಇರುವ ಗುಳದಾಳಿ
ಸರದಾಗ ಇರುವ ಗುಳದಾಳಿ ನಿಮ್ಮಿಂದ
ಸರುವ ಬಳಗೆಲ್ಲ ಮರತೇನ ॥
ಎಲ್ಲಿ ಹೋಗಿದ್ದೆ ರಾಯ ಸೆಲ್ಯಾಕ ಮಾಸೇದ
ಅಲ್ಲೊಬ್ಬಳ ಕೂಡ ಸಲಗೀಯ
ಅಲ್ಲೊಬ್ಬಳ ಕೂಡ ಸಲಗೀಯ ನೀವ್ ಮಾಡಿ
ಇಲ್ಲೆಂಬುದೇನು ನನ ಕೂಡ ॥
ಹಸುವು ಕೊಟ್ಟಿಗೆಯೊಳಗೆ ಶಿಶುವು ತೊಟ್ಟಿಲ ಒಳಗೆ
ಊರಿಗೆ ರಾಯ ಒಳ ಹೊರಗ
ಊರಿಗೆ ರಾಯ ಒಳಹೊರಗ ಇದ್ದರ
ಹಸಿವೆ ನೀರಡಿಕೆ ಇಲ್ಲ ॥
ಬಟ್ಟಲಗಣ್ಣೀಲಿ ದಿಟ್ಟಿಸಿ ನೋಡ್ಯಾರು
ಸಿಟ್ಟ್ಯಾಕೊ ರಾಯ ನನ ಮ್ಯಾಲ

ಸಿಟ್ಟ್ಯಾಕೋ ರಾಯ ನನ ಮ್ಯಾಲ ನಾ ಅಂಥ
ಹುಟ್ಟಿಸ್ಯಾಡವರ ಮಗಳಲ್ಲ ॥
ಮಡದೀನ ಬಡದಾನು ಮನದಾಗ ಮರಗ್ಯಾನು
ಒಳಗ್ಹೋಗಿ ಸೆರಗ ಓಡಿಯುತ
ಒಳಗ್ಹೋಗಿ ಸೆರಗ ಹಿಡಯುತ ಕೇಳ್ಯಾನು
ನಾ-ಹೆಚ್ಚೋ -ನಿನ್ನ ತವರ್ಹೆಚ್ಚೋ ॥
ಕೂಲಿ ಮಾಡಿದರೇನ. ಕೋರಿ ಹೊತ್ತರೇನ
ನಮಗ ನಮ ರಾಯ ಬಡವೇನ
ನಮಗ ನಮ ರಾಯ ಬಡವೇನ ಬಂಗಾರ
ಮಾಲ ಇದ್ದಾಂಗ ಮನಿಯಾಗ ॥

(ಮುಳ್ಳು ಮತ್ತು ಮಲ್ಲಿಗೆ. ಪುಟ ೧೬)

ಸಿಂಗನ ರಸಿಕತೆಗೆ ಸಾಕ್ಷಿಯಾಗಿವೆ ಈ ಜಾನಪದ ಹಾಡುಗಳು. ಸಿಂಗನೂ ರೈತ ಜೀವಿ. ಹಸಿರು ಹಸಿರಾಗಿ ನಡ ಉದ್ದ ಬೆಳೆದು. ಗೇಣುದ್ದ ತೆನೆಗಳ ಸಿರಿಪ್ರದರ್ಶಿಸಿ ನಾಟ್ಯ ರಾಣಿಯಂತೆ ನರ್ತಿಸುತ– ಹೊಸ ಹೆಣ್ಣು ಇನಿಯನ ಕಂಡಾಗ ಒಡಮೂಡುವ ನಸು ನಾಚಿಕೆಯನ್ನು ಹೊರಸೂಸುವಂತೆ ಬಾಗಿ. ಬಳಕುತ್ತ ನಿಂತಿರುವ ನಿಲ. ಗೋದಿಯ ಬೆಳೆ. ಬೆಳೆಯ ನರ್ತನದ ನಡುವೆ ಸಿಂಗನ ಇಂಪಾದ ಹಾಡು. ಇದನ್ನೆಲ್ಲ ಓದುತ್ತ ಹೋದಂತೆ ಇಂಪು-ಸೊಂಪುಗಳ ಸವಿಯನ್ನು ಹೀರುವ ಓದುಗನಿಗೆ ಕಾದಂಬರಿ ತುಂಬ ಆಕರ್ಷಣೀಯವೂ. ಹೃದ್ಯವೂ ಆಗುತ್ತದೆ.

ಇನ್ನೊಂದು ಸಂದರ್ಭದಲ್ಲಿ ವಿಠ್ಠಲ - ದೇವಿಯ ಸಂಗ ಬೆಳೆಸಿದ ಸಂದರ್ಭದಲ್ಲಿ ಅವನ ಹೆಂಡತಿಯ ಮನೋಗತವನ್ನು ಪ್ರತಿಬಿಂಬಿಸುವ ಸನ್ನಿವೇಶವನ್ನು ' ದೇವದಾಸಿ ' ಕಾದಂಬರಿಯಲ್ಲಿ ಚೆನ್ನಾಗಿ ನಿರೂಪಿಸಿದ್ದಾರೆ. ವಿಠ್ಠಲನ ಹೆಂಡತಿ ತನ್ನ ಗಂಡ ಮತ್ತೊಂದು ಹೆಣ್ಣಿನ ಸಂಗ ಮಾಡಿರುವನೆಂದು ಗೊತ್ತಾದರೂ ಕೂಡ ಆ ಬಗ್ಗೆ ತಲೆಕೆಡಿಸಿಕೊಳ್ಳದೆ,

" .... ನಾ ಮುಟ್ಟಿ ಮುಡಿದ ಪರಿಮಳದಾ ಹೂವ
ಅವಳೊಂದು ಗಳಿಗಿ ಮುಡಿಯಲಿ...."
" ಗಂಡ ಪಂಡಿತರಾಯಾ. ರಂಡೀಯ ಮಾಡಿದರ
ಭಂಡ ಮಾಡವರ ಮಗಳಿಲ್ಲ ! ಕೊರಳಾನ
ಗುಂಡು ಬೇಡಿದರ ಕೊಡವೇನ "

(ದೇವದಾಸಿ. ಪುಟ ೧೩೯)

–ಎಂದು ತನ್ನ ಹೃದಯವೈಶಾಲ್ಯತೆಯನ್ನೇ ಮೆರೆದಿದ್ದಾಳೆ. ಅವಳ ಆ ಹೃದಯವೈಶಾಲ್ಯತೆಯನ್ನು ಹೇಳಲು ಲೇಖಕರು ಹೃದ್ಯವಾದ ಪದ್ಯಗಳನ್ನೇ ಬಳಸಿದ್ದಾರೆ. " ನಾಕಮಂದ್ಯಾಗ ತೂಕದಿಂದ ಮಾತಾಡಿ ಲೋಕಾ ಗೆಲ್ತಾರ ಶಿವಶಂಕರ " ಎಂಬಂಥ ಅನೇಕ ಒಡಪುಗಳನ್ನು ಸಾಂದರ್ಭಿಕವಾಗಿ ಬಳಸುತ್ತ ತಮ್ಮ ಕಾದಂಬರಿಗಳಿಗೆ ಹೆಚ್ಚಿನ ಸೊಬಗನ್ನು ತುಂಬಿದ್ದಾರೆ.

**ಬೈಲಾಟದ ಪದಗಳ ಬಳಕೆ :**

ಹಳ್ಳಿಗರ ಪ್ರೀತಿಯ ಹವ್ಯಾಸಗಳೇ ಬೈಲಾಟಗಳು. ಇಂಥ ಬೈಲಾಟದ ಬಗ್ಗೆ ಲೇಖಕರಿಗೆ ತುಂಬ ಆಸಕ್ತಿ: ಅದಕ್ಕಿಂತ ಅದನ್ನು ನೋಡುವ ಸಹೃದಯರ ಮನೋಗತಗಳ ಬಗ್ಗೆ ಇನ್ನೂ ಹೆಚ್ಚಿನ ಆಸಕ್ತಿ. ಹಳ್ಳಿಗಳಲ್ಲಿ ಹಬ್ಬಹರಿದಿನಗಳಲ್ಲಿ ರಾತ್ರಿ ಹೊತ್ತು ಅನೇಕ ಬೈಲಾಟಗಳನ್ನು ಆಡುತ್ತಾರೆ. ಬೆಳಗಲಿಯವರು ಅಂಥ ಬೈಲಾಟಗಳ ಬಗ್ಗೆ ತಮ್ಮ ಕಾದಂಬರಿಗಳಲ್ಲಿ ಸಾಕಷ್ಟು ಚೆನ್ನಾಗಿಯೇ ಪ್ರಸ್ತಾಪಿಸಿದ್ದಾರೆ. ಅಷ್ಟೇ ಯಾಕೆ ಬೈಲಾಟದ ಪದಗಳನ್ನೂ ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ. ಬೈಲಾಟದ ಹುಚ್ಚು ಹಿಡಿಸಿಕೊಂಡು. ಅನೇಕರು. ಆಟದ ಮಧ್ಯದಲ್ಲಿಯೇ ಪದಗಳನ್ನು ಕೇಳಿ ಕೇಕೆ ಹಾಕುತ್ತ ಕುಣಿಯುವವರನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಶರಣನಿಗೆ ಬೈಲಾಟವೆಂದರೆ ಎಲ್ಲಿಲ್ಲದ ಆಸಕ್ತಿ: ಅದೂ ಅಂಬಾಳ ಒನಪು ವೈಯ್ಯಾರದ ನೋಟವೆಂದರೆ ಶರಣನಿಗೆ ಸ್ವರ್ಗ ಮೂರೇ ಗೇಣು.

" ರಂಗಮಂಚಕೆ ಹೋಗೋಣ ನಡಿ
ಅಲ್ಲಿ ವಿಲಾಸ ಮಾಡೋಣ ಕೂಡಿ "

(ಜೋಗಿಮರಡಿ. ಪುಟ ೩೮)

–ಎಂದು ಅಂಬಾ ಹಾವಭಾವದಿಂದ ಹಾಡುತ್ತಿದ್ದರೆ. ಹಜಾಮರ ಶರಣನಿಗೆ ಹುಚ್ಚೇ ಹಿಡಿದಂತಾಗುತ್ತಿತ್ತು. ತನಗರಿಯದಂತೆ ಶರಣ ಎಷ್ಟೋ ಸಲ. "ಕ್ಯಾಹೂss !" ಎಂದು ಕೂಗಿದ್ದೂ ಉಂಟು. ಹೆಂಡತಿಯಿಂದ. ' ಇಳಿವಯಾದಾಗ ಇದ್ಕೇನ ಹುಚ್ಚು ಹಿಡತೈತ್ಯೋ ' ಎಂದು ಬೈಸಿಕೊಂಡದ್ದೂ ಉಂಟು.

ನಾಟಕ ಶೋಕಿಯ ಕೇದಾರಿ. ಹಿಂದೊಮ್ಮೆ ಜಾನವಾಡದ ಓಕುಳಿಯಲ್ಲಿ ಆಡಿದ ಬೈಲಾಟದಲ್ಲಿ ನಾಯಕನ ಪಾತ್ರ ಮಾಡಿದವ. ಒಂದು ದಿನ ರಾತ್ರಿ ಕುಡಿದು ಮತ್ತನಾಗಿ ತನ್ನ ಪ್ರಿಯತಮೆ ಶಾರಿಯ ಮನೆಗೆ ಬಂದು. ಕುಡಿದ ಗುಂಗಿನಲ್ಲಿ ರಾಗವಾಗಿ ತಾನು ಆಡಿದ ಹಿಂದಿನ ನಾಟಕದ ಬೈಲಾಟ ಪದವೊಂದನ್ನು ಹಾಡುವ ದೃಶ್ಯ 'ದೇವದಾಸಿ'ಯಲ್ಲಿ ಸೊಗಸಾಗಿ ಬಂದಿದೆ :

" ಬಾರೇ ಪ್ರಿಯತಮೆ. ಮನದನ್ನೆ....!
ಸದಾ ಪ್ರೀತಿಸುವೆ ನಿನ್ನನ್ನೇ ।
ಬಾರೇ ಪ್ರಿಯತಮೆ. ಮನದನ್ನೇ....॥"

(ದೇವದಾಸಿ. ಪುಟ ೨೯೯)

ಎಂದು ಹಾಡುತ್ತ, ತೂರಾಡುತ್ತ ಶಾರಿಯ ಮುಂದೆ ತನ್ನ ಪ್ರೇಮದ ಅಳಲನ್ನು ತೋಡಿಕೊಳ್ಳುತ್ತಿದ್ದ ಪ್ರಸಂಗವನ್ನು ಬೆಳಗಲಿಯವರು ಚೆನ್ನಾಗಿ ಚಿತ್ರಿಸಿದ್ದಾರೆ. ಹಳ್ಳಿಗರ ನಾಡಿಮಿಡಿತ ಅರಿತಿದ್ದ ಬೆಳಗಲಿಯವರು ಹಳ್ಳಿಗರ ಶೋಕಿ-ಖಯಾಲಿಗಳನ್ನು ತುಂಬ ಮಾರ್ಮಿಕವಾಗಿಯೇ ಬರೆಯುತ್ತಾರೆ.

**ಶರಣರ ವಚನಗಳ ಬಳಕೆ :**

ಸಮಾಜಮುಖಿ ಧೋರಣೆಯ ಅವರ ಕಾದಂಬರಿಗಳಲ್ಲಿ ಶರಣರ ವಚನಗಳ ಹಾಗೂ ವಚನದ ತುಣುಕುಗಳನ್ನು ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ಸಾಂದರ್ಭಿಕವಾಗಿ ವಸ್ತುವಿನ ಗಟ್ಟಿತನಕ್ಕೆ ಹಾಗೂ ಓದುಗರನ್ನು ತಮ್ಮ ಉದ್ದೇಶ ಸಾಫಲ್ಯದತ್ತ ಒಲಿಸಿಕೊಳ್ಳುವಲ್ಲಿ ಈ ಶೈಲಿ ತುಂಬ ಫಲಕಾರಿಯಾಗಿದೆ. ಇಂಥ ವಚನಗಳ ಬಳಕೆಯಿಂದಾಗಿಯೇ ಅವರ ಕಾದಂಬರಿಗಳು ಗಟ್ಟಿಯಾಗಿ ಸಮಾಜದ ಸ್ವಾಸ್ಥ್ಯವನ್ನು ಉಳಿಸಿ-ಬೆಳೆಸುವಲ್ಲಿ ಯಶಸ್ವಿಯಾಗಿವೆ. ಕೆಲವು ಉದಾಹರಣೆಗಳನ್ನಿಲ್ಲಿ ನೋಡಬಹುದು :

" ಅಜಕೋಟಿ ವರುಷದವರೆಲ್ಲರೂ ಹಿರಿಯರೇ ?
ಹುತ್ತೇರಿ ಬೆಟ್ಟ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ?
ನಡಮುರಿದು, ತಲೆನಡುಗಿ, ನೆರೆತರೆ ಹೆಚ್ಚಿ, ಮತಿಗೆಟ್ಟು
ಒಂದನಾಡ ಹೋಗಿ ಮತ್ತೊಂದನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ ?
ಅನುವರಿದು, ಘನವ ಬೆರಸಿ, ಹಿರಿಕಿರಿದೆಂಬ
ಭೇದವಮರೆದು, ಕೂಡಲಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ
ಹಿರಿತನ ನಮ್ಮ ಮಹಾದೇವಿಯಕ್ಕನಿಗಾಯ್ತು"

(ಹತ್ತು ಹೆಡೆಯ ಹಾವು, ಪುಟ ೧೨೦)

" ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಯ್ಯನಲ್ಲಿ
ಮಹಾದೇವಿಯಕ್ಕನ ಒಂದು ವಚನ ಕಾಣಾ ಸಿದ್ಧರಾಮಯ್ಯ "

(ಹತ್ತು ಹೆಡೆಯ ಹಾವು, ಪುಟ ೧೨೦)

ಸಾಂದರ್ಭಿಕ ಔಚಿತ್ಯವರಿತು, ಅಕ್ಕನ ವಚನಗಳನ್ನೇ ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಪ್ರಯೋಗಿಸಿದ್ದಾರೆ :

" .... ಬೆಟ್ಟದ ಮೇಲೊಂದು ಮನೆಯ ಮಾಡಿ,
ಮೃಗಗಳಿಗಂಜಿದೊಡೆಂತಯ್ಯ ।

ಸಮುದ್ರ ತಡೆಯಲ್ಲೊಂದು ಮನೆಯ ಮಾಡಿ.

ನೊರೆತೆರೆಗಳಿಗಂಜಿದೊಡೆಂತಯ್ಯ ।

ಸಂತೆಯೊಳಗೊಂದು ಮನೆಯ ಮಾಡಿ

ಶಬ್ದಕ್ಕೆ ನಾಚಿದೊಡೆಂತಯ್ಯ ।

ಮಲ್ಲಿಕಾರ್ಜುನದೇವ. ಕೇಳಯ್ಯ

ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ

ಮನದಲಿ ಕೋಪವ ತಾಳದೆ. ಸಮಾಧಾನಿಯಾಗಿರಬೇಕು "

(ಹತ್ತು ಹೆಡೆಯ ಹಾವು. ಪುಟ ೧೨೧)

" ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಬ

ಪವಳದ ಚಪ್ಪರವನ್ನಿಕ್ಕಿ ಮುತ್ತುಮಾಣಿಕದ ಮೇಲುಕಟ್ಟು ಕಟ್ಟಿ,

ಮದುವೆ ಮಾಡಿದರು

ನಮ್ಮವರೆನ್ನ ಮದುವೆಯ ಮಾಡಿದರು.

ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ ಚೆನ್ನಮಲ್ಲಿಕಾರ್ಜುನನೆಂಬ

ಗಂಡಗೆನ್ನ ಮದುವೆಯ ಮಾಡಿದರು "

(ಹತ್ತು ಹೆಡೆಯ ಹಾವು. ಪುಟ ೧೨೨)

" ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ

ಆಲಿ ಕಲ್ಲ ಹಸೆಯ ಹಾಸಿ. ಕಾಲಿಲ್ಲದ ಹೆಂಡತಿಗೆ

ತಲೆಯಿಲ್ಲದ ಗಂಡ ಬಂದು ಮದುವೆಯಾದನು.

ಎಂದೆಂದೂ ಬಿಡದ ಬಾಳುವೆಗೆ ಕೊಟ್ಟವರೆನ್ನ. ಚೆನ್ನಮಲ್ಲಿ ಕಾರ್ಜುನೆಂಬ

ಗಂಡಗೆನ್ನ ಮದುವೆಯ ಮಾಡಿದರು "

(ಹತ್ತು ಹಡೆಯ ಹಾವು. ಪುಟ ೧೨೩)

" ಮಂಗಳವೇ ಮಜ್ಜನವೆನಗೆ. ವಿಭೂತಿಯೇ ಒಳಗುಂದದರಸಿನವೆನಗೆ

ದಿಗಂಬರವೇ ದಿವ್ಯಾಂಬರವೆನಗೆ

ಶಿವಪಾದರೇಣುವೇ ಅನುಲೇಪನವೆನಗೆ

ರುದ್ರಾಕ್ಷಿಯೇ ಮೈದೊಡಿಗೆ ಎನಗೆ

ಶರಣರ ಪಾದಂಗಳೇ ತೊಂಡಿಲಬಾಸಿಗವೆನಗೆ

ಚೆನ್ನಮಲ್ಲಿಕಾರ್ಜುನನೇ ಗಂಡನೆನಗೆ

ಆನು ಮಲ್ಲಿಕಾರ್ಜುನನಂಗೆ ಮದುವಳಿಗೆ

ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ ?"

(ಹತ್ತು ಹೆಡೆಯ ಹಾವು. ಪುಟ ೧೨೩)

– ಇಂಥ ವಚನಗಳನ್ನು ಇಡಿಯಾಗಿ ತಮ್ಮ ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ. ಕೆಲವು ಸಲ ವಚನದ ತುಣುಕುಗಳನ್ನು ಕಾದಂಬರಿಗಳಲ್ಲಿ ಬಳಸಿಕೊಂಡಿದ್ದಾರೆ.

" .... ಕೊಲುವವನೇ ಮಾದಿಗ. ಹೊಲಸು ತಿಂಬುವವನೇ ಹೊಲೆಯ.

ಕುಲವೇನೋ ಆವಂದಿರ ಕುಲವೇನೋ ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ

ನಮ್ಮ ಕೂಡಲಸಂಗನ ಶರಣರೇ ಕುಲಜರು " (ದೇವದಾಸಿ. ಪುಟ ೨೭೩)

" ಲೋಕದ ಡೊಂಕು ನೀವೇಕೆ ತಿದ್ದುವಿರಿ " (ದೇವದಾಸಿ. ಪುಟ ೨೭೬)

" ಅನ್ನದಾನ ನೀಡುವುದು ನನ್ನಿಯನು ನುಡಿಯುವುದು ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು ಸರ್ವಜ್ಞ"

" ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" (ಹತ್ತುಹೆಡೆಯ ಹಾವು. ಪುಟ ೧೨೧)

" ಲಿಂಗಕ್ಕೆಂದೆ ನೆನೆವೆ. ಲಿಂಗಕ್ಕೆಂದೆ ಮಾಡುವೆ. ಲಿಂಗಕ್ಕೆಂದೆ ಕೊಡುವೆ ಸಕಲ ಪದಾರ್ಥಗಳ ಲಿಂಗಕ್ಕೆಂದೆ ಭಾವಿಸುವೆ " (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೧೭)

" ಬೆಟ್ಟದಲ್ಲೊಂದು ಮನೆಯ ಮಾಡಿ...." (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೩೯)

" ಇವನಾರವ ಇವನಾರವ...." (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೧೬೩)

" ಕಾಯಕವೇ ಕೈಲಾಸ " (ಜೋಗಿಮರಡಿ. ಪುಟ ೧೫)

– ಇತ್ಯಾದಿಗಳು.

**' ವಾಕ್ಯಂ ರಸಾತ್ಮಕಂ ಕಾವ್ಯಂ '** ಎಂಬಂತೆ ಗದ್ಯಾತ್ಮಕ ಸಾಲುಗಳಿಗೂ. ಅಂದರೆ ವಾಕ್ಯಗಳಿಗೂ ' ಕಾವ್ಯಾತ್ಮಕ ಚಾಲನ ' (Poetic Rhythms) ನೀಡಬಲ್ಲ ಶಕ್ತಿ ಬೆಳಗಲಿಯವರಿಗಿದೆ. ಗದ್ಯಕ್ಕೂ ಪದ್ಯದಸ್ಪರ್ಶ ಕೊಡುವ ಬೆಳಗಲಿಯವರ ಬರವಣಿಗೆ ತುಂಬ ಆಪ್ಯಾಯಮಾನವೂ. ಆಕರ್ಷಕವೂ. ಹೃದ್ಯವೂ ಆಗಿ ಓದುಗರನ್ನು ಸಹಜವಾಗಿ ತನ್ನತ್ತ ಸೆಳೆಯುತ್ತದೆ. ಒಂದಿಷ್ಟು ಉದಾಹರಣೆಗಳನ್ನಿಲ್ಲಿ ವಿಶ್ಲೇಷಿಸಬಹುದು :

" ಕರಿಕೆ. ಜೇಕಿನಿಂದ ಕಸವಾದ ಪರಿಳಿತ ಹೊಲವನ್ನು ಅಗೆದು ತೆಗೆಯುವ ಟ್ರ್ಯಾಕ್ಟರ್ ನೇಗಿಲಿನಂತೆ ಶರಣನ ಮಶಿನ್ ಈರೇಶಿಯ ತಲೆ ಮೇಲೆ ಅತ್ತಿತ್ತ ಓಡಾಡುತ್ತಿತ್ತು" (ಜೋಗಿಮರಡಿ. ಪುಟ ೮)

" ವಿಷಕಾರಿ ಹಣ್ಣನ್ನು ಹೂವಿನಲ್ಲಿಯೇ ಚಿವುಟುವ ತವಕ " (ಜೋಗಿಮರಡಿ. ಪುಟ ೧೮)

" ಮೊಂಡಾದ ಕತ್ತರಿಯಿಂದ ಏರುಪೇರಾದ ಕೂದಲುಗಳನ್ನು ಸಮನಾಗಿ ಕತ್ತರಿಸುವ ಪ್ರಯತ್ನ ಮಾಡುತ್ತಿದ್ದರೂ. ಗೋದಿ ಹೊಲವನ್ನು ಕತ್ತೆ ಇನ್ನಷ್ಟು ಮೇಯ್ದಂತೆ ಆಗಿತ್ತು" (ಜೋಗಿಮರಡಿ. ಪುಟ ೨೫)

" ಒಂದಿಬ್ಬರು ಕಡ್ಡಿ ಕೊರೆದು ಬೀಡಿಗಳ ಮೋತಿ ಸುಟ್ಟಿದ್ದರು " (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೨)

" ಯಾವುದನ್ನು ಮುಷ್ಟಿಯಲ್ಲಿ ಹಿಡಿಯಬೇಕಿತ್ತೋ ಅದು ಹೇಗೋ ಬೆರಳ ಸಂದಿಯಲ್ಲಿ ತೂರಿಕೊಂಡು ಜಗಜ್ಜಾಹೀರಾಗಿತ್ತು" (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೪೫)

" ಯಾವ ರೋಗವೂ ಬಣ್ಣದ ನೀರಿಗೆ ಹೋಗುವುದಿಲ್ಲ. ಅದೆಲ್ಲ ಕಳೆದ ಜನ್ಮದ ಕರ್ಮಫಲ " (ಹತ್ತು ಹೆಡೆಯ ಹಾವು. ಪುಟ ೯೫)

" ಯಂತ್ರವತ್ತಾದ ಮುಂಬಯಿ ಮಹಾನಗರದಲ್ಲಿ ಮಾನವೀಯತೆ ಕಳೆದುಕೊಂಡು ಎಲ್ಲರೂ ನಿರ್ಜೀವ ಯಂತ್ರವೇ ಆಗುತ್ತಾರೇನೋ ಎಂಬ ಸಂದೇಹ ! ನಿರ್ಜೀವ ಕಂಪ್ಯೂಟರ್ ಕೂಡ ಕೇಳಿದರೆ ಉತ್ತರ ಕೊಡಬಲ್ಲುದು. ಕೆಟ್ಟುನಿಂತ ಕಂಪ್ಯೂಟರ್‌ನಂತೆ ಇವರ ಭಾವನೆಗಳು " (ವಾತ್ಸಲ್ಯಮಯಿ. ಪುಟ ෬)

" ಹಸಿದ ಮಗುವಿನ ಬಾಯಿಂದ ಮೊಲೆ ಬಿಡಿಸಿದಷ್ಟೇ ಆ ಪ್ರಸಂಗ ಬಿರಿಯಾಗಿದ್ದರೂ. ಮಗುವಿನ ಬಾಯಿಯನ್ನೇ ಒತ್ತಿಹಿಡಿದವರಿಗೇನು ?" (ಹಡೆದವರು. ಪುಟ ೬೯)

" ಆ ಮರಿ ತಾಯ ಮೊಲೆಗೆ ಬಾಯಿಹಾಕಲು ಯತ್ನಿಸುತ್ತಿತ್ತು. ಆ ಮರಿಯನ್ನೇ ಲವಲವಿಕೆಯಿಂದ ನೋಡುತ್ತಿತ್ತು ಮಗು " (ಹಡೆದವರು. ಪುಟ ೧೦೦)

" ಮಗು ಆಕಾಶದಲ್ಲಿಯ ಚಂದ್ರನನ್ನು ಬೇಡಿರಲಿಲ್ಲ. ತಾರೆಗಳನ್ನು ಬಯಸಿರಲಿಲ್ಲ. ಬೇಡಿದ್ದು-ಬಯಸಿದ್ದು ಜೀವದಿಂದಿದ್ದ ತಾಯಿಯನ್ನು. ಹಡೆದೊಡಲನ್ನು ? ಆದರೂ ಆ ಮಗುವಿನ ಬಯಕೆ ಆಕಾಶದಲ್ಲಿನ ಚಂದ್ರ-ತಾರೆಗಳಿಗಿಂತ ಬಹುದೂರ. ಬಹುದೂರದ ನಿಲಕಲಾರದ ಬೇಡಿಕೆ " (ಹಡೆದವರು. ಪುಟ ೧೨೧-೨೨)

" ಮಗಳ ಮದುವೆ ಮಾಡಿದ ಶ್ರೀಮಂತ ಬಡವನಾದ. ಬಡವ ಹಾಳಾಗಿ ಹೋದ " (ಚಂಬಲ್ ಕಣಿವೆಯಲ್ಲಿ. ಪುಟ ೭೦)

" ಕಾಲಿಗೆ ಕಣಿಕೆ ಚುಚ್ಚಿತೆಂದು ಬಣವಿಗೆ ಬೆಂಕಿ ಹಚ್ಚುವವರಿರುತ್ತಾರಲ್ಲ" (ಸೀಮೆಗಳು. ಪುಟ ೧೭)

" ಅನತಿ ದೂರದಲ್ಲಿ ಬಂಡೆಗಲ್ಲುಗಳ ಮೇಲೆ ಅತ್ತಿತ್ತ. ಬಟ್ಟೆಗಳ ಗುಂಪು ಕಾಣುತ್ತದೆ. ಶರ್ಟ. ಪ್ಯಾಂಟ್. ಸೀರೆ. ರವಿಕೆ. ಲಂಗ. ಬ್ರೇಸಿಯರ್. ಲಂಗು-ಲಗಾಮಿಲ್ಲದೆ ತೆಕ್ಕೆಮುಕ್ಕಿ ಬಿದ್ದಿರುತ್ತವೆ " (ಸೀಮೆಗಳು. ಪುಟ ೫೮)

" ಬಣ್ಣಬಣ್ಣದ ಬಟ್ಟೆಗಳಲ್ಲಿ ಗುಲಾಬಿ. ಬಿಳಿ. ಹಳದಿ. ಕೆಂಪು ಮೈಬಣ್ಣದ ಸ್ತ್ರೀ-ಪುರುಷರು. ಮಕ್ಕಳು ಸೇರುತ್ತಲಿರುತ್ತಾರೆ " (ಸೀಮೆಗಳು. ಪುಟ ೭೮)

" ಅಣ್ಣ ಹೇಳಿದ ಸುದ್ದಿ ಕೇಳಿ ಆಕೆಯ ಹೃದಯದಲ್ಲಿ ಮಧುರ ನಾದತರಂಗಗಳು ಅಲೆ ಅಲೆಯಾಗಿ ಏಳುತ್ತಲಿದ್ದವು " (ಗಂಡಿನ ನೆರಳು. ಪುಟ ೧೮)

" ಸುಂದರಿಯಾದವಳು ಸಂತೋಷಿಸಿದರೆ. ಆಕೆಯ ಸೌಂದರ್ಯ ಅದೆಷ್ಟು ಪಟ್ಟು ವೃದ್ಧಿಯಾಗುತ್ತದೆಂದು ಆತ ಲೆಕ್ಕ ಹಾಕಿದರೂ ಆತನ ಬಗೆಗಣ್ಣಿನ ಅಳತೆಗೋಲಿಗೆ ಸುಲಭವಾಗಿ ನಿಲುಕುವಂತಿರಲಿಲ್ಲ" (ಮೌನಕ್ರಾಂತಿ. ಪುಟ ೧೯)

" ಗೇಣಿದಾರನಿಗೆ ನೂರಾರು ಎಕರೆ ಭೂಮಿ. ಇಲ್ಲದವನಿಗೆ ಇಲ್ಲ. ಉಂಡವನೇ ಉಣ್ಣಬೇಕು. ಹಾಗಾದರೆ ಹಸಿದವ ಉಪವಾಸದಿಂದ ಸಾಯಬೇಕು " (ಮೌನಕ್ರಾಂತಿ. ಪುಟ ೨೦)

" .... ಸೂಳೆ ಸೀತೆಯ ಪಾತ್ರ ವಹಿಸಿದಂತೆ " (ಮೌನಕ್ರಾಂತಿ. ಪುಟ ೨೦)

" ಮಾತೃಪ್ರೇಮ ! ಜಗತ್ತಿನಲ್ಲಿ ಅದಕ್ಕೂ ಮೀರಿ ಅದಾವ ವಸ್ತುವಿದೆ ! ಅಮೃತಧಾರೆ ಹರಿಸುವ ಆ ಸುಖ ತಾಯಿಯಿಂದಲೇ ಪಡೆಯುವುದು ಸಾಧ್ಯ" (ಪ್ರೀತಿಯ ಆ ಮುಖ. ಪುಟ ೧೧೫)

– ಇತ್ಯಾದಿಗಳು.

ಹೀಗೆ ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ವೈವಿಧ್ಯಮಯವಾದ ಕವನ. ಕವನದ ತುಣುಕುಗಳನ್ನು. ಜಾನಪದ ಹಾಡುಗಳನ್ನು. ಬೈಲಾಟದ ಪದಗಳನ್ನು ಶರಣರ ವಚನ. ವಚನದ ತುಣುಕುಗಳನ್ನು. ರಸಾತ್ಮಕ. ಕಾವ್ಯಾತ್ಮಕವಾದ ವಾಕ್ಯಗಳನ್ನು ಬಳಸಿ ಅಲ್ಲಿ ಕಾವ್ಯಮಯ ವಾತಾವರಣವನ್ನೇ ಸೃಷ್ಟಿಸಿದ್ದಾರೆ. ಹೀಗಾಗಿ ಸಹೃದಯರ ಹೃದಯವನ್ನು ಆರ್ದ್ರಗೊಳಿಸುವ ಗುಣ ಅವರ ಕಾದಂಬರಿಗಳಿಗೆ ಪ್ರಾಪ್ತವಾಗಿದೆ.

**ಬೆಳಗಲಿಯವರ ಕಾದಂಬರಿಗಳ ತಂತ್ರ :**

ಕಾದಂಬರಿಕಾರನಿಗೆ ತನ್ನ ಅಭಿವ್ಯಕ್ತಿಗಾಗಿ ಬಳಸುವ ಭಾಷೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಬರವಣಿಗೆಯ ವಿಧಾನ ಕೂಡ. ಬೆಳಗಲಿಯವರ ಕಾದಂಬರಿಗಳ ಶೈಲಿಯ ಅವಲೋಕನದ ನಂತರ. ಅವರ ಕಾದಂಬರಿಗಳ ' ತಂತ್ರ 'ದ ಬಗ್ಗೆ ವಿಶ್ಲೇಷಣೆ ಮಾಡಿದರೆ. ಅವರು ಕಾದಂಬರಿಗಳಲ್ಲಿ ಅಳವಡಿಸಿಕೊಂಡ ಪರಿಕರಗಳನ್ನೆಲ್ಲ ವಿವರಿಸಿದಂತಾಗುತ್ತದೆ. ಅವರ ಕಾದಂಬರಿಗಳ ' ತಂತ್ರ 'ದ ಕೆಲವು ಮುಖ್ಯವಾದ ಹಾಗೂ ಸಾಮಾನ್ಯವಾದ ಅಂಶಗಳನ್ನಿಲ್ಲಿ ವಿಶ್ಲೇಷಣೆ ಮಾಡುವುದು ತುಂಬ ಸೂಕ್ತವೆನಿಸುತ್ತದೆ.

ತಂತ್ರವೆಂಬುದನ್ನು. " ತಂತ್ರವೆಂದರೆ ಲೇಖಕನ ಸಾಮಗ್ರಿಯಾದ ಅನುಭವ ತನ್ನ ಬಗ್ಗೆ ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ: ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು. ಶೋಧಿಸಲು. ವಿಕಾಸಗೊಳಿಸಲು. ಅದರ ಅರ್ಥವನ್ನೂ ಸೂಚಿಸಲು. ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆಗಟ್ಟಲು ಇರುವ ಏಕಮಾತ್ರ ಸಾಧನ "[೫] ಎಂದು ಡಾ. ಗಿರಡ್ಡಿ ಗೋವಿಂದರಾಜರು ಅಭಿಪ್ರಾಯಪಡುತ್ತಾರೆ. ತಂತ್ರದ ಬಗ್ಗೆ ವಿಶ್ಲೇಷಣೆ ಮಾಡುವಾಗ ಮಾರ್ಕಶೋರರ್‌ನ ಅಭಿಪ್ರಾಯಗಳು ತುಂಬ ಸಮಂಜಸವೆನಿಸುತ್ತವೆ. ಆತ ವಸ್ತು ಮತ್ತು ತಂತ್ರ ಎರಡೂ ಒಂದೇ ಎಂಬ ಅಭಿಪ್ರಾಯಕ್ಕೆ ಬರುತ್ತಾನೆ. " ತಂತ್ರವೆಂದರೆ ಹೆಚ್ಚು ಕಡಿಮೆ ಎಲ್ಲವೂ ಆಗಿದೆ. "[೬] ಅಂದರೆ ಒಂದು ಕೃತಿಯ ಯಶಸ್ಸಿಗೆ ಅದರ ತಾಂತ್ರಿಕ ಸಾಮರ್ಥ್ಯ ಬಹುಮುಖ್ಯ ಕಾರಣ. ಯಾಕೆಂದರೆ ಸಮರ್ಥವಾದ ಮತ್ತು ಸೂಕ್ಷ್ಮವಾದ ತಂತ್ರ ಸಮರ್ಥವಾದ ಮತ್ತು ಸೂಕ್ಷ್ಮವಾದ ವಸ್ತುವನ್ನೂ ಪೂರ್ವಪಕ್ಷವಾಗಿ

೫. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ. ಪುಟ ೬

೬. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ. ಪುಟ ೫

ನಿರೀಕ್ಷಿಸುತ್ತದೆ. ಅತ್ಯಂತ ಸರಳವಾದ. ಆಳವಿಲ್ಲದ ವಸ್ತು ತಾಂತ್ರಿಕ ಸೂಕ್ಷ್ಮತೆಗಾಗಲಿ. ಸಾಮರ್ಥ್ಯಕ್ಕಾಗಲಿ ಅವಕಾಶವನ್ನೇ ಕೊಡುವುದಿಲ್ಲ. ಆದ್ದರಿಂದ ತಾಂತ್ರಿಕ ಕೌಶಲ್ಯ. ವಸ್ತುವಿನ ಸಂಘಟನಾ ನೈಪುಣ್ಯ. ಶಿಲ್ಪದ ಅಚ್ಚುಕಟ್ಟುತನ ಮೊದಲಾದುವೆಲ್ಲ ಸಾಪೇಕ್ಷ ಸಂಗತಿಗಳಾಗಿವೆ. ಸಂಘಟಿಸಲು ಸಂಕೀರ್ಣವಾದ. ಈ ವರೆಗೆ ಯಾರೂ ಪ್ರಯತ್ನಪಡದ. ಅರ್ಥದ ಹಲವು ಪದರುಗಳುಳ್ಳ ವಸ್ತುವಿಲ್ಲದೆ ಹೋದರೆ ತಾಂತ್ರಿಕ ನೈಪುಣ್ಯವೆಲ್ಲ ಕೇವಲ ತೋರಿಕೆಯದಾಗುತ್ತದೆ.

" ಕೆಲವು ತಂತ್ರಗಳು ಇನ್ನುಳಿದವುಕ್ಕಿಂತ ಹೆಚ್ಚು ಹರಿತವಾದ ಸಾಧನಗಳಾಗಿವೆ. ಮತ್ತು ಹೆಚ್ಚು ಅಂಶಗಳನ್ನೂ ಅನಾವರಣಗೊಳಿಸುತ್ತವೆ. ತನ್ನ ವಸ್ತುವನ್ನು ಅತ್ಯಂತ ತೀಕ್ಷ್ಣ ತಾಂತ್ರಿಕ ಪರೀಕ್ಷೆಗೆ ಒಳಪಡಿಸಬಲ್ಲ ಲೇಖಕ ಅತ್ಯಂತ ಸಮಾಧಾನ ಕೊಡುವಂಥ ತಿರುಳುಳ್ಳ ಪಿಂಡವುಳ್ಳ ಅನುರಣಿಸುವ ಪರಮಾವಧಿ ಅರ್ಥವುಳ್ಳ ಕೃತಿಗಳನ್ನು ರಚಿಸುತ್ತಾನೆ "[೭] ಎಂದು ತಾಂತ್ರಿಕ ಮಹತ್ವವನ್ನು ಕುರಿತು ಗಿರಡ್ಡಿ ಗೋವಿಂದರಾಜರು ಅಭಿಪ್ರಾಯ ಪಡುತ್ತಾರೆ. " ಕಾದಂಬರಿ ತಂತ್ರಕ್ಕಾಗಿ ನಾವು ಬಲು ಸಂಕಟ ಪಡುತ್ತಿರುವಂತೆ ಕಾಣುತ್ತದೆ "[೮] ಎಂದು ಉದ್ಗರಿಸುವ ಕಾರಂತರ ಮಾತನ್ನು ಅವಲೋಕಿಸಿದರೆ. ಕಾದಂಬರಿಕಾರನಿಗೆ ತಂತ್ರ ಸಹಜವಾಗಿದ್ದರೆ. ಆಧುನಿಕ ವಿಮರ್ಶಕರಲ್ಲಿ ಅದು ಉತ್ತಮ ಮೌಲ್ಯಮಾಪನ ಸಾಧನವಾಗಿ ಪರಿಗಣಿಸಲ್ಪಡುತ್ತಿದೆ. ಒಟ್ಟಿನಲ್ಲಿ ಲೇಖಕ ವಸ್ತುವಿನಲ್ಲಿ ಅಡಕವಾದ ಮೌಲ್ಯಗಳನ್ನು ಬೆಲೆಗಟ್ಟಿ ಅವುಗಳ ಬಗ್ಗೆ ತನ್ನ ಬೆಲೆಯುಳ್ಳ ಧೋರಣೆಗಳನ್ನು ಪ್ರಕಟಿಸುವ ಅನುಕೂಲವನ್ನು ಲೇಖಕ ತಂತ್ರದ ಮೂಲಕವೇ ಸಾಧಿಸಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ವಸ್ತುವಿನ ಪೂರ್ಣ ಅಭಿವ್ಯಕ್ತಿಯೇ ತಂತ್ರವೆಂದಾಗುತ್ತದೆ. ಆದ್ದರಿಂದ ತಂತ್ರ ಭಾಷೆಯ ಬಳಕೆಯನ್ನು ಒಳಗೊಳ್ಳುತ್ತದೆ. " ವಸ್ತುವಿನ ಸಂಕೀರ್ಣ ಸೂಕ್ಷ್ಮಸಾಧ್ಯತೆಗಳನ್ನೆಲ್ಲ ಅನಾವರಣಗೊಳಿಸಬಲ್ಲ ತಂತ್ರಕ್ಕಾಗಿ ಪ್ರತಿಯೊಂದು ಕಾದಂಬರಿಯಲ್ಲಿಯೂ ಹೊಸದಾಗಿ ಶೋಧಿಸಬೇಕಾಗುತ್ತದೆ. ಯಾವ ತಂತ್ರವೂ ಎಲ್ಲ ಬಗೆಯ ವಸ್ತು-ಧೋರಣೆಗಳಿಗೆ ಸಿದ್ಧತಂತ್ರವಾಗಲಾರದು "[೯] ಇದಿಷ್ಟು ಹಿನ್ನೆಲೆಯಲ್ಲಿ ಬೆಳಗಲಿಯವರು ಅನುಭವ ದ್ರವ್ಯದ ಸಂವಹನೆಗೆ ಯಾವ ಯಾವ ವಿಧಾನವನ್ನು ಅನುಸರಿಸಿದ್ದಾರೆಂದು ನೋಡುವುದೇ ಪ್ರಸ್ತುತ ಸಂದರ್ಭದ ಮೂಲ ಉದ್ದೇಶವಾಗಿದೆ.

**ನಿರೂಪಣಾ ವಿಧಾನ :**

ಪ್ರತಿಯೊಂದು ಕಾದಂಬರಿಯೂ ಒಂದು ಕಥೆಯನ್ನು ಹೇಳಲೇಬೇಕು. " ಕಥೆಯನ್ನು ಹೇಳಲು ಐವತ್ತು ಲಕ್ಷರೀತಿಗಳಿವೆ "[೧೦] ಕಥೆಯ ಅಂಶಕ್ಕೆ ಸಿಕ್ಕುವ ಪ್ರಾಧಾನ್ಯ ಕಾದಂಬರಿಯಿಂದ ಕಾದಂಬರಿಗೆ ಬದಲಾಗಬಹುದು. ಕಾದಂಬರಿಕಾರ ಸಾಮಾನ್ಯವಾಗಿ ತನ್ನ ಕೃತಿಯಲ್ಲಿ ಕಥೆ ಹೇಳುವ ಗುರಿಯನ್ನು ಮಾತ್ರ ಇಟ್ಟುಕೊಳ್ಳುವುದಿಲ್ಲ.

---

೭. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ. ಪುಟ ೪

೮. ಸಂ. ಕು. ಶಿ. ಹರಿದಾಸ ಭಟ್ಟ. ಎನ್. ತಿರುಮಲೇಶ್ವರ ಭಟ್ಟ : ಅಭಿನಯ. ಪುಟ ೧೯೮

೯. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ. ಪುಟ ೬

೧೦. ಎಲ್. ಎಸ್. ಶೇಷಗಿರಿರಾವ : ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ. ಪುಟ ೯೩

ಅದರೊಂದಿಗೆ ಬೇರೆ ಯಾವುದಾದರೂ ಉದ್ದೇಶವನ್ನು ಸಾಧಿಸಲು ಪ್ರಯತ್ನಿಸುತ್ತಾನೆ. ಹೀಗಾಗಿ ಕಥೆ ಹೇಳುವ ರೀತಿ-ತಂತ್ರ ಎರಡು ದೃಷ್ಟಿಯಿಂದ ಪ್ರಾಮುಖ್ಯತೆ ಪಡೆದಂತಾಗುತ್ತದೆ. ಒಂದು. ಕಥೆ ಕೇಳುವವರ ಮನಸ್ಸನ್ನು ಹಿಡಿದು ನಿಲ್ಲಿಸುವಂತೆ ಆಕರ್ಷಕವಾಗಿ ಹೇಳುವುದಾದರೆ ಇನ್ನೊಂದು. ಕಾದಂಬರಿ ತಾನಿಟ್ಟುಕೊಂಡ ಉದ್ದೇಶದಲ್ಲಿ ಸಾಫಲ್ಯವನ್ನು ಪಡೆಯುವುದು. ಕಥೆಯನ್ನು ' ಹೇಳುವ ' ಕಾರ್ಯವನ್ನು ಕಾದಂಬರಿಕಾರ ಎರಡು ರೀತಿಯಲ್ಲಿ ಸಾಧಿಸುತ್ತಾನೆ. ಒಂದನೆಯದು ವೃತ್ತಾಂತ. ಇದರಲ್ಲಿ ಕಥೆಗಾರ-ಕಾದಂಬರಿಕಾರನಿಗೆ ಹೆಚ್ಚಿನ ಸ್ವಾತಂತ್ರ್ಯವಿರುತ್ತದೆ. " ಈ ತಂತ್ರದ ಅತ್ಯಂತ ಸರಳ ರೂಪವನ್ನು ತೋರಿಸುವ ಅಜ್ಜಿಯ ಕಥೆಯೇ ಇದನ್ನು ಸ್ಪಷ್ಟಗೊಳಿಸುವುದು: " ಒಂದು ಊರಿನಲ್ಲಿ ಒಬ್ಬ ರಾಜನಿದ್ದನು. ಆತನು ಬಹಳ ಶೂರ. ಒಳ್ಳೆಯವನು. ಅವನಿಗೆ ಇಬ್ಬರು ಹೆಂಡತಿಯರು...." ೧೧ ಹೀಗೆ ಕಥೆ ಸರಳ ರೀತಿಯಲ್ಲಿಯೇ ಸಾಗುತ್ತದೆ. ಎರಡನೆಯದು. ದೃಶ್ಯ ಚಿತ್ರಣ. ಇದು ವೃತ್ತಾಂತಕ್ಕಿಂತ ಹೆಚ್ಚು ಆಕರ್ಷಣೆ-ಆಸಕ್ತಿಯನ್ನುಂಟು ಮಾಡುತ್ತದೆ. ದೃಶ್ಯದ ಮುಖಾಂತರ ಓದುಗರನ್ನು ಸೆರೆಹಿಡಿದ ಮೇಲೆ ಕಾದಂಬರಿಕಾರ ವೃತ್ತಾಂತವನ್ನು ಹೇಳುತ್ತಾನೆ. ನಾಟಕದಂತೆ ದೃಶ್ಯಗಳನ್ನು ಸೃಷ್ಟಿಸುತ್ತ ಹೋಗುವುದು ಕಾದಂಬರಿಯ ಉನ್ನತಿಕೆಯೆಂದೇ ಹೇಳಬಹುದು. ಒಟ್ಟಿನಲ್ಲಿ ಯಾವ ಕಾದಂಬರಿಕಾರನೂ ವೃತ್ತಾಂತ. ನಾಟಕೀಯ ತಂತ್ರ ಇವೆರಡನ್ನೂ ಬಿಟ್ಟು ಹೋಗಲಾರ. ಈ ಎರಡನ್ನೂ ಕಾದಂಬರಿಕಾರ ಸಾಮಾನ್ಯವಾಗಿ ಬಳಸಿಕೊಳ್ಳುತ್ತಾನೆ. ಅವನ ಪ್ರತಿಭೆ. ಅವನ ವಸ್ತುಗಳಿಗೆ ಅನುಗುಣವಾಗಿ ಇವನ್ನು ಮಾರ್ಪಡಿಸಿಕೊಳ್ಳುತ್ತಾನಷ್ಟೇ.

ಕಥೆಗಾರ ತನ್ನ ಕಥೆಯೊಂದಿಗೆ ಹೊಂದಿರುವ ಸಂಬಂಧದ ಹಿನ್ನೆಲೆಯನ್ನು ವಿವೇಚಿಸುವುದಾದರೆ. ನಿರೂಪಣಾವಿಧಾನ ಎರಡು ರೀತಿಯಲ್ಲಿ ಸಾಗುತ್ತದೆ. ಒಂದನೆಯದು. ನೇರನಿರೂಪಣಾ ವಿಧಾನ ಹಾಗೂ ಯಾವುದಾದರೂ ಪಾತ್ರದ ಮುಖಾಂತರ ಕಥೆಯನ್ನು ಹೇಳುತ್ತಾ ಹೋಗುವುದು. ಲೇಖಕನೇ ನೇರವಾಗಿ ಕಥೆಯನ್ನು ಹೊರಗಿನಿಂದ ಹೇಳುತ್ತಾ ಹೋಗುವುದು. ನೇರನಿರೂಪಣೆಯ ವಿಧಾನ. ಇದು ಕಾದಂಬರಿಯ ರಾಜಮಾರ್ಗವಾಗಿದ್ದು. ಕಾದಂಬರಿಯ ವಸ್ತು. ಪಾತ್ರ. ಘಟನೆಗಳೆಲ್ಲ ಅವನ ಸೃಷ್ಟಿಯೇ ಆದ್ದರಿಂದ ಅವೆಲ್ಲವುಗಳ ಸಂಪೂರ್ಣ ಜ್ಞಾನದಿಂದ ಅವನು ಬರೆಯುತ್ತಾನೆ. ಸರ್ವಾಂತರ್ಯಾಮಿಯಾಗಿ ಒಂದು ಬಗೆಯ ಸರ್ವಸಾಕ್ಷಿ ಪ್ರಜ್ಞೆಯಿಂದ ಕಥೆಯನ್ನು ನಿರೂಪಿಸುತ್ತಾನೆ. ವಸ್ತುವಿನ ಹರಹು. ವೈವಿಧ್ಯ ಹೆಚ್ಚಾಗಿದ್ದಾಗ ಈ ಬಗೆಯ ನಿರೂಪಣೆ ಅನಿವಾರ್ಯವಾಗುತ್ತದೆ. ಕನ್ನಡದ ಬಹುತೇಕ ಕಾದಂಬರಿಗಳು ಇದೇ ತಂತ್ರದಲ್ಲಿ ಮೂಡಿಬಂದ ಕೃತಿಗಳಾಗಿವೆ. ಎರಡನೆಯದು. ಆತ್ಮ ಕಥನದ ರೀತಿಯಲ್ಲಿ ನಿರೂಪಸಿವುದು. ಕಾದಂಬರಿಕಾರ ತನ್ನ ಯಾವುದಾದರೂ ಪಾತ್ರದ ಮುಖಾಂತರ ಕಥೆಯನ್ನು ಹೇಳುತ್ತ ಸಾಗುವುದು. ಇಲ್ಲಿ ಪಾತ್ರಗಳು ಮತ್ತು ಅನುಭವಗಳನ್ನು ತಾವೇ ಹೇಳಿಕೊಳ್ಳುವುದರಿಂದ. ಅನುಭವಕ್ಕೊಂದು ವೈಯಕ್ತಿಕ ತೀವ್ರತೆ ಸಾಮಿಪ್ಯ ಪ್ರಮಾಣಿಕತೆ ಬರುತ್ತದೆ. " ಆಧುನಿಕ ಸಂವೇದನೆಯ ಯಾತನೆ. ಏಕಾಕಿತನ. ಅನಾಥ ಪ್ರಜ್ಞೆಗಳಿಗೆ ಈ ತಂತ್ರ ಸಂವಾದಿಯಾಗಿದೆ. " ೧೨ ಈ ತಂತ್ರದ ಇನ್ನೊಂದು ರೂಪವೇ ನಿರೀಕ್ಷಕನ ಪಾತ್ರದ ಮೂಲಕ

೧೧. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ. ಪುಟ ೧೧

೧೨. ಗಿರಡ್ಡಿ ಗೋವಿಂದರಾಜ : ಕಾದಂಬರಿ ವಸ್ತು ಮತ್ತು ತಂತ್ರ. ಪುಟ ೧೭

ಕಥೆಯನ್ನು ಹೇಳುವುದು. ಕಾದಂಬರಿಯ ರಚನೆಯಲ್ಲಿ ಇವೆರಡೇ ವಿಧಾನಗಳಲ್ಲ. ಇವೆರಡರ ಹೊಂದಾಣಿಕೆಯೊಂದಿಗೆ ಅಗತ್ಯಕ್ಕೆ ತಕ್ಕಂತೆ ಇನ್ನೂ ಅನೇಕ ವಿಧಾಗಳನ್ನು ಹುಟ್ಟಿಸಿಕೊಳ್ಳಬಹುದಾಗಿದೆ.

ಬೆಳಗಲಿಯವರು 'ದೇವದಾಸಿ'. 'ಹಡೆದವರು'. 'ಮೌನಕ್ರಾಂತಿ'. 'ಜೋಗಿಮರಡಿ'. 'ಕಾತ್ರಾಳ ರತ್ನಿಯ ಚಾದಂಗಡಿ'ಗಳಲ್ಲಿ 'ವೈಚಾರಿಕತೆ'ಯನ್ನೇ ಮೂಲಗುಣವಾಗಿಸಿದ್ದಾರೆ. ಈ ಕಾದಂಬರಿಗಳು. ಅದರಲ್ಲಿಯೂ 'ದೇವದಾಸಿ' ಜ್ವಲಂತ ಸಮಸ್ಯೆಯೊಂದನ್ನು ವಿಶ್ಲೇಷಿಸ ಹೊರಟಿದ್ದರೂ. ಕಾದಂಬರಿಕಾರರು ಹೊಸ ಬಗೆಯ ತಂತ್ರಕ್ಕೆ ಕೈಹಾಕಿಲ್ಲ. ಕಾದಂಬರಿ ಪ್ರಪಂಚದ ಪರಂಪರಾಗತ ನಿರೂಪಣಾ ವಿಧಾನವನ್ನೇ ಅನುಸರಿಸಿದ್ದಾರೆ. ಹೀಗಾಗಿ ಪಾತ್ರಗಳ ಒಳಮನಸ್ಸನ್ನು ಚಿತ್ರಿಸುವ ಲೇಖಕರಿಗೆ ಯಾವುದೇ ರೀತಿಯ ತೊಂದರೆಯಾಗಿಲ್ಲ. ಹಳೆಯ ನಿರೂಪಣಾವಿಧಾನವನ್ನು ಅನುಸರಿಸಿಯೂ ಅಪೂರ್ವವೆನ್ನುವಂತೆ ಪಾತ್ರ ಚಿತ್ರಣ ಮಾಡಿರುವುದು ಬೆಳಗಲಿಯವರ ಪ್ರತಿಭೆಗೆ ಸಾಕ್ಷಿಯಾಗಿದೆ. ಬೆಳಗಲಿಯವರ ಬಹುತೇಕ ಕಾದಂಬರಿಗಳು ನೇರನಿರೂಪಣಾ ತಂತ್ರದಲ್ಲಿಯೇ ರಚನೆಗೊಂಡಿವೆ. ಅವರ ಪ್ರಾದೇಶಿಕ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಸ್ತುತ ಜ್ವಲಂತ ಸಮಸ್ಯೆಗಳನ್ನು ಚಿತ್ರಿಸುತ್ತ-ಬಿಡಿಸುತ್ತ ಹೊರಟಿರುವುದರಿಂದ. ಲೇಖಕರು ಇಲ್ಲಿ ತಮ್ಮ 'ಜನಪರ' ವೈಚಾರಿಕತೆಯನ್ನು ಚೆನ್ನಾಗಿ ಎರಕ ಹೊಯ್ದಿದ್ದಾರೆ. ಕಾಲ-ದೇಶಗಳ ದೃಷ್ಟಿಯಿಂದ ತುಂಬಾ ಹರಹು ಹೊಂದಿದ ಪ್ರಾದೇಶಿಕ ಕಾದಂಬರಿಗಳಲ್ಲಿ ತಮ್ಮ 'ರಚನಾಕೌಶಲ್ಯ'ವನ್ನು ಮೆರೆದಿದ್ದಾರೆ.

'ಚಂಬಲ್ ಕಣಿವೆಯಲ್ಲಿ' ಕಾದಂಬರಿಕಾರ ತಾನೂ ಒಂದು ಪಾತ್ರವಾಗಿ ಕಥೆಯನ್ನು ಹೇಳುತ್ತ ಸಾಗುತ್ತಾನೆ. "ನಿದ್ರೆಯ ಮಂಪರಿನಲ್ಲಿಯೂ ನನ್ನ ಕಣ್ಣೆದುರು ಅದೇ ಚಿತ್ರ ಸುಳಿಯುತ್ತಲಿತ್ತು. ಉನ್ನತ ಕಟ್ಟೆಯ ಮೇಲೆ ಕಾಂದಾರಿಯಾ ಮಹಾದೇವಾಲಯ! ಅದನ್ನು ಸುತ್ತುವರಿದ ಅತ್ಯಂತ ರೂಪಸಿಯಾದ ಶಿಲಾಬಾಲಿಕೆಯರು ಹಾಗೂ ಅವರ ಮುಕ್ತ ಪ್ರಣಯದ ರತಿಕ್ರೀಡೆಯ ಆ ಭಾವಭಂಗಿಗಳು! ವಾತ್ಸಾಯನನ ಲೆಕ್ಕಣಿಕೆಯಿಂದ ಇಳಿದು ಬಂದ ಅನಂತರ ಶಿಲ್ಪಿಯ ಉಳಿಯಲ್ಲಿ ರೂಪಾಂತರಗೊಂಡ ಆ ಅದ್ಭುತ ಚಿತ್ರಗಳ ವಿಚಿತ್ರಲೋಕ" (ಚಂಬಲ್ ಕಣಿವೆಯಲ್ಲಿ. ಪುಟ ೧). ಎಂಬ ಲೇಖಕರ ಮಾತುಗಳಲ್ಲಿ. ಓದುಗರು ಮತ್ತು ಕಾದಂಬರಿಯ ಮಧ್ಯದಲ್ಲಿ ಕಾದಂಬರಿಕಾರ ಪ್ರವೇಶಿಸಿ ಕಾದಂಬರಿಯನ್ನು ನಿರ್ದೇಶಿಸಿದ್ದಾರೆಂಬುದು ಸುಸ್ಪಷ್ಟ ಗೋಚರವಾಗುತ್ತದೆ. ಡಕಾಯಿತರೊಂದಿಗೆ ತಾವೂ ಒಬ್ಬರಾಗಿ ಅವರ ಬದುಕನ್ನು ಚಿತ್ರಿಸುತ್ತ ಹೋಗುವ ಕಾದಂಬರಿಕಾರರು. ಆರಂಭದಿಂದ ಅಂತ್ಯದವರೆಗೆ ತಾವೇ ಕಥೆಯನ್ನು ನಡೆಸಿಕೊಂಡು ಹೋಗುತ್ತಾರೆ. ಕ್ಷಣಕ್ಷಣಕ್ಕೂ ಕುತೂಹಲ ಕೆರಳಿಸುವ ರೀತಿಯಲ್ಲಿ ಮೂಡಿಬಂದ ಈ ಕೃತಿ ಲೇಖಕರ ಅನುಭವಗಳನ್ನೇ ಹೇಳಿದಂತೆ ನಿರೂಪಿತಗೊಂಡಿದೆ.

ನೀಲಕಂಠನ ಆತ್ಮಕಥನದ ರೀತಿಯಲ್ಲಿ ಅಭಿವ್ಯಕ್ತಗೊಂಡ 'ನೀಮೆಗಳು'ದಲ್ಲಿ ಕಾದಂಬರಿಕಾರರು. ನೀಲಕಂಠನೆಂಬ ಪಾತ್ರದ ಮೂಲಕ ಕಥೆಯನ್ನು ನಿರೂಪಣೆ ಮಾಡುತ್ತಾ ಹೋಗುತ್ತಾರೆ. "ಮತ್ತೆ ಬದಲಾದ ಮಗ್ಗಲು. ಮೀತಾಳ ಸ್ಮರಣೆಯ ಎಳೆ ನನ್ನನ್ನು ನನ್ನೂರಿನ ಮನೆಯತ್ತ ಎಳೆದೊಯ್ಯುತ್ತವೆ. ಊರಿನ ನೆನಪು.

ನನ್ನದೂ ಒಂದು ಕಥೆ." (ಸೀಮೆಗಳು. ಪುಟ ೧೩). ಇಲ್ಲಿ "ನನ್ನನ್ನು". "ನನ್ನದೂ" ಗಳೆಂಬ ಉತ್ತಮ ಪುರುಷ ಏಕವಚನದಿಂದಲೇ ಕಾದಂಬರಿ ಪ್ರಾರಂಭಗೊಂಡು. ಮುಂದುವರಿಯುತ್ತದೆ. "ನನ್ನ ಪರ್ಸ್ ಹಾರಿಸಿದವ ಪ್ರಾಮಾಣಿಕನಿರಬೇಕು. ಈ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿಯೂ ಇಂಥ ಪ್ರಾಮಾಣಿಕರಿದ್ದಾರೆಂದೇ ವಾರದಲ್ಲಿ ನಾಲ್ಕಾರು ದಿನಗಳಾದರೂ ವಿದ್ಯುತ್ ದೀಪಗಳು ಉರಿಯುತ್ತವೆ! ಒಂದೆರಡು ದಿನಗಳಾದ ನಂತರ ನನ್ನ ಕೋಣೆಯಲ್ಲಿ ಅಂಚೆಯವ ಚೆಲ್ಲಿದ್ದ ಲಕೋಟೆಯೊಂದು ಬಿದ್ದಿರುತ್ತದೆ. ಸಂಜೆ ಮರಳಿದಾಗ ಅದನ್ನು ಹರಿದು ನೋಡುತ್ತೇನೆ. ಯಾವ ವಿಷಯದ ಕಾಗದವೂ ಇಲ್ಲ. ಏನೂ ಇಲ್ಲ. ನನ್ನ ರೈಲು ಪಾಸು ಮತ್ತು ಒಂದೆರಡು ಮಹತ್ವವಲ್ಲದ ರಸೀತಿಗಳು. ನನ್ನ ಪತ್ನಿಯ ಟೈಪ್ ಮಾಡಿದ ಹಳೆಯ ಚೀಟಿ ಇಂತಿಷ್ಟಿದ್ದವು" (ಸೀಮೆಗಳು. ಪುಟ ೩೭). ಹೀಗೆ ಉದ್ದಕ್ಕೂ ವರ್ತಮಾನ ಕಾಲದಲ್ಲಿಯೇ ಕಥೆ ಮುಂದುವರಿಯುತ್ತದೆ. ಈ ರೀತಿಯ ಜಾಣ್ಮೆ. ಬರವಣಿಗೆಯ ತಂತ್ರ ಬೆಳಗಲಿಯವರ ವೈಶಿಷ್ಟವೆಂದರೂ ತಪ್ಪಾಗಲಾರದು. ಒಂದು ಗಂಡು. ಎರಡು ಹೆಣ್ಣುಗಳ ನಡುವಿನ ಸಂಬಂಧದ 'ಸೀಮೆ'ಯನ್ನು ಗುರುತಿಸುವ ಪ್ರಸ್ತುತ ಕಾದಂಬರಿಯ 'ತಂತ್ರ' ತುಂಬ ಆಪ್ಯಾಯಮಾನವಾಗಿದೆ.

**ಸಂಕೇತ ಮತ್ತು ಪ್ರತೀಕ :**

ಇಂಗ್ಲೀಷಿನ 'Symbol' ರೂಪದ ಸಂವಾದಿ ಪದವೇ ಸಂಕೇತ. "ಸಂಕೇತವು ವಸ್ತುವಿನ ಅನುಪಸ್ಥಿತಿಯಲ್ಲಿ ವಸ್ತುವನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಸಂಕೇತಕ್ಕೂ ವಸ್ತುವಿಗೂ ನೇರವಾದ ಸಂಬಂಧವೇ ಇರುತ್ತದೆ. ಮೋಡವು ಮಳೆಯ ಸಂಕೇತ"[೧೩] ಅಂದರೆ. ವ್ಯಾಪಕವಾದ ಅರ್ಥದಲ್ಲಿ ಗ್ರಹಿಸುವುದಾದರೆ. 'ಒಂದು ಪದಾರ್ಥವನ್ನು ಒಂದು ಗುಣವನ್ನು ಅಥವಾ ಒಂದು ಸಂಗತಿಯನ್ನು ಜ್ಞಾಪಕಕ್ಕೆ ತರುವ ಅದರ ಪ್ರತಿನಿಧಿರೂಪವಾದ ಚಿಹ್ನೆ"[೧೪]ಯೇ ಸಂಕೇತವೆನಿಸುತ್ತದೆ.

" Symbol is a meaning bearing device. It's barest definition is, something, the stands for or represents something else "[೧೫] ಎಂದೂ 'ಸಂಕೇತ'ವನ್ನು ವ್ಯಾಖ್ಯಾನಿಸಿದ್ದುಂಟು. ಇಂಥ ಸಂಕೇತಗಳು ಸಾರ್ವತ್ರಿಕವೂ. ಸಾರ್ವಜನಿಕವೂ ಆಗಿದ್ದುಂಟು. ಉದಾಹರಣೆಗಾಗಿ ರಾಷ್ಟ್ರಧ್ವಜ. ಶಿಲುಬೆ, ಕೆಂಪುದೀಪ. ಹಸಿರು ಬಣ್ಣ. ಮುಂತಾದವುಗಳು. ಸಂಕೇತದಲ್ಲಿ ಸಾಮಾನ್ಯವಾಗಿ ಎರಡು ವಿಧಗಳನ್ನು ಗುರುತಿಸುವುದುಂಟು :

ಒಂದು ವೈಯಕ್ತಿಕ ಸಂಕೇತ. ಇದರಲ್ಲಿ ವ್ಯಷ್ಟಿ ಪ್ರಜ್ಞೆ ಕಾಣುತ್ತದೆ. ಉದಾಹರಣೆಗಾಗಿ ಲಗ್ನಪತ್ರಿಕೆಗಳಿಗೆ 'ಅರಿಷಿಣ-ಕುಂಕುಮ' ಹಚ್ಚಿದ್ದು. ಪೂಜಿಸಿ ಅವುಗಳನ್ನು ಬಂಧು-ಮಿತ್ರ-ಆಪ್ತರಿಗೆ ಕಳಿಸಿಕೊಡುವುದು. ಎರಡನೆಯದು. ಸಾರ್ವತ್ರಿಕ ಸಂಕೇತ. ಮೋಡ ಮಳೆಯ ಸಂಕೆತ. ಕೆಲವು ಸಲ ವ್ಯಕ್ತಿಗತ ಸಂಕೇತವು ಒಂದು

---

೧೩. ಎಸ್. ಎಲ್. ಭೈರಪ್ಪ : ಸಾಹಿತ್ಯ ಮತ್ತು ಪ್ರತೀಕ. ಪುಟ ೯

೧೪. ಓ. ಎಲ್. ನಾಗಭೂಷಣ : ವಿಮರ್ಶೆಯ ಪರಿಭಾಷೆ. ಪುಟ ೩೫೬

೧೫. Robie Macauley and George Lanning : Technique in fiction, Page 194

ಸಮುದಾಯದ ಪ್ರತಿನಿಧಿಯಾಗಿ ಬಂದಾಗ ಅದೂ ಕೂಡ ಸಾರ್ವತ್ರಿಕ ನೆಲೆಯನ್ನು ಪಡೆಯುತ್ತದೆ. ಈ ದೃಷ್ಟಿಯಿಂದ ಅವಲೋಕಿಸಿದರೆ. 'ಸಂಕೇತ'ಗಳು ಹೆಚ್ಚಾಗಿ. ಅಷ್ಟೇ ಯಾಕೆ ಅವು ಕೇವಲ ಸಾರ್ವಜನಿಕ ಮಾತ್ರವಾಗಿರುತ್ತವೆಯೆಂದೆನಿಸುತ್ತದೆ.

'ಯಾವುದೇ ಒಂದು ವಸ್ತುವನ್ನು ಅದರ ಅನುಪಸ್ಥಿತಿಯಲ್ಲಿ ಸೂಚಿಸುವುದೇ ಸಂಕೇತವೆಂಬುದು ಸಂಕೇತದ ಸಾಮಾನ್ಯವಾದ ಗ್ರಹಿಕೆ. ಹೀಗೆ ಸೂಚಿಸಿದ ನಂತರ 'ಸೂಚಿತವಸ್ತು' ಮನಸ್ಸಿನಿಂದ ದೂರವಾಗಿ ಕೇವಲ ಸಂಕೇತ ಮಾತ್ರ ಶಾಶ್ವತವಾಗಿ ನೆನಪಿನಲ್ಲಿ ಉಳಿಯುತ್ತದೆ. ಇದಿಷ್ಟು ಹಿನ್ನೆಲೆಯಲ್ಲಿ ಬೆಳಗಲಿಯವರ ಕಾದಂಬರಿಗಳಲ್ಲಿ ಅಲ್ಲಲ್ಲಿ ಸಂದರ್ಭೋಚಿತವಾಗಿ ಬಳಸಲ್ಪಟ್ಟ ಸಂಕೇತಗಳ ವಿಶ್ಲೇಷಣೆಯೇ ಪ್ರಸ್ತುತ ಸಂದರ್ಭದ ಧ್ಯೇಯ :

"ಪಾರೀ. ಕೇರ್‍ಯಾಗ ಇಬ್ರು ಯಾರೋ. ಲಗ್ನಾ ಆಗಾಕ ತಯಾರ ಆಗ್ಯಾರಂತ್ಲಾ....!" ಕೆಸರು ತುಂಬಿದ ಜಾಗೆಯಲ್ಲಿ ಕಲ್ಲು ಒತ್ತಿ ಜೋಡಿಸುತ್ತ ಬಸಣ್ಣೆ ಕೇಳಿದ್ದ. ಆತನಿಗೂ ತಿಳಿದುಕೊಳ್ಳುವ ಕುತೂಹಲ. (ದೇವದಾಸಿ. ಪುಟ ೧೨೩). ಬಸಣ್ಣೆ-ಪಾರ್ವತಿಯರಿಬ್ಬರೂ ಚೆನ್ನಪ್ಪಗೌಡರ ತೋಟದ ಆಳುಗಳು. ಪಾರ್ವತಿ ವಿಧವೆಯಾದರೂ. ಬಸಣ್ಣೆ ಅವಳನ್ನು ಮೆಚ್ಚಿಕೊಂಡಿದ್ದಾನೆ. ಮದುವೆಯಾಗುವ ಬಯಕೆ. ಆದರೆ ಬಾಯಿಬಿಟ್ಟು ಕೇಳಲು ಸಂಕೋಚ. ಪಾರ್ವತಿ ಕೂಡ ಬಸಣ್ಣೆಯ ಮೇಲೆ ಮನಸ್ಸಿಟ್ಟವಳು. ಹೀಗೆ ಪರಸ್ಪರರು ಒಪ್ಪಿಕೊಂಡದ್ದು, ಕೆಸರಲ್ಲಿ ಚೀಪಕಲ್ಲೊಂದನ್ನು ತುರುಕಿದಾಗ ಅದು ಗಟ್ಟಿಯಾಗಿ ಕೂತಕೊಂಡ ಸ್ಥಿತಿ. ಸನ್ನಿವೇಶ ಅವರಿಬ್ಬರ ಸಂಬಂಧ 'ಪಕ್ಕಾ' ಆಯಿತೆಂಬುದಕ್ಕೆ ಸಂಕೇತವಾಗಿ ನಿಂತಿದೆ.

"ಕೆಸರಲ್ಲಿ ಹುಟ್ಟಿದ ಕಮಲವನ್ನು ದೇವರ ತಲೆಗೆ ಏರಿಸಿದಂತೆ." ಪೋಲಿಸ ಅಧಿಕಾರಿ ಮಹೇಶ ಪಾಟೀಲ. ಪರಿಸ್ಥಿತಿಗಳ ಬಿರುಗಾಳಿಗೆ ಸಿಕ್ಕು ಜರ್ಜರಿತಳಾಗಿದ್ದು. ಅದೇ ಕೊಳಚೆಯಲ್ಲಿ ಮುಳುಗಿದಂತಿದ್ದ ಗುಲಾಬಿಯನ್ನು ಮೇಲೆತ್ತಿ ಮಗಳಂತೆ ಸ್ವೀಕರಿಸಿದ್ದ" (ದೇವದಾಸಿ. ಪುಟ ೪೭೨). ಗುಲಾಬಿಯ ಪೂರ್ವಚರಿತ್ರೆಯ ಪರಿಚಯವಿದ್ದರೂ. ಸ್ವೀಕರಿಸುವ ಪೋಲಿಸ ಅಧಿಕಾರಿಯ ನಿರ್ಧಾರ. ಅಂದಿನ ಸನ್ನಿವೇಶದಲ್ಲಿ ಕಮಲ ಕೆಸರಲ್ಲಿ ಹುಟ್ಟಿದರೂ ದೇವರ ಪೂಜೆಗೆ ಅದು ಸಲ್ಲುವಂತೆ 'ಗುಲಾಬಿ' ಪಾಟೀಲರಿಗೆ ಸಂದಿದ್ದಳು. ಬೆಳಗಲಿಯವರು 'ಸಂಕೇತ'ಗಳನ್ನು ಮನೋಜ್ಞವಾಗಿ ಬಳಸಬಲ್ಲರೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

"ಆ ಮನೆಗೆ. ಒಳಗೆ ಚಿಲಕ ಹಾಕುವಂತಿರಲಿಲ್ಲ. ಹೊರಗೂ ಹಾಕುವಂತಿರಲಿಲ್ಲ. ನೀಲ್ಯಾ ಚಿನ್ನಿಯರ ಹದಗೆಟ್ಟ ದಾಂಪತ್ಯದಂತೇ ಆ ಮನೆಯ ಬಾಗಿಲುಗಳ ಸ್ಥಿತಿಯಾಗಿತ್ತು" (ಹಡೆದವರು. ಪುಟ ೧೦೩). 'ತಲೆಬಾಗಿಲು' ಮನೆತನದ ಗೌರವ-ಭವಿಷ್ಯದ ಸಂಕೇತ. ಬಾಗಿಲು ಭದ್ರವಾಗಿದ್ದರೆ ಬದುಕು ಭದ್ರವಾಗಿರಲು ಸಾಧ್ಯ. ಬಾಗಿಲಿನ ಅಭದ್ರತೆಯಲ್ಲಿ ಚಿನ್ನಿ-ನೀಲನ ಬದುಕಿನ ಅಭದ್ರತೆಯನ್ನು ಚೆನ್ನಾಗಿ ಸಂಕೇತಿಸಲಾಗಿದೆ. ಬಾಗಿಲನ್ನು ಪೂಜಿಸುವುದು. ಬಾಗಿಲು ಒಂದು ಸಮುದಾಯದ ಗೌರವತ್ವದ ಸಂಕೇತವಾಗಿರುವುದು ಕಂಡುಬರುತ್ತದೆ. ಪ್ರಸ್ತುತ ಸಂದರ್ಭಕ್ಕೆ ಕನ್ನಡಿಹಿಡಿದಂಥ ಸಂಕೇತವನ್ನೇ ಬೆಳಗಲಿಯವರು ನೀಡಿದ್ದಾರೆ. "ಸುಂದ್ರೀ

ಕಾಲಾನ ಮುಳ್ಳ ಕಿತ್ತ ಹೋತು" (ಹಡೆದವರು. ಪುಟ ೪). ಕಾಲುನಡಿಗೆ. ಬದುಕಿನ ನಡಿಗೆಯನ್ನು ಸಂಕೇತಿಸುವಂತಹದು. ಆ ಕಾಲಲ್ಲಿ ಮುಳ್ಳು ಮುರಿದಾಗ ಬದುಕಿನ ಮುನ್ನಡೆಗೆ ಅಡತಡೆಯಾದಂತೆ. ಅಂಥ ಅಡತಡೆಯನ್ನು ನಿವಾರಿಸಿಕೊಂಡ ಗೌಡರು ತನ್ನ ಸುಂದ್ರಿಗೆ ಸಂತೋಷಮಯವಾಗಿಯೇ ಹೇಳುವ ಈ ಮಾತಿನಲ್ಲಿ ಇನ್ನು ಅಡತಡೆಯಿಲ್ಲ ನಮ್ಮ ಚೆಲ್ಲಾಟಕ್ಕೆ. ಅದು ಸರಾಗವಾಗಿ ನಡೆಯಲಿ. ಎಂಬುದನ್ನೇ ಸಾಂದರ್ಭಿಕವಾಗಿ ಸಂಕೇತಿಸುತ್ತದೆ.

ಬೆಳಗಲಿಯವರು 'ಹಡೆದವರು'ದಲ್ಲಿ ಚಿತ್ರಿಸಿದ ಹಾಲಿಯ ನಿಕೃಷ್ಟ ಬದುಕಿನ ಚಿತ್ರಣವೇ. ಕುಟುಂಬವೊಂದರ ಹದಗೆಟ್ಟ ದಾಂಪತ್ಯವನ್ನು ಸಂಕೇತಿಸುತ್ತದೆ. ಹೀಗಾಗಿ ಕಾದಂಬರಿಯ ಹೆಸರೇ ಒಂದು ಸಂಕೇತದಂತೆ ಗೋಚರವಾಗುತ್ತದೆ.

'ಸೀಮೆಗಳು' ಎಂಬ ಕಾದಂಬರಿಯ ಹೆಸರೇ ಸಾಂಕೇತಿಕ. ವೈಯಕ್ತಿಕ. ಕೌಟುಂಬಿಕ. ಸಾಮಾಜಿಕ. ಧಾರ್ಮಿಕ ಮೊದಲಾದ ಸೀಮೆಗಳನ್ನು ಗೆರೆಕೊರೆದು ಹೇಳುವ ಈ ಕಾದಂಬರಿಯಲ್ಲಿ ಬೆಳಗಲಿಯವರು ಔಚಿತ್ಯಪೂರ್ಣವಾದ ಸಂಕೇತಗಳನ್ನು ಬಳಸಿರುವುದು ಕಂಡಬರುತ್ತದೆ : "ನಮ್ಮಂಥವರ ಜತೆ-ಬರದೆ ಗಟ್ಟಿ ಅಂಗಿಯವರ ಜತೆ ಹೋಗುತ್ತಿಯಲ್ಲೆ ಹೆಣ್ಣೆ" (ಸೀಮೆಗಳು. ಪುಟ ೧೨೩) ಇಲ್ಲಿ 'ಗಟ್ಟಿ ಅಂಗಿ' ಶ್ರೀಮಂತಿಕೆಯನ್ನು ಸಂಕೇತಿಸುವ ಪದವಾಗಿದೆ. "ಹೆಣ್ಣು ಒಮ್ಮೆ ಶೀಲ ಕಳೆದುಕೊಂಡರೆ. ಸಮಾಜದಲ್ಲಿ ಆಕೆಗೆ "ನಾಯಿಮುಟ್ಟಿದ ಗಡಿಗಿ". "ಒಡೆದ ಮಡಕೆ" ಎಂದೇನೋ ಹೇಳಿ. ತಪ್ಪಿದ ಆಕೆಯ ಹೆಜ್ಜೆಯನ್ನು ತಿದ್ದಲು ಪ್ರಯತ್ನಿಸದೆ. ಚುಚ್ಚಿ ಚುಚ್ಚಿ ಮತ್ತೆ ಮತ್ತೆ ಆಕೆಯನ್ನು ನರಕಕ್ಕೆ ನೂಕಲು ಪ್ರಯತ್ನಿಸುತ್ತಾರೆ" (ಸೀಮೆಗಳು. ಪುಟ ೧೪೧). ಭಾರತೀಯ ಪರಂಪರೆಯಲ್ಲಿ 'ಶೀಲ'ಕ್ಕೆ ಮಹತ್ವವಿದೆಯೆಂಬುದನ್ನು ಹೇಳುವ ಇಲ್ಲಿ 'ನಾಯಿಮುಟ್ಟಿದ ಗಡಿಗೆ'. 'ಎಂಜಲು' ಎಂಬುದನ್ನು ಸಂಕೇತಿಸುತ್ತದೆ. ಶೀಲ ಕಳೆದುಕೊಂಡ ಹೆಣ್ಣು ಭಾರತೀಯ ಸಮಾಜದಲ್ಲಿ ಜೀವಂತ ಹೆಣದಂತೆ ಬದುಕಬೇಕಾಗುತ್ತದೆಯೆಂಬುದನ್ನು ಈ ಮಾತುಗಳು ಚೆನ್ನಾಗಿ ಸಂಕೇತಿಸಿವೆ. 'ನೀವಿಲ್ದೆ ಮೀತಾ ತಾಯಿ ಬದುಕೂದಿಲ್ಲಾ" ತನ್ನ ಪ್ರಾಮಾಣಿಕವಾದ ತೀರ್ಪು ಹೇಳುತ್ತಲಿದ್ದ ಯಮುನಾಳ ಕಣ್ಣಂಚಿನಲ್ಲಿ ಒಂದು ಮುತ್ತಿನ ಹನಿ ತೋರುತ್ತದೆ. ನನ್ನಲ್ಲಿಯ ದೃಷ್ಟಿಯನ್ನು ಕಿತ್ತಿರುವುದಿಲ್ಲ. ನೀವೇ ಮೀತಾ ತಾಯನ್ನ ಬದುಕಿಸ್ಬೇಕು. ಎಂದು ಕರುಣೆಯಿಂದ ಯಮುನಾ ಪ್ರಾರ್ಥಿಸಿಕೊಳ್ಳುತ್ತಾಳೆ. ಆಗ "ಅಣುಶಕ್ತಿ ಉಪನಗರದ ಸೀಮೆ ನನ್ನ ಕಣ್ಣಿಗೆ ಮಂಜುಮಂಜಾಗಿ ಕಾಣುತ್ತದೆ" (ಸೀಮೆಗಳು. ಪುಟ ೧೯೦). ಎಂಬ ಸಾಂಕೇತಿಕ ಹೇಳಿಕೆಯೊಂದಿಗೇ 'ಸೀಮೆಗಳು' ಕಾದಂಬರಿ ಅಂತ್ಯವಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಅಣುಶಕ್ತಿ ಉಪನಗರ ಅರುಣಳನ್ನು ಸಂಕೇತಿಸಿದರೆ. 'ಮಂಜುಮಂಜಾಗಿ' ಎಂಬುದು ಅವಳನ್ನು ಮರೆತುಬಿಡುವ ರೀತಿಯನ್ನು. ಮೀತಾಳ ಬದುಕನ್ನೇ ಉದ್ಧರಿಸುವ ಸೂಚನೆಯನ್ನು ನೀಡುತ್ತವೆ. 'ಮಂಜಾಗಿ ಕಾಣುವುದು' ಮರೆವನ್ನು ಪ್ರತಿನಿಧಿಸುವ ಸಾರ್ವತ್ರಿಕ ಸಂಕೇತವಾಗಿದೆ.

" ಮಹಿಳೆಯರ ಸೀರೆಯ ಬಣ್ಣ ಕೆಂಪು. ಪುರುಷರ ರುಮಾಲಿನ ಬಣ್ಣ ಕೆಂಪು. ಪಲಾಶ್ ಮರಗಳು ಕೆಂಪು. ಕೊಲೆ-ಸುಲಿಗೆಯ ರಕ್ತ ಕೆಂಪು. ಎಲ್ಲವೂ ಕೆಂಪು. ಅದರಂತೆ ಆಗ ಸೂರ್ಯನ ಹೊಂಬಿಸಿಲು ಕೂಡ ರಕ್ತರಂಜಿತವಾಗಿಯೇ ಇದ್ದಂತಿತ್ತು" (ಚಂಬಲ್ ಕಣಿವೆಯಲ್ಲಿ. ಪುಟ ೨೧). 'ಕೆಂಪುಬಣ್ಣ' ಎಚ್ಚರಿಕೆಯ. ಅಪಾಯದ. ಕ್ರಾಂತಿಯ. ಹೋರಾಟದ. ಸಂಕೇತ. ಉತ್ತರ ಭಾರತದ ಜನರ ಬದುಕಿನ ರೀತಿಯನ್ನು ಹೇಳುತ್ತ ಹೋದ ಲೇಖಕರು. ಸಾಂದರ್ಭಿಕವಾಗಿ ಆ ಪರಿಸರವನ್ನು ಔಚಿತ್ಯಪೂರ್ಣವಾಗಿ ಸಂಕೇತಿಸಿದ್ದಾರೆ. " ಮಗಳ ಮದುವೆ ಮಾಡಿ ಶ್ರೀಮಂತ ಬಡವನಾದ. ಬಡವ ಹಾಳಾಗಿ ಹೋದ" (ಚಂಬಲ್ ಕಣಿವೆಯಲ್ಲಿ. ಪುಟ ೭೦). ಮದುವೆಯೆಂಬುದು ದುಂದುವೆಚ್ಚದ ಆಚರಣೆಯೆಂಬುದನ್ನು ಈ ಮಾತುಗಳು ಸಂಕೇತಿಸಿವೆ. " ಭಾಯಿಜಿ. ದೇವರು ನಿಮಗೆ ದೇವರು ಒಳ್ಳೆಯದನ್ನು ಮಾಡಲಿ. ಊರಿಗೆ ದೊಡ್ಡ ಉಪಕಾರ ಮಾಡಿದಿರಿ. ಒಬ್ಬ ಕೌರವ ಸತ್ತಂತೆ ಆಯಿತು" (ಚಂಬಲ್ ಕಣಿವೆಯಲ್ಲಿ. ಪುಟ ೧೮೦). 'ಕೌರವ' ದುಷ್ಟರ ಸಾಂಕೇತಿಕ ಹೆಸರು. ಮಹಾಭಾರತದ ಕೌರವರು ಪ್ರಸ್ತುತ ಸಮಾಜದಲ್ಲಿ ದುಷ್ಟತನದ ಸಂಕೇತವಾಗಿ ಉಳಿದಿದ್ದಾರೆ. ಅವರ ಹೆಸರುಗಳು ದುಷ್ಟತನ ಸಂಕೇತಗಳಾಗಿ ಬಳಕೆಯಾಗುತ್ತಿರುವುದಕ್ಕೆ ಇದೊಂದು ಉತ್ತಮ ಸಾಕ್ಷಿ. " ಜನಸಾಮಾನ್ಯರ. ದೀನ ದಲಿತರ ನ್ಯಾಯಕ್ಕೆ ನೆಲೆ-ಬೆಲೆ ಇಲ್ಲದಂತೆ ಇಂದು ನಮ್ಮೆಲ್ಲ ವ್ಯವಸ್ಥೆಗಳು ಕಣ್ಣಿಗೆ ಪಟ್ಟಿಕಟ್ಟಿಕೊಂಡ ಗಾಂಧಾರಿಯಾಗಿವೆ" (ಚಂಬಲ್ ಕಣಿವೆಯಲ್ಲಿ; ಲೇಖಕರ ಅರಿಕೆ. ಪುಟ VIII) 'ಗಾಂಧಾರಿ' ಎಂಬುದು ಅರ್ಥಪೂರ್ಣವಾದ ಸಂಕೇತವಾಗಿ ಲೇಖಕರಿಂದ ಬಳಸಲ್ಪಟ್ಟಿದೆ.

'ಜೋಗಿಮರಡಿ'ಯ ಕೊನೆಯಲ್ಲಿ ಕಾಗಿಮೋತಿ ಮಾಸ್ತರ ಸೃಷ್ಟಿಸಿದ ಅನಾಹುತ ಹಾಗೂ ಮಾಸ್ತರ ವನಭೋಜನಕ್ಕೆ ಕಾಡಪ್ಪ ಕಾಕಾನ ಮೊಮ್ಮಗಳು ನಿರ್ಮಲಾಳನ್ನು ಇತರ ಮಕ್ಕಳೊಂದಿಗೆ ಕರೆದುಕೊಂಡು ಹೋಗಿ ಅವಳ ಮೇಲೆ ಅತ್ಯಾಚಾರವೆಸಗಿ. ಇಡೀ ಊರು ಛಿದ್ರಗೊಂಡು ದುಷ್ಟಶಕ್ತಿಗಳಿಗೆ ತಾತ್ಕಾಲಿಕ ಜಯ ಸಿಕ್ಕಿದ್ದನ್ನು ಸಾಂಕೇತಿಕವಾಗಿ ಹೇಳಲಾಗಿದೆ. ಇದು ಪ್ರಸ್ತುತ ದುಷ್ಟಕೂಟದ ಅಟ್ಟಹಾಸವನ್ನು ಸಾಂಕೇತಿಸುವ ಸನ್ನಿವೇಶ.

" ತನ್ನ ಕೋಣೆಯಲ್ಲಿ ಕಸ್ತೂರಿಯನ್ನು ತನಗೆ ತಿಳಿದಂತೆ ಅಲಂಕಾರಿಸಿದ ರತ್ನಾ. ಆಕೆಯನ್ನು ಇರಪವ್ವಳ ಜತೆ ಹೊರಗೆ ಕಳಿಸಿ ತಾನು ಹಿಂದೆ ನಿಂತಿದ್ದಳು" (ಕಾತ್ರಾಳ ರಶ್ಮಿಯ ಚಾದಂಗಡಿ. ಪುಟ ೨೨೦). ಪ್ರಸ್ತುತ ಪ್ರಸಂಗದಲ್ಲಿ 'ವಿಧವೆಯಾದವಳು ಮಂಗಲಕಾರ್ಯಗಳಲ್ಲಿ ಭಾಗವಹಿಸುವುದು ಅಶುಭವೆಂಬುದನ್ನು ಸಂಕೇತಿಸಿ ಹೇಳಿದೆ. ವಿಧವೆಯಾದ ರತ್ನಾ ಅಲಂಕರಿಸಿದಷ್ಟಕ್ಕೆ ತಾನು ಹಿಂದೆ ನಿಂತು ಮುತ್ತೈದೆಯಾದ ಇರಪವ್ವಳ ಜತೆಗೆ 'ವಧುಪರೀಕ್ಷೆ'ಗೆ ಕಳಿಸಿದ್ದು ನಮ್ಮ ಸಂಪ್ರದಾಯದ ರೀತಿ-ನೀತಿಗಳನ್ನು ತನ್ನೊಳಗೆ ಸಂಕೇತಿಸಿ ಹೇಳಿದೆ. " ಚುನಾವಣೆ ಬಂದಾಗ ಜನಸಾಮಾನ್ಯರು.... ತಮ್ಮ ನಿಜವಾದ ಹಿತಚಿಂತಕರು ಯಾರೆಂದು ಅರಿದೆ. ಭಾಷಣಗಳ ಆವೇಶಕ್ಕೆ ಬಲಿಬಿದ್ದು. ದಲ್ಲಾಳಿಗಳ ಮಾತಿಗೆ ಮೋಸಹೋಗಿ ತಮ್ಮ ಮತಗಳನ್ನು ಮಾರಿಕೊಳ್ಳುತ್ತಾರೆ. 'ಪವಿತ್ರ ಮತ' ಎಂಬ ಘೋಷಣೆ ಕೇಳಿದಾಗ 'ಸೂಳೆ ಸೀತೆ'ಯ ಪಾತ್ರ ವಹಿಸಿದಂತೆ ಕಾಣುತ್ತದೆ" (ಮೌನಕ್ರಾಂತಿ. ಪುಟ ೨೦). ತುಂಬ ಅರ್ಥಪೂರ್ಣ ಅಷ್ಟೇ ಸಮಂಜಸವಾದ ಸಂಕೇತವನ್ನೇ ಬೆಳಗಲಿಯವರು ಪ್ರಸ್ತುತ ಸಂದರ್ಭದಲ್ಲಿ

ಬಳಸಿ ಮತದ ಪಾವಿತ್ರ್ಯವೆಷ್ಟಿದೆಯೆಂಬುದನ್ನು ಚಿತ್ರಿಸಿದ್ದಾರೆ. ಅಷ್ಟೇ ಅಲ್ಲ ಪ್ರಸ್ತುತ ಹದಗೆಟ್ಟ ' ಶತಮಾನದ ರಾಜಕೀಯ 'ಕ್ಕೆ ಹಿಡಿದ ಸತ್ಯ ಸಂಕೇತವಾದಂತಿದೆ.

ಬೆಳಗಲಿಯವರ ಕಾದಂಬರಿಗಳಲ್ಲಿ ' ಸಂಕೇತಗಳು ' ಬಳಕೆಯಾದಂತೆಯೇ ಅಲ್ಲಲ್ಲಿ ಪ್ರಾಸಂಗಿಕವಾಗಿ ' ಪ್ರತೀಕ 'ಗಳೂ ಬಳಕೆಯಾದದ್ದುಂಟು. ಇಂಗ್ಲೀಷಿನ ' Image ' ಎಂಬುದಕ್ಕೆ ' ಪ್ರತೀಕ ' ಕನ್ನಡದ ಸಂವಾದಿಪದ. ' ಪ್ರತೀಕ ' ವೆಂಬುದು ಕನ್ನಡ ವಿಮರ್ಶೆಯ ಪರಿಭಾಷೆಯಲ್ಲಿ ' ಪ್ರತಿಮೆ 'ಯೆಂದಾಗಿದೆ. ಇವೆರಡೂ ಒಂದೇ ಮಗ್ಗುಲದ ಅರ್ಥಸಾಮಿಪ್ಯದ ಅಳತೆಗೋಲುಗಳಷ್ಟೆ. ಕುವೆಂಪು ಅವರ ಪ್ರಕಾರ ಪ್ರತಿಮೆಯ ಯಾವ ಒಬ್ಬ ವ್ಯಕ್ತಿಯ ಮನಸ್ಸಿನ ರಚನೆಯಲ್ಲಿ ಅದು. " ಒಂದು ಜನಾಂಗದ ಸಮಷ್ಟಿ ಮನಸ್ಸಿನ ಸಾಮೂಹಿಕ ಸೃಜನೆಯಾಗುತ್ತದೆ. ಮತ್ತು ಕೆಲವು ಬಾರಿ ಇಡೀ ಕಾವ್ಯವೇ ಮಹತ್ತಾದ ದರ್ಶನ ಧ್ವನಿಗೆ ಬೃಹತ್ ಪ್ರತಿಮೆ "ಯಾಗಿ ಹೊರಹೊಮ್ಮಬಹುದು. ಕುವೆಂಪು ಅವರು ಹೇಳಿದ ' ಪ್ರತಿಮೆ 'ಯನ್ನೇ ' ಪ್ರತೀಕ 'ವೆಂದು ಕರೆದ ಭೈರಪ್ಪನವರು ಅದನ್ನು. " ನಿರ್ದೇಶ್ಯವು ಆಕಾರವನ್ನು ತಾಳಿ ಪ್ರಕಟವಾಗಿರುವ ಸ್ವರೂಪಕ್ಕೆ ಪ್ರತಿಕವೆಂದು ಹೆಸರು " ೧೬ ಎನ್ನುತ್ತಾರೆ. ಈ "…. ಪ್ರತೀಕವು, ಕಲ್ಪನೆ. ಭಾವನೆ ಮತ್ತು ಸಂವೇದನೆಗಳೇ ಜೀವಾಳವಾಗಿರುವ ಕಲೆಯ ಮತ್ತು ಮತಧರ್ಮಗಳ ಹಾಸುಹೊಕ್ಕಾಗಿ ಬೆಳೆಯುತ್ತದೆ. ಬರಿಯ ವಿಚಾರವೇ ಒಡಿಯದೆ ಮತ. ಧರ್ಮಗಳ ಮತ್ತು ಕಲೆಗಳ ಮೂಲ ಸೂತ್ರವನ್ನು ಒಳಗೊಳ್ಳುವ ತತ್ವಶಾಸ್ತ್ರದಲ್ಲಿ ಸಹ ಪ್ರತೀಕವು ವಿಕಸಿಸುತ್ತದೆ " ೧೭ ಹೀಗೆ ವಿಕಸಿತ ಪ್ರತೀಕವನ್ನು. " ಅರ್ಥಸ್ಪಷ್ಟತೆಯ ದೃಷ್ಟಿಯಿಂದ ನಾವು ಅಮೂರ್ತವಾದ ಮೌಲ್ಯವು ಪ್ರಕಟವಾಗುವ ಮೂರ್ತ ಸ್ವರೂಪವನ್ನು ಮಾತ್ರ ಪ್ರತೀಕವೆಂದು ಕರೆಯಬೇಕು " ೧೮ ಎನ್ನುತ್ತಾರೆ. ಒಂದೇ ಸ್ತರದ ಶಬ್ದಗಳಾದ ' ಪ್ರತೀಕ '. ' ಪ್ರತಿಮೆ '. ಗಳಲ್ಲಿನ ವ್ಯತ್ಯಾಸದ ತೊಡಕುಗಳನ್ನು ತೊಡೆದು ಹಾಕಿ. ' ಪ್ರತೀಕ 'ವೆಂಬುದನ್ನು ಅಧ್ಯಯನ ದೃಷ್ಟಿಯಿಂದ ಸ್ವೀಕರಿಸುತ್ತ. ಅದು ಬೆಳಗಲಿಯವರ ಕಾದಂಬರಿಗಳಲ್ಲಿ ಬಳಕೆಯಾಗಿರುವುದಕ್ಕೆ ಒಂದೆರಡು ಉದಾಹರಣೆಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲು ಪ್ರಯತ್ನಿಸಬಹುದು :

ಗದ್ಯಕ್ಕೆ ಗಂಡು. ಪದ್ಯಕ್ಕೆ ಹೆಣ್ಣು ಪ್ರತೀಕವಾಗುವುದು ಸಾಂಪ್ರಾದಾಯಿಕ ಬರವಣಿಗೆ. ಅಂದರೆ ಗಡಸಿಗೆ ಗಂಡು. ಕೋಮಲತೆಗೆ ಹೆಣ್ಣು ಎಂಬುದು ಸಾಂಪ್ರಾದಾಯಿಕ ಪ್ರತೀಕ. ಬುದ್ಧಿ-ಭಾವ. ದೇಹ-ಮನಸ್ಸು. ಪ್ರಕೃತಿ-ಪುರುಷ. ಗದ್ಯ-ಪದ್ಯವೆಂಬೆರಡು ಭೇದಗಳು ಅಳಿದು ಪುರುಷ ರೌದ್ರತೆ ಮತ್ತು ಸ್ತ್ರೀಯ ಕೋಮಲತೆಗಳ ನಡುವೆ ಕಲೆಗೆ ಶಾಂತಿ ದೊರಕುತ್ತದೆ. ' ದೇವದಾಸಿ 'ಯಲ್ಲಿನ ಉದಾಹರಣೆಯೊಂದನ್ನು ನೋಡಬಹುದು : ದೇವಿ ಕೊನೆಯ ಬಸ್ಸು ತಪ್ಪಿ ಹಾರೂಗೇರಿ ಕ್ರಾಸಿನಲ್ಲಿ ವಿಠ್ಠಲನ ಗ್ಯಾರೇಜಿನಲ್ಲಿ ಆಶ್ರಯ ಪಡೆಯುತ್ತಾಳೆ. ಪ್ರಕೃತಿ-ಪುರುಷರು ಒಂದಾದಂತೆ ಪರಸ್ಪರರಲ್ಲಿ ಅನುರಾಗ ಕೂನರಿ ಒಂದಾಗುತ್ತಾರೆ. ವಿಠ್ಠಲನ ಹೆಂಡತಿ ಇದಕ್ಕೆ

೧೬. ಎಸ್. ಎಲ್. ಭೈರಪ್ಪ : ಸಾಹಿತ್ಯ ಮತ್ತು ಪ್ರತೀಕ. ಪುಟ ೧೪

೧೭. ಎಸ್. ಎಲ್. ಭೈರಪ್ಪ : ಸಾಹಿತ್ಯ ಮತ್ತು ಪ್ರತೀಕ. ಪುಟ ೧೩

೧೮. ಎಸ್. ಎಲ್. ಭೈರಪ್ಪ : ಸಾಹಿತ್ಯ ಮತ್ತು ಪ್ರತೀಕ. ಪುಟ ೧೮

ಅಡ್ಡಿಪಡಿಸದೆ. ಅವರಿಬ್ಬರ ಅನುಬಂಧಕ್ಕೆ ಸಹಮತ ನೀಡುತ್ತಾಳೆ. ಜಾನಪದ ಹಾಡಿನಲ್ಲಿ ತನ್ನ ಭಾವವನ್ನು ಅಭಿವ್ಯಕ್ತಿಸುತ್ತಾ ತನ್ನ ಸಮ್ಮತಿಯನ್ನು ನೀಡಿ.

" .... ನಾ ಮುಟ್ಟಿ ಮುಡಿದ ಪರಿಮಳದಾ ಹೂವ
ಅವಳೊಂದು ಗಳಿಗಿ ಮುಡಿಯಲಿ...."

– ಎಂಬ ಜನಪದ ಗರತಿಯ ಹಿರಿದಾದ ಮನಸ್ಸಿಗೆ ಸಂಕೇತವಾದಂತೆ.

" ಗಂಡ ಪಂಡಿತರಾಯಾ, ರಂಡೀಯ ಮಾಡಿದರ
ಭಂಡ ಮಾಡುವರ ಮಗಳಿಲ್ಲ ! ಕೊರಳಾನ
ಗುಂಡು ಬೇಡಿದರ ಕೊಡತೇನ " [೧೯]

– ಎಂದು ಹೃದಯವಂತಿಕೆಗೆ ಪ್ರತೀಕವಾಗಿ ನಿಲ್ಲುತ್ತಾಳೆ.

" ಉರಿವ ಬಿಸಿಲು ಬದುಕಿನ ಕಷ್ಟಕ್ಕೆ ಸಂಕೇತವಾದಂತೆ ಹಸಿರು ಹುಲ್ಲು ನೆಮ್ಮದಿಯ ಸಂಕೇತ. ಧಗೆಯಲ್ಲಿ ನಿದ್ರೆಬಾರದ ಪ್ರೀತಿ ತೋಟದ ಬಾಳೆಪಡದ ಹುಲ್ಲುಹಾಸಿಗೆಯ ಮೇಲೆ ಪವಡಿಸಿದಾಗ ಸಿಗುವ ಸುಖ. ಅದು ಪ್ರಕೃತಿ-ಪುರುಷತ್ವದ ಪ್ರತೀಕ " (ಪ್ರೀತಿಯ ಆ ಮುಖ. ಪುಟ ೮೯). ಆಕಳು ಕರು ಆಕಳ ಹಾಲನ್ನು ಜಗ್ಗಿ-ಜಗ್ಗಿ ಕುಡಿಯುವ ನೋಟ ಪ್ರೀತಿಯ ಪ್ರತೀಕವಾಗಿದೆ. ಮಾತೃಪ್ರೇಮಕ್ಕಿಂತ ಮಿಗಿಲಾದ ವಸ್ತು ಜಗತ್ತಿನಲ್ಲಿ ಬೇರಾವುದೂ ಇಲ್ಲ. ಅಮೃತಧಾರೆ ಹರಿಸುವ ಆ ಸುಖ ತಾಯಿಯಿಂದಲೇ ಪಡೆಯುವುದು ಸಾಧ್ಯ. ಇಂಥ ಪ್ರೀತಿಗೆ ಎರವಾದ ಪ್ರೀತಿ ಹಪಹಪಿಸುವುದು ನೊಂದವರ ಪ್ರತೀಕವಾಗಿ ಕಂಡುಬರುತ್ತಾಳೆ. ಹೀಗೆ ಬೆಳಗಲಿಯವರು ತಮ್ಮ ಕಾದಂಬರಿಗಳಲ್ಲಿ ಸಮೃದ್ಧವಾದ ಸಮರ್ಥವಾದ. ಸಮಂಜಸವಾದ ಸಂಕೇತ ಮತ್ತು ಪ್ರತೀಕಗಳನ್ನು ಇತಿಮಿತಿಯರಿತು. ಹಿತಮಿತವಾಗಿ ಬಳಸಿರುವುದು ಕಂಡುಬರುತ್ತದೆ. ಹೀಗಾಗಿ ಅವರ ಕಾದಂಬರಿಗಳಿಗೆ ' ನೈಸರ್ಗಿಕ ' ಕಸುವು ಬಂದಿದೆ.

## ಸ್ಮರಣ ತಂತ್ರ ಅಥವಾ ನೆನಪುಮಾಲೆ (Reminiscence) :

" The act or process of recalling past experiences, events etc " [೨೦] ಎಂದು ' Reminiscence ' ನ್ನು ಇಂಗ್ಲೀಷ ಶಬ್ದಕೋಶದಲ್ಲಿ ವ್ಯಾಖ್ಯಾನಿಸಿದರೆ. ಕನ್ನಡ ವಿಶ್ವಕೋಶದಲ್ಲಿ. ಅದನ್ನು. " ನೆನಪು ಹಿಂದೆ ಆಗಿ ಹೋದ ಅನುಭವಗಳನ್ನು ಹಿಡಿದುಕೊಳ್ಳುವ ಮತ್ತು ವಾಪಸು ತಂದುಕೊಳ್ಳುವ ಸಾಮರ್ಥ್ಯ (ಮೆಮರಿ) ಗಮನವಿಟ್ಟು ನೋಡುವುದರ ಮೂಲಕ ಪಡೆಯುವ ದತ್ತಾಂಶಗಳನ್ನು ಪ್ರಜ್ಞೆಗೆ ಸಂಗ್ರಹಿಸಿಕೊಂಡು ಮುಂದೆ ಬೇಕಾದಾಗ ಮರಳಿ ತಂದುಕೊಂಡು ಮತ್ತೊಮ್ಮೆ ಪ್ರಜ್ಞಾವಸ್ಥೆಗೆ ಒಪ್ಪಿಸುವ ಕಾರ್ಯವೇ ನೆನಪು. ಇದರ ಗುರಿ ವ್ಯವಸ್ಥಾತ್ಮಕವಾಗಿದ್ದು

---

೧೯. ದು. ನಿಂ. ಬೆಳಗಲಿ : ದೇವದಾಸಿ. ಪುಟ ೧೩೫

೨೦. The Randam House Dictionary of English Language, Page 1116

ಒಬ್ಬ ವ್ಯಕ್ತಿ ತನ್ನ ಅನುಭವಗಳಿಂದ ಲಾಭ ಪಡೆಯುವಲ್ಲಿ ಇದು ತುಂಬ ಸಹಾಯಕವಾಗುತ್ತದೆ. ಅಂತೆಯೇ ಪರಿಸರಕ್ಕೆ ಹೊಂದಾಣಿಕೆ ಕನಿಷ್ಠ ಶ್ರಮದಿಂದ ಸಾಧಿತವಾಗುವಂತೆ ಇದು ಮಾಡುತ್ತದೆ" [೨೧] ಒಟ್ಟಿನಲ್ಲಿ. ' ನಡೆದು ಹೋದ ಅನುಭವ. ಘಟನೆಗಳನ್ನು ಸ್ಮರಿಸಿಕೊಂಡು. ಕ್ರಮಬದ್ಧವಾಗಿ ಮುಂದುವರಿಸಿ ಒಂದು ಗುರಿ ತಲುಪುವ ಕ್ರಿಯೆಯನ್ನೇ ' ಸ್ಮರಣ ತಂತ್ರ' ಅಥವಾ ' ನೆನಪು '. ' ನೆನಪುಮಾಲೆ ' ಎಂದು ಹೇಳಬಹುದು.

' ನೆನಪು ' ಮಾನವ ಬದುಕಿನ ವೈಶಿಷ್ಟ್ಯಗಳಲ್ಲೊಂದು. ಹಿಂದಿನ ನೆನಪುಗಳನ್ನು ಮೆಲುಕುಹಾಕುತ್ತಾ. ಮುಂದಿನ ಭವಿಷ್ಯವನ್ನು ಆಲೋಚಿಸುತ್ತ ಸಾಗುವುದೇ ಜೀವನದ ಕ್ರಮ. ' ನೆನಪು ' ಮಾನವನಿಗೆ ಮಾತ್ರ ಲಭ್ಯವಾದ ಪ್ರಕ್ರಿಯೆ. ಇದು ಪ್ರಾಣಿಗಳಲ್ಲಿ ಕಾಣದು. ಇದು ಅವನ ಪ್ರಜ್ಞೆಯ. ಜೀವಂತಿಕೆಯ ಸಂಕೇತ. ಬೆಳಗಲಿಯವರು ತುಂಬ ಸಾಹಸದಿಂದ ಈ ' ಸ್ಮರಣತಂತ್ರ'ವನ್ನು ತಮ್ಮ ಕಾದಂಬರಿಗಳಲ್ಲಿ ಬಳಸದೆ. ಸಹಜವಾದ ಕಥಾ ನಡೆಯಲ್ಲಿ ಪಾತ್ರಗಳಿಗೆ ಸಂದರ್ಭೋಚಿತವಾಗಿ ಇದನ್ನು ತುಂಬಿ ಕೃತಿಗಳಿಗೆ ಸಹಜ ಚಲನೆಯನ್ನು ತಂದುಕೊಟ್ಟಿದ್ದಾರೆ.

" ಈಗ ರತ್ನಾಳ ಒಳಗಣ್ಣಿನಲ್ಲಿ ಧರೆಪ್ಪಗೌಡನ ಚಿತ್ರ ಮಸುಕಾಗಿ ಮರೆಯಾದಂತೆ. ಇನ್ನೊಂದು ಮುಖ ಮೂಡಿ ನಿಂತಿತ್ತು. ಅದೇ ಗಂಗಾಧರಗೌಡನೆಂಬ. ನಿಂಬೆವ್ವನ ತಮ್ಮನಾದ ವಿಧ್ವಂಸಕಾರಕ. ಕ್ರೌರ್ಯದ ಹಲವಾರು ಮುಖಗಳಲ್ಲಿಯ ಒಂದು ಮುಖ. ಆಗ ಚನ್ನು ನಂದೂರಿನಲ್ಲಿ ಹೊಟೇಲ ಪ್ರಾರಂಭಿಸಿ ಒಂದೆರಡು ವರ್ಷಗಳಾಗಿದ್ದವು. ಮೊದಲಿನಿಂದಲೂ ಒಳ್ಳೆಯ ಅಡುಗೆಯವರನ್ನು ಇರಿಸಿಕೊಂಡು ಉತ್ತಮ ದರ್ಜೆಯ ತಿನಿಸುಗಳನ್ನು ಮಾಡಿಸುವುದಕ್ಕೆ ಚನ್ನೂನ ಕಾಳಜಿ...." (ಕಾತ್ರಾಳ ರತ್ನಿಯ ಚಾದಂಗಡಿ. ಪುಟ ೯೦. ೯೧. ೯೨. ೯೩) ಈ ಪುಟಗಳಲ್ಲಿ ರತ್ನಾ ತನ್ನ ಬದುಕಿನಲ್ಲಿ ಗಂಗಾಧರಗೌಡನಿಂದ ಉಂಟಾದ ತೊಂದರೆಯನ್ನು. ತುಂಬ ಜಾಣತನದಿಂದ ಅದನ್ನು ನಿವಾರಿಸಿಕೊಂಡ ಘಟನೆಯನ್ನು ನೆನಪಿಸಿಕೊಳ್ಳುತ್ತಾಳೆ.

' ಸೀಮೆಗಳು ' ಕಾದಂಬರಿಯ ಆರಂಭದಿಂದ ಸುಮಾರು ೩೫ ನೇ ಪುಟದವರೆಗೆ ಕಥೆ ಸ್ಮರಣೆಯಲ್ಲಿಯೇ ಮುಂದುವರಿಯುತ್ತದೆ. ನೀಲಕಂಠ ಮುಂಬೈನ ಮೀತಾಳ ಸಾಮೀಪ್ಯ ಬಯಸಿದಂತೆ. ತಾನು ಮುಂಬೈ ಸೇರಿದ ಘಟನೆಗೆ ಅವನ ಹಿಂದಿನ ಅನೇಕ ಘಟನೆಗಳೇ ಕಾರಣವೆಂಬುದನ್ನು ಕಾದಂಬರಿ ಚೆನ್ನಾಗಿ ವಿವರಿಸಿದೆ. ' ಶಿವಶಂಕರ ಮದುವೆಯಾದ ನಂತರ ಪತ್ನಿ ಶಶಿಯನ್ನು ಹಳ್ಳಿಯ ಬದುಕಿಗೆ ಒಗ್ಗಿಸಿಕೊಳ್ಳಬೇಕೆಂದು. ತನ್ನ ಮದುವೆ-ಮಾವನ ಶ್ರೀಮಂತಿಕೆ-ಮರದಕ್ಷಿಣೆ-ತಾಯಿಯ ಬಡತನ ಇತ್ಯಾದಿಗಳನ್ನು ನೆನಪಿಸಿಕೊಳ್ಳುತ್ತಾನೆ. (ಮೌನಕ್ರಾಂತಿ. ಪುಟ ೧ ರಿಂದ ೧೮ ರ ವರೆಗೆ)

' ಚಂಬಲ್ ಕಣಿವೆಯಲ್ಲಿ' ಕಾದಂಬರಿ ಲೇಖಕರ ನೆನಪುಮಾಲೆಯಲ್ಲಿಯೇ ನಡೆದ ಉತ್ತಮ ಕೃತಿ. ಡಕಾಯಿತರೊಂದಿಗಿನ ತಮ್ಮ ಅನುಭವಗಳನ್ನು ಬಿಚ್ಚಿಡುತ್ತ ಹೋಗುವ ಉತ್ತಮ ರೋಮಾಂಚನಕಾರಿ ಕಾದಂಬರಿ. ' ಕಾದಂಬರಿ ತಂತ್ರ'ಗಳಿಗೆ ಹೆಚ್ಚು ತಲೆಕೆಡಿಸಿಕೊಳ್ಳದ ಬೆಳಗಲಿಯವರು ಆಧುನಿಕ ವಿಮರ್ಶೆಯ ಗೊತ್ತುಗುರಿಗಳಿಗೆ ಹೆಚ್ಚು ಗಮನಹರಿಸಿದಂತೆ ಕಾಣುವುದಿಲ್ಲ. ಪರಂಪರಾಗತ ಬರವಣಿಗೆಯಲ್ಲಿಯೇ ' ತಮ್ಮತನ 'ದ ಛಾಪು ಮೂಡಿಸಿದ ಬೆಳಗಲಿಯವರು ' ಸಾಮಾಜಿಕ ಪ್ರಜ್ಞೆ 'ಯನ್ನೇ ತಮ್ಮ ಬಹುತೇಕ ಕಾದಂಬರಿಗಳ ಉಸಿರನ್ನಾಗಿಸಿದವರು.

---

೨೧. ಕನ್ನಡ ವಿಶ್ವಕೋಶ : ಸಂಪುಟ ೧೦. ಪುಟ ೪೪೦

## ಅಧ್ಯಾಯ : ಆರು

# ಬೆಳಗಲಿಯವರ ಇತರ ಸಾಹಿತ್ಯದ ಒಟ್ಟು ನೋಟ

ದು. ನಿಂ. ಬೆಳಗಲಿಯವರು ಕಥೆಗಾರರಾಗಿ ಸಾಹಿತ್ಯಲೋಕದಲ್ಲಿ ಕಾಲಿಸಿರಿ. ಕಾದಂಬರಿಕಾರರಾಗಿ ಬೆಳೆದವರು. ಕಥೆ-ಕಾದಂಬರಿಗಳೆರಡೂ ಬೆಳಗಲಿಯವರ ಮೆಚ್ಚಿನ ಕ್ಷೇತ್ರಗಳು. ಕಾದಂಬರಿಗಳ ಜೊತೆ-ಜೊತೆಯೇ ಅವರು ನಿರಂತರವಾಗಿ ಸಣ್ಣ ಕಥೆಗಳನ್ನು ಬರೆಯುತ್ತಲೇ ಬಂದಿದ್ದಾರೆ. ಸಣ್ಣಕಥೆಗಾರರಾಗಿ ಬೆಳಗಲಿಯವರು ಆ ಕ್ಷೇತ್ರಕ್ಕೆ ನೀಡಿದ ಕೊಡುಗೆ ಸಂಖ್ಯೆ-ಸತ್ವಗಳೆರಡರಲ್ಲಿಯೂ ಗಣನೀಯವಾಗಿದ್ದು. ಅದೇ ಒಂದು ಪ್ರತ್ಯೇಕ ಅಧ್ಯಯನವಾಗಬಹುದಾದಷ್ಟು ಗಟ್ಟಿಯಾಗಿದೆ. ಸ್ವತಂತ್ರ ಕಥೆಗಳೊಂದಿಗೆ. ಅನುವಾದಿತ ಕಥೆಗಳು. ಮಕ್ಕಳ ಕಥೆಗಳನ್ನೂ ಬರೆದಿರುವ ಬೆಳಗಲಿಯವರ ಕಥಾಸೃಷ್ಟಿ ವೈವಿಧ್ಯಮಯವಾಗಿದೆ. ಕಥೆ-ಕಾದಂಬರಿ ಕ್ಷೇತ್ರಗಳೆರಡೂ ಅವರ ಬರವಣಿಗೆಯ ಮುಖ್ಯ ವಾಹಿನಿ (Stream) ಯಾದರೆ. ಇತರ ಸಾಹಿತ್ಯ ಪ್ರಕಾರಗಳಲ್ಲಿಯೂ ಬೆಳಗಲಿಯವರದು ಉತ್ತಮ ಕೊಡುಗೆಯಿದೆ. ಕಾವ್ಯವೊಂದನ್ನು ಬಿಟ್ಟು ಅವರು ರಚಿಸದ ಸಾಹಿತ್ಯ ಪ್ರಕಾರವಿಲ್ಲ. (ಅಲ್ಲಲ್ಲಿ ಕೆಲವು ಕವನಗಳನ್ನು ಬರೆದರೂ ಅವಾವೂ ಪ್ರಕಟಗೊಂಡಿಲ್ಲ). ಜೀವನ ಚರಿತ್ರೆ. ಅನುವಾದ. ಅನುಭವಸಾಹಿತ್ಯ ಮಕ್ಕಳ ಪುಸ್ತಕ. ನಗೆಬರಹ ಹೀಗೆ ಹಲವು ಹತ್ತು ಸಾಹಿತ್ಯ ಪ್ರಕಾರಗಳಲ್ಲಿಯೂ ಬೆಳಗಲಿಯವರು ತಕ್ಕಮಟ್ಟಿಗೆ ಕೃಷಿ ಮಾಡಿದ್ದಾರೆ. ತಮ್ಮ ಅನುಭವವನ್ನು ಚೆನ್ನಾಗಿ ದುಡಿಸಿಕೊಂಡು ಯಾವುದೇ ಪ್ರಕಾರದ ಸೃಷ್ಟಿಯಲ್ಲಿ ಬೆಳಗಲಿಯವರು ಸಫಲರಾಗಿದ್ದಾರೆ. ಸಾಹಿತ್ಯ ನಿರ್ಮಿತಿಗೆ ಗಟ್ಟಿ ಅನುಭವವೇ ಅವರ ಮೊದಲ ಬಂಡವಾಳ.

ಬೆಳಗಲಿಯವರ ಕಾದಂಬರಿಗಳ ಸಮಗ್ರ ಅಧ್ಯಯನ-ವಿಶ್ಲೇಷಣೆಯ ನಂತರದಲ್ಲಿ ಅವರ ಒಟ್ಟು ಸಾಹಿತ್ಯಿಕ ಕೊಡುಗೆಯನ್ನು ಕುರಿತು ಒಂದು ವಿಹಂಗಮ ನೋಟದ ಸಮೀಕ್ಷೆ ನಡೆಸುವುದು ಸಾಂದರ್ಭಿಕ ಔಚಿತ್ಯವೆನಿಸುತ್ತದೆ. ಅವರ ಕಾದಂಬರಿಯೇತರ ಸಾಹಿತ್ಯದ ಸಿಂಹಾವಲೋಕನ ಸಮೀಕ್ಷೆಯೇ ಹೊರತು ಅದರ ಅಧ್ಯಯನವನ್ನಿಲ್ಲಿ ಮಾಡಲಾಗದು: ಹಾಗೆ ಮಾಡದಿದ್ದಲ್ಲಿ ಅವರ ಅಧ್ಯಯನಕ್ಕೊಂದು ಪರಿಪೂರ್ಣತೆ ಒದಗದು. ಈ ದೃಷ್ಟಿಯಿಂದಾಗಿ ಅವರ ಒಟ್ಟು ಸಾಹಿತ್ಯ ಸಮೀಕ್ಷೆ ಇಲ್ಲಿ ಪ್ರಸ್ತುತವೆನಿಸುತ್ತದೆ.

**ಸಣ್ಣ ಕಥೆ :**

" ಕತೆ ಮೊದಲಿನಿಂದಲೂ ನನಗೆ ಹೆಚ್ಚಿನ ಪ್ರೀತಿ. ಆಸಕ್ತಿಯ ಕ್ಷೇತ್ರ" [೧] ಎಂದು ಸ್ವತಃ ಅವರೇ ಹೇಳಿಕೊಂಡಂತೆ ಸಣ್ಣ ಕಥಾ ಕ್ಷೇತ್ರ ಬೆಳಗಲಿಯವರ ಸಾಹಿತ್ಯಶಿಖರಕ್ಕೆ ಮೂಲ ಏಣಿಯಿದ್ದಂತೆ. ತಮ್ಮನ್ನು ಬೆಳೆಸುತ್ತ ಎತ್ತರಕ್ಕೆ ಏರಿಸಿದ ಆ ಏಣಿಯನ್ನು ಬೆಳಗಲಿಯವರು ಎಂದೂ ಮರೆತಿಲ್ಲ. ಹಾಗಾಗಿಯೇ ಕಾದಂಬರಿಗಳ ಮಧ್ಯದಲ್ಲಿಯೂ ಅನೇಕ ಉತ್ತಮ ಕಥಾಸೃಷ್ಟಿ ಅವರಿಂದಾಗಿದೆ. ಸ್ವತಂತ್ರ ಕಥಾಸಂಕಲನಗಳು. ಮಕ್ಕಳಕಥೆಗಳು. ಅನುವಾದಿತ ಕಥಾಸಂಕಲನಗಳು – ಹೀಗೆ ಒಟ್ಟು ಬೆಳಗಲಿಯವರು ಹದಿನೈದಕ್ಕಿಂತ ಹೆಚ್ಚು ಸಂಕಲನಗಳನ್ನು ಪ್ರಕಟಿಸಿದ್ದಾರೆ " [೨] ೧೯೫೭ ರಲ್ಲಿ ಅವರ 'ಬೆನ್ನ ಹಿಂದಿನ ಕಣ್ಣು' ಪ್ರಥಮ ಸಂಕಲನ ಪ್ರಕಟಗೊಂಡಿತು. ಅಲ್ಲಿಂದ ೧೯೯೦ ರ ವರೆಗೆ ಸುಮಾರು ಏಳು ಸಂಕಲನಗಳನ್ನು ಪ್ರಕಟಿಸಿದ್ದಾರೆ. ೧೯೫೯ ರಲ್ಲಿ 'ಸಿಟ್ಟ್ಯಾಕೋ ರಾಯಾ ನನಮ್ಯಾಲ' ಪ್ರಕಟವಾಯಿತು. ಅವರ ಒಟ್ಟು ಕಥೆಗಳಿಗೆ ಕುಟುಂಬವೇ ಮೂಲವಸ್ತು. ಹಾಗೆಂದು ಅದೊಂದು ಮಿತಿಯೆಂದು ಭಾವಿಸುವ ಅಗತ್ಯವಿಲ್ಲ. 'ಗೌಡರ ಮಗಳು ಗೌರಿ'. 'ಮುಳ್ಳುದಾರಿಯಲ್ಲಿ ಬಿರಿದ ಹೂಗಳು'. 'ಮುತ್ತಿನ ತೆನೆಗಳು' ಬೆಳಗಲಿಯವರ ಉತ್ತಮ ಕಥಾಸಂಕಲನಳಾಗಿದ್ದು. ಅನೇಕ ಪ್ರಶಸ್ತಿ-ಪುರಸ್ಕಾರಗಳನ್ನೂ ಪಡೆದಿವೆ.

**ಮುತ್ತಿನ ತೆನೆಗಳು :**

ಬೆಳಗಲಿಯವರ ಬೃಹತ್ ಸಂಕಲನವಾಗಿದ್ದು. ಇದು ೧೯೯೦ ರಲ್ಲಿ ಪ್ರಕಟವಾದ ಕೃತಿ. " ಇದು ನನ್ನ ಸಮಗ್ರ ಕತೆಗಳ ಸಂಗ್ರಹವಲ್ಲ. ಅದನ್ನು ಪ್ರಕಟಿಸುವ ಅವಕಾಶವಿಲ್ಲದೆ ಈ ಅರವತ್ತು ಕತೆಗಳನ್ನು ಸೇರಿಸಿ ಒಂದು ಸಂಗ್ರಹ ತರುತ್ತಲಿದ್ದೇನೆ. ಇದಕ್ಕೂ ಒಂದಿಷ್ಟು ನೆಪವಷ್ಟೇ ಕಳೆದ ಮಾರ್ಚನಲ್ಲಿ ಶಿಕ್ಷಕ ವೃತ್ತಿಯಿಂದ ನಿವೃತ್ತಿಯಾಗಿ. ಈಗ ಅರವತ್ತಕ್ಕೆ ಕಾಲಿರಿಸುತ್ತಿದ್ದಂತೆ. ಅರವತ್ತು ಕತೆಗಳನ್ನಾಯ್ದು ಈ ಸಂಗ್ರಹದ ಹೊಳಹು ಹಾಕಿದೆ...." [೩] ಎಂದೆನ್ನುವ ಲೇಖಕರು. ಪ್ರಕಟಿತ-ಅಪ್ರಕಟಿತ ಅರವತ್ತು ಕತೆಗಳನ್ನು ಒಂದೆಡೆ ತಂದಿದ್ದಾರೆ. ಔಚಿತ್ಯಪೂರ್ಣ ತಲೆಬರಹ ಹೊತ್ತು ಬಂದ ಇದು ಅಧ್ಯಯನ ಯೋಗ್ಯವಾದ ಕೃತಿ. ೧೯೫೭ ರಲ್ಲಿ ಪ್ರಕಟವಾದ ಪ್ರಥಮ ಸಂಕಲನ 'ಬೆನ್ನಹಿಂದಿನ ಕಣ್ಣು'ದಿಂದ 'ಮುತ್ತಿನ ತೆನೆಗಳು' ಪ್ರಕಟವಾದ ೧೯೯೦ ರ ವರೆಗೆ ಅಂದರೆ ಸುಮಾರು ಮೂರುದಶಕಗಳ ಕೃಷಿ ಈ ಸೂರಿನಲ್ಲಿದೆ. " ದು. ನಿಂ. ಬೆಳಗಲಿಯವರು ಈ ಅರವತ್ತು ಕಥೆಗಳ ಏಕಸೂತ್ರದ ನಿಲುವುಗಳನ್ನು ತಾಳುವುದು ಅಷ್ಟೇ ಅಪಾಯಕಾರಿ ಹಾಗೂ ಅವೈಜ್ಞಾನಿಕ ಅಭಿಪ್ರಾಯವೆನಿಸುತ್ತದೆ. ಇಂಥ ಸಂದರ್ಭದಲ್ಲಿ ಗಂಭೀರ ಓದುಗನ ಎಚ್ಚರ. ಮುಖ್ಯ ಕಾಳಜಿ ಸೂಕ್ಷ್ಮವಾಗಿರಲು ಸಾಕು. ' ದು. ನಿಂ. ಬೆಳಗಲಿಯವರು ಮೂಲತಃ ಕತೆಗಾರರು. ಅವರ ಕಥೆಗಳಲ್ಲಿ ನವೋದಯದ ರಸಿಕತೆ. ವರ್ಣಪ್ರಿಯತೆ. ಸೊಗಸುಗಾರಿಕೆಗಳೂ ಇವೆ. ಪ್ರಗತಿಶೀಲರ ವಾಸ್ತವತೆಯ. ದುಡಿಮೆಗಾರರ

---

೧. ದು. ನಿಂ. ಬೆಳಗಲಿ : ಮುತ್ತಿನ ತೆನೆಗಳು: ಕಣದಲ್ಲಿ. ಪುಟ IX

೨. ಅನುಬಂಧ II ರಲ್ಲಿಬೆಳಗಲಿಯವರ ಸಾಹಿತ್ಯ ಸೂಚಿಯಿದ್ದು. ಅವರ ಕಾದಂಬರಿಯೇತರ ಸಾಹಿತ್ಯಕ್ಕಾಗಿ ಗಮನಿಸಬಹುದು

೩. ದು. ನಿಂ. ಬೆಳಗಲಿ : ಮುತ್ತಿನ ತೆನೆಗಳು: ಕಣದಲ್ಲಿ. ಪುಟ IX

ನಿಮ್ನವರ್ಗದವರ ಅಸಹಾಯಕತೆಗಳ ಚಿತ್ರೀಕರಣವೂ ಇದೆ. ಅಷ್ಟಲ್ಲದೆ ನವ್ಯದ ಸಂಕೀರ್ಣತೆಯೂ. ಮನೋವಿಶ್ಲೇಷಣೆಯ ದೃಷ್ಟಿಯೂ. ಸಾಂಕೇತಿಕ ನಿರೂಪಣೆಯೂ ಕೆಲವು ಕತೆಗಳಲ್ಲಿ ಇಲ್ಲದಿಲ್ಲ"[೪] 'ಮುತ್ತಿನ ತೆನೆಗಳು' ಮೂರು ಪ್ರಮುಖ ಸೂತ್ರಗಳನ್ನು ತನ್ನ ಒಡಲಾಳದಲ್ಲಿಟ್ಟುಕೊಂಡೇ ಈ ಬೃಹತ್ ಸಂಪುಟ ಸಾಹಿತ್ಯಲೋಕಕ್ಕೆ ಕಾಲಿಟ್ಟಿದೆ :

೧) ಮುತ್ತಿನಂಥ ಜೋಳದ ತೆನೆಗಳ ಮಹತ್ವದ ಕೊಡುಗೆ ಬೆಳವಲ ನಾಡಿನದು ! ವಿಶೇಷವಾಗಿ ಕೃಷ್ಣೆಯ ಎಡಬಲದ ಎರೆಯ ಸೀಮೆಯದು ! ಅಥಣಿ-ಜಮಖಿಂಡಿ ತಾಲೂಕುಗಳ ನದಿ ತೀರದ ಪ್ರದೇಶದ್ದು !

೨) ಇಲ್ಲಿನ ಕತೆಗಳು ಈ ನೆಲದ ಮುತ್ತಿನಂತ ಬಿಳಿಜೋಳದ ತೆನೆಗಳ ಸಂಕೇತ. ಕೆಲ ವಿಷಯ-ವಸ್ತುಗಳಲ್ಲಿ ಸೀಮೋಲ್ಲಂಘನೆಯಾದರೂ. ಅವುಗಳ ಬೇರು ಈ ಜಿಗುಟು ಮಣ್ಣಿನಲ್ಲಿ.

೩) ಕೃಷ್ಣಾ ತೀರದ. ಉತ್ತರ ಗಡಿಯ ಎರೆಮಣ್ಣಿನ ಸೊಗಡಿನಿಂದ ಹುಟ್ಟಿಬಂದ ಅರವತ್ತು ಕಥೆಗಳ ಸೊಗಸನ್ನು ಓದಿಯೇ ಆಸ್ವಾದಿಸಬೇಕು. ಕನ್ನಡ ಸಣ್ಣಕಥೆಗಳ ಕಣಜಕ್ಕೆ ಈ ಹೊಳೆಯ ದಂಡೆಯ ಅಪೂರ್ವ ಕಾಣಿಕೆ ಈ ಮುತ್ತಿನ ತೆನೆಗಳು. ಬೆಳಗಲಿಯವರ ಆರಂಭದ ಕಥೆಗಳು ಸಹಜವಾಗಿಯೇ. ತಾರುಣ್ಯಾವಸ್ಥೆಯಲ್ಲಿನ ಹೆಣ್ಣು-ಗಂಡಿನ ಆಕರ್ಷಣೆಯನ್ನೇ ಚಿತ್ರಿಸಿದರೂ. ಅವುಗಳಲ್ಲಿ ಆದರ್ಶ. ತ್ಯಾಗ. ಸತ್ಯಗಳೇ ಬಾಳಿನ ಮೂಲಮಂತ್ರವೆಂಬುದನ್ನು ಮರೆತಿಲ್ಲ. ಪ್ರೀತಿಯ ಸೇತುವೆ. ಪ್ರೀತಿಯ ಪಾಠ. ನಿದ್ರೆ ಬಾರದ ರಾತ್ರಿ. ತೆರೆದ ಬಾಗಿಲು. ಹಸಿರು ಸೀರೆಯ ಸೆರಗು. ರಾಯರು ಬಂದರು ಮಾವನ ಮನೆಗೆ. ಅವನು ಬಂದನು ಇತ್ಯಾದಿ ಕಥೆಗಳು ಇಂಥ ಆಶಯದ ಆಶ್ರಯದಲ್ಲಿಯೇ ಹುಟ್ಟಿಬಂದ ತೆನೆಗಳು.

'ಗೌಡರ ಮಗಳು ಗೌರಿ'ಯಲ್ಲಿ ಗೌರಿಯೊಬ್ಬಳು ಮುಗ್ಧ ಹೆಣ್ಣು. ತನಗಾದ ಅನ್ಯಾಯವನ್ನು ಸಹಿಸುತ್ತ ಹೋದುದು ಅವಳ ದೊಡ್ಡ ಗುಣವೇ ಸರಿ. ಹೀಗೆ ಲೇಖಕರು ಮೃದುತ್ವದಿಂದಲೇ ಮೃಗತ್ವವನ್ನು ಅಳಿಸಿ ಹಾಕುವ ತಂತ್ರಗಾರಿಕೆಯನ್ನು ತಮ್ಮ ಅನೇಕ ಕಥೆಗಳಲ್ಲಿ ಬಳಸಿದ್ದಾರೆ. ಸಾಮಾನ್ಯ ವಿಚಾರವನ್ನು ಉದಾತ್ತಗೊಳಿಸುವ ಬೆಳಗಲಿಯವರು. 'ಗತಿ-ಅಧೋಗತಿ'ಯಲ್ಲಿ ಇದನ್ನೇ ತೋರಿಸಿಕೊಟ್ಟಿದ್ದಾರೆ. ಒಟ್ಟಿನಲ್ಲಿ ಈ ಅರವತ್ತು ಕಥೆಗಳು ಭಾಷೆ-ಶೈಲಿ-ತಂತ್ರ-ಪ್ರತಿಮೆ. ನಿರೂಪಣೆ. ವೈವಿಧ್ಯತೆ. ವೈಶಿಷ್ಟ್ಯತೆ. 'ಪ್ರಾದೇಶಿಕ ನೆಲೆ-ಬೆಲೆ-ಸೆಲೆ'ಗಳನ್ನೆಲ್ಲವನ್ನೂ ಸಮರ್ಥವಾದ ರೀತಿಯಲ್ಲಿ ಮೈಗೂಡಿಸಿಕೊಂಡಿದ್ದು. ಅಧ್ಯಯನಯೋಗ್ಯವೆನಿಸುತ್ತವೆ. ಆತುರದಿಂದಾಗಿ ಅಲ್ಲಲ್ಲಿ ಅಸಹಜತೆ ತೋರಿದ ಕಥೆಗಳಿದ್ದರೂ. ಒಟ್ಟು ದೃಷ್ಟಿಯಿಂದ ಈ ಸಂಕಲನ ಗಮನೀಯವಾಗಿದೆ.

೧೯೮೯ ರಲ್ಲಿ ಪ್ರಕಟವಾದ 'ಮುಳ್ಳುದಾರಿಯಲ್ಲಿ ಬಿರಿದ ಹೂಗಳು' ಬೆಳಗಲಿಯವರ ಮತ್ತೊಂದು ಉತ್ತಮ ಕಥಾಸಂಕಲನ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪ್ರಥಮವರ್ಷದ ಸ್ನಾತಕೋತ್ತರ ಪದವಿಯನ್ನು ಅಧ್ಯಯನ ಮಾಡುತ್ತಿರುವ ಕನ್ನಡ ವಿದ್ಯಾರ್ಥಿಗಳಿಗೆ ಪಠ್ಯ (Text) ವಾಗಿರುವ ಇದು. ಇಂಗ್ಲೀಷಿಗೆ ಅನುವಾದಗೊಂಡಿದೆ. ಇದು

---

೪. ಜಿ. ಎಸ್. ಕಾಪಸೆ : 'ಮುತ್ತಿನ ತೆನೆಗಳು' ಬೆನ್ನುಡಿಯಿಂದ

ಸಂಕಲನದ ಉತ್ತಮಿಕೆಗೆ ಸ್ಪಷ್ಟ ನಿದರ್ಶನವೆಂದು ಹೇಳಬಹುದು. ‘ಹಸುಳೆ ಮತ್ತು ಸೂಳೆ’ಯಲ್ಲಿ ಮತ್ತೆ ಮತ್ತೆ ಕಾಣುವ ಮಗುವಿನ ಅಳು: ಭಾರತದ ಬಹುಸಂಖ್ಯಾತರ ‘ಅಳು’ ವಾಗಿದೆಯೆಂದರೆ ತಪ್ಪಾಗದು. ಬಸ್ಸಿನಲ್ಲಿ ಪ್ರಾರಂಭವಾದ ಕಥೆ. ಬಸ್ಸಿನಲ್ಲಿಯೇ ಬೆಳೆದು. ಬಸ್ಸಿನಲ್ಲಿಯೇ ಮುಗಿದು ಹೋಗುವ ಇದು ಡಾ. ಶಾಂತಿನಾಥ ದೇಸಾಯಿಯವರ ‘ಕ್ಷಿತಿಜ’. ಅನಂತಮೂರ್ತಿಯವರ ‘ಕ್ಲಿಪ್ ಜಾಯಿಂಟ್’ಗಳನ್ನು ನೆನೆಪಿಸಿಕೊಡುವಷ್ಟು ಸಮರ್ಥವಾಗಿದೆ. ಮಾನವೀಯ ಅಂಶಗಳನ್ನೇ ಹೊತ್ತುತಂದ “ಆ ಮುಖ ಈ ಮುಖ”. “ಡೊಂಬರ ನಿಂಬಿ”. “ಹೆಣ್ಣು ಮುಖವಾಡ”. “ಭರವಸೆ”ಗಳು ಓದುಗರ ಹೃದಯವನ್ನು ಅರಳಿಸುವಷ್ಟು ಹೃದ್ಯವಾಗಿವೆ. ಸರಳ-ಸಹಜ-ಸುಂದರ ನಿರೂಪಣೆಯ ‘ಅದಲು-ಬದಲು’ ಈ ಸಂಕಲನದ ಉತ್ತಮ ಕಥೆ. ಆಧುನಿಕತೆಯ ಹೊಡೆತಕ್ಕೆ ಸಿಕ್ಕು ನಲುಗಿದ ಹಳ್ಳಿಯೊಂದರ ಚಿತ್ರಣವೇ ಈ ಕಥೆಯ ವಸ್ತು. ಶ್ರೀನಿವಾಸರ ಕಥಾಸರಣಿಗೆ ಹೊಸರುಚಿಯನ್ನು ಕೊಡುವಂತಹ ಕಥಾಸೃಷ್ಟಿ ಬೆಳಗಲಿಯವರು ಮಾಡಿದ್ದಾರೆ.

‘ಮುಳ್ಳುದಾರಿಯಲ್ಲಿ ಅರಳಿದ ಹೂಗಳು’ ಹೆಸರೇ ಸೂಚಿಸುವಂತೆ ತುಳಿತದಲ್ಲಿಯೂ ಚೇತರಿಸಿಕೊಂಡ ‘ಜೀವಿಗಳ’ ಸುತ್ತಲೇ ಹೆಣೆದಿರುವ ಹೊತ್ತಿಗೆ. ಹದಿನಾಲ್ಕು ಕತೆಗಳನ್ನು ಹೊಂದಿದ ಈ ಸಂಕಲನ ಹಲವು ದೃಷ್ಟಿಗಳಿಂದ ಉತ್ತಮವಾದ ಕೃತಿಯಾಗಿದೆ. ವಾಸ್ತವತೆ ಇಲ್ಲಿನ ಕಥೆಗಳ ಮುಖ್ಯ ಲಕ್ಷಣವಾದರೆ. ಶೋಷಿತರ ಹಾಗೂ ನೊಂದವರ ಬದುಕಿನಲ್ಲಿ ಬೆಳಕನ್ನು ಕಾಣಿಸುವುದೇ ಅದರ ಧ್ಯೇಯವಾಗಿದೆ. ಸ್ಪಷ್ಟವಾದ-ನಿರ್ದಿಷ್ಟವಾದ ಗುರಿಯಿಟ್ಟುಕೊಂಡೇ ಹುಟ್ಟಿಬಂದ ಇವುಗಳಲ್ಲಿ ಮೂಢನಂಬಿಕೆಗಳು. ದೌರ್ಜನ್ಯ. ವೇಶ್ಯಾವಾಟಿಕೆಗೆ ಕಾರಣಗಳು. ಜಿಗುಪ್ಸೆ. ಹೋರಾಟ. ಬದುಕಿನ ಏರುಪೇರುಗಳು. ಸ್ತ್ರೀ ಶೋಷಣೆ. ದಬ್ಬಾಳಿಕೆ ನಿರೂಪಣೆಗೊಂಡಂತೆ. ಪ್ರೀತಿ-ವಿಶ್ವಾಸ. ವಾತ್ಸಲ್ಯ. ಶ್ರದ್ಧೆ. ಅನುಕಂಪ. ತ್ಯಾಗ. ನಿಷ್ಠೆ. ಮಾತೃತ್ವ. ಪರೋಪಕಾರ. ಅಂತಃಕರಣಗಳೂ ಎಡೆಪಡೆದಿವೆ. ಇಲ್ಲಿನ ಕಥೆಗಳ ವೈಶಿಷ್ಟ್ಯವೆಂದರೆ. ದೌರ್ಜನ್ಯದ ವಿರುದ್ಧ ಬಂಡೆದ್ದು ಹಲವೆಡೆ ಸಫಲರಾಗುವ ದೀನದಲಿತರ ನೈತಿಕ ನಿಷ್ಠೆ ಹಾಗೂ ಕೆಳವರ್ಗದವರನ್ನೇ ಒಡಲಾಳದಲ್ಲಿ ತುಂಬಿಕೊಂಡರೂ. ಅಶ್ಲೀಲತೆ ಕಾಣದಿರುವುದು. ಬೆಳಗಲಿಯವರು ತಮ್ಮೆಲ್ಲ ಕಥೆಗಳಲ್ಲಿ ಪ್ರಗತಿಪರ-ಜನಪರ ನಿಲುವುಗಳನ್ನೇ ಚಿತ್ರಿಸಿದ್ದು ಅವರ ಹೆಗ್ಗಳಿಕೆಗೊಂದು ಗರಿ.

**ಅನುವಾದಿತ ಕಥೆಗಳು :**

೧೯೯೨ ರಲ್ಲಿ ತೆರೆಕಂಡ ‘ಬಣ್ಣದೋಕುಳಿ’ ಬೆಳಗಲಿಯವರು ಅನುವಾದಿಸಿದ ಒಂದು ವೈವಿಧ್ಯಮಯವಾದ ಕಥಾಗುಚ್ಛ. ಇದರಲ್ಲಿ ಏಳು ಭಾಷೆಯ ಹತ್ತು ಕಥೆಗಳಿವೆ. ಹಿಂದಿ ಭಾಷೆಗೆ ಅನುವಾದಿತವಾಗಿರುವ ಈ ಎಲ್ಲ ಕಥೆಗಳನ್ನು ಬೆಳಗಲಿಯವರು ಕನ್ನಡಕ್ಕೆ ಅನುವಾದಿಸಿ ತಂದಿದ್ದಾರೆ. ತುಂಬ ಸ್ವಾರಸ್ಯಮಯವಾದ ಈ ಕಥೆಗಳ ಮೂಲ ಉದ್ದೇಶ ಮನರಂಜನೆಯಾಗಿದೆ. ತಮಗೆ ಮೆಚ್ಚುಗೆಯಾದ ಕಥೆಗಳನ್ನು ಭಾಷಾಂತರಿಸಿದ ಬೆಳಗಲಿಯವರು ಅನುವಾದದಲ್ಲಿಯೂ ತಮ್ಮತನವನ್ನು ಮೆರೆದಿದ್ದಾರೆ. ವೈವಿಧ್ಯಮಯ-ವೈಶಿಷ್ಟ್ಯಯುತವಾದ. ವಿವಿಧ ಭಾಷೆಗಳ. ವಿವಿಧ ಬಗೆಯ. ವಿವಿಧ ಲೇಖಕರ. ಕಥೆಗಳ ಅನುವಾದವಾಗಿರುವ ಇದಕ್ಕೆ ‘ಬಣ್ಣದೋಕುಳಿ’ ತುಂಬ ಔಚಿತ್ಯಪೂರ್ಣವಾದ ಶೀರ್ಷಿಕೆ.

' ಬಂಗಾರದ ಕೂದಲಿನ ಹುಡುಗಿ '. ಸಂಕಲನದ ಮೊದಲ ಕಥೆ. ಇದು ಮಾರಿಸ್ ಡ್ರುಆನ್ ಅವರ ಫ್ರೆಂಚ್ ಕಥೆ. ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಮೂಡಿಬಂದ ಈ ಕಥೆಯಲ್ಲಿ ' ಬಂಗಾರದ ಕೂದಲಿನ ಹುಡುಗಿ ' ಎಲ್ಲರ ಪ್ರೀತಿ ಗಳಿಸುತ್ತಾಳೆ. ' ಅಪರಾಧಿ '. ' ಅಪರಿಚಿತೆ '. ಹಾಗೂ ' ತೆಗೆದು ಬಿಡು '. ಇವು ಲೈಂಗಿಕ ತೃಷೆಗೆ ಸಂಬಂಧಿಸಿದ ಕಥೆಗಳು. ಹಮೀದ ಓಬೀನ್ ಅವರ ಉರ್ದು ಕಥೆ ' ಅಪರಾಧಿ ' ಹದಿನೆಂಟರ ಎಳೆವಯಸ್ಸಿನವಳಿಗೆ ಅರವತ್ತರ ಮುದುಕನನ್ನು ಕಟ್ಟಿದ ಪ್ರಸಂಗವನ್ನು ಚೆನ್ನಾಗಿ ಚಿತ್ರಿಸುತ್ತ ' ಅಪರಾಧಿ ' ಎಂಬುದೊಂದು ಮಾರ್ಮಿಕ ಪ್ರಶ್ನೆಯಾಗಿ ಓದುಗರನ್ನು ಕೊನೆಯವರೆಗೂ ಕಾಡುತ್ತಲೇ ಹೋಗುತ್ತದೆ. ' ಅಪರಿಚಿತೆ ' ಹಂಗೇರಿಯನ್ ಭಾಷೆಯ ಅನುವಾದಿತ ಕಥೆ. ಇದು ವಿವಾಹಪೂರ್ವ ಗರ್ಭಧಾರಣೆಯನ್ನು ಚಿತ್ರಿಸುತ್ತ ಹೆಣೆದ ಸೊಗಸಾದ ಕಥೆ. ' ಒಂದು ಪತ್ರ '. ' ಠಾಕೂರರ ಬಾವಿ 'ಗಳೆರಡೂ ದಲಿತಪರವಾದ ಕಥೆಗಳು. ಮೂಲಮರಾಠಿಯಲ್ಲಿರುವ ಈ ಕಥೆಗಳು ದಲಿತಶೋಷಣೆಯನ್ನು ತನ್ನ ಒಡಲಾಳದಲ್ಲಿ ತುಂಬಿಕೊಂಡು. ಇವು ಚೆನ್ನಾಗಿ ಆ ಶೋಷಣೆಯನ್ನು ಬಿಚ್ಚಿಟ್ಟಿವೆ. ಬೆಳಗಲಿಯವರ ಅನುವಾದಿತ ಕಥೆಗಳೆಲ್ಲ ಮೂಲರೂಪಕ್ಕೆ ಧಕ್ಕೆ ತರದೆ. ಸ್ವತಂತ್ರ ವಿಚಾರಧಾರೆಯ ಹೊಳಹುಗಳನ್ನು ತಮ್ಮಲ್ಲಿ ತುಂಬಿಕೊಂಡು ಉತ್ತಮ-ವೈವಿಧ್ಯಮಯ-ವೈಶಿಷ್ಟ್ಯಪೂರ್ಣವಾದ ನೆಲೆಯಲ್ಲಿ ಮೂಡಿಬಂದವುಗಳಾಗಿವೆ.

**ಮಕ್ಕಳ ಕಥೆಗಳು - ಪುಸ್ತಕಗಳು :**

ಮಕ್ಕಳಿಗಾಗಿ ಮೂರ್‍ನಾಲ್ಕು ಪುಸ್ತಕಗಳನ್ನು ರಚಿಸಿದ ಬೆಳಗಲಿಯವರು ೧೯೭೪ ರಿಂದ ೧೯೯೪ ರ ವರೆಗಿನ ಅಂದರೆ ಸುಮಾರು ಎರಡು ದಶಕದ ಈ ಅವಧಿಯಲ್ಲಿ ಮಕ್ಕಳ ಕಥಾಸಂಕಲನಗಳನ್ನು ಒಳಗೊಂಡಂತೆ ಸುಮಾರು ಹತ್ತಕ್ಕಿಂತಲೂ ಹೆಚ್ಚು ಮಕ್ಕಳ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ' ಬದುಕುವ ಬಯಕೆ ' ಈಸೋಪನ ಕಥೆಗಳು. ಮತ್ತಷ್ಟು ಈಸೋಪನ ಕಥೆಗಳು. ಮುಂದುವರಿದ ಈಸೋಪನ ಕಥೆಗಳು. ಜಾದೂಪಕ್ಷಿ. ಬೀರಬಲ್ಲನ ಬುದ್ಧಿವಂತಿಗೆಯ ಕಥೆಗಳು. ಇವು ಪ್ರಮುಖವಾದ ಮಕ್ಕಳ ಕಥಾಸಂಕಲನಗಳಾದರೆ. ಸರ್ವಜ್ಞ. ಶ್ರೀ ಮುರುಘರಾಜೇಂದ್ರ ಮಹಾಶಿವಯೋಗಿಗಳು. ಚಿಕ್ಕೋಡಿ ತಮ್ಮಣ್ಣಪ್ಪನವರು. ಗಂಗಾಧರ ಮಡಿವಾಳೇಶ್ವರ ತುರಮರಿ. ಮಡಿವಾಳ ಮಾಚಿದೇವ. ಅವರ ಇತರ ಮಕ್ಕಳ ಪುಸ್ತಕಗಳಾಗಿವೆ.

' ಬದುಕುವ ಬಯಕೆ '. ' ಜಾದೂಪಕ್ಷಿ ' ಈ ಕ್ಷೇತ್ರದ ಉತ್ತಮ ಕೃತಿಗಳು. ೧೯೭೬ ನೇ ಸಾಲಿನ ಎನ್.ಸಿ.ಇ.ಆರ್.ಟಿ. ಯ ರಾಷ್ಟ್ರೀಯ ಪುರಸ್ಕಾರ ಪಡೆದ ಅವರ ' ಬದುಕುವ ಬಯಕೆ '. ಸ್ವತಂತ್ರವಾದ ಸೃಜಶೀಲತೆಗೆ ಉತ್ತಮ ನಿದರ್ಶನವಾದ ಕೃತಿ. ಕೇವಲ ಎರಡೇ ಎರಡು ಕಥೆಗಳನ್ನೊಳಗೊಂಡ ಈ ಪುಟ್ಟ ಕೃತಿ. ಬದುಕುವ ಬಯಕೆ. ಒಂದು ಗಂಡು-ಹೆಣ್ಣು ಇಲಿ ಮತ್ತು ಮೂರು ಮರಿಗಳ ಕುಟುಂಬದ ಸುತ್ತ ಹೆಣೆದ ಸುಂದರ ನೀಳ್ಗತೆ. ಹೆಗ್ಗಣದ ಉಪಟಳದಿಂದ ತನ್ನ ಮರಿಗಳನ್ನು ರಕ್ಷಿಸುವ ಇಲಿಗಳು. ಹೊರಗೆ ಹೋಗಬೇಕೆಂದರೆ ನಾಯಿಗಳ ಕಾಟ. ನಾಡಿನಲ್ಲಿ ನಿರಾಳವಾಗಿ ನೆಮ್ಮದಿಯಿಂದ ಬದುಕಲು ಸಾಧ್ಯವಾಗದೆಂಬ ಸಾಂಕೇತಿಕ ನಿರೂಪಣೆಯಲ್ಲಿಯೇ ಸಾಗುವ ಕಥೆ ಕಾಡಿನ ಮೊದಲ ಸ್ನೇಹಸಂಪಾದನೆಯಿಂದ ಜೀವನ ನಡೆಸುವ ರೀತಿ ಮತ್ತೊಂದಕ್ಕೆ ಸಂಕೇತ ನೀಡುವ ಪರಿ ತುಂಬ ಮೆಚ್ಚುಗೆಯಾಗುವಂತಹದು.

' ರಾಜಾ ಮತ್ತು ರಾಣಿ ' ಈ ಸಂಕಲನದ ಎರಡನೇ ಕಥೆ. ಎರಡು ಕುರಿಮರಿಗಳ ಸುತ್ತ ಹೆಣೆಯಲ್ಪಟ್ಟ ಈ ಕಥೆ ಒಂದು ರೀತಿಯ 'Climax' ತಲುಪಿ ಮಕ್ಕಳಿಗೆ ರೋಮಾಂಚನ-ಆನಂದಗಳನ್ನು ಕೊಡಬಲ್ಲ ಉತ್ತಮ ಕಥೆ. ' ಮಾವಿನ ಮರ ಹೇಳಿದ ಕಥೆ 'ಯಂತೆ ' ಹಡೆದವರು ' ಕಾದಂಬರಿಯಂತೆ ' ಬದುಕುವ ಬಯಕೆ ' ಕೂಡ ಕನ್ನಡದ ಉತ್ತಮ ಸೃಜನಾತ್ಮಕ ಕೃತಿ[೫] ೧೯೯೪ ರಲ್ಲಿ ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ ಪಡೆದ ' ಜಾದೂಪಕ್ಷಿ ' ಇದೇ ಸಾಲಿನಲ್ಲಿ ನಿಲ್ಲಬಲ್ಲ ಇನ್ನೊಂದು ಉತ್ತಮ ಮಕ್ಕಳ ಪುಸ್ತಕ.

**ವಿನೋದ ಸಾಹಿತ್ಯ :**

' ಸರಸವೇ ಜನನ. ವಿಸರವೇ ಮರಣ. ಸಮರಸವೇ ಜೀವನ: ಅಳು-ನಗು ಜೀವನದ ಅನಿವಾರ್ಯದ ಹೊದಿಕೆಗಳು. ನಗುವನ್ನು ಭಗವಂತ ಮಾನವನಿಗೆ ಮಾತ್ರ ವಿಶೇಷ ವರವಾಗಿ ನೀಡಿದ್ದಾನೆ. ಆ ಭಾಗ್ಯ ಪಶು-ಪಕ್ಷಿಗಳಿಗಿಲ್ಲ. ಜಗತ್ತಿನಲ್ಲಿ ಎಲ್ಲರೂ ನಗುವವರೇ. ನಗಿಸುವವರು ಮಾತ್ರ ಬೆರಳೆಣಿಕೆಯಷ್ಟು ಜನ. ಚಾರ್ಲಿ ಚಾಪ್ಲಿನ್ ಜಗತ್ತಿನ ಶ್ರೇಷ್ಠ ನಗೆಗಾರನಾದರೆ. ಕನ್ನಡದಲ್ಲಿ ಬೀಚಿ. ಅ. ರಾ. ಮಿತ್ರಾ. ಜಿ.ಡಿ. ನಾಡಕರ್ಣಿ ಮುಂತಾದವರು ಪ್ರಸಿದ್ಧ ಹಾಸ್ಯಲೇಖಕರು. ಕಥೆ-ಕಾದಂಬರಿಯಂಥ ಉದ್ಬುದ್ಧ-ಗಂಭೀರ ಬರಹದ ಲೇಖಕ. ಬೆಳಗಲಿಯವರು ಚುಟುಕಾದ-ಚುರುಕು ಮುಟ್ಟಿಸುವ ಪುಟ್ಟಪುಟ್ಟ ವಿನೋದ ಲೇಖನಗಳನ್ನು ಬರೆದದ್ದು ಸೋಜಿಗದ ಹಾಗೂ ಸಂತೋಷದ ಸಂಗತಿ; ಆದರೆ ಅವರ ವಿನೋದ ಸಾಹಿತ್ಯವು. ವೈಚಾರಿಕ ಹಾಗೂ ನಿರೂಪಣಾತ್ಮಕ ಸಾಹಿತ್ಯದಷ್ಟೇ ಉತ್ಕೃಷ್ಟವಾಗಿರುವುದೊಂದು ವಿಶೇಷ ಸಂಗತಿ. ಕಥೆ-ಕಾದಂಬರಿಗಳಲ್ಲಿ ಅಲ್ಲಲ್ಲಿ ಹಾಸ್ಯದ ಸೆಳವು-ಸೆಳಕುಗಳನ್ನು ಹರಿಸಿದ ಬೆಳಗಲಿಯವರು. ಹಾಸ್ಯಕ್ಕಾಗಿಯೇ ಪ್ರತ್ಯೇಕವಾದ. ' ಹೆಂಡತಿ ಮತ್ತು ಟ್ರಾನ್ಸಿಸ್ಟರ್ ' ' ಸಾಹಿತಿಗಳ ಸಂಗ ಮೋಜಿನ ಪ್ರಸಂಗ ' ಹಾಗೂ ' ಗಂಡ-ಹೆಂಡತಿ ಮತ್ತು ಲಗ್ಗೇಜ ' ಗಳೆಂಬ ಮೂರು ವಿನೋದ ಬರಹದ ಸಂಕಲನಗಳನ್ನೇ ಹೊರತಂದಿದ್ದಾರೆ. ಹಾಸ್ಯವೇ ಇವುಗಳ ಒಡಲಾಳದ ವಸ್ತು. " ನಾನು ಶಾಲಾನಾಟಕಗಳಲ್ಲಿ ಮೊದಲು ಬಹಳಷ್ಟು ಪಾತ್ರವಹಿಸುತ್ತಿದ್ದು. ವಿಶೇಷವಾಗಿ ವಿನೋದ ಪಾತ್ರಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಲಿದ್ದೆ. ಮೊದಲಿನಿಂದಲೂ ವಿನೋದ. ಹಾಸ್ಯ. ನಗೆಚಾಟಿಕೆ ಮಾಡುವುದು ನನ್ನ ಸ್ವಭಾವ. ವಿದ್ಯಾರ್ಥಿಯಾಗಿದ್ದಾಗಲೂ ಅಷ್ಟೆ. ಶಿಕ್ಷಕನಾದ ಬಳಿಕವೂ ಅಷ್ಟೆ."[೬] ಎಂದು ಸ್ವತಃ ಅವರೇ ಹೇಳುವಂತೆ ಅವರದು ವಿನೋದಪರ ವ್ಯಕ್ತಿತ್ವ.

೧೯೮೮ ರಲ್ಲಿ ಪ್ರಕಟಗೊಂಡ ' ಹೆಂಡತಿ ಮತ್ತು ಟ್ರಾನ್ಸಿಸ್ಟರ್ ' ಬೆಳಗಲಿಯವರ ಪ್ರಥಮ ನಗೆಬರಹದ ಸಂಕಲನ: ಇದರಲ್ಲಿ ಉತ್ತಮ ವಿಡಂಬನಾಪ್ರಧಾನ ಹಾಸ್ಯಲೇಖನಗಳಿದ್ದು. ಅಲ್ಲಿನ ಪ್ರೊ. ಮರಗುಳಿಯವರನ್ನು ಸಹೃದಯರು ಎಂದಿಗೂ ಮರೆಯಲಾರರು. ಈ ಸಂಗ್ರಹದ ಲೇಖನಗಳಲ್ಲಿ ಬೆಳಗಲಿಯವರು ಬಳಸಿರುವ ಬರಗಾಲೂರು. ನೂಕಲುಗುದ್ದಿ. ಅಡಕೊತ್ತಳ್ಳಿ. ಕಲ್ಮುಳ್ಳಂಟೆಳ್ಳಿ. ಈ ಮೊದಲಾದ ಊರುಗಳ ಹೆಸರು. ಬಿಕನೇಸಿ

---

೫. ಜಯಂತ ಕಾಡದೇವರಮಠ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೧೯೭

೬. ದು. ನಿಂ. ಬೆಳಗಲಿ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೩೫೭

ಘೀಮಣ್ಣ. ಕತ್ತೆಬಜೆ ಕೇಶಣ್ಣ. ಕಡ್ಲಿಕುಡಕಿ ಕಾಡೇಶಿ. ಚೇಅರ್‌ಮನ್ ಚೌಡಪ್ಪ ಇತ್ಯಾದಿ ವ್ಯಕ್ತಿಗಳ ಹೆಸರುಗಳು ಜಾರ್ಜ್ ಆರ್ವೆಲ್‌ರ " Animal farm " ಕಾದಂಬರಿಯಲ್ಲಿನ ಪಾತ್ರಗಳನ್ನು ನೆನಪಿಗೆ ತಂದುಕೊಡುತ್ತವೆ. ದುಗುಡು-ದುಮ್ಮಾನಗಳ ಭಾರವಡಿಯಲ್ಲಿ ಕುಸಿದು ಕುಳಿತ ವ್ಯಕ್ತಿಗಳಲ್ಲಿ ನಗೆಯ ಚಿಲುಮೆ ಬತ್ತುವ ಅಪಾಯದ ಹಂತ ತಲುಪಿದ ಈ ಸಂಕ್ರಮಣದ ಕಾಲದಲ್ಲಿ ಬೆಳಗಲಿಯವರು ತಮ್ಮ ನಗೆಬರಹಗಳ ಮುಖಾಂತರ ಮತ್ತೆ ಪುಟಿಯುವಂತೆ ಮಾಡಿದ್ದು ಸಾರ್ಥಕ ಪರಿಶ್ರಮವಾಗಿದೆ. ಸದಾ ಸಾಹಿತಿಗಳ. ಸಾಹಿತ್ಯದ ಒಡನಾಟದಲ್ಲಿಯೇ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದ ಬೆಳಗಲಿಯವರಿಗೆ 'ಸಾಹಿತಿಗಳ ಸಂಗ ಮೋಜಿನ ಪ್ರಸಂಗ' ವಾಗಿದೆ. ಇಂಥ ಮೋಜಿನ ಪ್ರಸಂಗಗಳನ್ನೆಲ್ಲ ಒಂದೆಡೆ ಸೇರಿಸಿ ೧೯೯೫ ರಲ್ಲಿ 'ಸಾಹಿತಿಗಳ ಸಂಗ ಮೋಜಿನ ಪ್ರಸಂಗ'ವೆಂಬ ಸಂಕಲನವನ್ನು ಪ್ರಕಟಿಸಿದರು. ಸಾಹಿತಿಗಳೊಂದಿಗಿನ ಒಡನಾಟದ ಮೋಜಿನ ಅನುಭವಗಳ ಮೂವತ್ಮೂರು ಲೇಖನಗಳನ್ನು ಒಂದೆಡೆಯಲ್ಲಿ ತಂದಿದ್ದು. ಅವೆಲ್ಲ ಜನಪ್ರಿಯ ದಿನಪತ್ರಿಕೆ 'ಸಂಯುಕ್ತ ಕರ್ನಾಟಕ'ದಲ್ಲಿ ಪ್ರಕಟಗೊಂಡು ಸಹೃದಯರ ಗಮನಸೆಳೆದವುಗಳೇ ಆಗಿವೆ. ಅತ್ಯಂತ ಕಡಿಮೆ ಶಬ್ದಗಳಲ್ಲಿ ಅಷ್ಟೇ ಸಹಜವಾಗಿ ಖ್ಯಾತ ಲೇಖಕರ ಪರಿಚಯದೊಂದಿಗೆ ಅವರ ಗುಣ-ಸ್ವಭಾವ. ಹವ್ಯಾಸ. ಪ್ರವೃತ್ತಿಯ ಪರಿಚಯವನ್ನು ಸಮಂಜಸವಾಗಿ ಮಾಡಿದ ಬೆಳಗಲಿಯವರ ಬರವಣಿಗೆಯೆಂಬುದು ಒಂದು ಸಾಧನಾರಂಗದಂತೆ ಕಾಣುತ್ತದೆ. ಡಾ. ಹಾ. ಮಾ. ನಾಯಕ ಬಾಬಾ ಆದ ಪ್ರಸಂಗ ತುಂಬ ಮೋಜಿನದಾಗಿದೆ. ಬೀಚಿ ಭಾಷಣವು ನಗೆಯ ಬುಗ್ಗೆಯನ್ನೇ ಚಿಮ್ಮಿಸುತ್ತದೆ. ರಾವಬಹಾದ್ದೂರರ 'ಗ್ರಾಮಾಯಣ'. 'ರಾಮಾಯಣ'ವಾದ ಪ್ರಸಂಗ ಎಲ್ಲರ ಹುಬ್ಬೇರಿಸುವಂತದ್ದು. ಅನೇಕ ಲೇಖಕರನ್ನು ಪರಿಚಯಿಸುವುದರ ಜೊತೆಗೆ ಅವರ ವಿನೋದಶೀಲ ವ್ಯಕ್ತಿತ್ವವನ್ನು ಪರಿಚಯಿಸಿಕೊಟ್ಟಿದ್ದಾರೆ.

'ಗಂಡ-ಹೆಂಡತಿ ಮತ್ತು ಲಗ್ಗೇಜ'ದಲ್ಲಿ ಹದಿನೈದು ಹಾಸ್ಯ ಲೇಖನಗಳಿದ್ದು. ಅದು ೧೯೯೬ ರಲ್ಲಿ ಪ್ರಕಟಗೊಂಡಿದೆ. ಲೇಖಕರೇ ಮುನ್ನುಡಿಯಲ್ಲಿ ಪ್ರಸ್ತಾಪಿಸಿದಂತೆ ಈ ಸಂಕಲನದಲ್ಲಿಯ 'ಮಾವನು ಅಳಿಯನ ಮನೆಗೆ'. 'ಪವಾಡ ಪುರುಷರು'. 'ಗುರು ದಕ್ಷಿಣೆ' ಮೊದಲಾದ ಲೇಖನಗಳು ವಿನೋದಮಯವಾಗಿಯೇ ಗಂಭೀರ ಸಮಸ್ಯೆಗಳ ಮೇಲೆ ಸರಿಯಾದ ಬೆಳಕು ಚೆಲ್ಲುತ್ತವೆ. ಬಾಯಲ್ಲಿ ಆದರ್ಶ ಪಠಿಸುತ್ತಲೇ ಮಾವನ ದುಡ್ಡಿಗೆ ಕೈಚಾಚುವವರನ್ನು ಚೆನ್ನಾಗಿ ಹೊರಗೆಳೆದು ತೋರಿಸಿದ ಬೆಳಗಲಿಯವರು. 'ತಲೆನೋವು ಮತ್ತು ಔಷಧಿಗಳು'ಗಳಲ್ಲಿ ಟಿ.ವಿ. ಕಾರ್ಯಕ್ರಮಗಳ. ಬಸ್‌ಮಿಸ್ ಆಗುವುದು. ಮಕ್ಕಳು-ಹೆಂಡತಿಯ ಅಪಾರ ಬೇಡಿಕೆಗಳು. ಮೈಕಾಸುರನ ದಾಳಿ. ಅರ್ಧಾಂಗಿಯ ವಿಶೇಷ ಅವತಾರ. ಪರಿಸರ ಮಾಲಿನ್ಯ. ದಣಿವು-ಶ್ರಮ. ತಲೆನೋವಿಗೆ ಕಾರಣಗಳನ್ನು ಹೇಳಿದ್ದು ನಮ್ಮನ್ನೆಲ್ಲ ತಲೆದೂಗಿಸುವಂತಿದೆ. ಪತ್ತೇದಾರಿ ಶೈಲಿಯ 'ಖಟಮಲ್ ಸಂಹಾರಕ್ ಮಶಿನ್'ದ ಕಥೆ ವ್ಯಂಗ್ಯ ವಿಡಂಬನೆಯ ದೃಶ್ಯಕಾವ್ಯದಂತಿದೆ. 'ಸಮ್ಮೇಳನಾಧ್ಯಕ್ಷ ಆಗಲಿ'. 'ಇರಪಾಕ್ಷಿ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತನಾದದ್ದು'. 'ಇರಪಾಕ್ಷಿಯ ಭವಿಷ್ಯತ್ತಿನ ಬೇಜಮಿ'. ಮೊದಲಾದ ವಿಡಂಬನಾತ್ಮಕ ಪ್ರಧಾನ ವಿನೋದ ಬರಹಗಳು ಜಾತಿ-ಹಣ-ಪ್ರಭಾವಗಳ ಆಧಾರದ ಮೇಲೆ ಪದವಿ-ಪುರಸ್ಕಾರಗಳು ಸಿಕ್ಕುತ್ತವೆಂಬುದನ್ನು ಚೆನ್ನಾಗಿ ಚಿತ್ರಿಸಿವೆ.

ನಕ್ಕರೆ ಘನತೆ-ಗಾಂಭೀರ್ಯತೆ ಹಾಳಾಗುತ್ತದೆಯೆನ್ನುವ ಇಂದಿನ ದಿನಗಳಲ್ಲಿ ನಗೆಗೆ ಬರ ಬಿದ್ದಂತಿದ್ದರೆ. 'ಜಗವೆಲ್ಲ ನಗುತಿರಲಿ ಜಗದಳಲು ನನಗಿರಲಿ' ಎಂದು ತಾನು ಅತ್ತು ಜಗತ್ತನ್ನೇ ನಗಿಸುವವರೂ ಇದ್ದಾರೆ. ಹಾಡು-ಪಾಡಾಗಿಸಿ. ನೋವು ನಲಿವಾಗಿಸಿದವರಿಗೇನು ನಮ್ಮಲ್ಲಿ ಕೊರತೆಯಿಲ್ಲ. ಚಾರ್ಲಿಚಾಪ್ಲಿನ್‌ನಂತೆ ಲೇಖಕರು ತಮ್ಮನ್ನು ತಾವೇ ಗೇಲಿ ಮಾಡಿಕೊಂಡು ನಾವು ನಗುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಹಾಗೆ ಮಾಡುವುದು ನಿಜವಾದ ಹಾಸ್ಯಬರಹಗಾರನ ಬಹುಮುಖ್ಯ ಲಕ್ಷಣ.

**ಜೀವನ ಚರಿತ್ರೆಗಳು :**

ಕಥೆ-ಕಾದಂಬರಿ-ವಿನೋದ-ಪ್ರಬಂಧಗಳಂತೆ ನಾಡಿನ ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆಯನ್ನೂ ಚಿತ್ರಿಸಿ. ಬೆಳಗಲಿಯವರು ತಾವೂ ಒಬ್ಬ ಚರಿತ್ರಾಕಾರರೆಂಬುದನ್ನು ಸಾಬೀತುಪಡಿಸಿದ್ದಾರೆ. ೧೯೮೦ ರಿಂದ ೧೯೯೭ ರ ವರೆಗಿನ. ಅಂದರೆ. ಸುಮಾರು ಎರಡು ದಶಕಗಳ ಅವಧಿಯಲ್ಲಿ ಸುಮಾರು ಐದಾರು ಜೀವನ ಚರಿತ್ರೆಗಳನ್ನು ಕನ್ನಡಕ್ಕೆ ನೀಡಿದ್ದಾರೆ. 'ಚಿಕ್ಕೋಡಿ. ಪಂಡಿತಪ್ಪನವರು (೧೯೮೦). 'ಪ್ರೇಮಚಂದರ ಬದುಕು-ಬರಹ' (೧೯೮೦). ಈಶ್ವರ ಸಣಕಲ್ (೧೯೮೫). 'ಬೆಳಕು ಬಿತ್ತಿದವರು' (೧೯೯೩). ಯುಗಚೇತನ ಪ್ರೇಮಚಂದ್ರ (೧೯೯೭) ಇವೇ ಮೊದಲಾದವು ಬೆಳಗಲಿಯವರು ಬರೆದ ಪ್ರಮುಖ ಜೀವನ ಚರಿತ್ರೆಯ ಕೃತಿಗಳು.

**'ಚಿಕ್ಕೋಡಿ ಪಂಡಿತಪ್ಪನವರು'** ಬೆಳಗಲಿಯವರು ರಚಿಸಿದ ಪ್ರಥಮ ಜೀವನ ಚರಿತ್ರೆಯ ಗ್ರಂಥ. ರಾಷ್ಟ್ರಪ್ರಸಿದ್ಧಿಯ ಕೆ.ಎಲ್.ಇ. ಸಂಸ್ಥೆಯ ಸಂಸ್ಥಾಪಕ ಸದಸ್ಯರಲ್ಲೊಬ್ಬರಾದ ಚಿಕ್ಕೊಡಿ ಪಂಡಿತಪ್ಪನವರು. ರಬಕವಿಯವರಾದುದರಿಂದ. ಅವರ ವ್ಯಕ್ತಿಜೀವನವನ್ನು ಬೆಳಗಲಿಯವರು ಕಂಡಂತೆ ಕಂಡರಿಸಿದ್ದಾರೆ. ತಮ್ಮಣ್ಣಪ್ಪ ಚಿಕ್ಕೊಡಿಯುವರ ಗರಡಿಯಲ್ಲಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡ ಪಂಡಿತಪ್ಪನವರು ಕೇವಲ ಒಬ್ಬ ವ್ಯಕ್ತಿಯಾಗದೆ ಒಂದು ಶಕ್ತಿಯಾಗಿ ಬೆಳೆದು ನಿಂತ ಕ್ರಮ-ಪರಿಶ್ರಮಗಳನ್ನು ಬೆಳಗಲಿಯವರು ಚೆನ್ನಾಗಿ ಚಿತ್ರಿಸಿದ್ದಾರೆ. ಅಂಗೈಯಷ್ಟು ಚಿಕ್ಕ ಗಾತ್ರದ ಪುಸ್ತಕದಲ್ಲಿ. ಅವರ ಹೋರಾಟ. ನೂಲಿನ ಗಿರಣಿಯ ಸ್ಥಾಪನೆ. ಶೈಕ್ಷಣಿಕ. ಸಾಮಾಜಿಕ. ಏಕೀಕರಣ ಹೋರಾಟ. ಧಾರ್ಮಿಕ. ಸ್ವಾತಂತ್ರ್ಯಾಭಿಮಾನದ. ವ್ಯಾಪಾರದ. ರಸ್ತೆರಿಪೇರಿ. ಅನೇಕ ಸಂಘ-ಸಂಸ್ಥೆಗಳನ್ನು ಕಟ್ಟಿದ ರೀತಿ ಹೀಗೆ ಪಂಡಿತಪ್ಪನವರ ಬಹುಮುಖ ವ್ಯಕ್ತಿತ್ವದ ಬಹುಮುಖಕ್ಷೇತ್ರದ ಸಾಧನೆಗಳನ್ನೆಲ್ಲ ಚಿತ್ರಿಸಿದ್ದು ಬೆಳಗಲಿಯವರ ತೂಕಬದ್ಧ ಬರವಣಿಗೆಗೆ ಸಾಕ್ಷಿಯಾಗಿದೆ; ಅದು ಕನ್ನಡಿಯಲ್ಲಿ ಕರಿಯನ್ನು ಕಟ್ಟಿಟ್ಟ ಸಾಹಸವಾಗಿದೆ. ಈ ಕಿರುಹೊತ್ತಿಗೆ ೧೯೮೦ ರಲ್ಲಿ ಗದಗದ ಶ್ರೀ ತೋಂಟದಾರ್ಯ ಸಂಸ್ಥಾನಮಠದಿಂದ ಪ್ರಕಟಗೊಂಡಿದೆ.

೧೯೮೦ ರಲ್ಲಿಯೇ ಪ್ರಕಟವಾದ **'ಪ್ರೇಮಚಂದ್ರರ ಬದುಕು-ಬರಹ'** ಮತ್ತೊಂದು ಚರಿತ್ರೆಯ ಪುಸ್ತಕ. ಪ್ರೇಮಚಂದ್ರರನ್ನೇ ಕುರಿತು ೧೯೯೭ ರಲ್ಲಿ 'ಯುಗಚೇತನ ಪ್ರೇಮಚಂದ್ರ' ವೆಂಬ ಇನ್ನೊಂದು ಕೃತಿಯನ್ನು ಬರೆದ ಬೆಳಗಲಿಯವರಿಗೆ ಪ್ರೇಮಚಂದ್‌ರು ನೆಚ್ಚಿನ ಸಾಹಿತಿ. ೧೯೮೦ ಮಾರ್ಚದಲ್ಲಿ ದಿಲ್ಲಿಯಲ್ಲಿ ನಡೆದ

ಅಂತರ್‌ರಾಷ್ಟ್ರೀಯ ಮಟ್ಟದ ಪ್ರೇಮಚಂದ್‌ರ ಶತಮಾನೋತ್ಸವದಲ್ಲಿ ಬೆಳಗಲಿಯವರು ಪಾಲ್ಗೊಂಡಿದ್ದರು. ಅದರ ಪ್ರತಿಫಲವೇ ಈ ಕೃತಿ. ಪ್ರೇಮಚಂದರು ಭಾರತದ ಶ್ರೇಷ್ಠ ಸಾಹಿತಿಗಳು-ಕಥೆಗಾರರು-ಕಾದಂಬರಿಕಾರರು. ಅಂಥವರ ಕುರಿತಾಗಿ ಮತ್ತೊಬ್ಬ ಶ್ರೇಷ್ಠ ಸಾಹಿತಿ ಬರೆದದ್ದು ತುಂಬ ಔಚಿತ್ಯವೆನಿಸುತ್ತದೆ. 'ಉಪನ್ಯಾಸ ಸಾಮ್ರಾಟ'ನೆಂದೇ ಖ್ಯಾತಿ ಗಳಿಸಿದ್ದ ಪ್ರೇಮಚಂದರ 'ಬದುಕು-ಬರಹ'ಗಳನ್ನು ಬೆಳಗಲಿಯವರು ಚೆನ್ನಾಗಿ ಚಿತ್ರಿಸಿದ್ದಾರೆ. **ಈಶ್ವರ ಸಣಕಲ್ಲ (೧೯೮೫)**, ಬೆಳಗಲಿಯವರು ಬರೆದ ಮತ್ತೊಂದು ಒಳ್ಳೆಯ ಜೀವನಚರಿತ್ರೆಯ ಪುಸ್ತಕ. 'ಅಳುನುಂಗಿ ನಕ್ಕ ಸಣಕಲ್ಲ'ರನ್ನು ಬೆಳಗಲಿಯವರು 'ವರಕವಿ'. 'ಜನತಾಕವಿ' ಎಂದು ಗುರುತಿಸಿದ್ದಾರೆ. ಸಣಕಲ್ಲರು 'ಸನಕಲಾಗಿ' ಕೊನೆಯುಸಿರೆಳೆದ ಪ್ರಸಂಗವನ್ನು ತುಂಬಾ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. 'ಕೋರಿಕೆ'ಯ ಮುಖಾಂತರ ಕನ್ನಡ ಕಾವ್ಯಪ್ರಪಂಚದಲ್ಲಿ ಅಮರರಾದ ಸಣಕಲ್ಲರು ಬಡತನದಲ್ಲಿ ಬೆಂದರೂ. ನಗುತ್ತಲೇ ಬದುಕುವ ಅವರು 'ಬಿಸಿಲಹೂ' ಆಗಿಯೇ ಕನ್ನಡಿಗರ ಮನಗೆದಿದ್ದಾರೆ.

**'ಬೆಳಕು ಬಿತ್ತಿದವರು' (೧೯೯೩)** ತುಂಬ ಅರ್ಥಪೂರ್ಣ ಶೀರ್ಷಿಕೆಯನ್ನು ಹೊತ್ತು ಪ್ರಕಟಗೊಂಡ ಈ ಕೃತಿಯಲ್ಲಿ ಉತ್ತರಕರ್ನಾಟಕದ ಕನ್ನಡ ನಾಡು-ನುಡಿಗೆ ಸಾಹಿತ್ಯಕ-ಸಾಮಾಜಿಕ ಸೇವೆ ಸಲ್ಲಿಸಿದ ಸಪ್ತರ್ಷಿಗಳ ಜೀವನ ಮತ್ತು ಸಾಧನೆಯಿದೆ. ಪ್ರಸ್ತುತ ಗ್ರಂಥದಲ್ಲಿ ಗಂಗಾಧರ ಮಡಿವಾಳೇಶ್ವರ ತುರಮರಿ. ಡೆಪ್ಯೂಟಿ ಚೆನ್ನಬಸಪ್ಪ. ಡಾ. ಫ. ಗು. ಹಳಕಟ್ಟಿ. ಚಿಕ್ಕೋಡಿ ಪಂಡಿತಪ್ಪನವರು. ಚಿಕ್ಕೋಡಿ ತಮ್ಮಣ್ಣಪ್ಪನವರು ಹಾಗೂ ಹರ್ಡೇಕರ ಮಂಜಪ್ಪ ಹೀಗೆ ಆರು ಜನ ಮಹಾಪುರುಷರು ನಾಡು-ನುಡಿಗಾಗಿ ಶ್ರಮಿಸಿ ಸೇವೆಗೈದುದನ್ನು ಚೆನ್ನಾಗಿ ಚಿತ್ರಿಸಿದ್ದಾರೆ. ಚರಿತ್ರಾಕಾರರೆಂದು ಬೆಳಗಲಿಯವರು ಸಾಹಿತ್ಯಲೋಕದಲ್ಲಿ ಪರಿಚಿತರಾಗದಿದ್ದರೂ ಅವರು ಬರೆದ ಈ ಜೀವನಚರಿತ್ರೆಯ ಕೃತಿಗಳು ಭಾಷೆ-ಶೈಲಿ-ನಿರೂಪಣೆ-ಸಂಗ್ರಹಣೆ. ವಿಷಯ ವ್ಯಾಪಕತೆ ಹಲವು-ಹತ್ತು ದೃಷ್ಟಿಗಳಿಂದಾಗಿ ಉತ್ತಮ ಕೊಡುಗೆಗಳೆಂದೇ ಹೇಳಬಹುದಾಗಿದೆ.

**ಪ್ರಬಂಧಗಳು :**

ಯಾವುದೇ ಲೇಖಕ ಕಣ್ಣಿಗೆ ಪಟ್ಟಿ ಕಟ್ಟಿಕೊಂಡ ಕುದರೆಯಂತೆ ಒಂದೇ ದಾರಿಯನ್ನು ಹಿಡಿದು ಸಾಗದೆ. ವೈವಿಧ್ಯಮಯ ಸಾಹಿತ್ಯ ನಿರ್ಮಾಣದತ್ತ ಬಹುಮುಖ ಪ್ರತಿಭೆಯನ್ನು ಹೊರಹಾಕಿದರೆ ಅನುಭವ ಪ್ರಪಂಚವು ಮತ್ತಷ್ಟು ವಿಸ್ತಾರಗೊಳ್ಳುವಂತೆ. ಅವರಿಗೆ ಬಹುಮುಖ ವ್ಯಕ್ತಿತ್ವವೂ ಪ್ರಾಪ್ತವಾಗುತ್ತದೆ. ಬೆಳಗಲಿಯವರು ಕನ್ನಡದ ಖ್ಯಾತ ಕಥೆ-ಕಾದಂಬರಿಕಾರರೆಂಬುದು ಸರ್ವವಿದಿತ ಮಾತು. ಅದರೊಂದಿಗೆ ಮಕ್ಕಳ ಸಾಹಿತ್ಯ. ನಗೆಬರಹ. ಜೀವನ ಚರಿತ್ರೆ. ಅನುವಾದ ಸಾಹಿತ್ಯ. ಸಂಪಾದನೆಗಳೊಂದಿಗೆ ಉತ್ತಮ ಪ್ರಬಂಧ ಸಾಹಿತ್ಯವನ್ನೂ ಕನ್ನಡಕ್ಕೆ ನೀಡಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ. ಬೆಳಗಲಿಯವರು ಪ್ರಬಂಧರೂಪದಲ್ಲಿ ಹೊರತಂದ. 'ಕನ್ನಡದಲ್ಲಿ ಕಾದಂಬರಿ ಸಾಹಿತ್ಯ' (೧೯೭೫). 'ಜಮಖಂಡಿ ತಾಲ್ಲೂಕುದರ್ಶನ' (೧೯೮೬). ಹಾಗೂ 'ಸಾಹಿತ್ಯ ಸಾಧನ ಮತ್ತು ಜೀವನ' (೧೯೯೪). ಈ ಮೂರು ಕೃತಿಗಳು ಬೆಳಗಲಿಯವರ ಬಹುಮುಖಿ-ತೂಕಬದ್ಧ ಬರವಣಿಗೆಗೆ ಸಾಕ್ಷಿಯಾಗಬಲ್ಲ ಪ್ರಬಂಧ ಸಾಹಿತ್ಯ.

'ಕನ್ನಡದಲ್ಲಿ ಕಾದಂಬರಿ ಸಾಹಿತ್ಯ' (೧೯೭೫). ಇದು ಬೆಳಗಲಿಯವರ ಪ್ರಥಮ ಪ್ರಬಂಧರೂಪದ ಕೃತಿ. ಇದು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಹಾಗೂ ಪ್ರಕಟಣಾ ಶಾಖೆಯಿಂದ ಮೊದಲು ನೀಡಿದ ಉಪನ್ಯಾಸವನ್ನೇ ವಿಸ್ತರಿಸಿ, ಉಪನ್ಯಾಸ ಗ್ರಂಥ ಮಾಲೆಯ ೨೨೮ ನೇ ಹೊತ್ತಿಗೆಯಾಗಿ ಓದುಗರ ಕೈಗೆ ಬಂದಿದೆ. ಅಂಗೈಯಗಲದ ಚಿಕ್ಕ ಗಾತ್ರದಲ್ಲಿ ಆಕಾಶಗಲದ ವಸ್ತುವನ್ನು ಚೆನ್ನಾಗಿ ಹಿಡಿದಿಟ್ಟ ಶ್ರೇಯಸ್ಸು ಲೇಖಕರಿಗೆ ಸಲ್ಲುತ್ತದೆ. ಕಾದಂಬರಿ ಶಬ್ದದ ವ್ಯುತ್ಪತ್ತಿ, ಆ ಕ್ಷೇತ್ರದ ಮೊದಲ ಕೃತಿ, ಅದರ ಆಳ-ನಿರಾಳ, ವ್ಯಾಪಕ-ವಿಸ್ತಾರಗಳನ್ನು ಬರೆಯುತ್ತ ಹೋದ ಬೆಳಗಲಿಯವರು ಚೆನ್ನಾಗಿ ಚಿತ್ರಿಸಿದ್ದಾರೆ. ಚರ್ಚಿಸಿದ್ದಾರೆ. ಕಥೆ-ಕಾದಂಬರಿಗಳೆಲ್ಲ ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದಲೇ ಬಂದವುಗಳೆಂಬ ಸಾಮಾನ್ಯ ನಿಲುವಿದ್ದರೂ ಇದಕ್ಕೂ ಮೊದಲು ಅಂದರೆ ಇಂಗ್ಲೀಷ ಕೃತಿಗಳ ಕನ್ನಡ ಅನುವಾದಗಳು ಬರುವ ಮುನ್ನವೇ 'ಕಲಾವತಿ ಪರಿಣಯ', 'ಸೌಗಂಧಿಕಾ ಪರಿಣಯ', 'ಮುದ್ರಾಮಂಜೂಷ'ಗಳು ಕನ್ನಡದಲ್ಲಿ ಬಂದುದನ್ನು ಹೇಳಿದ ಬೆಳಗಲಿಯವರ ಮಾತು, ಕನ್ನಡದಲ್ಲಿ ಕಾದಂಬರಿ ಸ್ವರೂಪಕ್ಕೆ ನಾಂದಿಯಾದ ರೀತಿಯನ್ನೇ ಹೇಳಿದ್ದಾರೆಂಬುದನ್ನು ಈ ಕ್ಷೇತ್ರದ ಚಿಂತನಶೀಲರು ಗಮನಿಸುವ ವಿಷಯ. "ಜನರಲ್ಲಿ ಓದುವ ಅಭಿರುಚಿ ಹುಟ್ಟದ ಹೊರ್ತು ಯಾವ ಭಾಷೆಯೂ ಉತ್ತಮ ಸ್ಥಿತಿಯಲ್ಲಿ ಬರಲಾರದು. ಇಂಥ ಅಭಿರುಚಿಯನ್ನು ಹುಟ್ಟಿಸಬೇಕಾದರೆ ಕಾದಂಬರಿ-ಇತಿಹಾಸ-ನಾಟಕ ಮುಂತಾದ ಸಾಮಗ್ರಿಯು ಅವಶ್ಯವಾಗಿ ಬೇಕಾಗುತ್ತದೆ. ಈ ಕೊರತೆಯನ್ನು ನನ್ನ ಕೈಲಾದ ಮಟ್ಟಿಗೆ ನಿವಾರಿಸಬೇಕೆಂದು ಆಶಯುಳ್ಳವನಾಗಿ ಈ ಚಿಕ್ಕ ಕಾದಂಬರಿಯನ್ನು ಬರೆದಿದ್ದೇನೆ"[೭] ಎಂಬ 'ಸೂರ್ಯಕಾಂತ' ಕಾದಂಬರಿಯ ಕರ್ತೃ ಲಕ್ಷ್ಮಣ ಭೀಮರಾವ್ ಗದಗಕರರ ಮಾತುಗಳನ್ನು ಉದ್ಧರಣೆ ಮಾಡಿದ ಬೆಳಗಲಿಯವರು ಒಬ್ಬ ಉತ್ತಮ ಚರಿತ್ರಾಕಾರರಿಗಿರಬೇಕಾದ ಅರ್ಹತೆಯಿದೆಯೆಂದರೆ ತಪ್ಪಾಗದು. ಕನ್ನಡದಲ್ಲಿ 'ಕಾದಂಬರಿ' ಎಂಬ ಹೆಸರು ಇಲ್ಲಿಂದಲೇ ಪ್ರಾರಂಭಿಸಿತೆಂದು ಲೇಖಕರು ಅಭಿಪ್ರಾಯ ಪಡುತ್ತಾರೆ.

೧೯೮೦ ರಲ್ಲಿಯೇ ಪ್ರಕಟಗೊಂಡ 'ಜಮಖಂಡಿ ತಾಲ್ಲೂಕು ದರ್ಶನ' ವೊಂದು ಕ್ಷೇತ್ರಪರಿಚಯ ಮಾಡಿಕೊಡುವ ಕೃತಿಯಾದರೂ ಅಲ್ಲಿನ ಬರವಣಿಗೆ ತುಂಬ ಪ್ರೌಢ ಹಾಗೂ ತೂಕಬದ್ಧವಾಗಿದೆ. ಬೆಳಗಲಿಯವರ ಮತ್ತೊಂದು ಉತ್ತಮ ಪ್ರಬಂಧರೂಪದ ಕೃತಿಯೆಂದರೆ ೧೯೯೪ ರಲ್ಲಿ ಪ್ರಟಕವಾದ 'ಸಾಹಿತ್ಯ ಸಾಧನ ಮತ್ತು ಜೀವನ' ವೆಂಬುದು. ಹಲವು ವಿಚಾರಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳನ್ನು ಒಂದು ಪುಸ್ತಕರೂಪದಲ್ಲಿ ಪ್ರಕಟಗೊಳಿಸಿದ್ದಾರೆ. ಇದರಲ್ಲಿ ಒಟ್ಟು ಹನ್ನೆರಡು ಲೇಖನಗಳಿವೆ. ಎರಡು ಲೇಖನಗಳು ಕನ್ನಡ ಸಾಹಿತ್ಯವನ್ನು ಕುರಿತಾಗಿವೆ.

ತ.ರಾ.ಸು. ಬಗ್ಗೆ ಬೆಳಗಲಿಯವರಿಗೆ ಹೆಚ್ಚಿನ ಒಲವು. ಆದ್ದರಿಂದಲೇ ಅವರ ಕಾದಂಬರಿಗಳ ಬಗ್ಗೆ ತುಸು ದೀರ್ಘವಾಗಿಯೇ ಚರ್ಚಿಸಿದ್ದಾರೆ. ಪ್ರಗತಿಶೀಲ ಚಳುವಳಿಯ ಮುಂಚೂಣಿಯಲ್ಲಿದ್ದ ತ.ರಾ.ಸು. ಅವರು ಜನರಲ್ಲಿ ಕನ್ನಡದ ಕೆಚ್ಚನ್ನು ತುಂಬಿದ್ದು, ಅದನ್ನು ಬೆಳೆಸಿದ್ದು, ಹಾಗೆಯೇ ಪುಸ್ತಕಪ್ರಕಾಶನದ ಬಲವನ್ನು ಹೆಚ್ಚಿಸಿದ

---

೭. ದು. ನಿಂ. ಬೆಳಗಲಿ : ಕನ್ನಡದಲ್ಲಿ ಕಾದಂಬರಿ ಸಾಹಿತ್ಯ, ಪುಟ ೭

ಧೀಮಂತರೆಂದು ಲೇಖಕರು ಅಭಿಪ್ರಾಯ ಪಡುತ್ತಾರೆ. ಅಲ್ಲದೆ ಕನ್ನಡದ ಗದ್ಯಕ್ಕೆ ಅವರು ತುಂಬಿದ ಶಕ್ತಿ-ಶೈಲಿಗೆ ಕೊಟ್ಟ ಮೆರುಗು. ನಿರೂಪಣಾ ತೇಜಸ್ಸುಗಳನ್ನೂ ಬೆಳಗಲಿಯವರು ಬಾಯ್ತುಂಬ ಹೊಗಳಿದ್ದಾರೆ.

ಬೆಳಗಲಿಯವರು ಅಥಣಿ ಭಾಗದ ಆಡುನುಡಿಯ ಪರಿಚಯವನ್ನು ತಮ್ಮದೊಂದು ಲೇಖನದಲ್ಲಿ ಪರಿಚಯಿಸಿಕೊಟ್ಟಿದ್ದಾರೆ. ಇತ್ತ ಪ್ರಚಲಿತವಿರುವ 'ಕೈಕಾಲತಗೀರಿ' (ತೊಳೀರಿ). ಖೂನ (ಪರಿಚಯ) ಮುಂತಾದ ಪದಗಳು ಅಥಣಿ ಭಾಗದಲ್ಲಿ ಪ್ರಚಲಿತವಿರುವ ಬಗ್ಗೆ ಸಾಕಷ್ಟು ಅರ್ಥಪೂರ್ಣವಾಗಿ ವಿವರಿಸಿದ್ದಾರೆ. ಅಥಣಿ ಕನ್ನಡದ ಮೇಲೆ ಆಗಿರುವ ಮರಾಠಿ ಭಾಷೆಯ ಪ್ರಭಾವದ ಬಗ್ಗೆಯೂ ಚಿಂತನಗೈಯುವ ಬೆಳಗಲಿಯವರು ಆಶ್ಚರ್ಯವ್ಯಕ್ತಪಡಿಸುತ್ತಾರೆ.

ಕಷ್ಟದ ಬದುಕಿನ ಪ್ರೇಮಚಂದರು. ತಮ್ಮಂತೆಯೇ ಕಷ್ಟದಿಂದಲೇ ಸಾಹಿತ್ಯ ನಿರ್ಮಾಣ ಮಾಡಿದ ಅನೇಕ ಲೇಖಕರ ಬಗ್ಗೆ ಬರೆದುದನ್ನು ತಮ್ಮೊಂದು ಲೇಖನದಲ್ಲಿ ಬೆಳಗಲಿಯವರು ಚೆನ್ನಾಗಿ ವಿವರಿಸಿದ್ದಾರೆ. ಶರಣಕುಮಾರ ಲಿಂಬಾಳೆಯವರ 'ಅಕ್ಕರಮಾಸಿ'ಯನ್ನು 'ಅಕ್ರಮ ಸಂತಾನ' ವೆಂದು ಕನ್ನಡಕ್ಕೆ ಅನುವಾದಿಸಿದ ಬೆಳಗಲಿಯವರು ಅದರ ಅನುವಾದಕ್ಕೆ ಕಾರಣಗಳನ್ನೂ ವಿವರಿಸಿದ್ದಾರೆ. ಒಟ್ಟಿನಲ್ಲಿ ಬೆಳಗಲಿಯವರ ಪ್ರಬಂಧಗಳು ಒಂದು ಕಥೆಯನ್ನು ಓದಿದ ಅನುಭವವನ್ನು ನಮಗೆ ನೀಡುತ್ತವೆ. ಪ್ರೇಮಚಂದ. ಅಮೃತಾ ಪ್ರೀತಮ್. ಮೊದಲಾದವರ ಜೀವನ ಚಿತ್ರಗಳು ಯಾವುದೇ ಕತೆಯನ್ನು ಮೀರಿಸಬಲ್ಲ ಶಕ್ತಿಯನ್ನು ಹೊಂದಿವೆ. ಹಾಗಾಗಿ ಬೆಳಗಲಿಯವರಿಗೆ ಬರವಣಿಗೆಯೆಂಬುದು ಸಿದ್ಧಿಸಿದ ಕ್ಷೇತ್ರ.

**ಇತರ ಸಾಹಿತ್ಯ :**

ಬೆಳಗಲಿಯವರು ಅನುವಾದ ಸಾಹಿತ್ಯಕ್ಕೂ ನೀಡಿದ ಕೊಡುಗೆ ಹಿರಿದಾದುದು. ಅವರು 'ಬಣ್ಣದೋಕುಳಿ'ಯನ್ನು ಅನುವಾದಿಸಿದಂತೆ 'ಅಕ್ರಮ ಸಂತಾನ' (೧೯೯೨). 'ಗಬಾಳ' (೧೯೯೫). 'ಸಮರ್ಥ ರಾಮದಾಸರು' (೧೯೯೪). ಗಳೆಂಬ ಇನ್ನೂ ಹಲವು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮೂಲ ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದ ಬೆಳಗಲಿಯವರು ಅನುವಾದ ಕ್ಷೇತ್ರಕ್ಕೂ ತಮ್ಮದೇ ಆದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಮರಾಠಿ ಆತ್ಮಕಥೆಗಳನ್ನು ಕನ್ನಡಕ್ಕೆ ಸಮರ್ಥವಾಗಿ ಅನುವಾದಿಸಿದ ಶ್ರೇಯಸ್ಸು ಬೆಳಗಲಿಯವರಿಗೆ ಸಲ್ಲುತ್ತದೆ. 'ಅಕ್ರಮಸಂತಾನ'ಕ್ಕೆ ೧೯೯೨ ರಲ್ಲಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ ದೊರೆತುದು ಅವರ ಅನುವಾದ ಬರವಣಿಗೆಯ ಉನ್ನತಿಕೆಗೆ ಸಾಕ್ಷಿಯಾಗಿದೆ.

ಸಂಪಾದನಾ ಕ್ಷೇತ್ರದಲ್ಲಿಯೂ ತಕ್ಕಮಟ್ಟಿಗೆ ಕೆಲಸ ಮಾಡಿರುವ ಬೆಳಗಲಿಯವರು. 'ಘಟಪ್ರಭೆ'ಗೆ ಸಹಸಂಪಾದಕರಾಗಿ ದುಡಿದಿದ್ದಾರೆ. ಇದು ಅಖಿಲ ಕರ್ನಾಟಕ ತೃತೀಯ ಪ್ರಗತಿಪಂಥ ಸಮ್ಮೇಳನ. ಮಹಾಲಿಂಗಪುರದಲ್ಲಿ ೧೯೭೮ ರಲ್ಲಿ ಜರುಗಿತ್ತು. ಅದರ ಸ್ಮರಣ ಸಂಪುಟವೇ 'ಘಟಪ್ರಭೆ'. ೬೮ ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಮುಧೋಳದಲ್ಲಿ ನಡೆದಿತ್ತು. 'ರನ್ನಗನ್ನಡಿ' ಅದರ ಸ್ಮರಣ ಸಂಪುಟವಾಗಿದ್ದು. ಅದಕ್ಕೆ

ಪ್ರಧಾನ ಸಂಪಾದಕರಾಗಿ ಕೆಲಸಮಾಡಿದ ಬೆಳಗಲಿಯವರು. ಅದೇ ವರ್ಷದಲ್ಲಿ ತೆರೆಕಂಡ ಬಿಜಾಪುರ ಜಿಲ್ಲಾ ದರ್ಶನಕ್ಕೂ ಪ್ರಧಾನ ಸಂಪಾದಕರಾಗಿ ಕೆಲಸ ಮಾಡಿದ್ದಾರೆ. ' ಬಾಲವಿಶ್ವ' ಬೆಳಗಲಿಯವರ ಪ್ರಧಾನಸಂಪಾದಕತ್ವದಲ್ಲಿ ಪ್ರಕಟಗೊಂಡ ಮತ್ತೊಂದು ಸಂಪುಟವಾಗಿದ್ದು. ಅದು ಮಕ್ಕಳ ಪ್ರಾಯೋಜಿತ ಸಪ್ತಾಹ ೯೫ ರ ಸ್ಮರಣ ಸಂಪುಟವಾಗಿ ಧಾರವಾಡದಿಂದ ಪ್ರಕಟವಾಗಿದೆ. ದಿ. ಜಿ. ಎಂ. ದೇಶಪಾಂಡೆ ಅವರನ್ನು ಕುರಿತಾದ ಸ್ಮರಣಸಂಪುಟವೊಂದು ಐನಾಪುರದಲ್ಲಿ ' ವಿದ್ಯಾಚೇತನ ' ನಾಮದಿಂದ ಪ್ರಟಕಗೊಂಡಿತು. ಅದಕ್ಕೂ ಬೆಳಗಲಿಯವರದೇ ಪ್ರಧಾನ ಸಂಪಾದಕತ್ವ.

ಇದಿಷ್ಟು ಬೆಳಗಲಿಯವರ ಕಾದಂಬರಿಯೇತರ. ಇತರ ಸಾಹಿತ್ಯದ ವಿಹಂಗಮ ನೋಟದ ಸಮೀಕ್ಷೆ. ಇವರಲ್ಲಿ ಅತೀ ಮುಖ್ಯವಾಗಿ ಗಣನೆಗೆ ಬರುವುದು ಅವರ ಸಣ್ಣಕಥೆಗಳು. ಸ್ವತಂತ್ರ ಅನುವಾದ ಹಾಗೂ ಮಕ್ಕಳ ಕಥೆಗಳನ್ನು ಬರೆದ ಬೆಳಗಲಿಯವರ ವೈವಿಧ್ಯಮಯವಾದ ಕಥಾಸಾಹಿತ್ಯ ಅವರ ಕಾದಂಬರಿಗಳಷ್ಟೇ ಪ್ರಾಮುಖ್ಯತೆ ಪಡೆದಿದ್ದು. ಅದೇ ಒಂದು ಪ್ರತ್ಯೇಕ ಅಧ್ಯಯನವಾಗಬಲ್ಲ ಸಂಖ್ಯೆ-ಸತ್ವವನ್ನು ಹೊಂದಿದೆ. ಅನುವಾದ. ವಿನೋದಸಾಹಿತ್ಯ. ಪ್ರಬಂಧ ಸಾಹಿತ್ಯಗಳೂ ಕೂಡ ತಕ್ಕಮಟ್ಟಿಗೆ ಚೆನ್ನಾಗಿವೆ. ಕನ್ನಡದ ಎಲ್ಲ ' ಪ್ರಕಾರ 'ಗಳಲ್ಲೂ ಕೃಷಿ ಮಾಡಿದ ಬೆಳಗಲಿಯವರು ಉತ್ತರ ಕರ್ನಾಟಕದ ಶ್ರೇಷ್ಠ ಕಾದಂಬರಿಕಾರರಿಗಿಂತ ಒಂದಿಷ್ಟು ಭಿನ್ನರಾಗಿ ಕಂಡುಬರುತ್ತಾರೆ.

## ಅಧ್ಯಾಯ : ಏಳು

# ಸಮಾರೋಪ

ಬೆಳಗಲಿಯವರು 'ಜನಪರ' ಲೇಖಕರು. 'ಜನಾಭಿಮುಖಿ' ಧೋರಣೆಯೇ ಅವರೆಲ್ಲ ಕಾದಂಬರಿಗಳ ಧ್ಯೇಯ. ಸಾಹಿತ್ಯಕ್ಕಾಗಿ ಸಾಹಿತ್ಯವನ್ನು ಬರೆಯದೆ. ಸಮಾಜಕ್ಕಾಗಿ ಸಾಹಿತ್ಯವನ್ನು ಬರೆದವರು. ಬೆಳಗಲಿಯವರು ಕಥೆಗಾರರಾಗಿ ಸಾಹಿತ್ಯಲೋಕಕ್ಕೆ ಕಾಲಿರಿಸಿ. ಕಾದಂಬರಿಕಾರರಾಗಿ ಬೆಳೆದವರು. ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಚಿರಕಾಲ ನಿಲ್ಲಬಲ್ಲ ಕಾದಂಬರಿಗಳನ್ನೇ ಬೆಳಗಲಿಯವರು ನೀಡಿದ್ದಾರೆ. " ಕಳೆದ ನಾಲ್ಕು ದಶಕಗಳಿಗೂ ಮೇಲ್ಪಟ್ಟು ಕನ್ನಡ ಕಾದಂಬರಿ. ಕಥಾ ಪ್ರಪಂಚದಲ್ಲಿ ವಿಶೇಷ ಕೃಷಿಗೈದು. ಭಾಷೆ ಹಾಗೂ ಜನಜೀವನ ಚಿತ್ರಣದಲ್ಲಿ ಪ್ರಾದೇಶಿಕತೆಯ ಬನಿಯನ್ನು ಒಳಗೊಂಡಂತೆ ಹಲವಾರು ಉತ್ತಮ ಕೃತಿಗಳನ್ನು ನೀಡಿರುವ ಬೆಳಗಲಿಯವರು ಪ್ರಥಮ ದರ್ಜೆಯ ಲೇಖಕರೆಂದು ಹೇಳಲು ಹಿಂದುಮುಂದು ನೋಡಬೇಕಾಗಿಲ್ಲ. ಇದುವರೆಗೆ ಪ್ರಕಟವಾಗಿರುವ ಅವರ ಆರು ಕಥಾಸಂಕಲನಗಳು. ಹದಿನಾರು ಕಾದಂಬರಿಗಳು ಅವರ ಸೃಜನಶೀಲ ಸಾಮರ್ಥ್ಯವನ್ನು ಚೆನ್ನಾಗಿಯೇ ವ್ಯಕ್ತಪಡಿಸಿವೆ ".[೧]

**ಬೆಳಗಲಿಯವರ ವ್ಯಕ್ತಿತ್ವ :**

ಬೆಳಗಲಿಯವರ ಜೀವನ ಮತ್ತು ಸಾಹಿತ್ಯ ಕುರಿತಾದ ಈ ವರೆಗಿನ ವಿವರವಾದ ಅಧ್ಯಯನದಲ್ಲಿ ಅವರ ವ್ಯಕ್ತಿತ್ವದ ಸಮಗ್ರದರ್ಶನವು ಪರೋಕ್ಷವಾಗಿಯಾದರೂ ಸ್ಪಷ್ಟವಾಗಿಯೇ ಆಗಿದೆ.

ಆರಡಿ ಎತ್ತರದ ಶ್ಯಾಮಲ ವರ್ಣದ. ನೀಳಕಾಯದ. ಬಟ್ಟಲು ಗಣ್ಣಿನ. ಮೃದುಮಂದಹಾಸಯುಕ್ತ ನಿರ್ಮಲಮುಖಮಂಡಲದ (ಶ್ರೀಕೃಷ್ಣನ ಪಾತ್ರಕ್ಕೆ ಹೇಳಿಮಾಡಿಸಿದಂಥ ನಿಲುವಿನ) ಬೆಳಗಲಿಯವರು ವೃತ್ತಿಯಿಂದ ಶಿಕ್ಷಕರು – ಆದರ್ಶ ಶಿಕ್ಷಕರು – ರಾಷ್ಟ್ರಪ್ರಶಸ್ತಿ ವಿಜೇತ ಶಿಕ್ಷಕರು. ಪ್ರವೃತ್ತಿಯಿಂದ ಸಾಹಿತಿಗಳು. ಇವೆರಡು ಅವರ ಅಚ್ಚುಮೆಚ್ಚಿನ ಕ್ಷೇತ್ರಗಳು; ವ್ಯಕ್ತಿತ್ವದ ಎರಡು ಸಮರ್ಥ ಮುಖಗಳು :

" ಒಂದು ಕೈಯಲ್ಲಿ ಸೀಮೆ ಸುಣ್ಣ
ಒಂದು ಕೈಯಲ್ಲಿ ಲೇಖನಿ
ಎರಡೂ ಕ್ಷೇತ್ರಗಳಲ್ಲಿ ಎತ್ತರದ ಶಿಖರಗಾಮಿ " [೨]

---

೧. ಚೆನ್ನವೀರ ಕಣವಿ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೪

೨. ವೀರಭದ್ರಪ್ಪ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೨೨

ಸಾಹಿತ್ಯದೊಂದಿಗೆ ಅನೇಕ ಜನಪರ ಸಂಘಟನೆಗಳೊಂದಿಗೆ ತಮ್ಮನ್ನು ತಾವು ತೊಡಗಿಸಿಕೊಂಡದ್ದು ಅವರ ವ್ಯಕ್ತಿತ್ವಕ್ಕೆ ಪರಿಪೂರ್ಣತೆಯನ್ನು ಒದಗಿಸಿಕೊಟ್ಟಿದೆ. " ದು. ನಿಂ. ಬೆಳಗಲಿಯವರ ನಡೆ ಚೆನ್ನ. ನುಡಿಚೆನ್ನ. ಅವರ ಸಮಗ್ರ ಬದುಕಿನ ಸ್ವರೂಪವನ್ನು ಎತ್ತಲಿಂದ ನೋಡಿದರತ್ತಲದು ಚೆನ್ನ"[೩] ವೆಂದ ಮಹಾಂತಪ್ಪಗಳವರ ಹಾರೈಕೆ. ಬೆಳಗಲಿಯವರ ವ್ಯಕ್ತಿತ್ವಕ್ಕೆ ಸಂದ ಗೌರವವಾಗಿದೆ. ಬೆಳಗಲಿಯವರು ಪ್ರಥಮತಃ ಮೌಲ್ಯಗಳನ್ನು ಎತ್ತಿಹಿಡಿದ ಮಾನವೀಯ ಬಾಂಧವ್ಯದ ವಿಶಾಲ ದೃಷ್ಟಿವುಳ್ಳ, ಸಾಹಿತ್ಯಕ್ಕಿಂತ ಸಜ್ಜನಿಕೆಯ ಬದುಕು ದೊಡ್ಡದೆಂದು ಅರಿತುಕೊಂಡ. ನವೋದಯ ತಲೆಮಾರಿನವರ ಆದರ್ಶಗಳನ್ನೂ ಅಳವಡಿಸಿಕೊಂಡ. ಅಧ್ಯಯನಶೀಲರೂ. ಚಿಂತನಶೀಲರೂ ಆದ ಸಜ್ಜನರು. ಪ್ರಸಿದ್ಧಿಯ 'ದಾಹ' ವಿಲ್ಲದ ಅವರು ಒಂದು ಮೂಲೆಯಲ್ಲಿ ಕುಂತು ನಿರಂತರವಾಗಿ ಬರವಣಿಗೆ ಮಾಡಿದ್ದು ಒಂದು ಮಹತ್‌ಸಾಧನೆಯೇ ಸರಿ. ಸಿಂಪಿಲಿಂಗಣ್ಣ. ಬಸವರಾಜ ಕಟ್ಟೀಮನಿ. ಸತ್ಯಕಾಮ. ಮಿರ್ಜಿ ಅಣ್ಣಾರಾಯ. ರಾವ್‌ಬಹಾದ್ದೂರ್ ಅವರ ನಂತರದ ತಲೆಮಾರಿನ ಮಹತ್ವದ ಲೇಖಕರಾಗಿ ಬೆಳೆದಿದ್ದಾರೆ. ರಾಜಕೀಯ ವಿಷಮತೆಯ ಗಾಳಿಯನ್ನುಂಡೇ ಸಾಹಿತ್ಯ ಬದುಕುತ್ತಿರುವ ಇಂದು ಯಾರ್‍ಯಾರೋ ದಿಢೀರಾಗಿ ಏನೇನನ್ನೋ ಸಾಧಿಸಿಕೊಳ್ಳುತ್ತಿದ್ದಾರೆ. ಸಾಧಿಸಿಕೊಂಡಿದ್ದಾರೆ. ಆದರೆ ಬೆಳಗಲಿಯವರು ಮಾತ್ರ ಅಂಥ ಸಾಧನೆಯಿಂದ ಬಲುದೂರ. ಈಗಾಗಲೇ ಅವರಿಗೆ ಸಂದ ಗೌರವ-ಪ್ರಶಸ್ತಿಗಳು ಇನ್ನೂ ಸಜ್ಜನರಿಗೆ-ಸಜ್ಜನಿಕೆಗೆ-ಪ್ರಾಮಾಣಿಕತೆಗೆ ಅವಕಾಶಗಳಿವೆಯೆಂಬುದರ ಸಂಕೇತವೆಂದೇ ಹೇಳಬಹುದಾಗಿದೆ. ಬದುಕು-ಬರಹಗಳೆರಡರಲ್ಲಿಯೂ ಸರಳ-ಸಜ್ಜನಿಕೆ ಪ್ರಾಮಾಣಿಕತೆ-ಕಳಕಳಿಯನ್ನು ಕಾಯ್ದುಕೊಂಡು ಬಂದುದು ಅವರ ವ್ಯಕ್ತಿತ್ವಕ್ಕೆ ನಿದರ್ಶನವಾಗಬಲ್ಲ ಸಂಗತಿಯೇ ಸರಿ.

'ಏನಾದರೂ ಆಗು ಮೊದಲು ಮಾನವನಾಗು' ಎಂಬಂತೆ ಮಾನವೀಯ ಮೌಲ್ಯಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಸಜ್ಜನರು ಬೆಳಗಲಿಯವರು. ತಾವು ಬದುಕಿಬಾಳುತ್ತಿರುವ ಪರಿಸರವನ್ನು ಇನ್ನೂ ಉತ್ತಮಗೊಳಿಸುವುದಕ್ಕಾಗಿ ಹಲವಾರು ಜನೋಪಯೋಗಿ ಕಾರ್ಯಕ್ರಮಗಳನ್ನೂ ನಡೆಸಿದ್ದಾರೆ. ಜನತೆಯ ಉತ್ತಮ ಬದುಕಿಗಾಗಿ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಭೆ-ಸಮಾರಂಭಗಳನ್ನು ಏರ್ಪಡಿಸುತ್ತ ಜನಜಾಗೃತಿ ಮಾಡಿದ್ದಾರೆ. ಬನಹಟ್ಟಿಯಲ್ಲಿ ಅದ್ದೂರಿಯಿಂದ. ಅರ್ಥಪೂರ್ಣವಾಗಿ ನಡೆಸುತ್ತಿದ್ದ ಶ್ರೀಗಣೇಶೋತ್ಸವವೇ ಇದಕ್ಕೊಂದು ಉತ್ತಮ ನಿದರ್ಶನ. ಅದೊಂದು ಸಾಂಪ್ರದಾಯಿಕ ಹಬ್ಬವಾಗದೇ. ಸಾಂಸ್ಕೃತಿಕ ಮಹೋತ್ಸವವನ್ನಾಗಿ ಮಾರ್ಪಡಿಸಿದ್ದು ಬೆಳಗಲಿಯವರ ದೃಷ್ಟಿಯ ವಿಶೇಷತೆಯಾಗಿದೆ. ನಾಡಿನ ಖ್ಯಾತ ವಿದ್ವಾಂಸರನ್ನು. ಭಾಷಣಕಾರರನ್ನು. ಚಿಂತನಶೀಲರನ್ನು ಆಮಂತ್ರಿಸಿ ನಾಡು-ನುಡಿ. ಆರ್ಥಿಕ. ಸಾಮಾಜಿಕ. ಧಾರ್ಮಿಕ. ಐತಿಹಾಸಿಕ. ಸಾಂಸ್ಕೃತಿಕ ವಿಷಯಗಳ ಮೇಲೆ ವಿದ್ವತ್‌ಪೂರ್ಣ ಉಪನ್ಯಾಸಗಳನ್ನು ಕೊಡಿಸಿದ್ದಾರೆ. ಬನಹಟ್ಟಿಯ ಶ್ರೀ ಭದ್ರಣ್ಣವರ. ಶ್ರೀ ಹುಲಗಬಾಳಿ. ಶ್ರೀ ಮುನವಳ್ಳಿ ಮೊದಲಾದವರ ಒಡನಾಟ-ಮಾರ್ಗದರ್ಶನದಲ್ಲಿ ಬೆಳೆದ ಬೆಳಗಲಿಯವರು. 'ಧನದಲ್ಲಿ ಶುಚಿ'. 'ಪ್ರಾಣದಲ್ಲಿ ನಿರ್ಭಯರು'. ಬನಹಟ್ಟಿಯ ತಮ್ಮಣ್ಣಪ್ಪ ಚಿಕ್ಕೋಡಿ ಹಾಗೂ ಪಂಡಿತಪ್ಪ ಚಿಕ್ಕೋಡಿಯವರು ಸಾಹಿತ್ಯಾಭಿಮಾನಿಗಳೂ. ದೇಶಾಭಿಮಾನಿಗಳೂ ಆದ ಅವರು ತಮ್ಮ ಬದುಕನ್ನು ನಾಡು-ನುಡಿಗಾಗಿ

---

೩. ಶ್ರೀ ಮ.ನಿ.ಪ್ರ. ಮಹಾಂತಸ್ವಾಮಿಗಳವರು : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಶುಭಹಾರೈಕೆ

ಸಮರ್ಪಿಸಿಕೊಂಡವರು. ಅಂಥ ಮಹಾತ್ಮರ ಪುಣ್ಯಭೂಮಿಯಲ್ಲಿ ಬೆಳಗಲಿಯವರು ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಂಡವರು.

ಬೆಳಗಲಿಯವರ ಬದುಕೂ ಹಸನ. ಬರಹವೂ ಹಸನ. ಸ್ನೇಹಮಯಿ. ವಿವಾದಾತೀತ ವ್ಯಕ್ತಿ. ನಿರಾಡಂಬರಜೀವಿ. ನಿರ್ವ್ಯಸನಿ. ಅಧ್ಯಯನ ಶೀಲತೆ ಅವರಲ್ಲಿ ಎದ್ದು ಕಾಣುವ ವ್ಯಕ್ತಿತ್ವ. ಒಬ್ಬ ಸಾಹಿತಿಗಿರಬಹುದಾದ ಎಲ್ಲ ಗುಣಗಳೂ ಅವರಲ್ಲಿವೆ. ಅವರಿಗೆ ಬಡವರನ್ನು ಕಂಡರೆ ಎಲ್ಲಿಲ್ಲದ ಪ್ರೀತಿ ಮತ್ತು ಅಕ್ಕರೆ. ಸಕಲಜೀವಾತ್ಮರಿಗೂ ಲೇಸನ್ನೇ ಬಯಸುವ ಮನೋಧರ್ಮದ ಲೇಖಕರು. ನುಡಿದಂತೆ ನಡೆವ ಇವರಿಗೆ ಸುಳ್ಳು-ಕಪಟ-ವಂಚನೆಯೆಂದರೆ ಆಗದು. ತಮ್ಮ ಚಿ. ಮಧುಕೇಶ್ವರನಿಗೆ ಕನ್ಯೆ ನೋಡುವ ಸಂದರ್ಭವೊಂದರಲ್ಲಿ. " ಕನ್ಯೆ ಬಡವರ ಮಗಳಾದರೂ ಚಿಂತೆಯಿಲ್ಲ. ಲಕ್ಷಣವಾಗಿರಬೇಕು. ವಿದ್ಯಾವಂತೆ-ಗುಣವಂತೆಯಾದರೆ ಸಾಕು. ಸುಸಂಸ್ಕೃತ ಮನೆತನದಲ್ಲಿ ಬೆಳೆದ ಕನ್ಯೆಯಾದರೆ ಸಾಕು. ವರದಕ್ಷಿಣೆ-ವರೋಪಚಾರಗಳ ಬಗೆಗೆ ತಲೆಕೆಡಿಸಿಕೊಳ್ಳಬೇಡಿ. ಅಷ್ಟೇ ಅಲ್ಲ ನಾನು ' ವರದಕ್ಷಿಣೆ ' ವಿರೋಧಿ. ಸಂತೋಷದ-ಸರಳ ವಿವಾಹ ಮಾಡಿಕೊಟ್ಟರೆ ಸಾಕು ". ಎಂದು ತಮ್ಮ ಆತ್ಮೀಯರೊಬ್ಬರ ಮುಂದೆ ಹೇಳಿದ್ದನ್ನು ನೋಡಿದರೆ ಬೆಳಗಲಿಯವರ ವ್ಯಕ್ತಿತ್ವದ ನಿಜವಾದ ರೂಪ ಅರ್ಥವಾಗದಿರದು. ಅವರು ಬಯಸಿದಂಥ ಕನ್ಯೆಯನ್ನೇ ಸೊಸೆಯಾಗಿ ಸ್ವೀಕರಿಸಿದ್ದು ಬೆಳಗಲಿಯವರ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಂತಿದೆ. ಹೀಗೆ ಬದುಕು-ಬರಹಗಳೆರಡರಲ್ಲಿಯೂ ' ಸ್ವಚ್ಛ ' ವಾಗಿರುವವರು ತೀರ ವಿರಳ. ಬೆಳಗಲಿಯವರು ತುಂಬ ಸ್ವಾಭಿಮಾನಿಗಳು. ಆದರೆ ಅವರ ಆ ಸ್ವಾಭಿಮಾನವೆಂದೂ ದುರಭಿಮಾನವಾಗಿದ್ದಿಲ್ಲ. ಗೌರವ ಕೊಟ್ಟು ಗೌರವ ಪಡೆಯುವ ವ್ಯಕ್ತಿತ್ವವದು. ತಮ್ಮೊಂದಿಗೆ ಎಷ್ಟೇ ಕಿರಿಯರು. ಸಾಹಿತ್ಯಾಸಕ್ತರು ಚರ್ಚಿಸಿದರೆ ಎಂದಿಗೂ ಬೇಸರಿಸಿಕೊಳ್ಳದೆ ಅವರು ಕೇಳಿದ್ದಕ್ಕಿಂತ ಹೆಚ್ಚಿನ ವಿವರಣೆ ನೀಡುತ್ತ ಅವರಲ್ಲಿ ಹೊಸಹುರುಪು ತುಂಬಿ. ಬೆನ್ನುತಟ್ಟಿ ಪ್ರೋತ್ಸಾಹಿಸುವವರು.

ಬೆಳಗಲಿಯವರು ದಣಿವರಿಯದ ದುಡಿಮೆಗಾರರು. ಸಾಹಿತ್ಯಸೇವೆಯಲ್ಲಿ ಕರ್ತವ್ಯಕ್ಕೆ ದ್ರೋಹ ಬಗೆದವರಲ್ಲ. ಪೋಜು ಕೊಟ್ಟವರಲ್ಲ: ಮೋಜು ಉಡಾಯಿಸಿದವರಲ್ಲ. ಕಾಲಕಾಲಕ್ಕೆ ವಿದ್ಯಾರ್ಥಿಗಳ ಬೋಧನೆ. ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿ ಸರಿಯಾದ ಅಂಕಪಟ್ಟಿ ಸಲ್ಲಿಸುವುದು. ಹಾಜರಿಕೆಲಸ. ಲೈಬ್ರರಿ ಕೆಲಸ. ಅಷ್ಟೇ ಯಾಕೆ ಕೆಲವು ಸಲ ಪ್ರಸಂಗ ಬಿದ್ದರೆ ಕಾರಕೂನಕಿ-ಕಂ-ಮಾಸ್ತರಕಿ ಗಾಳಿಯಲ್ಲಿಯೂ ಸಾಹಿತ್ಯದ ಸೊಡರು ಆರದಂತೆ ನೋಡಿಕೊಂಡವರು. ಕೆಲಸದ ವೇಳೆಯಲ್ಲಿ ವೈಯಕ್ತಿಕ ಸಾಹಿತ್ಯಿಕ ಬರವಣಿಗೆ ಎಂದಿಗೂ ಮಾಡಲಾರದ ನಿಷ್ಠೆ ಅವರಲ್ಲಿತ್ತು. ಅಷ್ಟೇ ಯಾಕೆ ಒಂದು ಅಂಚೆ ಕಾರ್ಡನ್ನೂ ಕೂಡ ಬರೆಯದ ಕರ್ತವ್ಯ ಪಾಲನೆಯವರದು. ಮನೆಗೆಲಸ ಮನೆಯಲ್ಲಿ. ಶಾಲಾಕೆಲಸ ಶಾಲೆಯಲ್ಲಿ. ಎರಡರಲ್ಲಿಯೂ ಶಿಸ್ತು – ಎರಡರಲ್ಲಿಯೂ ದಕ್ಷತೆ. ಎರಡರಲ್ಲಿಯೂ ಪ್ರಶಸ್ತಿ-ಪುರಸ್ಕಾರ ಸಿಕ್ಕಿದ್ದು ಈ ಕಾರಣಕ್ಕಾಗಿಯೇ.

ಬದುಕಿನಲ್ಲಿ ಅನೇಕ ಕಷ್ಟ-ನಷ್ಟ ಅನುಭವಿಸಿದ ಬೆಳಗಲಿಯವರು ಎಂದಿಗೂ ಎದೆಗುಂದದೆ ಸದಾ ತಮ್ಮ ವೃತ್ತಿ-ಪ್ರವೃತ್ತಿಗಳಲ್ಲಿ ತಲ್ಲೀನರಾಗುತ್ತಾ ಅವುಗಳನ್ನೆಲ್ಲ ಮರೆಯಲು ಪ್ರಯತ್ನಿಸಿದವರು. ' ಬಿಸಿಲು-ಬೆಳದಿಂಗಳು 'ಗಳೆರಡನ್ನೂ ತಮ್ಮ ಬದುಕಿನಲ್ಲಿ ಕಂಡ ಬೆಳಗಲಿಯವರು. ಹೆಚ್ಚಾಗಿ ಪಡೆದದ್ದು ಬಿಸಿಲನ್ನೇ. ಕೈಗೆ ಬಂದ

ಮಗ ಅಗಲಿದ್ದು. ಸದಾ ಕಾಡುವ ಅನಾರೋಗ್ಯ ಇವೆರಡು ಅವರ ಮನಸ್ಸನ್ನು ಹಿಂಡುತ್ತಿದ್ದ ಸಂಗತಿಗಳು. ಇದರ ಮಧ್ಯದಲ್ಲಿಯೂ ಬತ್ತದ ಅವರ ಸಾಹಿತ್ಯ ಚಿಲುಮೆಯನ್ನು ನೋಡಿದರೆ. 'ಯಮನಿಗೇ ಸವಾಲು ಹಾಕಿದ ಸಾವಿತ್ರಿ'ಯ 'ಛಲ' ನೆನಪಿಗೆ ಬರುತ್ತದೆ.

ಬೆಳಗಲಿಯವರ ಸ್ನೇಹ ಬಳಗವೂ ದೊಡ್ಡದು. ಶೈಕ್ಷಣಿಕ-ಸಾಮಾಜಿಕ ಕ್ಷೇತ್ರಗಳಲ್ಲಿ ಅವರ ಆತ್ಮೀಯರ ಬಳಗವಿದೆ. ಮೂಲತಃ ಶಿಕ್ಷಕರಾದ ಬೆಳಗಲಿಯವರಿಗೆ ಶಿಕ್ಷಕ ಬಂಧುಗಳು ಸಹಜ ಆತ್ಮೀಯರು. ಕೇವಲ ಸ್ನೇಹಕ್ಕಾಗಿ ಸ್ನೇಹ ಮಾಡದ ಬೆಳಗಲಿಯವರು. ವ್ಯಕ್ತಿತ್ವಕ್ಕಾಗಿ ಸ್ನೇಹ ಮಾಡುವವರು. ಪರಸ್ಪರ ಒಡನಾಟದಿಂದ ಪರಸ್ಪರರ ವ್ಯಕ್ತಿತ್ವ-ಘನತೆ ಬೆಳೆದು ಸಮಾಜಕ್ಕೆ ಕಿಂಚಿತ್ತಾದರೂ ಉಪಯೋಗವಾಗಬೇಕೆಂಬುದು ಅವರ ಸ್ನೇಹದ ಗುಟ್ಟು. ಉತ್ತರ ಭಾರತದಲ್ಲಿಯೂ ಇವರಿಗೆ ಅನೇಕ ಸ್ನೇಹಿತರಿದ್ದಾರೆ. ಪ್ರೇಮಚಂದರ ಶತಮಾನೋತ್ಸವದಲ್ಲಿ ಪಾಲ್ಗೊಳ್ಳಲು. ರಾಷ್ಟ್ರಪ್ರಶಸ್ತಿ ಸ್ವೀಕರಿಸಲು ಹೀಗೆ ಅನೇಕ ಕಾರಣಗಳಿಗಾಗಿ ದಿಲ್ಲಿಯತ್ತ. ಪಂಜಾಬದತ್ತ. ಹೋದಾಗ ಅಲ್ಲಿನ ಸ್ನೇಹಬಳಗವನ್ನೇ ಮನದಲ್ಲಿ ತುಂಬಿಕೊಂಡು ಬರುವ ಬೆಳಗಲಿಯವರು ಒಬ್ಬ ಉತ್ತಮ ಸೌಜನ್ಯಶೀಲ ಸ್ನೇಹಜೀವಿ. ಮರಾಠಿಗೂ-ಬೆಳಗಲಿಯವರಿಗೂ ಉತ್ತಮ ಅಂಟು-ನಂಟು: ಆ ಭಾಷೆಯ ಅನೇಕ ಲೇಖಕರೊಂದಿಗೆ ಅವರ ಒಡನಾಟ. ಆ ಒಡನಾಟ 'ಒಣ'ದಲ್ಲ. ಅದರ ಪ್ರತಿಫಲವಾಗಿ ಅನೇಕ ಮರಾಠಿ ಆತ್ಮಕಥೆಗಳನ್ನು ಕನ್ನಡಕ್ಕೆ ಅನುವಾದಿಸಿದರು. ಕನ್ನಡದ ಬಹುತೇಕ ಹಿರಿ-ಕಿರಿಯ ಲೇಖಕರೊಂದಿಗೆ ಸದಾ ಸ್ನೇಹ-ಸಂಪರ್ಕದಲ್ಲಿದ್ದ ಬೆಳಗಲಿಯವರು. ಅಥಣಿ ದೇವದಾಸಿ ವಿಮೋಚನಾ ಸಂಸ್ಥೆಯೊಂದಿಗೆ 'ಪ್ರಗತಿಪರ' ಸ್ನೇಹವನ್ನು ಹೊಂದಿದವರು. ಆ ಸಂಸ್ಥೆಯ ಉದ್ದೇಶದ ಈಡೇರಿಕೆಗಾಗಿ ಸಾಹಿತ್ಯಿಕವಾಗಿ ಶ್ರಮಿಸಿದವರು. 'ಆ ಸಂಸ್ಥೆ – ಈ ಬೆಳಗಲಿಯವರ' ಉದ್ದೇಶಗಳು ಒಂದೇ ರೀತಿಯಾಗಿದ್ದು. 'ಸಮಾಜ ಸುಧಾರಣೆ'ಯೇ ಪರಸ್ಪರರ 'ಏಕಸೂತ್ರ'ವಾಗಿತ್ತು.

ಬಹುಮುಖ ಪ್ರತಿಭೆಯ ಬೆಳಗಲಿಯವರು ನುಡಿದಂತೆ ನಡೆದಿದ್ದಾರೆ. ನಡೆದಷ್ಟು ಪಡೆದಿಲ್ಲವಾದರೂ. ಸದಾ ಹಸನ್ಮುಖರಾಗಿಯೇ ಇರುತ್ತಿದ್ದ ಅವರ ವ್ಯಕ್ತಿತ್ವ. ಸಹಜ-ಸರಳ-ಸೌಮ್ಯಗಳ ಪ್ರತಿರೂಪವಾಗಿದೆ. 'ತಾನು ಆತ್ಮೀಯನಾಗಿದ್ದರೆ. ಇನ್ನೊಬ್ಬರಲ್ಲಿಯೂ ಆತ್ಮೀಯತೆಯನ್ನು ಪಡೆಯಲು ಸಾಧ್ಯ' ವೆಂಬುದೇ 'ಬೆಳಗಲಿ ವ್ಯಕ್ತಿತ್ವ'ದ ಒಡಲಾಳದ ಧ್ವನಿ.

**ಬೆಳಗಲಿಯವರ ಕೊಡುಗೆ :**

ಬೆಳಗಲಿಯವರು ಬದುಕಿದಂತೆ ಬರೆದವರು. ಬರೆದಂತೆ ಬೆಳೆದವರು. ಬೆಳೆದಂತೆ ಉಳಿದವರು. ಅವರಿಗೆ ಬದುಕು-ಬರಹಗಳೆರಡೂ ಒಂದೇ. ಅವು ಎಂದಿಗೂ ಬೇರೆ-ಬೇರೆಯೆಂದು ಪರಿಗಣಿಸಲಿಲ್ಲ. ಅವೆರಡರ ಗಾಢವಾದ ಸಂಬಂಧವನ್ನು ಸ್ಪಷ್ಟವಾಗಿ ಅರಿತುಕೊಂಡವರು. ಹೀಗಾಗಿ ಅವರ ಬದುಕಿನ ಉದ್ದೇಶವು ಬರಹದ ಉದ್ದೇಶವಾಗಿತ್ತು. ಈ ಉನ್ನತ ಉದ್ದೇಶ ಸಾಧನೆಗಾಗಿ ಅವರು ಬದುಕು-ಬರಹಗಳೆರಡರಲ್ಲಿ ತುಳಿದ ದಾರಿ ಗಟ್ಟಿಯಾಗಿದೆ. ಚಿರಕಾಲ ಉಳಿಯಬಲ್ಲ ಸತ್ವ ಅದಕ್ಕಿದೆ. ಮೂಲತಃ ಬೆಳಗಲಿಯವರು ಶಿಕ್ಷಕರು. ಶಿಕ್ಷಕಹೃದಯವುಳ್ಳವರು. ಶಿಕ್ಷಕರನ್ನು

ಇಂದಿಗೂ ಸಮಾಜ ಉನ್ನತ ಸ್ತರದಲ್ಲಿ ಕಂಡು ಗೌರವಿಸುತ್ತಿದೆ. ' ದೇಶದ ಭವಿಷ್ಯ ಕ್ಲಾಸರೂಮಿನಲ್ಲಿ ನಿರ್ಮಾಣವಾಗುತ್ತದೆ ' ಎಂದು ಹೇಳುತ್ತಾರೆ. ಅದಕ್ಕೆ ಶಿಕ್ಷಕನೇ ನಿರ್ಮಾತೃ. ಶಿಕ್ಷಕರು ಸೌಮ್ಯರು. ಸರಳರು. ಸಜ್ಜನರು. ನಿಗರ್ವಿಗಳು. ಸಮಾಜಚಿಂತಕರು. ಅನುಕಂಪ ಶೀಲರು. ಕರುಣಾಮಯಿಗಳು. ಪ್ರಗತಿಪರರು. ಸಮಾಜಸುಧಾರಣೆಗಾಗಿ ಸದಾ ಹಂಬಲಿಸುವವರು. ಎಂಬುದು ಇಂದಿಗೂ ಜನರು ಶಿಕ್ಷಕರ ಮೇಲಿಟ್ಟ ಭರವಸೆಯ ನಂಬಿಕೆಗಳು: ಶಿಕ್ಷಕರು ಹಾಗಿರುವವರೂ ಕೂಡ. ಬೆಳಗಲಿಯವರು ಇದಕ್ಕೆ ಉತ್ತಮ ನಿದರ್ಶನ. ಬದುಕು ಹಾಗೂ ಸಾಹಿತ್ಯವನ್ನು ಪೂರಕವಾದ ಸಂಬಂಧದಲ್ಲಿ ಗಾಢವಾಗಿ ಬೆಸೆದು ಬರವಣಿಗೆ ಮಾಡಿದ್ದು ಬೆಳಗಲಿಯವರ ಮಹತ್ತರ ಕೊಡುಗೆ.

' ನೂರು ಖಡ್ಗಗಳಿಗಿಂತ ಒಂದು ಪೆನ್ನು ಹರಿತ 'ವೆಂಬುದು ಅಕ್ಷರಶಃ ಸತ್ಯ. ಸಾಹಿತಿ ಸಮಾಜಕ್ಕಾಗಿ ಬರೆದರೆ ಮಾತ್ರ ಅವನ ಸಾಹಿತ್ಯಕ್ಕೂ-ವ್ಯಕ್ತಿತ್ವಕ್ಕೂ ದೊಡ್ಡಸ್ತಿಕೆ ಪ್ರಾಪ್ತಿ. ಸಾಹಿತ್ಯವನ್ನು ಬೆಳಗಲಿಯವರು ಭಾವುಕರ ಭಾವಪ್ರಧಾನ ಕ್ರಿಯೆಯೆಂದಾಗಲಿ. ಉಂಡುಟ್ಟು ಸುಖವಾಗಿದ್ದವರ ಹವ್ಯಾಸವೆಂದಾಗಲಿ. ಮನರಂಜನೆಯ ಸಾಧನವೆಂದಾಗಲಿ ಪರಿಗಣಿಸದೆ. ಅದಕ್ಕೆ ಬದಲಾಗಿ. ಸಾಹಿತ್ಯ ಸಮಾಜದಲ್ಲಿ ಬೀಡುಬಿಟ್ಟ ಅನಿಷ್ಟ ಸಂಪ್ರದಾಯ. ಮೂಢನಂಬಿಕೆಗಳನ್ನು. ಸಾಮಾಜಿಕ ವಿಕೃತಿಗಳನ್ನು. ಶೋಷಣೆಗಳನ್ನು. ಅಸಮಾನತೆಯನ್ನು. ವಿಸಂಗತಿಗಳನ್ನು ಬಯಲಿಗೆಳೆದು ಸಾಮಾಜಿಕ ಸ್ವಾಸ್ಥ್ಯವನ್ನು ತರಬಲ್ಲ ಒಂದು ಉತ್ತಮ ಸಾಧನವೆಂದು ಪರಿಗಣಿಸಿದವರು. ಅವರ ಈ ನಿಲುವಿನ ಹಿಂದೆ ಸಮಾಜವಾದಿ ಮನಸ್ಸೊಂದರ ಸಮಾನತೆಯ ತುಡಿತವಿದ್ದುದು ಎದ್ದು ಕಾಣುತ್ತದೆ. ಶೋಷಣೆರಹಿತ ಸಮಾಜದ ಜೊತೆಗೆ. ಶೋಷಿತ ಜನತೆ ನೆಮ್ಮದಿಯಿಂದ ಬದುಕಬೇಕೆಂಬ ಕಳಕಳಿ-ಹಂಬಲವನ್ನು ಹೊಂದಿದ್ದ ಅವರು ಈ ಕನಸು-ಕಳಕಳಿಯನ್ನು ಸಾಕಾರಗೊಳಿಸುವ ಉದ್ದೇಶದಿಂದಲೇ ಬರೆದವರು: ತಮ್ಮ ಈ ಉದ್ದೇಶದಲ್ಲಿ ಸಾಫಲ್ಯವನ್ನು ಕಂಡು ಸಂತೋಷಪಟ್ಟವರೂ ಕೂಡ. ಸಾಹಿತ್ಯಕ್ಕಾಗಿ ಸಾಹಿತ್ಯಸೃಷ್ಟಿಯಲ್ಲ. ಕಲೆಗಾಗಿ ಕಲೆಯಲ್ಲ. ಬದುಕುವುದಕ್ಕಾಗಿ ಬದುಕು ಅಲ್ಲ ಎಂಬುದನ್ನು ಅಕ್ಷರಶಃ ತಮ್ಮ ವೃತ್ತಿ-ಪ್ರವೃತ್ತಿಗಳೆರಡರಲ್ಲಿಯೂ ಪಾಲಿಸಿಕೊಂಡು ಬಂದವರು. ಇದು ಅವರ ಸಮಗ್ರ ಬದುಕು-ಬರಹಗಳ ಹಿಂದಿರುವ ಬಹುಮುಖ್ಯ ಆಶಯ. ಭಾರಾ-ಭಾನಗಡಿಗಳ ಆಖಾಡವಾಗುತ್ತಿರುವ ಪ್ರಸ್ತುತ ಸಮಾಜ ಹದಗೆಟ್ಟು ಹೋಗುತ್ತಿದ್ದು. ಇಂಥ ಸಮಾಜದಲ್ಲಿ ಬದುಕು ಬಂಗಾರವಾಗುವುದು ಬರೀ ಹರಕೆ-ಹಾರೈಕೆಗಳಿಂದ ಸಾಧ್ಯವಿಲ್ಲವೆಂಬುದನ್ನು ಖಚಿತವಾಗಿ ಅರಿತಿದ್ದ ಬೆಳಗಲಿಯವರು ಸಾಹಿತ್ಯ ಮಾತ್ರ ಸಾಮಾಜಿಕ ಸುಧಾರಣೆಯನ್ನು ತರಬಲ್ಲದು ಎಂದು ನಂಬಿ. ಅದೇ ಉದ್ದೇಶದಿಂದಲೇ ಬರೆಯುತ್ತ ಬಂದ ಅವರ ಪ್ರತಿ ಕಾದಂಬರಿಗಳಲ್ಲಿ ಹಾಗೂ ಅವರ ಕಥೆಗಳಲ್ಲಿ ಅಲ್ಲದೆ ಅವರ ಇತರ ಬರವಣಿಗೆಗಳಲ್ಲಿ ಇದೇ ನಡೆಯನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ. ಬರೆಯುತ್ತ ಬರೆಯುತ್ತಲೇ ಬೆಳೆದಿರುವ ಬೆಳಗಲಿಯವರು ಸಾಮಾಜಿಕ ಸ್ವಾಸ್ಥ್ಯವನ್ನು ತಕ್ಕಮಟ್ಟಿಗೆ ಬೆಳೆಸಿದವರು. ಒಬ್ಬ ಸಮಾಜವಾದಿಯಂತೆ ಸಮಾಜವನ್ನು ಕಂಡು. ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ಅದನ್ನು ತಮ್ಮ ಕೃತಿಗಳಲ್ಲಿ ವಿಶ್ಲೇಷಿಸುತ್ತ ಹೋಗುವ ಬೆಳಗಲಿಯವರಿಗೆ ' ಸ್ವಾತಂತ್ರ್ಯಾನಂತರದ ಗ್ರಾಮೀಣ ಬದುಕು ' ತುಂಬ ಬೇಸರ ತಂದಿದೆ. ಅದಕ್ಕಾಗಿ ವಿಶೇಷ ಕಾಳಜಿ ವಹಿಸುತ್ತ. ಪ್ರತಿ ಗ್ರಾಮದ ಅಂಕು ಡೊಂಕು. ಅರೆ-ಬರೆ. ಅವ್ಯವಸ್ಥೆಯ ಮೂಲಕಾರಣಗಳನ್ನೆಲ್ಲ ಶೋಧಿಸಿ-ಪರಿಶೋಧಿಸಿ ಗ್ರಾಮೀಣರಲ್ಲಿ ನೆಮ್ಮದಿ ತರುವಂತೆ ತುಂಬ

ಕಳಕಳಿಯಿಂದಲೇ ಕೃತಿರಚನೆ ಮಾಡಿದ ಅವರು ಒಬ್ಬ ಅಪ್ಪಟ ಗಾಂಧೀವಾದಿಯಂತೆ. ಗಾಂಧೀಜಿ ಕನಸನ್ನು ಗ್ರಾಮೀಣರಲ್ಲಿ ನನಸು ಮಾಡಿಸುವ ಯೋಚನೆ-ಯೋಜನೆಯ ಹಿನ್ನೆಲೆಯಲ್ಲಿಯೇ ಸಾಹಿತ್ಯ ಸೇವೆಗೈದಿದ್ದಾರೆ.

ಶೈಕ್ಷಣಿಕ-ಸಾಮಾಜಿಕ ಕ್ಷೇತ್ರಗಳೆರಡೂ ಬೆಳಗಲಿಯವರ ನೆಚ್ಚಿನ ಕ್ಷೇತ್ರಗಳು; ಅವೆರಡೂ ಅವರ ಬರವಣಿಗೆಯ ಎರಡು ಕಣ್ಣುಗಳಿದ್ದಂತೆ. ಶಿಕ್ಷಣಕ್ಷೇತ್ರದ ಅನೇಕ ಕುಂದುಕೊರತೆ. ಶಿಕ್ಷಕ-ವಿದ್ಯಾರ್ಥಿಗಳ ಅನಾಚಾರ. ಅನೀತಿಗಳನ್ನು ತಮ್ಮ ಅನೇಕ ಕಾದಂಬರಿಗಳಲ್ಲಿ ಹೊರಗೆಳೆದಿದ್ದಾರೆ. ಜೊತೆಗೆ ಆದರ್ಶಶಿಕ್ಷಕ-ವಿದ್ಯಾರ್ಥಿಗಳನ್ನೂ ಅಲ್ಲಿಯೇ ಚಿತ್ರಿಸಿ. 'ಸಮತೋಲನ' ಪ್ರಜ್ಞೆಗಾಗಿ ಹಂಬಲಿಸಿದ್ದಾರೆ. ಸ್ವತಃ ಶಿಕ್ಷಕರಾದ ಬೆಳಗಲಿಯವರಿಗೆ ಶೈಕ್ಷಣಿಕ ಅನಾಚಾರಗಳನ್ನು. ಹದಗೆಟ್ಟ ಆ ಕ್ಷೇತ್ರದ ಹುಳುಕುಗಳನ್ನು ಶೋಧಿಸುವುದು—ಅಭಿವ್ಯಕ್ತಿಸುವುದು ಅಷ್ಟು ತೊಂದರೆಯ ವಿಷಯವಲ್ಲ. ಶಿಕ್ಷಕ ವೃತ್ತಿಯೊಂದು ಪವಿತ್ರ ಕೆಲಸವೆಂದು ನಂಬಿದ್ದ ಅವರು ಅನೇಕ ಆದರ್ಶ ಶಿಕ್ಷಕರ ಪಾತ್ರಗಳನ್ನೂ. ವಿದ್ಯಾರ್ಥಿಗಳನ್ನೂ ಚೆನ್ನಾಗಿ ಚಿತ್ರಿಸುತ್ತ ಆ ಕ್ಷೇತ್ರದ ಏಳ್ಗೆಯನ್ನು ಪ್ರಾಂಜಲ ಮನಸ್ಸಿನಿಂದ ಬಯಸಿದವರು.

"ಬೆಳಗಲಿ ಅವರು ತಮ್ಮ ಕಥೆ-ಕಾದಂಬರಿಗಳಲ್ಲಿ ತಮ್ಮ ಸುತ್ತಲಿನ ಪರಿಸರದ ಚಿತ್ರಣವನ್ನು ಜೀವಂತವಾಗಿ ಕಂಡಿದ್ದಾರೆ. ಆ ಭಾಷೆಯು ನಮಗೆ ಪರಿಚಿತವಾದ ಸಾಹಿತ್ಯಿಕ ಭಾಷೆಯಾಗಿರದೆ ತನ್ನದೇ ಆದ ಸೊಗಸು. ಸೊಗಡುಗಳಿಂದ ತುಂಬಿದ ಬಿಜಾಪುರ. ಬಾಗಲಕೋಟೆ ಜಿಲ್ಲೆಗಳಲ್ಲಿ ಪ್ರಚಲಿತವಿರುವ ಆಡುನುಡಿಯಾಗಿದೆ. ಬೆಳಗಲಿ ಅವರ ಕೃತಿಗಳಲ್ಲಿ ಜೀವನ ಉಕ್ಕಿ ಹರಿಯುತ್ತದೆ. ಬೆಳಗಲಿ ಅವರ ಕೃತಿಗಳಲ್ಲಿ 'ಮಣ್ಣಿನ ವಾಸನೆ' ಚೆಲ್ಲುತ್ತದೆ. ಜೀವನವನ್ನು ಇಷ್ಟು ಹತ್ತಿರದಿಂದ ನೋಡುವ ಲೇಖಕರು ನಮ್ಮಲ್ಲಿ ವಿರಳ ಎಂದೇ ಹೇಳಬೇಕು".[೪] ಹಾಮಾನಾ ಅವರ ಈ ಮಾತುಗಳು. ಬೆಳಗಲಿಯವರ ಸಾಹಿತ್ಯಿಕ ಸೇವೆಯನ್ನು ಸರಿಯಾಗಿ ಗುರುತಿಸಿದ್ದಕ್ಕೆ ಸಾಕ್ಷಿ. ಬೆಳಗಲಿಯವರಿಗೆ ಮಧ್ಯಮ ಹಾಗೂ ಕೆಳವರ್ಗದವರ ಬದುಕಿನ ಬಗ್ಗೆ ಯಾವಾಗಲೂ ಆಸಕ್ತಿ. ಅವರ ಬಹುತೇಕ ಕಾದಂಬರಿಗಳಲ್ಲಿ ತುಂಬಿಕೊಂಡಿದ್ದು ಈ ಸ್ತರದ ಜನಜೀವನವೇ. ಮಧ್ಯಮ ವರ್ಗ. ಕೆಳವರ್ಗ ಹಾಗೂ ದಲಿತ ಸಮುದಾಯದ ಜೀವನವನ್ನು ತೆರೆದ ಕಣ್ಣಿನಿಂದ ಕಂಡಿರುವ ಬೆಳಗಲಿಯವರ ಗ್ರಾಮೀಣ ಬದುಕಿನ ತಳಹದಿಯಿಂದಲೇ ಮೊಳಕೆ ಒಡೆದು ಮೇಲೆದ್ದ ಕಥೆಗಳಲ್ಲಿ 'ಮುತ್ತಿನ ತೆನೆ'ಗಳನ್ನು ಒಡಿದು-ಆಯ್ದುಕೊಟ್ಟಿದ್ದಾರೆ. 'ಹಡೆದವರು' ಹಾಗೂ 'ಜೋಗಿಮರಡಿ'ಯಂಥ ಕೃತಿಗಳು ಪ್ರಾದೇಶಿಕ ಸೊಗಡಿನಿಂದ ಕೂಡಿದ್ದರೆ. ಪ್ರಬಲವಾದ ಸಾಮಾಜಿಕ ಸಮಸ್ಯೆಯೊಂದನ್ನು ದಲಿತ ಜೀವನದ ಹಾಸು-ಹೊಕ್ಕಿನಲ್ಲಿ ನೇಯ್ದ 'ದೇವದಾಸಿ' ಕಾದಂಬರಿ ಸಂಪ್ರದಾಯದಲ್ಲಿರುವ ಕೇಡನ್ನು ಕೃತಿಗೆ ಊನವಾಗದಂತೆ ಚಿತ್ರಿಸಿರುವ ಮಹತ್ವದ ಕೃತಿಯಾಗಿದೆ. ಹಲವು ದೃಷ್ಟಿಗಳಿಂದ ಅವರ ಕಾದಂಬರಿಗಳಲ್ಲಿಯೇ ಅತ್ಯಂತ ಮಹತ್ವದ ಕೃತಿ. ಅವರ ಸಾಮಾಜಿಕ ಚಿಂತನೆ. ಕಳಕಳಿ. ಅಸ್ಪೃಶ್ಯತೆಯನ್ನು ತೊಡೆದು ಹಾಕಲು ವೈಚಾರಿಕತೆ. ಅದಕ್ಕೆ ಪೂರಕವಾಗಿ ಇಂದಿನ ಸಮಾಜದಲ್ಲಿ ಎಂತಹ ಸದ್ಭಾವನೆಗಳನ್ನು ಜನ ರೂಢಿಸಿಕೊಳ್ಳಬೇಕೆಂಬ ಕಳಕಳಿಯ ಅರಿಕೆ. ಅವಕ್ಕೆ ಪೂರಕವಾಗಿ ವಿಚಾರಶೀಲ ನೈಜ ಪಾತ್ರಗಳನ್ನು ರಚಿಸಿದ್ದಾರೆ. ಅವರು ಸೃಷ್ಟಿಸಿದ ಪಾತ್ರಗಳೆಲ್ಲ ವಾಸ್ತವ ಪ್ರಪಂಚದಿಂದ ಎಳೆದು ತಂದ ಸಹಜವ್ಯಕ್ತಿಗಳು.

---

೪. ಹಾ. ಮಾ. ನಾಯಕ: ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೭. ೮

ಅಂತೆಯೇ ಅವರ ಕೃತಿಗಳು ಜನಪರವಾಗಿವೆ. ಕೃಷಿವಲಯವರ್ತುಲದಲ್ಲಿ ಬರುವ ವೈವಿಧ್ಯಮಯವಾದ ಸನ್ನಿವೇಶಗಳು. ಸಮಸ್ಯೆಗಳು. ಪಟ್ಟಣ ವಲಸೆಯ ಪರಿಣಾಮಗಳು. ವಿಶೇಷವಾಗಿ ಹೆಣ್ಣುಮಕ್ಕಳ ಶೋಷಣೆಯ ಹತ್ತು-ಹಲವು ಮುಖಗಳನ್ನು ದಟ್ಟವಾಗಿ ಚಿತ್ರಿಸಿದ್ದಾರೆ. ಗ್ರಾಮಸಂಸ್ಕೃತಿಯನ್ನು ಬಿಡಲೂ ಆಗದ. ಪಟ್ಟಣದ ನಾಗರಿಕತೆಗೆ ಹೊಂದಿಕೊಳ್ಳಲೂ ಆಗದ ಹೊಯ್ದಾಟದಲ್ಲಿ ಬದುಕನ್ನು ದುರ್ಭರ ಮಾಡಿಕೊಂಡ ತ್ರಿಶಂಕು ಸ್ಥಿತಿಯಲ್ಲಿ ವ್ಯಾಪಾರಗಳ ಮನೋವಿಶ್ಲೇಷಣೆಯನ್ನು ಅವರು ತಮ್ಮ ಕೃತಿಗಳಲ್ಲಿ ಚೆನ್ನಾಗಿ ವಿವರಿಸಿದ್ದಾರೆ.

ಬೆಳಗಲಿಯವರ ಬಹುಮುಖ್ಯ ಕೊಡುಗೆಯೆಂದರೆ. ಅವರ ಭಾಷಾ ಬಳಕೆ. ಬಿಜಾಪುರ ಜಿಲ್ಲೆಯ ಪರಿಣಾಮಕಾರಿ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡವರೆಂದರೆ. ರಾವಬಹಾದ್ದೂರರು ಮತ್ತು ದು. ನಿಂ. ಬೆಳಗಲಿಯವರು ಮಾತ್ರವೆಂದರೆ ಅತಿಶಯವಾಗದು. ಕಥೆ-ಕಾದಂಬರಿಕಾರರು. ಪ್ರಾದೇಶಿಕ ಜೀವನ. ವ್ಯಕ್ತಿಸಮಸ್ಯೆಗಳನ್ನು. ಬರೆಯಬೇಕಾದಾಗ. ಅದು ಆ ಸಂಸ್ಕೃತಿಯನ್ನು ಸುತ್ತಿಕೊಂಡ ಪರಿಣಾಮಕಾರಿಯಾದ ಭಾಷಾ ಬಳಕೆಗೆ ಹೆಚ್ಚಿನ ಪ್ರಾಮುಖ್ಯತೆ ಕೊಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಬೆಳಗಲಿಯವರು ಬಿಜಾಪುರ ಜಿಲ್ಲೆಯ ಗ್ರಾಮೀಣ ಜನಾಂಗದ ವಿವಿಧ ಸ್ತರಗಳ ಸಾಂಸ್ಕೃತಿಕ ಅಭಿವ್ಯಕ್ತಿಯ ಭಾಷೆಯನ್ನು ವೈವಿಧ್ಯಮಯವಾಗಿ – ಸಂಪೂರ್ಣವಾಗಿ ಬಳಸಿಕೊಂಡು ಸಫಲರಾದುದು.

ಬೆಳಗಲಿಯವರ ಕಾದಂಬರಿಗಳ ಸಂಖ್ಯೆ ಇತರರಿಗೆ ಹೋಲಿಸಿದಾಗ ಕಡಿಮೆಯೇನೋ ಅನ್ನಿಸಬಹುದು. ಆದರೆ ಸತ್ವದ ದೃಷ್ಟಿಯಲ್ಲಿ ಅವುಗಳು ಯಾರ-ಯಾವ ಕೃತಿಗಳಿಗೂ ಕಡಿಮೆಯಾಗದವುಗಳಾಗಿವೆ. ಈ ನಿಟ್ಟಿನಲ್ಲಿ ಅವರ ‘ಹಡೆದವರು’. ‘ಜೋಗಿಮರಡಿ’. ‘ಮೌನಕ್ರಾಂತಿ’. ‘ದೇವದಾಸಿ’ ಹಾಗೂ ‘ಕಾತ್ರಾಳ ರತ್ನಿಯ ಚಾದಂಗಡಿ’ಗಳು ಹೆಸರಿಸಲೇಬೇಕಾದ ಕಾದಂಬರಿಗಳು. ಪ್ರಾದೇಶಿಕ ಭಾಷೆಯಲ್ಲಿ ಸಾಮಾಜಿಕ ವಸ್ತುವನ್ನು ಚೆನ್ನಾಗಿ ದುಡಿಸಿಕೊಂಡ ಬೆಳಗಲಿಯವರು ತಾವೊಬ್ಬ ಸಮರ್ಥ ಕಾದಂಬರಿಕಾರರೆಂಬುದನ್ನು ಸಾಬೀತುಪಡಿಸಿದ್ದಾರೆ. ‘ಹಡೆದವರು’. ವಸ್ತು-ಭಾಷೆ-ಶೈಲಿಯ ದೃಷ್ಟಿಯಿಂದಾಗಿ. ಚಾರ್ಲ್ಸ್ ಡಿಕೆನ್ಸ್‌ನ ‘ಅನಾಥ ಮಕ್ಕಳ ಕಥೆಗಳನ್ನು’ ನೆನಪಿಗೆ ತಂದುಕೊಡುವಷ್ಟು ಸಶಕ್ತ-ಸಪುಷ್ಟ ಉತ್ತಮ ಕಾದಂಬರಿಯಾದರೆ. ‘ಜೋಗಿಮರಡಿ’ ಯಂತೂ ಲೇಖಕರ ಪಳಗಿದ ಕೈಗೆ ಸಾಕ್ಷಿಯಾಗಿದೆ. ‘ಮೌನಕ್ರಾಂತಿ’ ಗಾಂಧೀಜಿಯವರ ಕನಸಿನ ಕೂಸಾದ ‘ರಾಮರಾಜ್ಯ’ದ ಹಂಬಲವನ್ನು ಸಾಕಾರಗೊಳಿಸಿದ ಉತ್ತಮ ಕಾದಂಬರಿ. ‘ದೇವದಾಸಿ’ ಈ ಹಿಂದೆಯೇ ಹೇಳಿದಂತೆ. ಬೆಳಗಲಿಯವರ ಕಾದಂಬರಿಗಳಲ್ಲಿಯೇ ಶ್ರೇಷ್ಠಕೃತಿ. “ಕನ್ನಡ ಕಾದಂಬರಿ ಲೋಕದಲ್ಲಿ ಇದೊಂದು ಒಡೆದು ಕಾಣುವ ಕೃತಿಯೆನ್ನುವುದರಲ್ಲಿ ಸಂಶಯವಿಲ್ಲ”[೫] ವೆಂದು ಹೇಳಿದ ಚೆನ್ನವೀರ ಕಣವಿಯವರ ಮಾತು ಉಪೇಕ್ಷೆಯಿಂದಲ್ಲ. “ಗ್ರಾಮಾಯಣ. ವೈಶಾಖಿಗಳಷ್ಟೇ ಮಹತ್ವದ. ಅವುಗಳಿಗಿಂತ ಹೆಚ್ಚು ಪರಿವರ್ತನಾವಾದಿ ಕಾದಂಬರಿ”[೬] ಎಂಬ

---

೫. ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ. ಬೆನ್ನುಡಿ

೬. ಶಾಂತಿನಾಥ ದೇಸಾಯಿ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ – ಅವಲೋಕನ, ಪುಟ ೧೧೮

ಹೊಗಳಿಕೆ. 'ದೇವದಾಸಿ'ಯ 'ನಡೆ-ನುಡಿ'ಗೆ ಸಂದ ಉನ್ನತ ಗೌರವವಾಗಿದೆ. ಹೀಗಾಗಿ. "ದು. ನಿಂ. ಬೆಳಗಲಿಯವರು ಸಮರ್ಥ ಕಾದಂಬರಿಕಾರರೆನ್ನುವುದಕ್ಕೆ ಎರಡು ಮಾತಿಲ್ಲ. ಈ 'ದೇವದಾಸಿ' ಅವರನ್ನು ಉದಾತ್ತತೆಯ ಹಂತಕ್ಕೇರಿಸಿದೆ"[೭] ಎಂದು ಡಾ. ಎಂ. ಜಿ. ಬಿರಾದಾರ ಅವರ ಮಾತು ವಸ್ತುನಿಷ್ಠವಾಗಿದೆ. 'ಕಾತ್ರಾಳ ರತ್ನಿಯ ಚಾದಂಗಡಿ'ಯೊಂದು ಉತ್ತಮ ಸಾಮಾಜಿಕ ಕೃತಿಯಾಗಿದೆ. ಪ್ರಾದೇಶಿಕ ಮೂಸೆಯಲ್ಲಿ ಮೂಡಿಬಂದ ಈ ಕೃತಿ 'ಕಾತ್ರಾಳ'ದ ಭಾರಾ-ಭಾನಗಡಿ ತಾರಾ-ತಿಗಡಿಗಳನ್ನು ಚೆನ್ನಾಗಿ ಹೊರಹಾಕಿದೆ. ಬೆಳಗಲಿಯವರ ಯಾವುದೇ ಕಾದಂಬರಿಯನ್ನು ತೆಗೆದುಕೊಂಡರೂ. ಅವುಗಳಲ್ಲಿ ಕೇವಲ ಸಮಸ್ಯೆಯ ನಿರೂಪಣೆ ಮಾತ್ರ ಕಾಣದೆ. ಸಮಸ್ಯೆಗೆ ಪರಿಹಾರ ಸೂಚಿಸುತ್ತ ಹೋದುದು ಅವರ ಕೃತಿಗಳ ಉತ್ತಮ ಅಂಶವೂ ಹೌದು. ಅವರ ಕಾದಂಬರಿಗಳ ಯಶಸ್ಸಿಗೆ ಕಾರಣವೂ ಹೌದು. ಕನ್ನಡಕ್ಕೆ ಅವರು ಸಲ್ಲಿಸಿದ ವಿಶೇಷ ಕೊಡುಗೆಯೂ ಹೌದು.

ಬೆಳಗಲಿಯವರ ಎಲ್ಲ ಕಾದಂಬರಿಗಳನ್ನು ಒಳಹೊಕ್ಕು ನೋಡಿದರೆ. ಅವರ ಸಾಹಿತ್ಯಿಕ ಸಾಮರ್ಥ್ಯ. ಕಲೆಗಾರಿಕೆಯ ಪಕ್ವತೆ. ಗ್ರಾಮೀಣ ಜೀವನದ ಗಾಢ ಅನುಭವ. ಅವರ ಸಂವೇದನಾಶೀಲತೆ. ಅವರ ಸಾಮಾಜಿಕ ಕಳಕಳಿ. ಕರುಣೆ. ಹಂಬಲಗಳು ನಮ್ಮ ಗಮನಕ್ಕೆ ಬರುತ್ತವೆ. ಪ್ರಾದೇಶಿಕ ಭಾಷೆಯ ಯಶಸ್ವೀ ಬಳಕೆಯಲ್ಲಿಯೂ ತಮ್ಮ ಸ್ವಂತಿಕೆಯನ್ನು ಮೆರೆಯಬಲ್ಲ ಲೇಖಕ ಬೆಳಗಲಿ. ಬೇರೆ ಭಾಷೆಯ ಸೊಗಡನ್ನೂ ಕನ್ನಡಕ್ಕೆ ತಂದಿದ್ದಾರೆ. ಮರಾಠಿ ಭಾಷೆಯ ಎರಡು ಉತ್ಕೃಷ್ಟ ಆತ್ಮಕತೆಗಳನ್ನು ಕನ್ನಡದಲ್ಲಿ ಅನುವಾದಿಸಿ ಭಾವ-ಭಾಷೆಗಳ ನಡುವಿನ ಹಾಗೂ ಸಂಸ್ಕೃತಿಗಳ ನಡುವಿನ ಕೊಂಡಿಯಾಗಿದ್ದಾರೆ. ಈ ದಿಶೆಯಲ್ಲಿ ಅವರು ತಂದಿರುವ 'ಗಬಾಳ' ಮತ್ತು 'ಅಕ್ರಮ ಸಂತಾನ'ಗಳು ಸಂಸ್ಕೃತಿ ಹಾಗೂ ಉತ್ತಮ ಭಾಷಾಂತರದಿಂದಾಗಿ ಗಟ್ಟಿಯಾಗಿ ನೆಲೆ ಕಂಡುಕೊಂಡ ಕೃತಿಗಳು. 'ಅಕ್ರಮ ಸಂತಾನ'ಕ್ಕೆ ಸಿರವಾರದ ಚುಕ್ಕಿಪ್ರತಿಷ್ಠಾನದ ಪ್ರಶಸ್ತಿ ಲಭ್ಯವಾದುದೇ ಉತ್ತಮ ನಿದರ್ಶನ. "ಕನ್ನಡದಲ್ಲಿ ನಮ್ಮ ದಲಿತರಿಗೆ ನೋವು ಅದಾವೋ ಇಲ್ಲೋ ಅನ್ನುವ ರೀತಿಯಲ್ಲಿ ಕೃತಿಗಳು ಬಂದಿವೆ. ದಲಿತ ಸಾಹಿತಿಗಳು ನೋವು ಹೇಳಲು ಯಾಕೋ ಸಂಕೋಚ ಪಡ್ತಾರೆ ಅಂತ ಕಾಣ್ತದೆ. ವೈಯಕ್ತಿಕ ನೋವು ಬಂದಿಲ್ಲ. ಇನ್ನೂ ಗಟ್ಟಿ ಕಥೆ-ಕಾದಂಬರಿಗಳು ಬರಬೇಕು"[೮] ಎಂಬ ಆಳವಾದ ಹಂಬಲದ ಬೆಳಗಲಿಯವರಿಗೆ ನಮ್ಮ ಸಮಾಜದಲ್ಲಿನ. ಅದರಲ್ಲಿಯೂ ಕೆಳವರ್ಗದಲ್ಲಿನ ಬಡತನ. ಅನಕ್ಷರತೆಯ ಅರಿವಿದೆ. ತಮ್ಮ ಕೃತಿಗಳ ಮುಖಾಂತರ ಅವುಗಳನ್ನು ಹೊರಗೆಳೆದು ತೋರಿಸುತ್ತ. ಅವುಗಳಿಗೆ ತಮ್ಮದೇ ಆದ ಕಳಕಳಿಯ ಪರಿಹಾರವನ್ನೂ ಸೂಚಿಸುತ್ತ. ಆ ನಿಟ್ಟಿನಲ್ಲಿ ಉಳಿದವರಿಗಿಂತ ಹೆಚ್ಚಿನ ಸಾಫಲ್ಯವನ್ನು ಕಂಡಿದ್ದಾರೆ. ಬೆಳಗಲಿಯವರ ಕಾದಂಬರಿಗಳ ಪುಟ-ಪುಟದಲ್ಲಿಯೂ ಜೀವನದ ಉಸಿರಾಟವಿದೆ: ಸಾಮಾಜಿಕ ನೈಜಗಾಳಿಯನುಂಡು ಮೈವೆತ್ತ ಅವರ ಕಾದಂಬರಿಗಳು ಕನ್ನಡ ಕಾದಂಬರಿ ಪರಂಪರೆಯಲ್ಲಿ ಚರಿತ್ರೆಯಾಗಿ ನಿಲ್ಲಬಲ್ಲ ಶಕ್ತಿ-ಸಾಮರ್ಥ್ಯ-ಸತ್ವವನ್ನು ಹೊಂದಿದ ಉತ್ತಮ ಕೃತಿಗಳಾಗಿದ್ದು. ಒಂದು

---

೭. ಎಂ. ಜಿ. ಬಿರಾದಾರ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ–ಅವಲೋಕನ.. ಪುಟ ೯

೮. ಹೊರೆಯಾಲ ದೊರೆಸ್ವಾಮಿ ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ.: ಪುಟ ೫೮

ಸಂಘ-ಸಂಸ್ಥೆ-ಸರಕಾರ ಮಾಡಬಹುದಾದ 'ಸಾಮಾಜಿಕ ಬೃಹತ್ ಕಾರ್ಯ'ವನ್ನು ಒಬ್ಬ ವ್ಯಕ್ತಿಯಾಗಿದ್ದುಕೊಂಡು ಸಾಹಿತಿಯಾಗಿದ್ದುಕೊಂಡೇ ಮಾಡಿದ್ದಾರೆ. ಸಮಾಜಕ್ಕೆ ಋಣಿಯಾಗಿದ್ದಾರೆ: ಶ್ರೀಸಾಮಾನ್ಯರು ಬೆಳಗಲಿಯವರಿಗೆ ಋಣಿಯಾಗಿದ್ದಾರೆ.

**ವಿಶೇಷತೆ :**

"ನಾನೊಬ್ಬ ಸಾಮಾನ್ಯ ವ್ಯಕ್ತಿ ಎಂದು ಪ್ರಾಂಜಲತೆಯಿಂದ ಒಪ್ಪಿಕೊಳ್ಳುತ್ತೇನೆ. ಮೊದಲು ಯಾವ ಶಿಕ್ಷಣ ಸಂಸ್ಕಾರವಿಲ್ಲದ ಒಂದು ಸಾಮಾನ್ಯ ರೈತ ಕುಟುಂಬದಲ್ಲಿ ಹುಟ್ಟಿಬಂದವನು. ಇಲ್ಲಿ ನನ್ನ ಬೃಹತ್ ಸಾಧನೆಗಳೇನಿಲ್ಲ. ಅವೇನಿದ್ದರೂ ಸೀಮಿತ. ನಾನು ಸಂಸಾರಿಯಾಗಿ. ಶಿಕ್ಷಕನಾಗಿ. ಸಾಹಿತಿಯಾಗಿ. ಒಂದಿಷ್ಟು ಸಂಚಾರಿಯಾಗಿ ಈ ನಾಲ್ಕು ದಿಕ್ಕಿನಲ್ಲಿ ನಾನು ನಡೆದ ದಾರಿ ದೀರ್ಘವೂ ಆಗಿಲ್ಲ. ಈ ರೀತಿ ಚತುರ್ಮುಖಿಯಾದ ನಾನು ನನ್ನ ಇತಿಮಿತಿಗಳನ್ನು ತಿಳಿದಿದ್ದೇನೆ. ನನ್ನ ದಾರಿ ನನಗೆ ಗೊತ್ತಿದೆ. ನನ್ನ ಸೀಮೆ ನನಗೆ ತಿಳಿದಿದೆ. ಇದ್ದುದರಲ್ಲಿಯೇ ಸಂತೃಪ್ತಿ–ಸಮಾಧಾನ ಪಡೆದಿದ್ದೇನೆ ಸಾಕಲ್ಲ....!"[೯] ತಮ್ಮ ಬದುಕು-ಬರಹಗಳೆರಡರಲ್ಲಿಯೂ 'ಸಂತೃಪ್ತಿ ಕಂಡ' ಉನ್ನತ ಸಾಹಿತಿ ಬೆಳಗಲಿ. ಇದು ಅನೇಕರಲ್ಲಿ ಕಾಣದು. ತಾನು ಸಾಧಿಸಿದ್ದು ಕಡಿಮೆ. ಸಾಧಿಸಬೇಕಾದುದು ಇನ್ನೂ ಸಾಕಷ್ಟಿದೆಯೆಂದು ಹೇಳವುದೇ ಅವರ ವೈಶಿಷ್ಟ್ಯತೆ. ಎತ್ತರಕ್ಕೇರಿದರೂ ಏಣಿಯನ್ನು ಮರೆಯದ ಸಹೃದಯಿಗಳು ಬೆಳಗಲಿಯವರು. ಬೆಳಗಲಿಯವರ ಕಾದಂಬರಿಗಳನ್ನು ಗಮನಿಸಿದರೆ. ಗ್ರಾಮೀಣ ಸಮಾಜವೇ ಅವುಗಳ ಮೂಲಮನೋಭೂಮಿಕೆಯಾಗಿದ್ದು ಕಂಡುಬರುತ್ತದೆ. ಜಾತಿ ಸಮಸ್ಯೆ ಹಾಗೂ ವೇಶ್ಯಾಸಮಸ್ಯೆ. ಗ್ರಾಮೀಣ ಬದುಕಿನ ಅನೇಕ ಸಮಸ್ಯೆಗಳು ಇವರಲ್ಲಿ ಕಲಾತ್ಮಕವಾದ ನಿರೂಪಣೆ ಪಡೆದಿವೆ. ಈ ನಿಟ್ಟಿನಲ್ಲಿ 'ದೇವದಾಸಿ'. 'ಕಾತ್ರಾಳ ರತ್ನಿಯ ಚಾದಂಗಡಿ'. 'ಜೋಗಿಮರಡಿ'ಗಳು ಉನ್ನತಮಟ್ಟದ ಕೃತಿಗಳಾಗಿವೆ. ಈ ಹಿಂದೆ ಕನ್ನಡದಲ್ಲಿ ವೇಶ್ಯಾವೃತ್ತಿಯ ಬಗೆಗೆ ಅನೇಕ ಕಾದಂಬರಿಗಳು ಬಂದಿದ್ದು. ಹೆಚ್ಚಿನವು ಆ ವೃತ್ತಿಯನ್ನೇ ವೈಭವೀಕರಿಸುವ ಹಾಗೂ ತರುಣವರ್ಗಕ್ಕೆ ಕಾಮಪ್ರಚೋದನೆಯನ್ನು ನೀಡುವ ಕೃತಿಗಳೆಂದು ಕಟು ವಿಮರ್ಶೆಗೆ ಒಳಗಾಗಿದ್ದವು. ಬೆಳಗಲಿಯವರ 'ದೇವದಾಸಿ'ಯ ಸಾಧನೆ-ಸಿದ್ಧಿಯೇ ಬೇರೆ. "....ನುರಿತ ಬರಹಗಾರರಾದ ಬೆಳಗಲಿ ಅವರ ಕೈಯಲ್ಲಿ ಕೇವಲ ರೋಚಕವಾಗಬಹುದಾಗಿದ್ದ ವಸ್ತು ಹೆಚ್ಚಿನ ಅರ್ಥಪೂರ್ಣ ನಿರ್ವಹಣೆಗೆ ಒಳಗಾಗಿದೆ. ಆದರ್ಶ ಪ್ರತಿಘಟನೆಗಳ ಆಶಯ ವಾಸ್ತವತೆಗೆ ಭಂಗತರದಂತೆ ಲೇಖಕರು ಸಾಕಷ್ಟು ಎಚ್ಚರ ವಹಿಸಿದ್ದಾರೆ. ಮುಖ್ಯವಾಗಿ ಇದೊಂದು ಥೀಸಿಸ್ ಕಾದಂಬರಿಯಾಗಿದ್ದು. ಇಲ್ಲಿನ ವಾಸ್ತವತೆಗೆ ತಾನಾಗಿಯೇ ಒಂದು ಬಗೆಯ ಮಿತಿ ಪ್ರಾಪ್ತವಾಗಿದೆ. ಈ ಮಿತಿಯಲ್ಲಿ ಬೆಳಗಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ."[೧೦] ಎಂಬುದು ಬೆಳಗಲಿಯವರ ವೈಶಿಷ್ಟ್ಯತೆಗೆ ಹಿಡಿದ ಕನ್ನಡಿ. ಸಾಮಾಜಿಕ ಸಮಸ್ಯೆಗಳ ಚಿತ್ರಣದೊಂದಿಗೆ ಅವುಗಳಿಗೆ ಸೂಕ್ತ ಪರಿಹಾರಗಳನ್ನೂ ಸೂಚಿಸುತ್ತ ಹೋಗುವುದು ಬೆಳಗಲಿಯವರ

---

೯. ದು. ನಿಂ. ಬೆಳಗಲಿ : ಜಿ. ಎಸ್. ಕಾಪಸೆ (ಸಂ) ಬೆಳಗಲಿ : ಅಭಿನಂದನ ಗ್ರಂಥ. ಪುಟ ೩೬೭

೧೦. ಟಿ. ಪಿ. ಅಶೋಕ : ವ್ಹಿ. ಎಸ್. ಮನವಾಡೆ (ಸಂ). ದೇವದಾಸಿ–ಅವಲೋಕನ. ಪುಟ ೧೨೦

ಬರವಣಿಗೆಯ ವೈಶಿಷ್ಟ್ಯ. ಸಹಜ-ಸರಳ-ನೇರ-ಅಕೃತಕ ಅಭಿವ್ಯಕ್ತಿ ಅವರ ಮತ್ತೊಂದು ವೈಶಿಷ್ಟ್ಯ. ಬೆಳಗಲಿಯವರ ಬದುಕು-ಬರಹದ ಯಾವುದೇ ಸ್ತರವನ್ನು ತೆಗೆದುಕೊಂಡರೂ. ' ಅದು ಬೆಳಗಲಿಯವರದೇ ' ಎಂದು ಖಚಿತವಾಗಿ ಗುರುತಿಸುವಷ್ಟು ಸ್ಫಟಿಕ ಸ್ಪಷ್ಟವಾದ ' ಛಾಪ 'ನ್ನು ಒತ್ತಿದ್ದಾರೆ. ಇದು ಅವರ ಬರವಣಿಗೆಯ ಗಮನಾರ್ಹ ವೈಶಿಷ್ಟ್ಯವಾಗಿದೆ. ಗಾಂಧೀ ಕನಸಿನ ರಾಮರಾಜ್ಯದ ಸಮಾಜನಿರ್ಮಾಣದ ಹಂಬಲದಿಂದಲೇ ಬರೆದ ಬೆಳಗಲಿಯವರು ಸಾಮಾಜಿಕ ಸಮಾನತೆಯನ್ನು ತಮ್ಮ ಲೇಖನಿ ಮೂಲಕ ತರುವ ಪ್ರಯತ್ನ ಮಾಡಿದ್ದಾರೆ. ' ಸರ್ವರಿಗೆ ಸಮಬಾಳು. ಸರ್ವರಿಗೆ ಸಮಪಾಲು ' ಎಂಬುದು ಅವರ ಸಾಹಿತ್ಯದ ಮೂಲಮಂತ್ರ.

ಬೆಳಗಲಿಯವರು ೧೯೭೮ ರಲ್ಲಿ ಪ್ರಗತಿಪಂಥದ ಜಿಲ್ಲಾಧ್ಯಕ್ಷರಾಗಿ ಹಲವು ಬಗೆಯಲ್ಲಿ ಕನ್ನಡದ ಸೇವೆ ಮಾಡಿದವರಾದರೂ. ಯಾವುದೇ ಸಾಹಿತ್ಯಪಂಥಕ್ಕೆ ಜೋತುಬಿದ್ದವರಲ್ಲ. ಗುಂಪುಗಳಿಗೆ ಸೇರಿಕೊಂಡವರಲ್ಲ. ಧಾರವಾಡ ಗುಂಪು. ಬೆಂಗಳೂರು ಗುಂಪು. ಮೈಸೂರು ಗುಂಪು ಯಾವುದಕ್ಕೂ ಸೇರಿಕೊಳ್ಳದೆ. ತಮಗೆ ಅನಿಸಿದ್ದನ್ನು. ತಮ್ಮ ಅನುಭವಗಳನ್ನು ಕೃತಿಗಳ ಮುಖಾಂತರ ಪ್ರಕಟಿಸುತ್ತ ಬಂದದ್ದು ಅವರ ವ್ಯಕ್ತಿತ್ವದ ಬಹುಮುಖ್ಯ ವೈಶಿಷ್ಟ್ಯ. ತಾವು ಬರೆದದ್ದೆಲ್ಲ ಶ್ರೇಷ್ಠವಾದದ್ದೇ ಎಂಬ ಭ್ರಮೆ ಬೆಳಗಲಿಯವರಲ್ಲಿ ಇರಲಿಲ್ಲ. ಅವರ ಕಾದಂಬರಿಗಳಲ್ಲಿಯೂ ಕೆಲವು ' ಸಡಿಲಬಂಧ 'ದವುಗಳಾಗಿವೆಯೆಂಬ ಅರಿವು ಅವರಿಗಿತ್ತು. ಅವರು ಒಮ್ಮೆಲೇ ಬೆಳೆದು ನಿಂತವರಲ್ಲ. ಅವರದು ' ಪರಿಶ್ರಮದ ಬೆಳವಣಿಗೆ 'ಯೇ ಹೊರತು. ಹಿತ್ತಲು ಬಾಗಿಲಿನ ಪ್ರವೇಶವಲ್ಲ. ಬೆಳಗಲಿಯವರ ಕಾದಂಬರಿಗಳ ಓದುಗರ ವಲಯ ಬಹುದೊಡ್ಡದು. ಅವರ ಅನೇಕ ಕಾದಂಬರಿಗಳು. ದಿನಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಸಾಕಷ್ಟು ಓದುಗರ ಮೆಚ್ಚುಗೆ ಪಡೆದಿವೆ. ' ದಾಕ್ಷಾಯಣಿ ' (ಪರಿಷ್ಕೃತ : ವಾತ್ಸಲ್ಯಮಯಿ) ಅನೇಕ ಮುದ್ರಣಗಳನ್ನು ಕಂಡದ್ದಲ್ಲದೆ. ವಿಶ್ವವಿದ್ಯಾಲಯ ಮಟ್ಟದಲ್ಲಿ ಪಠ್ಯವೂ ಆಗಿದ್ದುದು ಅವರ ವಿಶೇಷತೆ. ಹಲವು-ಹತ್ತು ದೃಷ್ಟಿಗಳಿಂದಾಗಿ ಬೆಳಗಲಿಯವರ ಅರ್ಧಕ್ಕಿಂತ ಹೆಚ್ಚು ಕಾದಂಬರಿಗಳು ಹಿರಿಮೆಗೆ ಪಾತ್ರವಾಗಿದ್ದು. ' ಸಾಮಾಜಿಕ-ಭಾಷಿಕ ' ಹಿನ್ನೆಲೆಯಲ್ಲಿ ಮೌಲಿಕ ಕೃತಿಗಳಾಗಿವೆ. ಕನ್ನಡ ಕಾದಂಬರಿಲೋಕದಲ್ಲಿ ಚರಿತ್ರೆಯಾಗಿ ಚಿರಕಾಲ ಉಳಿಯಬಲ್ಲ ಕಾದಂಬರಿಗಳನ್ನು ನೀಡಿದ ಬೆಳಗಲಿಯವರ ಹೆಸರು ಕಾದಂಬರಿ ಕ್ಷೇತ್ರದಲ್ಲಿ ಗಟ್ಟಿಯಾಗಿ ನಿಲ್ಲುತ್ತದೆಯೆಂಬುದಕ್ಕೆ ಎರಡು ಮಾತಿಲ್ಲ.

ಬೆಳಗಲಿಯವರು ಪೂರ್ಣಪ್ರಮಾಣದ ಸಾಹಿತಿಯಾದರೂ ಅವರ ಜೀವನ ಆರಂಭಗೊಂಡದ್ದು ಶಿಕ್ಷಕ ವೃತ್ತಿಯಿಂದ. ಬರವಣಿಗೆ ಅವರ ಪ್ರವೃತ್ತಿ. ವೃತ್ತಿಯಲ್ಲಿ ನಿಷ್ಠೆ ಮತ್ತು ಪಕ್ವತನಕ್ಕೆ ಶಿಕ್ಷಕರಿಗೆ ಸಲ್ಲುವ ರಾಷ್ಟ್ರದ ಅತ್ಯುನ್ನತ ಪ್ರಶಸ್ತಿಯಾದ ' ರಾಷ್ಟ್ರೀಯ ಆದರ್ಶ ಶಿಕ್ಷಕ ಪ್ರಶಸ್ತಿ 'ಯನ್ನು ೧೯೮೮ ರಲ್ಲಿ ಪಡೆದುಕೊಂಡ ಬೆಳಗಲಿಯವರು. ಪ್ರವೃತ್ತಿಯಲ್ಲಿಯೂ ಅದೇ ಮಟ್ಟದಲ್ಲಿದ್ದವರು. ಸಾಹಿತ್ಯ ಹಾಗೂ ಶಿಕ್ಷಣ ಎರಡರಲ್ಲಿಯೂ ಕಳಕಳಿ ಹೊಂದಿದ್ದ ಬೆಳಗಲಿಯವರು ಮೌನವಾಗಿಯೇ ಅಪಾರವಾದುದನ್ನು ಸಾಧಿಸಿದ್ದಾರೆ. ತಮ್ಮ ಸಾಧನೆ-ಸಿದ್ಧಿಯ ಬಗ್ಗೆ ತೃಪ್ತಿಯಿಂದಿದ್ದ ಬೆಳಗಲಿಯವರು ಇನ್ನಷ್ಟು ಬರೆಯುವ ಭರವಸೆಯಲ್ಲಿದ್ದಾಗಲೇ ಭಗವಂತ ಅವರನ್ನು ಕರೆದುಕೊಂಡ.

# ಅನುಬಂಧಗಳು

## ೧. ಬೆಳಗಲಿಯವರ ಜೀವನದ ಪ್ರಮುಖ ಘಟನೆಗಳು

| | |
|---|---|
| ೧೯೩೧ | ಮಾರ್ಚ ೩೦ ರಂದು ಬನಹಟ್ಟಿಯಲ್ಲಿ ಜನನ |
| ೧೯೪೮ | ಬನಹಟ್ಟಿಯಿಂದ ಐನಾಪುರದ ಪ್ರೌಢಶಾಲೆ ಸೇರಿದ್ದು |
| ೧೯೫೦ | ಮಿರ್ಜಿ ಅಣ್ಣಾರಾಯರ ಪರಿಚಯ |
| ೧೯೫೧ | ಐನಾಪುರ ಪ್ರೌಢಶಾಲೆಯಲ್ಲಿ ಎಸ್.ಎಸ್.ಸಿ. ಪಾಸಾದದ್ದು ಹಾಗೂ ಅದೇ ವರ್ಷ ಜೂನದಿಂದ ಅದೇ ಶಾಲೆಯಲ್ಲಿ ಶಿಕ್ಷಕ ವೃತ್ತಿ ಪ್ರಾರಂಭಿಸಿದ್ದು |
| ೧೯೫೧ | ಮಾರ್ಚತಿಂಗಳಲ್ಲಿ ಪ್ರಥಮ ಕಥೆ 'ಬ್ರಾಹ್ಮಣರಾದ ಮಾತ್ರಕ್ಕೆ' 'ಜಯಹಿಂದ್'ದಲ್ಲಿ ಪ್ರಕಟವಾದದ್ದು |
| ೧೯೫೪ | ಜೂನ ೭ ರಂದು ಮಾಲಗಾಂವದ ಶಾಂತಮ್ಮನವರೊಂದಿಗೆ ವಿವಾಹ |
| ೧೯೫೫ | ಮುಂಬಯಿ ಶಿಕ್ಷಣ ಇಲಾಖೆಯಿಂದ ಎಸ್.ಎಸ್.ಸಿ. ಪರೀಕ್ಷೆ ಪಾಸಾದದ್ದು |
| ೧೯೫೫ | ಡಿಶಂಬರ ತಿಂಗಳಿನಿಂದ ಬನಹಟ್ಟಿಯ ಎಸ್.ಆರ್.ಎ. ಹೈಸ್ಕೂಲಿನಲ್ಲಿ ಶಿಕ್ಷಕ ವೃತ್ತಿ ಆರಂಭಿಸಿದ್ದು |
| ೧೯೫೭ | ಪ್ರಥಮ ಕಥಾಸಂಕಲನ 'ಬೆನ್ನಹಿಂದಿನ ಕಣ್ಣು' ಪ್ರಕಟಣೆ |
| ೧೯೫೯ | ಎರಡನೇ ಕಥಾಸಂಕಲನ 'ಸಿಟ್ಯಾಕೋ ರಾಯಾ ನನಮ್ಯಾಲ' ಪ್ರಕಟಣೆ |
| ೧೯೬೦ | ಪ್ರಥಮ ಕಾದಂಬರಿ 'ಮುಳ್ಳು ಮತ್ತು ಮಲ್ಲಿಗೆ' ಪ್ರಕಟಣೆ |
| ೧೯೬೨ | ರಾಷ್ಟ್ರಭಾಷಾ ವಿಶಾರದ ಪರೀಕ್ಷೆ ಪಾಸಾದದ್ದು |
| ೧೯೭೬ | ದೆಹಲಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿದ್ದು |
| ೧೯೭೭ | ಪ್ರಗತಿಪಂಥದ ಜಿಲ್ಲಾಧ್ಯಕ್ಷ ಪದವಿ |
| ೧೯೭೮ | ಬಿಜಾಪುರ ಜಿಲ್ಲಾ ಪ್ರಗತಿಪಂಥ ಸಮ್ಮೇಳನಾಧ್ಯಕ್ಷ |
| ೧೯೭೮ | ಕರ್ನಾಟಕ ಸರಕಾರ. ಪಠ್ಯರಚನಾ ಸಮಿತಿಯ ಸದಸ್ಯ (ಕನ್ನಡ ಗಂಗೋತ್ರಿ ಭಾಗ-೩ ರ ರಚನೆ) |
| ೧೯೭೯ | ಡಿ.ಎಲ್.ಟಿ. (ಡಿಪ್ಲೋಮಾ ಇನ್ ಟೀಚಿಂಗ್) ಮುಗಿಸಿದ್ದು |
| ೧೯೮೦ | ದೆಹಲಿಯಲ್ಲಿ ನಡೆದ ಪ್ರೇಮಚಂದರ ಶತಮಾನೋತ್ಸವದಲ್ಲಿ ಭಾಗವಹಿಸಿದ್ದು |
| ೧೯೮೧ | ಕರ್ನಾಟಕ ಸಾಹಿತ್ಯ ಅಕಾಡೆಮಿ ವತಿಯಿಂದ ಪಂಜಾಬ ಪ್ರವಾಸ ಕೈಗೊಂಡು. ಜಲಂಧರ ಆಕಾಶವಾಣಿಯಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಹಿಂದಿಯಲ್ಲಿ ಭಾಷಣ. ಅದೇ ಕಾಲಕ್ಕೆ ಅಮೃತಸರ ವಿಶ್ವವಿದ್ಯಾಲಯದ ಗುರುನಾನಕ ಪೀಠದಲ್ಲಿ ವಚನಗಳ ವಿಶ್ಲೇಷಣೆ. ಚರ್ಚೆ ನಡೆಸಿದ್ದು |
| ೧೯೮೮ | ಆದರ್ಶ ಶಿಕ್ಷಕ ರಾಷ್ಟ್ರಪ್ರಶಸ್ತಿ |
| ೧೯೮೯ | ಮಾರ್ಚ ೩೦ ರಂದು ಸೇವಾ ನಿವೃತ್ತಿ |
| ೧೯೯೦ | ಅಥಣಿ ದೇವದಾಸಿ ವಿಮೋಚನಾ ಸಂಸ್ಥೆಯಿಂದ ಮಲಹಾಬಾದದಲ್ಲಿ ಷಷ್ಟಬ್ದಿ ಸನ್ಮಾನ |
| ೧೯೯೨ | ದೆಹಲಿಯಲ್ಲಿ ನಡೆದ ಜಾಗತಿಕ ಪುಸ್ತಕಮೇಳದಲ್ಲಿ ಸಂದರ್ಶಕ |
| ೧೯೯೨ | ಭೋಪಾಲದ 'ಭಾರತಿಭವನ'ದಲ್ಲಿ ಕನ್ನಡ ಹಿಂದಿ ಮಕ್ಕಳ ಸಾಹಿತ್ಯ ಅನುವಾದ ಕಮ್ಮಟದಲ್ಲಿ ಪಾಲ್ಗೊಂಡದ್ದು |
| ೧೯೯೩ | ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ |
| ೧೯೯೩ | ದೇವದಾಸಿ ಕಾದಂಬರಿಗೆ ಬಿ. ಎಚ್. ಶ್ರೀಧರ ಪ್ರಶಸ್ತಿ |
| ೧೯೯೩ | ದೇವದಾಸಿ ಕಾದಂಬರಿಗೆ ಸರ್ ಎಂ. ವಿಶ್ವೇಶ್ವರಯ್ಯ ಪ್ರಶಸ್ತಿ |
| ೧೯೯೫ | ಸಪ್ಟಂಬರ ೧೭ ರಂದು ಚಿ. ಶಿವಪ್ರಸಾದನ ಸಾವು |
| ೧೯೯೬ | ದೆಹಲಿ ಭಾರತೀಯ ದಲಿತ ಸಾಹಿತ್ಯ ಅಕಾಡೆಮಿಯ ಡಾ. ಅಂಬೇಡ್ಕರ ಫೆಲೋಶಿಪ್ |
| ೧೯೯೭ | ಸ್ವಾತಂತ್ರ್ಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಹೊಸದಿಲ್ಲಿಯಲ್ಲಿ ಅಗಸ್ಟ ೧೪ ರಂದು ಮಧ್ಯರಾತ್ರಿ ಜರುಗಿದ ವಿಶೇಷ ಜಾಥಾದಲ್ಲಿ ರಾಷ್ಟ್ರದ ವಿಶೇಷ ಆಹ್ವಾನಿತರ ಜೊತೆಯಲ್ಲಿ ಪಾಲ್ಗೊಂಡದ್ದು |
| ೧೯೯೮ | ಸಪ್ಟಂಬರ್‌ದಲ್ಲಿ ಅಭಿಮಾನಿಗಳಿಂದ 'ಬೆಳಗಲಿ' ಅಭಿನಂದನ ಗ್ರಂಥದ ಸಮರ್ಪಣೆ |
| ೨೦೦೦ | ಜನೇವರಿ ೮ ರಂದು ನಿಧನ. |

# ೨. ಬೆಳಗಲಿಯವರ ಸಾಹಿತ್ಯ

**ಕಾದಂಬರಿಗಳು :**

| | | | |
|---|---|---|---|
| ೧) | ಮುಳ್ಳು ಮತ್ತು ಮಲ್ಲಿಗೆ | : ವೀರಭಾರತಿ ಪ್ರಕಾಶನ. ಬೆಂಗಳೂರು-೪* | ೧೯೬೦** |
| ೨) | ಹತ್ತು ಹೆಡೆಯ ಹಾವು | : ಪ್ರತಿಭಾ ಗ್ರಂಥಮಾಲೆ. ಧಾರವಾಡ | ೧೯೬೦ |
| ೩) | ತಿರುಗಣಿ ಮಡು (ಪರಿಷ್ಕೃತ : ಪ್ರೀತಿಯ ಆ ಮುಖ) | : ಸಮಾಜ ಪುಸ್ತಕಾಲಯ. ಶಿವಾಜಿ ಬೀದಿ. ಧಾರವಾಡ | ೧೯೭೦ |
| ೪) | ಹಡೆದವರು | : ಅಭಿರುಚಿ ಲೇಖಕರ ಸಹಕಾರ ಪ್ರಕಾಶನ. ನಂ. ೫ ನಾಗಪ್ಪ ಬೀದಿ. ಶೇಷಾದ್ರಿಪುರಂ. ಬೆಂಗಳೂರು-೨೦ | ೧೯೭೨ |
| ೫) | ಬಿಸಿಲು-ಬೆಳದಿಂಗಳು (ಪರಿಷ್ಕೃತ : ಗಂಡಿನ ನೆರಳು) | : ಪ್ರತಿಭಾ ಗ್ರಂಥಮಾಲೆ. ಧಾರವಾಡ | ೧೯೭೪ |
| ೬) | ದಾಕ್ಷಾಯಣಿ (ಪರಿಷ್ಕೃತ : ವಾತ್ಸಲ್ಯಮಯಿ) | : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ | ೧೯೭೪ |
| ೭) | ಸೀಮೆಗಳು | : ಬಾಪ್ಕೋ ಪ್ರಕಾಶನ. ೮೮. ಮೈಸೂರು ರಸ್ತೆ. ಬೆಂಗಳೂರು-೧೮ | ೧೯೮೧ |
| ೮) | ಜೋಗಿಮರಡಿ | : ಐ.ಬಿ.ಎಚ್. ಪ್ರಕಾಶನ. ಗಾಂಧೀನಗರ. ಬೆಂಗಳೂರು-೯ | ೧೯೮೨ |
| ೯) | ಅಂಧೇರಿನಗರಿ | : ಉಮಾ ಪ್ರಕಾಶನ. ಜನತಾ ಬಜಾರ. ಹುಬ್ಬಳ್ಳಿ | ೧೯೮೨ |
| ೧೦) | ರಣಹದ್ದುಗಳು-ಖೂನೀಜನ (ಜೋಡಿ ಕಾದಂಬರಿ) | : ಐ.ಬಿ.ಎಚ್. ಪ್ರಕಾಶನ. ೫ ನೇ ಮುಖ್ಯ ರಸ್ತೆ. ಗಾಂಧೀನಗರ ಬೆಂಗಳೂರು-೯ | ೧೯೮೬ |
| ೧೧) | ಚಂಬಲ್ ಕಣಿವೆಯಲ್ಲಿ | : ಪ್ರತಿಭಾ ಗ್ರಂಥಮಾಲೆ. ಧಾರವಾಡ-೧ | ೧೯೮೯ |
| ೧೨) | ಅಂತಸ್ಸಿನ ಮನೆ | : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ' ಕಾದಂಬರಿ ' ಸೋಮವಾರ ಪೇಟೆ. ಬನಹಟ್ಟಿ (ಜಿ. ಬಾಗಲಕೋಟ) | ೧೯೯೧ |
| ೧೩) | ದೇವದಾಸಿ | : ವಿಮೋಚನಾ ಪ್ರಕಾಶನ. ವಿಮೋಚನಾ ದೇವದಾಸಿ ಪುನರ್ವಸತಿ ಸಂಘ. ಅಥಣಿ (ಜಿ. ಬೆಳಗಾವ) | ೧೯೯೧ |
| ೧೪) | ಮೌನಕ್ರಾಂತಿ | : ನವಕರ್ನಾಟಕ ಪ್ರಕಾಶನ ಪ್ರೈವೆಟ್ ಲಿ.. ಎಂಬೆಸಿ ಸೆಂಟರ್ ಕ್ರೆಸೆಂಟ್ ರಸ್ತೆ. ಬೆಂಗಳೂರು-೧ | ೧೯೯೨ |
| ೧೫) | ಕಾತ್ರಾಳ ರತ್ನಿಯ ಚಾದಂಗಡಿ | : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ' ಕಾದಂಬರಿ ' ಸೋಮವಾರ ಪೇಟ. ಬನಹಟ್ಟಿ (ಜಿ. ಬಾಗಲಕೋಟ) | ೧೯೯೮ |
| ೧೬) | ಮಯ್ಯಾದಾಸನ ವಾಡೆ | : ನವಕರ್ನಾಟಕ ಪಬ್ಲಿಕೇಶನ್ಸ್. ಬೆಂಗಳೂರು | ೨೦೦೨ |

**ಕಥಾಸಂಕಲನಗಳು :**

| | | | |
|---|---|---|---|
| ೧) | ಬೆನ್ನ ಹಿಂದಿನ ಕಣ್ಣು | : ಶಾಂತಿ ಸೇವಾ ಸದನ. ಶೇಡಬಾಳ | ೧೯೫೭ |
| ೨) | ಸಿಟ್ಟ್ಯಾಕೋ ರಾಯಾ ನನಮ್ಯಾಲ | : ಸಮಾಜ ಪುಸ್ತಕಾಲಯ. ಧಾರವಾಡ-೧ | ೧೯೫೯ |
| ೩) | ಮಾಸ್ತರನ ಹೆಂಡತಿ | : ಕೃಷ್ಣಾತೀರ ಸೌರಭ ಪ್ರಕಾಶನ. ಬನಹಟ್ಟಿ | ೧೯೬೨ |
| ೪) | ಗೌಡರ ಮಗಳು ಗೌರಿ | : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ | ೧೯೭೭ |
| ೫) | ಮುಳ್ಳುದಾರಿಯಲ್ಲಿ ಬಿರಿದ ಹೂಗಳು | : ವಿಮೋಚನಾ ಪ್ರಕಾಶನ. ಅಥಣಿ | ೧೯೮೯ |
| ೬) | ಮುತ್ತಿನ ತೆನೆಗಳು (ಬೃಹತ್ ಕಥಾ ಸಂಕಲನ) | : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ' ಕಾದಂಬರಿ ' ಸೋಮವಾರ ಪೇಟೆ. ಬನಹಟ್ಟಿ (ಜಿ. ಬಾಗಲಕೋಟ) | ೧೯೯೦ |

---

*ಪ್ರಕಾಶನದ ಹೆಸರನ್ನು ಸೂಚಿಸಲು ಬಳಸಿದ ಚಿಹ್ನೆ

** ಇಸವಿಗಳು ಪ್ರಥಮ ಮುದ್ರಣವನ್ನು ಸೂಚಿಸುತ್ತವೆ.

**ಮಕ್ಕಳ ಪುಸ್ತಕಗಳು :**

೧) ಸರ್ವಜ್ಞ : ಭಾರತ ಭಾರತಿ ಪುಸ್ತಕ ಸಂಪದ. ಬೆಂಗಳೂರು-೧ ೧೯೭೪
೨) ಬದುಕುವ ಬಯಕೆ : ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ. ಬೆಂಗಳೂರು-೧೮ ೧೯೭೪
೩) ಈಸೋಪನ ಕಥೆಗಳು : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೮೨
೪) ಮತ್ತಷ್ಟು ಈಸೋಪನ ಕಥೆಗಳು : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೮೨
೫) ಮುಂದುವರಿದ ಈಸೋಪನ ಕಥೆಗಳು : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೮೨
೬) ಗಂಗಾಧರ ಮಡಿವಾಳೇಶ್ವರ ತುರಮರಿ : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೮೩
೭) ಮಡಿವಾಳ ಮಾಚಿದೇವ : ವೀರಶೈವ ಭಾರತಿ. ಹುಬ್ಬಳ್ಳಿ-೨೮ ೧೯೮೩
೮) ಮುಲ್ಲಾ ನಸ್ರುದ್ದೀನ ಬುದ್ಧಿವಂತಿಕೆ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೯೨
೯) ಬೀರಬಲ್ಲನ ಬುದ್ಧಿವಂತಿಕೆ ಕಥೆಗಳು : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೯೩
೧೦) ಜಾದೂ ಪಕ್ಷಿ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೯೪
೧೧) ಶ್ರೀ ಮುರುಘರಾಜೇಂದ್ರ ಮಹಾಶಿವಯೋಗಿಗಳು : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೭೫
೧೨) ಚಿಕ್ಕೋಡಿ ತಮ್ಮಣ್ಣಪ್ಪನವರು : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೭೫

**ಚರಿತ್ರೆಗಳು :**

೧) ಪ್ರೇಮಚಂದ ಬದುಕು-ಬರಹ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೮೦
೨) ಚಿಕ್ಕೋಡಿ ಪಂಡಿತಪ್ಪನವರು : ವೀರಶೈವ ಅಧ್ಯಯನ ಸಂಸ್ಥೆ. ಗದಗ ೧೯೮೦
೩) ಈಶ್ವರ ಸಣಕಲ್ಲ : ವೀರಶೈವ ಅಧ್ಯಯನ ಸಂಸ್ಥೆ. ಗದಗ ೧೯೮೫
೪) ಬೆಳಕು ಬಿತ್ತಿದವರು : ಸ್ನೇಹ ಸಂಪದ ಪ್ರಕಾಶನ ಬನಹಟ್ಟಿ ೧೯೯೩
೫) ಯುಗಚೇತನ ಪ್ರೇಮಚಂದ್ : ನವಕರ್ನಾಟಕ ಪಬ್ಲಿಕೇಷನ್ಸ, ಪ್ರೈ.ಲಿ., ಬೆಂಗಳೂರು-೧ ೧೯೯೭

**ಅನುವಾದ ಸಾಹಿತ್ಯ :**

೧) ಅಕ್ರಮ ಸಂತಾನ (ಮರಾಠಿ ಆತ್ಮಕಥೆ ಅನುವಾದ) : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೯೨
೨) ಸಮರ್ಥ ರಾಮದಾಸ (ಮರಾಠಿ ಅನುವಾದ) : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೯೪
೩) ಗಬಾಳ (ಅನುವಾದಿತ ಕಥಾ ಸಂಕಲನ) : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ. ಲಿ.. ಬೆಂಗಳೂರು-೧ ೧೯೯೫
೪) ಬಣ್ಣದೋಕುಳಿ (ಅನುವಾದಿತ ಕಥಾಸಂಕಲನ) : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ ೧೯೯೭

**ಪ್ರಬಂಧಗಳು :**

೧) ಕನ್ನಡದಲ್ಲಿ ಕಾದಂಬರಿ ಸಾಹಿತ್ಯ (ಸಮೀಕ್ಷೆ) : ಪ್ರಸಾರಾಂಗ ಕ.ವಿ.ವಿ. ಧಾರವಾಡ-೩ ೧೯೭೫
೨) ಜಮಖಂಡಿ ತಾಲ್ಲೂಕು ದರ್ಶನ : ಐ.ಬಿ.ಎಚ್. ಪ್ರಕಾಶನ. ಬೆಂಗಳೂರ್-೯ ೧೯೮೬
೩) ಸಾಹಿತ್ಯ ಸಾಧನ ಮತ್ತು ಜೀವನ : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ ೧೯೯೪

**ವಿನೋದ ಸಾಹಿತ್ಯ :**

೧) ಹೆಂಡತಿ ಮತ್ತು ಟ್ರಾನ್ಸಿಸ್ಟರ್ : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ ೧೯೮೮
೨) ಸಾಹಿತಿಗಳ ಸಂಗ ಮೋಜಿನ ಪ್ರಸಂಗ : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ ೧೯೯೫
೩) ಗಂಡ-ಹೆಂಡತಿ ಮತ್ತು ಲಗ್ಗೇಜ : ವಿಶ್ವಕರ್ನಾಟಕ ಸಾಹಿತ್ಯ ಮಂಟಪ. ಬನಹಟ್ಟಿ ೧೯೯೬

**ಸಂಪಾದನೆ :**

೧) ' ಘಟಪ್ರಭೆ ' (ಅಖಿಲ ಕರ್ನಾಟಕ ತೃತೀಯ ಪ್ರಗತಿಪಂಥ ಸಮ್ಮೇಳನ. ಮಹಾಲಿಂಗಪುರ. ಸ್ಮರಣ ಸಂಪುಟ) - ೧೯೭೮

೨) ' ರನ್ನಗನ್ನಡಿ ' (ಅಖಿಲ ಭಾರತ ೬೮ ನೇ ಕನ್ನಡ ಸಾಹಿತ್ಯ ಸಮ್ಮೇಳನ. ಮುಧೋಳ. ಸ್ಮರಣ ಸಂಪುಟ I) - ೧೯೯೪

೩) ಬಿಜಾಪುರ ಜಿಲ್ಲಾ ದರ್ಶನ (ಅಖಿಲ ಭಾರತ ೬೮ ನೇ ಕನ್ನಡ ಸಾಹಿತ್ಯ ಸಮ್ಮೇಳನ. ಮುಧೋಳ. ಸ್ಮರಣ ಸಂಪುಟ II) -೧೯೯೪

೪) ಬಾಲವಿಶ್ವ (ಮಕ್ಕಳ ಪ್ರಾಯೋಜಿತ ಸಪ್ತಾಹ. ೯೫ ರ ಸ್ಮರಣ ಸಂಪುಟ. ಧಾರವಾಡ)

೫) ' ವಿದ್ಯಾಚೇತನ (ದಿ. ಜಿ. ಎಂ. ದೇಶಪಾಂಡೆ ಅವರ ಸ್ಮರಣ ಸಂಪುಟ. ಐನಾಪುರ)

**ಇತರರೊಂದಿಗೆ :**

೧) ಪ್ಲಾವರ್‌ಪಾಟ್ (ಕಥಾಸಂಕಲನ) –೧೯೫೮

೨) ದಿಗಂತ (ಕಥಾಸಂಕಲನ) –೧೯೬೭

೩) ನಗೆ ನಂದನ (ನಗೆ ಲೇಖನಗಳು) –೧೯೬೯

೪) ನಕ್ಷತ್ರ ಮಂಡಲ (ಕಥಾಸಂಕಲನ) –೧೯೭೫

೫) ಹಿಂಗಾದ್ರ ಮುಂದ ಹ್ಯಾಂಗ (ಕಥಾಸಂಕಲನ) –೧೯೮೮

೬) ಮನೆಯ ದೀಪ (ಮಕ್ಕಳ ಕಥೆಗಳು) –೧೯೮೯

೭) ಮಕ್ಕಳ ಸಾಹಿತ್ಯ ಚಿಂತನ (ಪ್ರಬಂಧಗಳು) –೧೯೮೯

೮) ಶರಣ ಪ್ರಕಾಶ (ಪ್ರಬಂಧಗಳು) –೧೯೯೦

# ೩. ಗ್ರಂಥಋಣ


೧) ಅವಲೋಕನ: ದೇವದಾಸಿ. ದು.ನಿಂ.ಬೆ. : (ಸಂ.) ವಿ. ಎಸ್. ಮನವಾಡೆ ವಿಮೋಚನ ಪ್ರಕಾಶನ. ಅಥಣಿ ೧೯೯೪

೨) ಆಯಾಮಗಳು : ಡಾ. ಬಿ. ದಾಮೋದರರಾವ್ ಪರಿಸರ ಸಾಹಿತ್ಯ ಪ್ರಕಾಶನ. ಶಿವಮೊಗ್ಗ ೧೯೯೨

೩) ಆಲೋಕ : ವಿ. ಎಂ. ಇನಾಂದಾರ್. ಉಷಾ ಸಾಹಿತ್ಯ ಮಾಲೆ. ಮೈಸೂರು ೧೯೮೧

೪) ಕಥೆ ಮತ್ತು ಕಥಾವಸ್ತು : ಡಾ. ಎಸ್. ಎಲ್. ಭೈರಪ್ಪ ಸಾಹಿತ್ಯ ಭಂಡಾರ. ಬೆಂಗಳೂರು ೧೯೬೯

೫) ಕನ್ನಡ ಸಾಹಿತ್ಯ ಇತಿಹಾಸ : ಡಾ. ರಂ. ಶ್ರೀ ಮುಗಳಿ. ಕಾವ್ಯಾಲಯ. ಮೈಸೂರು ೧೯೭೬

೬) ಕನ್ನಡ ಕಥನ ಸಾಹಿತ್ಯ: ಕಾದಂಬರಿ : ಡಾ. ಜಿ. ಎಸ್. ಆಮೂರ. ಶ್ರೀಹರಿ ಪ್ರಕಾಶನ. ಧಾರವಾಡ ೧೯೯೪

೭) ಕನ್ನಡ ಕಾದಂಬರಿಗಳು (೧೯೨೦-೧೯೪೫) : ರಂ. ಶ್ರೀ. ಮುಗಳಿ. Wesley Press and Publishers House, Mysore, 8 1945

೮) ಕನ್ನಡ ಕಾದಂಬರಿ ನಡೆದು ಬಂದ ರೀತಿ : ಡಾ. ಶಾಂತಿನಾಥ ದೇಸಾಯಿ. ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ ೧೯೮೯

೯) ಕನ್ನಡ ಕಾದಂಬರಿ ಬೆಳವಣಿಗೆ : ಡಾ. ಜಿ. ಎಸ್. ಆಮೂರ. ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು ೧೯೮೩

೧೦) ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು: ಬಿ. ಎ. ವಿವೇಕ ರೈ (ಸಂ) ಮಂಗಳೂರು ವಿಶ್ವವಿದ್ಯಾಲಯ. ಮಂಗಳೂರು ೧೯೮೭

೧೧) ಕನ್ನಡ ವಿಶ್ವಕೋಶ ಸಂ. ೩. ೪ : ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ. ಮೈಸೂರು ೧೯೭೧

೧೨) ಕನ್ನಡ ಕಾದಂಬರಿ ದರ್ಶನ : ಶಂಕರ ಪಾಟೀಲ (ಸಂ.) ಶ್ರೀಕೃಷ್ಣಮೂರ್ತಿ ಪುರಾಣಿಕ ಸತ್ಕಾರ ಸಮಿತಿ. ಹುಬ್ಬಳ್ಳಿ-ಧಾರವಾಡ ೧೯೭೪

೧೩) ಕನ್ನಡ ವಿಶ್ವಕೋಶ ಸಂಪುಟ - ೧೦ : ಮೈಸೂರು ವಿಶ್ವವಿದ್ಯಾಲಯ. ಮೈಸೂರು

೧೪) ಕನ್ನಡ ಸಾಹಿತ್ಯ ಚರಿತ್ರೆ : ರಂ. ಶ್ರೀ. ಮುಗಳಿ. ಉಷಾ ಸಾಹಿತ್ಯ ಮಾಲೆ ಮೈಸೂರು-೧ (೪ನೇ ಮುದ್ರಣ) ೧೯೬೮

೧೫) ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ : ಪ್ರೊ. ಸಿದ್ಧಣ್ಣ ಉತ್ನಾಳ. ಅನುಪಮ ಪ್ರಕಾಶನ. ಅಥಣಿ ೧೯೯೦

೧೬) ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ : ಎಲ್. ಎಸ್. ಶೇಷಗಿರಿರಾವ್. ಶಾರದಾ ಪ್ರಕಾಶನ. ಬೆಂಗಳೂರು ೧೯೯೦

೧೭) ಕಾದಂಬರಿ ವಸ್ತು ಮತ್ತು ತಂತ್ರ : ಡಾ. ಗಿರಡ್ಡಿ ಗೋವಿಂದರಾಜ. ಸ್ನೇಹ ಪ್ರಕಾಶನ. ಬೆಂಗಳೂರು ೧೯೭೬

೧೮) ಕಿರಿಯರ ವಿಶ್ವಕೋಶ ಸಂಪುಟ-೫ : ಕನ್ನಡ ಅಧ್ಯಯನ ಸಂಸ್ಥೆ, ಜ್ಞಾನಗಂಗೋತ್ರಿ, ಬೆಂಗಳೂರು ವಿ.ವಿ., ಬೆಂಗಳೂರು (ಕಲೆ ಮತ್ತು ಸಾಹಿತ್ಯ)

೧೯) ಗಂಗೋತ್ರಿ (ಕುವೆಂಪು ಅಭಿನಂದನಗ್ರಂಥ): ಸಂ. ದೇ.ಜ.ಗೌ., ಗೀತಾ ಬುಕ್ ಹೌಸ್. ಮೈಸೂರು ೧೯೬೮

೨೦) ಗತಿಬಿಂಬ : ಡಾ. ಜಿ. ಎಸ್. ಶಿವರುದ್ರಪ್ಪ. ಸುರುಚಿ. ಮೈಸೂರು ೧೯೭೪

೨೧) ಗದ್ಯಶೈಲಿ : ದೇ.ಜ.ಗೌ., ಡಿ.ವಿ.ಕೆ. ಮೂರ್ತಿ ಮೈಸೂರು ೧೯೭೮

೨೨) ಗ್ರಾಮಾಯಣ : ರಾವಬಹಾದ್ದೂರ (ಆರ್.ಬಿ. ಕುಲಕರ್ಣಿ) ಮನೋಹರ ಗ್ರಂಥ ಪ್ರಕಾಶನ ಸಮಿತಿ. ಧಾರವಾಡ ೧೯೫೭

೨೩) ನಡೆದು ಬಂದ ದಾರಿ : (ಸಂ.) ಜಿ. ಬಿ. ಜೋಶಿ ಮತ್ತು ಕೆ.ಡಿ. ಕುರ್ತಕೋಟಿ. ಮನೋಹರ ಗ್ರಂಥ ಪ್ರಕಾಶನ ಸಮಿತಿ. ಧಾರವಾಡ
ಸಂಪುಟ – ೧ ೧೯೫೯
ಸಂಪುಟ – ೨ ೧೯೬೦
ಸಂಪುಟ – ೩ ೧೯೬೧

೨೪) ನವೋದಯ : ಡಾ. ಜಿ. ಎಸ್. ಶಿವರುದ್ರಪ್ಪ. ಸುರುಚಿ ಮೈಸೂರು ೧೯೭೪

೨೫) ನಿಸರ್ಗ : ಮಿರ್ಜಿ ಅಣ್ಣಾರಾಯ. ಗೀತಾ ಬುಕ್ ಹೌಸ್. ಪ್ರಕಾಶಕರು. ಮೈಸೂರು (೬ನೇ ಮುದ್ರಣ) ೧೯೮೬

೨೬) ಪ್ರಗತಿಶೀಲ ಸಾಹಿತ್ಯ : ಅ.ನ.ಕೃ. (ಸಂ.) ಪ್ರಗತಿಶೀಲ ಲೇಖಕರ ಸಂಘ. ಬೆಂಗಳೂರು ೧೯೪೪

೨೭) ಪ್ರಜ್ಞಾಪ್ರವಾಹ ತಂತ್ರ : ಓ. ಎಲ್. ನಾಗಭೂಷಣಸ್ವಾಮಿ. ಕರ್ನಾಟಕ ಸಾಹಿತ್ಯ ಅಕಾಡೆಮಿ. ನೃಪತುಂಗ ರಸ್ತೆ. ಬೆಂಗಳೂರು ೧೯೮೯

೨೮) ಪ್ರಜ್ಞೆ ಮತ್ತು ಪರಿಸರ : ಡಾ. ಯು. ಆರ್. ಅನಂತಮೂರ್ತಿ. ಅಕ್ಷರ ಪ್ರಕಾಶನ. ಸಾಗರ ೧೯೭೧

೨೯) ಪ್ರತಿಕ್ರಿಯೆ : ಡಾ. ಜಿ. ಎಸ್. ಶಿವರುದ್ರಪ್ಪ. ಪುರೋಗಾಮಿ ಪ್ರಕಾಶನ. ಬೆಂಗಳೂರು ೧೯೮೨

೩೦) ಪ್ರೇಮಚಂದರ ವಿಚಾರಸಂಕಿರಣ : ಡಾ. ಹಂಪಾನಾ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೦

೩೧) ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು : ಡಾ. ಬಿ. ಸಿ. ಸಾದರ. ವೀರಶೈವ ಅಧ್ಯಯನ ಅಕಾಡೆಮಿ ಶ್ರೀ ನಾಗನೂರು ರುದ್ರಾಕ್ಷಿಮಠ. ಬೆಳಗಾವಿ ೨೦೦೦

೩೨) ಬುದ್ಧಿ-ಭಾವ-ಬದುಕು : ಸೀಮಂತಿನಿ ನಿರಂಜನ. ಸ್ಪಂದನ. ಬೆಂಗಳೂರು ೧೯೮೪

೩೩) ಭೈರಪ್ಪನವರ ಕಾದಂಬರಿಗಳ ಸ್ವರೂಪ : ಡಾ. ಲೀಲಾವತಿ ತೋರಣಗಟ್ಟಿ. ವಿದ್ಯಾನಿಧಿ ಪ್ರಕಾಶನ. ಗದಗ ೧೯೯೨

೩೪) ಬೆಳಗಲಿ (ದು.ನಿಂ.ಬೆ. ಅಭಿನಂದನ ಗ್ರಂಥ) : (ಸಂ.) ಜಿ. ಎಸ್. ಕಾಪಸೆ. ವಿಮೋಚನಾ ಪ್ರಕಾಶನ. ದೇವದಾಸಿ ಪುನರ್ವಸತಿ ಸಂಘ. ಅಥಣಿ ೧೯೯೮

೩೫) ವಿಮರ್ಶೆಯ ಪೂರ್ವ-ಪಶ್ಚಿಮ : ಡಾ. ಜಿ. ಎಸ್. ಶಿವರುದ್ರಪ್ಪ. ತಾ. ವೆಂ. ಸ್ಮಾರಕ ಗ್ರಂಥಮಾಲೆ. ಮೈಸೂರು ೧೯೭೭

೩೬) ವಿಮರ್ಶೆಯ ಸ್ವರೂಪ : ಮಿರ್ಜಿ ಅಣ್ಣಾರಾಯ. ಸಾಹಿತ್ಯ ಭಂಡಾರ, ಹುಬ್ಬಳ್ಳಿ ೧೯೫೯

೩೭) ವಿಮರ್ಶಾ ತತ್ವಗಳ ಪ್ರಾಯೋಗಿಕ ವಿಮರ್ಶೆ : ವಿ. ಕೃ. ಗೋಕಾಕ. ಆರ್. ಜಿ. ಕುಲಕರ್ಣಿ (ಸಂ.) ಕರ್ನಾಟಕ ಸಾಹಿತ್ಯ ಅಕಾಡೆಮಿ ಪರವಾಗಿ. ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೮೦

೩೮) ಶರಣರ ಕುರಿತ ಕನ್ನಡ ಕಾದಂಬರಿಗಳು : ಡಾ. ಜೆ. ಪಿ. ದೊಡಮನಿ. ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ. ಇಲಕಲ್೧೯೯೬

೩೯) ಶ್ರೀ ರಾಮಾಶ್ವಮೇಧ - ಮುದ್ದಣ : (ಸಂ.) ಎಸ್. ಅನಂತರಂಗಾಚಾರ್ - ೧೯೫೮

೪೦) ಶೈಲಿ-೧ : ಡಾ. ಎಸ್. ವಿ. ರಂಗಣ್ಣ. ಕಾವ್ಯಾಲಯ, ಮೈಸೂರು ೧೯೭೧

೪೧) ಸಮಕ್ಷಮ : ಡಾ. ಯು. ಆರ್. ಅನಂತಮೂರ್ತಿ, ಅನನ್ಯ ಪ್ರಕಾಶನ, ಮೈಸೂರು ೧೯೮೦

೪೨) ಸಂಶೋಧನೆ : ಡಾ. ಎಂ. ಚಿದಾನಂದ ಮೂರ್ತಿ, ಕನ್ನಡ ಅಧ್ಯಯನ ಸಂಸ್ಥೆ. ಮೈ.ವಿ.ವಿ. ಮೈಸೂರು. ೧೯೬೭

೪೩) ಸಂಶೋಧನ ತರಂಗ (ಭಾಗ-೧) : ಡಾ. ಎಂ. ಚಿದಾನಂದ ಮೂರ್ತಿ, ಸರಸ ಸಾಹಿತ್ಯ ಪ್ರಕಾಶನ, ಮೈಸೂರು ೧೯೬೬

೪೪) ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ : ಎಂ. ಮರಿಯಪ್ಪ ಭಟ್ಟ. ಭಾರತೀ ಪ್ರಕಾಶನ ಕೃಷ್ಣಮೂರ್ತಿಪುರಂ. ಮೈಸೂರು ೧೯೬೦

೪೫) ಸಾಹಿತ್ಯ ಪ್ರೇರಣೆ : ಮಾಸ್ತಿವೆಂಕಟೇಶ ಅಯ್ಯಂಗಾರ. ಬಾಪ್ಕೋ ಪ್ರಕಾಶನ, ಬೆಂಗಳೂರು ೧೯೭೫

೪೬) ಸಾಹಿತ್ಯ ಚಿಂತನ : ಚೆನ್ನವೀರ ಕಣವಿ. ಮಿಂಚಿನಬಳ್ಳಿ, ಧಾರವಾಡ ೧೯೬೬

೪೭) ಸಾಹಿತ್ಯ ಮತ್ತು ಯುಗಧರ್ಮ : ಅ. ನ. ಕೃಷ್ಣರಾಯ. ಆನಂದ ಬ್ರದರ್ಸ್. ಬೆಂಗಳೂರು ೧೯೫೨

೪೮) ಸಾಹಿತ್ಯದಲ್ಲಿ ಪ್ರಗತಿ : ವಿ. ಕೃ. ಗೋಕಾಕ, ಧಾರವಾಡ ೧೯೪೪

೪೯) ಸಾಹಿತ್ಯ ಮತ್ತು ಸಮಕಾಲೀನ ವಾಸ್ತವಿಕತೆ : ಡಾ. ಎಚ್. ತಿಪ್ಪೇರುದ್ರಸ್ವಾಮಿ. ಚಾಮುಂಡಿ ಎಂಟರ್‌ಪ್ರೈಸಿಸ್. ಮೈಸೂರು ೧೯೭೯

೫೦) ಸಾಹಿತ್ಯ ಸಂಶೋಧನ : ಡಾ. ದ. ರಾ. ಬೇಂದ್ರೆ. ಮನೋಹರ ಗ್ರಂಥಪ್ರಕಾಶನ ಸಮಿತಿ. ಧಾರವಾಡ ೧೯೪೦

೫೧) ಸಾಹಿತ್ಯ ಮತ್ತು ಸತ್ಯ : ಡಾ. ಎ. ಎನ್. ಮೂರ್ತಿರಾವ್. ಡಿ. ವಿ. ಕೆ. ಮೂರ್ತಿ. ಮೈಸೂರು ೧೯೮೨

೫೨) ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ (ಸಂಪಾದನೆ) : ಡಾ. ಜಿ. ಎಸ್. ಶಿವರುದ್ರಪ್ಪ. ಜ್ಞಾನಭಾರತಿ. ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು೧೯೭೭

೫೩) ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ : ಡಾ. ಜಿ. ಎಸ್. ಶಿವರುದ್ರಪ್ಪ. ಜ್ಞಾನಭಾರತಿ. ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು೧೯೭೭

೫೪) ಸಾಹಿತ್ಯೋಪಾಸನೆ : ರಂ. ಶ್ರೀ. ಮುಗಳಿ. ಶಾರದಾ ಮಂದಿರ. ಮೈಸೂರು ೧೯೫೫

೫೫) ಸಾಹಿತ್ಯ ಮತ್ತು ಪ್ರತೀಕ : ಡಾ. ಎಸ್. ಎಲ್. ಭೈರಪ್ಪ. ಸಾಹಿತ್ಯ ಭಂಡಾರ ಜಂಗಮ ಮೇಸ್ತ್ರೀಗಲ್ಲಿ. ಬಳೇಪೇಟೆ. ಬೆಂಗಳೂರು ೧೯೭೮

೫೬) ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು: (ಸಂ.) ಕೆ. ಜಿ. ನಾಗರಾಜಪ್ಪ. ಕರ್ನಾಟಕ ಸಾಹಿತ್ಯ ಅಕಾಡೆಮಿ. ನೃಪತುಂಗ ರಸ್ತೆ. ಬೆಂಗಳೂರು೧೯೭೫

೫೭) ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ. ಸಂ. ೧೦ : ಪ್ರೊ. ಎಲ್. ಎಸ್. ಶೇಷಗಿರಿರಾವ್. ಬೆಂ. ವಿ. ವಿ.. ಬೆಂಗಳೂರು ೧೯೭೫

೫೮) ಸಾಹಿತ್ಯ ಪ್ರವೇಶ : ವಿಲಿಯಂ ಹೆನ್ರಿ ಹಡ್ಸನ್. ಸಿ. ಪಿ. ಕೃಷ್ಣಕುಮಾರ (ಅನು). ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ ನಿಯಮಿತ. ಚಾಮರಾಜ ಪೇಟೆ. ಬೆಂಗಳೂರು ೧೯೭೪

೫೯) ಸಾಹಿತ್ಯ ಪ್ರಕಾರಗಳು : ಪಿ. ವಿ. ಶಾಸ್ತ್ರೀ. ಸಮಾಜ ಪುಸ್ತಕಾಲಯ. ಧಾರವಾಡ ೧೯೭೩

೬೦) ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ : ಡಾ. ಜಿ. ಎಸ್. ಶಿವರುದ್ರಪ್ಪ (ಪ್ರ.ಸಂ.) ಬೆಂಗಳೂರು ವಿ.ವಿ.. ಬೆಂಗಳೂರು ೧೯೭೧

೬೧) ಸಾಹಿತ್ಯ ವಿಶ್ಲೇಷಣೆ : ಪ್ರೊ. ಎಲ್. ಎಸ್ ಶೇಷಗಿರಿರಾವ್. ತ. ವೆಂ. ಸ್ಮಾರಕ ಗ್ರಂಥಮಾಲೆ. ಮೈಸೂರು ೧೯೭೮

೬೨) ಸಾಹಿತ್ಯ: ಸಂಪ್ರದಾಯ ಮತ್ತು ಹೊಸ ಮಾರ್ಗ : ಡಾ. ವೀ. ಸೀತಾರಾಮಯ್ಯ. ಕ. ವಿ. ವಿ. ಧಾರವಾಡ ೧೯೬೭

೬೩) ಸಾಹಿತ್ಯ ಮತ್ತು ಸಹೃದಯತೆ : ಡಾ. ಜಿ. ಎಂ. ಹೆಗಡೆ. ರಂಜನಾ ಪ್ರಕಾಶನ. ಧಾರವಾಡ ೧೯೯೬

೬೪) ಸಾಹಿತ್ಯದಲ್ಲಿ ತತ್ವವಾದಗಳು : ಪಿ. ವಿ. ಶಾಸ್ತ್ರೀ. ಸಮಾಜ ಪುಸ್ತಕಾಲಯ. ಧಾರವಾಡ ೧೯೭೬

೬೫) ಹೊಸಗನ್ನಡ ಸಾಹಿತ್ಯ ಚರಿತ್ರೆ : ಡಾ. ಎಲ್. ಎಸ್. ಶೇಷಗಿರಿರಾವ್. ಪ್ರಸಾರಾಂಗ. ಬೆಂಗಳೂರು ೧೯೭೫

೬೬) ಶಿಂಪಿಲಿಂಗಣ್ಣನವರ ಜೀವನ ಮತ್ತು ಸಾಹಿತ್ಯ : ಡಾ. ಎಂ. ಎಸ್. ವಾಲಿ. ಭುವನೇಶ್ವರಿ ಪ್ರಕಾಶನ. ಬಿಜಾಪುರ ೧೯೯೦

೬೭) ಹೊಸಗನ್ನಡದ ಅರುಣೋದಯ ಕಾಲ : ಡಾ. ಶ್ರೀನಿವಾಸ ಹಾವನೂರು. ಮಾನಸ ಗಂಗೋತ್ರಿ. ಮೈಸೂರು ೧೯೭೪

೬೮) ಹೊಸಕಾವ್ಯ ಹೊಸದಿಕ್ಕು : ಡಾ. ಬುದ್ದಣ್ಣ ಹಿಂಗಮಿರೆ. ಯುಗಧ್ವನಿ. ಧಾರವಾಡ ೧೯೭೬

೬೯) ಹೊಸಗನ್ನಡದ ಸಾಹಿತ್ಯದ ಉದಯಕಾಲ: ಡಾ. ಆರ್. ವಾಯ್. ಧಾರವಾಡಕರ. ಕ.ವಿ.ವಿ. ಧಾರವಾಡ ೧೯೭೫

೭೦) ಹೊಸಗನ್ನಡ ಸಾಹಿತ್ಯದ ಎರಡು ಮಾರ್ಗಗಳು : ಡಾ. ಜಿ. ಎಸ್. ಶಿವರುದ್ರಪ್ಪ. ಜ್ಞಾನಭಾರತಿ ಬೆಂ.ವಿ.ವಿ. ಪ್ರಸಾರಾಂಗ. ಬೆಂಗಳೂರು ೧೯೮೧

೭೧) ಹೊಸಗನ್ನಡ ಕವಿತೆ ಮೇಲೆ ಇಂಗ್ಲೀಷ ಪ್ರಭಾವ : ಎಸ್. ಅನಂತನಾರಾಯಣ. ಗಂಗಾತರಂಗ. ಸರಸ್ವತಿಪುರಂ. ಮೈಸೂರು ೧೯೬೨

**ಇಂಗ್ಲೀಷ ಗ್ರಂಥಗಳು :**

1) An Introduction to the Study of literature, Ludhiana, Kalyani –1979; –Willam Henry Hudson
2) Aspects of the Novel (London Edward Arnolod and Co. 1953) –Em.Forster
3) Boundries of Fiction Princetan, Princetan Universtiry – 1968 –Levine (George)
4) Craft of fiction Londan, Jonathan Cape – 1968–Lubbock (percy)
5) English Criticism of the Novel Oxford, Clarendon Press –1965 –Graham (Kenneth)
6) English Novel London, Phoneix House Ltd., –Allen (walter)
7) Lenin and the Problems of literature Moscow, Progress –1974 –Shcherbina (vladmir)
8) Novels on the Indian Mutiny New Delhi, Arnold Heinemann –1973 –S. D. Singh
9) Principles of literary criticism –1949 –I. A. Richards
10) Reading the novel, Introduction of the techniques of interpreting fiction London Harper and Row —1977 –Henkle (Rogerb)
11) The Randam House Dictionary of English Language –Gestein and Laurence Urdans

## ೪. ಪತ್ರಿಕೆಗಳು

೧) ಸಂಯುಕ್ತ ಕರ್ನಾಟಕ : ೯-೧-೨೦೦೦. ೨೩-೧-೨೦೦೦. ೨-೯-೨೦೦೧*
೨) ಕನ್ನಡ ಪ್ರಭ : ೯-೧-೨೦೦೦
೩) ವಿಜಯ ಕರ್ನಾಟಕ : ೯-೧-೨೦೦೦. ೨೩-೧-೨೦೦೦
೪) ಪ್ರಜಾವಾಣಿ : ೩೧-೧-೨೦೦೦. ೬-೨-೨೦೦೦
೫) ಡೆಕ್ಕನ್ ಹೆರಾಲ್ಡ್ : ೯-೧-೨೦೦೦
೬) ಟೈಮ್ಸ್ ಆಫ್ ಇಂಡಿಯಾ : ೯-೧-೨೦೦೦
೭) ದಿಕ್ಸೂಚಿ : ಫೆಬ್ರುವರಿ. ೨೦೦೦
೮) ಹಾಯ್ ಬೆಂಗಳೂರು : ೧೨-೫-೨೦೦೦
೯) ಹೊಸತು : ಫೆಬ್ರುವರಿ. ೨೦೦೦

* ಪತ್ರಿಕೆಗಳ ದಿನಾಂಕ